ಭಾಷಾಧ್ಯಯನಗಳು–೨

# ಹಳಗನ್ನಡ ಮತ್ತು ಮರಾಠಿ



ರಂ. ಶಾ. ಲೋಕಾಪುರ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ,
ಹಂಪಿ - ೫೮೩ ೨೭೭

**HALAGANNADA MATTU MARATHI**
A Study on old Kannada and Marathi Relations
by Shri. R. S. Lokapur,
389 B, Maharshi Road, Tilakwadi Belgaum - 590 006

Published by The Director, Prasaranga,
Kannada University, Hampi - 583 211

First Edition : 1994
Pp. VIII + 332

Price Rs : Seventyfive only





ಬೆಲೆ : ರೂಪಾಯಿ ಎಪ್ಪತ್ತೈದು ಮಾತ್ರ

ಮುಖಪುಟವಿನ್ಯಾಸ :
ಮಕಾಳಿ

ಪ್ರಕಾಶಕರು :
ನಿರ್ದೇಶಕರು,
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧



ಮುದ್ರಕರು :
ಇಂಪ್ರೆಶನ್ಸ್,
೩೩೬೦/೪, ಗೋಂಧಳಿ ಗಲ್ಲಿ ಅಡ್ಡರಸ್ತೆ,
ಬೆಳಗಾವಿ - ೫೯೦ ೦೦೨

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಶಾಸ್ತ್ರ-ಕಲೆ, ಅಭಿಜಾತ-ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿ ಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿಬರುವ ಸಾಹಿತ್ಯ ಪ್ರಕಟವಾಗಬೇಕು; ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅವೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ. ನಮ್ಮ ಪ್ರಸಾರಾಂಗ ಇದಕ್ಕಿಂತ ವಿಶಾಲವಾದ, ಹೆಚ್ಚು ಪರಿಣಾಮಕಾರಿಯಾದ ಪರಿಪ್ರೇಕ್ಷ್ಯವನ್ನು ಕಟ್ಟುವುದರಲ್ಲಿ ತೊಡಗಿದೆ. ಪ್ರಸಾರಾಂಗದ ಪ್ರಕಟನೆಗಳಿಗೆ ಇಂಥ

ಒಂದು ಸಾರ್ಥಕವಾಗಬಲ್ಲ ಉದ್ದೇಶವಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಈ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆಯೆಂದರೂ ತಪ್ಪಿಲ್ಲ. ಈ ದೃಷ್ಟಿಯಿಂದ ಈ ವರ್ಷ ಕೆಲವು ಪುಸ್ತಕಗಳನ್ನು ನಾವು ಪ್ರಕಟಿಸುತ್ತಿದ್ದೇವೆ.

ಶ್ರೀ. ಲೋಕಾಪುರ ಕನ್ನಡದ ಖ್ಯಾತ ಕಾದಂಬರಿಕಾರರು. ಕನ್ನಡ ಮರಾಠಿಗಳೆರಡನ್ನೂ ಅವರು ಚೆನ್ನಾಗಿ ಬಲ್ಲರು. ಈ ಎರಡೂ ಭಾಷೆಗಳ ಸಂಬಂಧದ ಕುರಿತಂತೆ ನೂರಾರು ನಿದರ್ಶನಗಳನ್ನು ಇಲ್ಲಿ ಮಂಡಿಸಿದ್ದಾರೆ. ಇದೊಂದು ಅಭಿನಂದನೀಯ ಪ್ರಯತ್ನವಾಗಿದೆ. ವಿದ್ವಾಂಸರು ಇಲ್ಲಿನ ವಿವರಗಳನ್ನು ಬೆಳಸಿ ಚರ್ಚೆಯನ್ನು ಮುಂದುವರೆಸಬೇಕು. ಆಗ ಈ ಪುಸ್ತಕವನ್ನು ಪ್ರಕಟಿಸುತ್ತಿರುವ ಕನ್ನಡ ವಿಶ್ವವಿದ್ಯಾಲಯದ ಉದ್ದೇಶ ಸಾರ್ಥಕವಾಗುತ್ತದೆ.

ಕನ್ನಡ ವಿಶ್ವವಿದ್ಯಾಲಯ
ಹಂಪಿ

ಚಂದ್ರಶೇಖರ ಕಂಬಾರ
ಕುಲಪತಿಗಳು

# ಈ ಗ್ರಂಥ ಕುರಿತು

ಭಾಷೆಯ ಚರಿತ್ರೆಯನ್ನು ಅಧ್ಯಯನ ಮಾಡುವ ವಿಧಾನದಲ್ಲಿ ಈಚಿನ ದಶಕಗಳಲ್ಲಿ ಹಲವಾರು ಬದಲಾವಣೆಗಳಾಗಿವೆ. ಹೀಗಿದ್ದರೂ ಹಳೆಯ ವಿಧಾನಗಳನ್ನು ಬಳಸಿ ಭಾಷಾಚರಿತ್ರೆಯನ್ನು ರಚಿಸುವುದು ಮಾತ್ರ ಮುಂದುವರೆಯುತ್ತಲೇ ಇದೆ. ಹೊಸ ಸಾಮಗ್ರಿಗಳನ್ನು ಹುಡುಕಿ ತೆಗೆಯುವ ಕಡೆಗೆ ಇರುವಷ್ಟು ಆಸಕ್ತಿ ಹೊಸ ವಿಧಾನಗಳನ್ನು ಹುಡುಕುವ ಕಡೆಗೆ ಇರುವುದಿಲ್ಲ. ಇದು ಸದ್ಯ ಭಾರತೀಯ ಭಾಷೆಗಳಲ್ಲಿ ನಡೆಯುತ್ತಿರುವ ಅಧ್ಯಯನಗಳ ಸ್ವರೂಪವಾಗಿದೆ.

ಭಾರತೀಯ ಭಾಷೆಗಳನ್ನು ನಾಲ್ಕು ಭಾಷಾವಂಶಗಳಲ್ಲಿ ವಿಭಜಿಸುವ ವಿಧಾನದ ಜೊತೆಗೆ ಇಡೀ ಭಾರತವನ್ನು ಒಂದೇ ಭಾಷಾಪ್ರದೇಶವನ್ನಾಗಿ ಪರಿಗಣಿಸಲು ಅವಶ್ಯವಾದ ಭಾಷಾಸಮಾನ ನೆಲೆಗಳ ಶೋಧನೆಗಳೂ ಮುಂದುವರೆದಿವೆ. ಹೀಗಿರುವಾಗ ಬೇರೆಬೇರೆ ಭಾಷಾವಂಶಗಳಿಗೆ ಸೇರಿದ ಭಾಷೆಗಳ ನಡುವಣ ಹೋಲಿಕೆಗಳು ಕುತೂಹಲಕಾರಿ ನೆಲೆಗಳಿಗೆ ನಮ್ಮನ್ನು ಒಯ್ಯುತ್ತವೆ. ಇಂಡೋಆರ್ಯನ್ ವಂಶದ ಭಾರತೀಯ ಭಾಷೆಗಳಲ್ಲಿ ಹಲವು ಮಧ್ಯಯುಗದಲ್ಲಿ ಪ್ರತ್ಯೇಕಗೊಂಡು ಬೆಳೆದವು. ಬಂಗಾಳಿ, ಮರಾಠಿ ಮುಂತಾದ ಭಾಷೆಗಳು ಆಕಾರ ಪಡೆಯಲು ಕಾರಣವಾದ ಅಂಶಗಳ ಶೋಧವಿನ್ನೂ ಪೂರ್ಣಗೊಂಡಿಲ್ಲ. ಈ ಮೇಲಿನ ಭಾಷೆಗಳಲ್ಲಿ, ಅದರಲ್ಲೂ ಮರಾಠಿಯಲ್ಲಿಯ ದ್ರಾವಿಡ ಭಾಷಾಂಶಗಳು ನಿಚ್ಚಳವಾಗಿ ಕಾಣಸಿಗುತ್ತವೆ. ಈ ಶತಮಾನದ ಆದಿಯಿಂದ ಈ ಬಗ್ಗೆ ಚಿಂತನೆಗಳು ಮಂಡಿತವಾಗುತ್ತಲೇ ಬಂದಿವೆ.

ಭಾಷಾಸಂಪರ್ಕದ ದೂರಗಾಮಿ ಪರಿಣಾಮಗಳಲ್ಲಿ ಭಾಷಾಸಂಗಮ (convergence) ಕೂಡ ಒಂದು. ಪ್ರಾಕೃತದ ಒಂದು ಪ್ರಾದೇಶಿಕ ರೂಪ ಮತ್ತು ಕನ್ನಡ ಇವುಗಳ ಸಂಪರ್ಕದಿಂದ ಮರಾಠಿಯು ರೂಪುತಳೆಯಿತೆಂಬ ಪ್ರಮೇಯಕ್ಕೆ ಪುರಾವೆಗಳು ಸಾಕಷ್ಟಿವೆ. ಈ ಬಗೆಗೆ ನಡೆದಿರುವ ಸಂಶೋಧನೆಗಳನ್ನು ನಡೆಸಿರುವವರಲ್ಲಿ ಕೇವಲ ಕನ್ನಡ ವಿದ್ವಾಂಸರು ಮಾತ್ರವಲ್ಲ; ವಿದೇಶೀಯರೂ ಇದ್ದಾರೆ. ಆದರೆ ಇಂಥ ಪ್ರಮೇಯಗಳನ್ನು ಕೇವಲ ಭಾಷಾಭಿಮಾನದ ನಿಟ್ಟಿನಲ್ಲಿ ಮಾತ್ರ ಪರಿಗಣಿಸುವ ಪ್ರವೃತ್ತಿ ಹೆಚ್ಚಾಗಿರುವುದರಿಂದ ಇದು ಕೇವಲ ಕನ್ನಡದ ಹೆಚ್ಚಳವನ್ನು ಸಾಧಿಸಲು ಮಾಡುತ್ತಿರುವ ಪ್ರಯತ್ನವೆಂದು ಪರಿಗಣಿಸಲಾಗುತ್ತಿದೆ. ಹಾಗೆ ನೋಡಿದರೆ ಕನ್ನಡ ಪ್ರಾಗ್ ದ್ರಾವಿಡಭಾಷೆಯಿಂದ ಹೊರಸಿಡಿದು ಬೇರೆ ಭಾಷೆಯಾಗಿ ರೂಪುಗೊಂಡ ಕ್ರಮದ ಬಗೆಗೂ ಇಂಥ ಪ್ರಮೇಯವನ್ನು ನಾವು ಈ ಮೂಲಕ ಒಪ್ಪುವುದು ಅನಿವಾರ್ಯವಾಗುತ್ತದೆ.

ಈ ಗ್ರಂಥದಲ್ಲೂ ನಮಗೆ ಸಿಗುವುದು ಮೇಲೆ ಹೇಳಿದ ನಿಟ್ಟಿನ ವಿಚಾರಗಳು. ಹಳಗನ್ನಡ ಹಾಗೂ ಮರಾಠಿಗಳ ನಡುವೆ ಇರುವ ಹಲವಾರು ರೂಪ ಸಾಮ್ಯಗಳನ್ನು

ನಮ್ಮೆದುರು ಹೆಕ್ಕಿ ತೆಗೆದಿರಿಸಲಾಗಿದೆ. ನಿರ್ಣಯಕ್ಕೆ ಹಾತೊರೆಯುವ ನಿದರ್ಶನಗಳಿವು. ಈ ನಿದರ್ಶನಗಳನ್ನು, ಅವುಗಳನ್ನು ಆಧರಿಸಿದ ವಿಶ್ಲೇಷಣೆಯನ್ನು ಗಮನಿಸಿದಾಗ ಶ್ರೀ. ಲೋಕಾಪುರ ಅವರ ಅಧ್ಯಯನಗಳ ನೆಲೆಗಳು ಗೋಚರವಾಗುತ್ತವೆ. ಮರಾಠಿಯ ಲಿಖಿತ ಆಕರಗಳನ್ನು ಪ್ರಾಥಮಿಕ ಮಾಹಿತಿಯನ್ನಾಗಿ ಬಳಸುತ್ತಾರೆ. ಈ ಆಕರಗಳ ಮಾಹಿತಿಯನ್ನು ವಿದ್ವಾಂಸರು ವಿವರಿಸುವ ವಿಧಾನದ ತೊಡಕುಗಳನ್ನು, ಆ ವಿವರಣೆಗಳಲ್ಲಿ ಇರುವ ಅಸಂಮಜಸತೆಗಳನ್ನು, ಆ ವಿವರಣೆಗಳು ವಿವರಿಸದೇ ಬಿಟ್ಟ ಅಂಶಗಳನ್ನು ತಮ್ಮ ಮೂಲಪ್ರಮೇಯವಾದ ಭಾಷಾಸಂಪರ್ಕದ ನೆಲೆಯಲ್ಲಿ ಶ್ರೀ. ಲೋಕಾಪುರ ಅವರು ಪರಿಗಣಿಸಿ ವಿಶ್ಲೇಷಿಸುತ್ತಾರೆ.

ಮರಾಠಿಯಲ್ಲಿ ಅಂತರ್ಗತವಾದ ಕನ್ನಡದ ಅಂಶಗಳು ಕೇವಲ ಭಾಷಾಸ್ವೀಕರಣದ ಹಂತದಲ್ಲಿ ಮಾತ್ರ ಉಳಿದಿಲ್ಲ. ಎಷ್ಟೋ ಕಡೆಗಳಲ್ಲಿ ಭಾಷಾಮಿಶ್ರಣದ ನಿದರ್ಶನಗಳು ದೊರಕುತ್ತವೆ. ಈ ಭಾಷಾಮಿಶ್ರಣ ದ್ವಿಭಾಷಿಕತೆಯ ವ್ಯಾಪಕತೆಯ ಪರಿಣಾಮವಷ್ಟೆ. ಹಾಗೆಯೇ ವ್ಯಾಕರಣಾಂಶಗಳಲ್ಲೂ ಕನ್ನಡದ ಪ್ರಭಾವ ಮರಾಠಿಯಲ್ಲಿ ಅಡಕಗೊಂಡಿವೆ. ಈ ಎಲ್ಲ ಅಂಶಗಳನ್ನು ಈ ಅಧ್ಯಯನ ವ್ಯಾಪಕವಾಗಿ ಹೊರತೆಗೆದಿರಿಸಿದೆ. ಮುಂದಿನ ಚರ್ಚೆಗೆ ಅವಕಾಶಗಳನ್ನು ಒದಗಿಸಿದೆ. ಈ ಚರ್ಚೆಗಳು ಕೇವಲ ಕನ್ನಡ ಮರಾಠಿಗಳ ಸಂಪರ್ಕಕ್ಕೆ ಮಾತ್ರ ಸೀಮಿತಗೊಳ್ಳುವ ಅವಶ್ಯಕತೆ ಇಲ್ಲ. ಭಾರತೀಯ ಭಾಷೆಗಳು ಕಳೆದ ಎರಡು ಸಾವಿರ ವರ್ಷಗಳಲ್ಲಿ ರೂಪುಗೊಂಡ ಕ್ರಮಗಳನ್ನು ಕೂಡ ನಾವು ಕಂಡುಕೊಳ್ಳಬೇಕಾಗಿದೆ. ಅಂಥ ಪ್ರಯತ್ನಗಳಿಗೆ ಅವಶ್ಯವಾದ ನೆಲೆಗಳನ್ನು ಇಂಥ ಅಧ್ಯಯನಗಳು ಒದಗಿಸಬಲ್ಲುವು.

# ಲೇಖಕರ ಮಾತು

ವ್ಯಾಕರಣದಿಂದೆ ಪದಂ ಆ ವ್ಯಾಕರಣದ ಪದದಿಂದರ್ಥಂ ಎನ್ನುವ ಕೇಶಿರಾಜನ ಮಾತು ನಿತ್ಯಸತ್ಯ. ಒಂದು ಶಬ್ದ ಪದವಾಗಬೇಕಾದರೆ ಹತ್ತುವ ಪ್ರತ್ಯಯ ಅವ್ಯಯಗಳೇ ವ್ಯಾಕರಣದ ಜೀವಾಳ. ಇವುಗಳನ್ನು ಗುರುತಿಸುವುದಕ್ಕಾಗಿ ವ್ಯಾಕರಣಕಾರನಿಗೆ ಅನೇಕಾನೇಕ ಗ್ರಂಥಗಳನ್ನು ಪರಾಮರ್ಶಿಸಬೇಕಾಗುತ್ತದೆ; ಸಾಮಾನ್ಯ ಸೂತ್ರಗಳನ್ನು ಕಲ್ಪಿಸಬೇಕಾಗುತ್ತದೆ.

ಹಳೆಯ ಮರಾಠಿಯಲ್ಲಿ ಹಾಗೆ ಗ್ರಂಥಗಳಿಲ್ಲ. ಹದಿಮೂರನೆಯ ಶತಮಾನದ ಮಹಾನುಭಾವ ಪಂಥದ ಆರು ಕೃತಿಗಳು ಭಾಷೆಯ ದೃಷ್ಟಿಯಿಂದ ಅಷ್ಟು ಪ್ರೌಢವಲ್ಲದವು. ಆದರೆ ಭಗವದ್ಗೀತೆಯ ಮೇಲೆ ಟೀಕು ಎಂದು ಬರೆಯಲಾದ (ಇ.ಸ. ೧೨೯೦) ಜ್ಞಾನೇಶ್ವರೀ ಮಾತ್ರ ಒಂದು ಮಹಾನ್ ಉದ್ಗ್ರಂಥ. ಹಠಯೋಗ ಸಾಧನೆ, ಚಾತುರ್ವರ್ಣ್ಯದ ಪುನರ್ ಪ್ರತಿಷ್ಠಾಪನೆ, (ಬಸವೇಶ್ವರರ ಸಾಮಾಜಿಕ ಕ್ರಾಂತಿಗೆ ಪ್ರತಿಕ್ರಿಯಾತ್ಮಕವಾಗಿಯೋ ಏನೋ) ಅದ್ವೈತ ಮತ ಪ್ರಚಾರ ಹಾಗೂ ಭಕ್ತಿ ಮಾರ್ಗಕ್ಕೆ ಒತ್ತು ಇವು ಆ ಕೃತಿಯ ಮಹತ್ವದ ಆಯಾಮಗಳು. ಜ್ಞಾನೇಶ್ವರರು ಬರೆಸಿದ ಮೂಲ ಗ್ರಂಥವಾಗಲೀ, ಏಕನಾಥರು ತಿದ್ದಿದ (ಇ.ಸ.೧೬೫೪) ಹಸ್ತಪ್ರತಿಯಾಗಲೀ ಈಗ ಲಭ್ಯವಿಲ್ಲ. ಹೀಗಾಗಿ ಇದೊಂದೇ ರಚನೆಯನ್ನು ಆಧಾರವನ್ನಾಗಿಟ್ಟುಕೊಂಡು ಉಪಲಬ್ಧ ಪ್ರತಿಗಳಿಂದ ಮರಾಠೀ ವ್ಯಾಕರಣ ರಚನೆಯಾಗಬೇಕು. ಸಂಸ್ಕೃತಪ್ರಾಕೃತ ಪಂಡಿತರಾದ ವಿ.ಕಾ. ರಾಜವಾಡೆಯವರು ಈ ದೃಷ್ಟಿಯಿಂದ ಮೊದಲು ಪ್ರಯತ್ನ ಮಾಡಿದರು, (ಇ.ಸ.೧೯೦೮) ಅವರಿಗಾಗಲೀ ಭಾಂಡಾರಕರ, ಜೂಲ್ಸ್‌ಬ್ಲೋಕ್, ಆಲ್ಫ್ರೆಡ್‌ಮಾಸ್ಟರ್ ಮೊದಲಾದ ಪ್ರಾಚ್ಯವಿದ್ಯಾವಿಶಾರದರಿಗಾಗಲೀ ಅಧ್ಯಾತ್ಮದಲ್ಲಿ ರುಚಿಯಿರಲಿಲ್ಲ. ಅವರು ಭಾಷೆಯ ದೃಷ್ಟಿಯಿಂದ ಮಾತ್ರ ಸಂಶೋಧನ ನಡೆಸಿದರು. ಜ್ಞಾನೇಶ್ವರಿಯಲ್ಲಿಯ ಆಶಯ ಅರಸುವ ದಾಂಡೇಕರರಂತಹರಿಗೆ ಭಾಷೆಯ ಬಗ್ಗೆ ಆಸ್ಥೆಯಿರಲಿಲ್ಲ.

ಸುಮಾರು ೨೫ ವರ್ಷಗಳ ನನ್ನ ಮಹಾರಾಷ್ಟ್ರದ ವಾಸ್ತವ್ಯದಲ್ಲಿ ನಾನು ಜ್ಞಾನೇಶ್ವರಿಗೆ, ಅದರ ಆಶಯಕ್ಕೆ ಮಾರು ಹೋದದ್ದು ೧೯೬೮ರಲ್ಲಿ. ಅಂದಿನಿಂದ ನನ್ನ ಅಭ್ಯಾಸ ನಡೆದೇ ಇದೆ. ಆಗಿನಿಂದ ಜ್ಞಾನೇಶ್ವರರು ತಮ್ಮ ಗ್ರಂಥಕ್ಕಾಗಿ ಭಾಷೆಯನ್ನು ಸೃಷ್ಟಿಸಿಕೊಂಡದ್ದು, ಮಾರ್ಪಡಿಸಿಕೊಂಡದ್ದು ನೋಡುತ್ತಲೇ ಇದ್ದೇನೆ. ಒಂದು ದೃಷ್ಟಿಯಿಂದ ದಾಂಡೇಕರರ 'ಶಿಷ್ಯ'ನಾಗಿಯೂ ಭಾಷೆಯನ್ನು ಗಮನಿಸುತ್ತಲೇ ಬಂದಿದ್ದೇನೆ. ಆ ಗ್ರಂಥದ ತುಂಬ ಹಾಸುಹೊಕ್ಕಾಗಿ ಪಸರಿಸಿದ ಕನ್ನಡ ವ್ಯಾಕರಣ, ಕನ್ನಡ ಶಬ್ದ ಪ್ರಯೋಗಗಳನ್ನು ಗುರುತಿಸುವ ಆನಂದ ಯಾವ ಸೃಜನಶೀಲ ಕೃತಿ ಕೊಡುವ ಆನಂದಕ್ಕಿಂತ ಕಡಿಮೆಯದಲ್ಲ.

ಆಶಯ, ಭಾಷೆ ಇವೆರಡನ್ನು ಒಟ್ಟಾಗಿ ಪರಾಮರ್ಶಿಸಿದರೆ ಇವೆರಡೂ ಜ್ಞಾನೇಶ್ವರಿಯನ್ನು ಇನ್ನೂ ಶ್ರೀಮಂತವಾಗಿಸಬಲ್ಲವು ಎಂದೆನಿಸಿದಾಗ ನನ್ನ ಕ್ಷೇತ್ರವಲ್ಲದಿದ್ದರೂ ಸಂಶೋಧನಕ್ಕೆ ಕೈ ಹಾಕಿದ್ದೇನೆ. ಇದರಿಂದಾಗಿ ಕನ್ನಡ ಭಾಷೆಯ ಅಭ್ಯಾಸಕ್ಕೂ ಕೆಲ ಹೊಸ ಹೊಳಹುಗಳು ದೊರೆತಿವೆಯೆಂದು ಭಾವಿಸಿದ್ದೇನೆ. ಇನ್ನೂ ಆಗಬೇಕಾದದ್ದು ಸಾಕಷ್ಟು ಇದೆ. ನನ್ನ ಪ್ರಯತ್ನ ಈ ನಿಟ್ಟಿನಲ್ಲಿ ಒಂದು ಹೆಜ್ಜೆ ಮಾತ್ರ.

–ರಂ. ಶಾ. ಲೋಕಾಪುರ

# ಪ ರಿ ವಿ ಡಿ

# ೧. ಮೊದಲ ಮಾತು

ಭಾಷೆ ಸಂಸ್ಕೃತಿಯ ಮುಖ. ಆಯಾ ಜನಾಂಗದ ನಡೆನಡಾವಳಿಗಳು, ವಿಶ್ವಾಸ ಶ್ರದ್ಧೆಗಳು ಆ ಭಾಷೆಯಲ್ಲಿ ಹಾಸುಹೊಕ್ಕಾಗಿರುತ್ತವೆ. ಇಷ್ಟರಮಟ್ಟಿಗೆ, ಭಾಷೆಯೆಂದರೆ ಬರಿ ವಿಚಾರಗಳನ್ನು ಪ್ರವಹಿಸುವ ಮಾಧ್ಯಮವೆನ್ನುವ ಭಾವನೆ ಆತ್ಮಘಾತುಕ.

ಒಂದು ಭಾಷೆಯನ್ನು ಕಾರಣಾಂತರದಿಂದ ಸ್ವೀಕರಿಸುವಾಗ ಅರಿತೋ ಅರಿಯದೆಯೋ ನಾವು ಅದರ ಹಿನ್ನೆಲೆಯ ಸಂಸ್ಕೃತಿಯೊಂದಿಗೂ ಮೈಗೂಡಿಸಿ-ಕೊಳ್ಳುತ್ತೇವೆ. ಇದಕ್ಕೆ ಕಾರಣಗಳು ಹತ್ತು ಹಲವು ಇರಬಹುದು. ಸ್ವೇಚ್ಛೆಯಿಂದ ವಲಸೆ ಹೋಗುವುದಿರಬಹುದು, ಒತ್ತಾಯದ ಸ್ಥಳಾಂತರವಿರಬಹುದು, ಸಾಮಾಜಿಕ-ಧಾರ್ಮಿಕ ಒತ್ತಡಗಳಿರಬಹುದು ಅಥವಾ ಇವೆಲ್ಲಕ್ಕಿಂತ ಮಹತ್ವದ್ದಾದ ರಾಜಕೀಯ ಆಡಳಿತವಿರಬಹುದು.

ಇದಕ್ಕೆ ಒಂದು ಸಣ್ಣ ಉದಾಹರಣೆ ಕೊಡಬೇಕು. ಬ್ರಿಟಿಶರು ಭಾರತವನ್ನಾಳುವಾಗ ನಾವು ಪಾಶ್ಚಾತ್ಯ ದಿನಮಾನ ಪದ್ಧತಿಯನ್ನು ಸ್ವೀಕರಿಸಿದೆವು. ತಿಥಿ ಪಕ್ಷಮಾಸಗಳಿಗೆ ಬದಲಾಗಿ ಗ್ರೆಗೇರಿಯನ್ ತಿಂಗಳು ತಾರೀಖುಗಳು ನಮ್ಮವಾದವು. ಇಷ್ಟೇ ಅಲ್ಲ, ಈಗಂತೂ ನಮ್ಮ ಪದ್ಧತಿಯಂತೆ ದಿವಸ ಸೂರ್ಯೋದಯದಿಂದ ಮರು ಸೂರ್ಯೋದಯದವರೆಗೆ (ನಡುರಾತ್ರಿಯಿಂದ ನಡುರಾತ್ರಿಯವರೆಗಲ್ಲ!) ಎನ್ನುವ ಕಲ್ಪನೆಯನ್ನು ಬಿಟ್ಟುಕೊಡತೊಡಗಿದ್ದೇವೆ. (ಮಧ್ಯರಾತ್ರಿಯ ನಂತರದ ಕಾರ್ಯಕ್ರಮ-ಗಳನ್ನು ಪರಿಚಯಿಸುವಾಗ 'ನಾಳೆ' ಎಂದು ಹೇಳುವ ದೂರದರ್ಶನವೇ ಇದಕ್ಕೆ ಸಾಕ್ಷಿ!) 'ಮರುದಿವಸ' ಎಂದು ಹೇಳುವದಕ್ಕೆ ಕನ್ನಡದ 'ನಾಳೆ' ಶಬ್ದ ಇದನ್ನು ಸ್ಪಷ್ಟಗೊಳಿಸುವುದಿಲ್ಲ. ಆದರೆ ಮರಾಠಿಯಲ್ಲಿಯ 'ಉದ್ಯಾ', 'ಉದಯೀಕ' (ಸಂಸ್ಕೃತದ ಉದಯ+ಕನ್ನಡದ ಷಷ್ಠಿಯ 'ಆ' ಚತುರ್ಥೀಭಾವದಲ್ಲಿ, ಅಥವಾ 'ಕೆ'), ಕೊಂಕಣಿಯಲ್ಲಿಯ 'ಫಾಲ್ಯಾಜ್' (ಸಂಸ್ಕೃತ ಪ್ರಭಾತ ಕೊಂಕಣಿ ಫಾಲೇ+ಕನ್ನಡದ ಆ) ಬಹಳಷ್ಟು ಹೇಳಿ ಹೋಗುತ್ತವೆ.

ಆದರೆ ಹಿನ್ನೆಲೆಯನ್ನು ಬಿಟ್ಟು ಭಾಷೆ ಬಂದಾಗ ಅಥವಾ ಉಳಿದುಕೊಂಡಾಗ ಅದರಲ್ಲಿಯ ಜೀವಂತಿಕೆ ಅಳಿದಿರುತ್ತದೆ. ಇಂಗ್ಲೀಷಿನಿಂದಾಗಿ ಬಂದ ಗುಡ್ ಮಾರ್ನಿಂಗ್, ಗುಡ್ ಇವನಿಂಗ್‌ಗಳನ್ನಾಗಲೀ Baa Baa Black Sheep ಈ ಶಿಶುಗೀತವನ್ನಾಗಲೀ ಸ್ಮರಿಸಿಕೊಳ್ಳಬಹುದು. ಇಂಗ್ಲಂಡಿನಲ್ಲಿಯ ಚಳಿ, ಅಲ್ಲಿ ಸೂರ್ಯನಿಗಿರುವ ಮಹತ್ವ ನಮಗೆ ಅರಿಯದು. ಕಾನ್ವೆಂಟ್ ಪ್ರೇಮದ ಇಂದಿನ ವಾತಾವರಣದಲ್ಲಿ ನಮ್ಮ ಮಕ್ಕಳೋ ಮೊಮ್ಮಕ್ಕಳೋ Baa Baa Black Sheep ಹಾಡುವಾಗ ಅದರ ಅರ್ಥ ತಿಳಿದುಕೊಂಡಿರುವುದಿಲ್ಲ. ಇಂಗ್ಲೆಂಡಿನ ಕುರಿಗಳೆಲ್ಲ ಬಿಳಿ ತುಪ್ಪಳದವು. ಬಿಳಿ ಉಣ್ಣೆಗೆ ಯಾವ ಬಣ್ಣವನ್ನೂ ಹಾಕಬಹುದು. ಅವುಗಳಲ್ಲಿ ತಪ್ಪಿ ಕರಿಕುರಿ ಹುಟ್ಟಿದರೆ ಅದಕ್ಕೆ ಮೇವು ದಂಡ. ಹೀಗಾಗಿ Black Sheep ಪಡೆನುಡಿ. ಅದರಲ್ಲಿಯ ವ್ಯಂಗ್ಯ ಎಷ್ಟು ಜನರಿಗೆ ತಟ್ಟಿದೆ?

ಕನ್ನಡ-ಮರಾಠೀ ಭಾಷಾಬಾಂಧವ್ಯದ ಸಂದರ್ಭದಲ್ಲಿ ಇದೊಂದು ವೈಶಿಷ್ಟ್ಯಪೂರ್ಣ ಆಯಾಮವನ್ನು ಪಡೆದುಕೊಳ್ಳುತ್ತದೆ. ಸುಮಾರು ಏಳು ನೂರು ವರ್ಷಕ್ಕೂ ಹೆಚ್ಚು ಕಾಲ ಒಂದು ಪ್ರದೇಶದ ಮೇಲೆ ಇನ್ನೊಂದು ಸಂಸ್ಕೃತಿಯ, ಭಾಷೆಯ ಅರಸರು ಆಡಳಿತ ನಡೆಸಿದ್ದು ಭಾರತದ ಇತಿಹಾಸದಲ್ಲೇ ಅನನ್ಯಸಾಧಾರಣ-

ವಾದುದು. ಕನ್ನಡದ ನಡೆನುಡಿಯ ಅನೇಕ ವೈಶಿಷ್ಟ್ಯಗಳು ಮರಾಠಿಯಲ್ಲಿ ಮೈಗೂಡಿ ಹೋದವು. ಈ ಉದಾಹರಣೆಗಳನ್ನು ನೋಡಬಹುದು.

ಮನೆಯಿಂದ ಹೋಗುವಾಗ 'ಹೋಗುತ್ತೇನೆ' ಎನ್ನಬಾರದು. 'ಹೋಗಿ ಬರುತ್ತೇನೆ' ಎನ್ನಬೇಕು. (ವಾಸ್ತು, ತಥಾಸ್ತು ಎನ್ನುತ್ತಿರುತ್ತದೆ. ಎನ್ನುವ ಕಲ್ಪನೆ) ಇದು ಕನ್ನಡ ಜನ ಜೀವನದ ರೂಢಿ. ಇದರ ಬಗ್ಗೆ 'ಪರಿಪೂರ್ಣೋತ್ಸವಮುತ್ಸವಮುಂಜ ಧ್ವನಿಯಿಂದಮಾ ವಧೂವರರಂ ಪೋಬರವೇಟಿಂಬಂತಿರ್ದುದು (ಆದಿಪುರಾಣ ೬.೧೯) ಎಂದಾಗಿ ಉಲ್ಲೇಖ ದೊರೆಯುತ್ತದೆ. ಈ ವಿಶ್ವಾಸ ಇಂದಿಗೂ ಮಹಾರಾಷ್ಟ್ರದಲ್ಲಿದೆ.

ನಾನು ಬೇರೆ, ನನ್ನ ಮೈ ಬೇರೆ (ಆತ್ಮನೆಂದರೆ ದೇಹವಲ್ಲ) ಎನ್ನುವ ನಿಲುವು ನಮ್ಮದು. (ಉತ್ತರ ಕರ್ನಾಟಕದ ಆಡುಮಾತಿನಲ್ಲಿಯ 'ಯಾಕ, ಮೈಯಾಗ ಸೊಕ್ಕು ಬಂದೈತೇನ?' 'ನಾಯೀ ಮೈಮ್ಯಾಗ ಗಾಡೀ ಹಾಯಿಸಿದ'. 'ಮೈಮೈ ಆಡರಬ್ಯಾಡ ಮಾರಾಯಾ!', ಗಳನ್ನು ನೆನಪಿಗೆ ತಂದುಕೊಳ್ಳಬಹುದು.)

'ಒಡುಗೆ ನಿಮ್ಮ ಮೈಯ ಪಸಿವು' (ಪಂಪಭಾರತ ೫.೮೫) ಎನ್ನುವಲ್ಲಿ ಇದು ಸ್ಪಷ್ಟ. ಇಂದಿಗೂ ಉತ್ತರ ಕರ್ನಾಟಕದಲ್ಲಿ ಹೆಣ್ಣುಮಕ್ಕಳು 'ಸ್ನಾನ'ಮಾಡುವುದಿಲ್ಲ. 'ಮೈತೊಳೆದುಕೊಳ್ಳುತ್ತಾರೆ'. ಈ ಕಲ್ಪನೆ ಮರಾಠಿಯಲ್ಲಿ ಇಡಿಯಾಗಿ ಒಡಮೂಡಿದೆ. ಅಲ್ಲಿ ಗಂಡಸರೂ 'ಮೈ ಒದ್ದೆ (ಅಂಗ+ಓಲೇಜ್ = ಅಂಘೋಳ) ಮಾಡಿಕೊಳ್ಳುತ್ತಾರೆ.

ಇನ್ನು ಗ್ರಂಥಗಳಲ್ಲಿ ದೊರೆಯದ ಒಂದು ಜಾನಪದ ಸಂದರ್ಭ. ಬರಿ ಭಕ್ಕರಿ ಒಣದಾಗಿರುತ್ತದೆ. ಎಷ್ಟೇ ನುರಿಸಿದರೂ ಗಂಟಲ ಕೆಳಗೆ ಇಳಿಯುವುದಿಲ್ಲ. ಅದಕ್ಕೊಂದಿಷ್ಟು ಸಾರೋ, ಪಲ್ಯವೋ, ವ್ಯಂಜನ ಬೇಕು. ಹೀಗೆ ಉತ್ತರಕರ್ನಾಟಕದ ರೈತಾಪಿ ಜನರಲ್ಲಿ ಸಾರುಪಲ್ಯಗಳಿಗೆ ಒಣೆಗ್ಗ (ಒಣಗು+ಚತುರ್ಥಿಗೆ) ಶಬ್ದ ಬಂದಿತು. ಮರಾಠಿಯಲ್ಲಿ ಇದೇ ಕಲ್ಪನೆ (ಒಣ=ಕೊರಡೇ+ಚತುರ್ಥೀಸ=ಕೋರಡ್ಯಾಸ) ಶಬ್ದದಲ್ಲಿ ಕಾಣಬರುತ್ತದೆ. ಕೊಂಕಣಿಯಲ್ಲೂ ಈ ಕಲ್ಪನೆ ಇದೆ. ಅಲ್ಲಿ ಭಕ್ಕರಿಗೆ ಬದಲಾಗಿ ಅನ್ನ, ಇಷ್ಟೇ ಬದಲಾವಣೆ. ಸಾವಂತವಾಡಿ ಭಾಗದಲ್ಲಿ ಸಾರು ಪಲ್ಯಗಳೆಲ್ಲ (ಬರಿ=ನುಸತೇ+ಚತುರ್ಥೀ ಕ=ನಿಸ್ತ್ಯಾಕ) ಆಗುತ್ತವೆ. ಇದೇ ಶಬ್ದಕ್ಕೆ ಗೋವೆಯಲ್ಲಿ 'ಮೀನಿನಸಾರು' ಎಂದರ್ಥ.

ಇನ್ನೊಂದು ಸ್ವಾರಸ್ಯಕರ ವಿಚಾರ - ಕೂಸು ಹುಟ್ಟಿದ ಐದನೆಯ ದಿವಸ ಒಬ್ಬ ದೇವಿ ಅದರ 'ಹಣೆಬರಹ' ಬರೆಯುತ್ತಾಳೆಂದು ನಮ್ಮಲ್ಲಿಯ ಕಲ್ಪನೆ. ಅದಕ್ಕಾಗಿ 'ಹಣೆಬರಹ'ಕ್ಕೆ ಐದೇಶಿ (ಅಯ್ ದಿವಸಿ) ಎನ್ನುವ ಜನಪದ ಪ್ರತಿಶಬ್ದವೂ ಇದೆ. ಇಂತಹದೇ ಒಂದು ವಿಶ್ವಾಸ ಗುಜರಾತ, ಉತ್ತರಭಾರತದಲ್ಲೆಲ್ಲ ಇದೆ. ಆದರೆ ಅಲ್ಲಿ'ಹಣೆಬರಹ' ಆರನೆಯ ದಿವಸದಂದು.

ಮಹಾರಾಷ್ಟ್ರದಲ್ಲಿ ಮಾತ್ರ ಅದು ಐದನೆಯ ದಿವಸವೇ ನಡೆಯುತ್ತದೆ. 'ಹಣೆಬರಹವನ್ನು ಬೇಡಿಕೊಂಡು ಬಂದದ್ದು' ಎನ್ನುವ ಅರ್ಥದಲ್ಲಿ 'ಪಾಚವೀಲಾ ಪುಜಲೇಲೇಜ್' ಎನ್ನುವ ಪಡೆನುಡಿಯೂ ಅಲ್ಲಿ ಪ್ರಚಾರದಲ್ಲಿದೆ. ಆದರೆ ಆ 'ಹಣೆಬರೆಹ'ವನ್ನು ಬರೆಯುವ ದೇವಿ ಮಾತ್ರ ಸಟವಿ; (ಸಟ+ಅವ್ವೆ) ಆರನೆಯ ದಿನದಾಕೆ. ತೇವಿ ಟಿ ಸಟವಿಯೇಚಿಯೇ ರಾತೀ ನ ವಿಸಂಭಿಜೇ ಜೇವಿ ವಾತೀ (೧೮.೮೩೪) ಎನ್ನುವ ದೃಷ್ಟಾಂತವೂ ಜ್ಞಾನೇಶ್ವರೀಯಲ್ಲಿ ಬರುತ್ತದೆ. (ಅರ್ಥ :

ಸಟವಿಯ ರಾತ್ರಿಯಂದು (ದೀಪದ) ಬತ್ತಿಯಮೇಲೆ ವಿಶ್ವಾಸವಿಡಲಾಗದು. ಅದು ನಡುವೆಯೇ ಆರಿಹೋದರೆ ಸಟವಿ ಹಣೆಬರಹ ಹೇಗೆ ಬರೆದಾಳು? ಅಂತೆ ಒಬ್ಬಿಬ್ಬರು ರಾತ್ರಿ ಜಾಗರಣೆ ಮಾಡಿ ದೀಪ ನಂದದಂತೆ ನೋಡಿಕೊಳ್ಳುತ್ತಾರೆ.)

ಈ ಶೋಧಪ್ರಬಂಧದಲ್ಲಿ ಇನ್ನೂ ಅನೇಕ ಕುರುಹುಗಳನ್ನು ಕಾಣಬಹುದು. ಹಳಗನ್ನಡ ಮತ್ತು ಮರಾಠಿ ಸಂಬಂಧ ಭಾಷೆಗಷ್ಟೇ ಸೀಮಿತವಾಗದೆ ಸಂಸ್ಕೃತಿಯನ್ನು ಬಳಸಿದೆ. ಅದೇನೇ ಇದ್ದರೂ ಮರಾಠಿ ಭಾಷೆ ಭಾರತೀಯ ಆರ್ಯ ಭಾಷೆಗಳಲ್ಲೊಂದೆಂಬುದನ್ನು ಮರೆಯಲಾಗದು. ಭೂತಕಾಲವಾಚಕ ಸಕರ್ಮಕ ಕ್ರಿಯೆಗಳೆಲ್ಲ ಎಂದಿನಿಂದ ಕರ್ಮಣಿಯಲ್ಲೇ ಇವೆ. 'ಶ್ರೀ ಚಾವುಣ್ಡರಾಜೇಜ್ ಕರವಿಯಲೇಜ್' (ಶ್ರವಣಬೆಳಗೂಳ ಶಾಸನ ಕ್ರ. ೨೭೬) (ಚಾವುಂಡರಾಜನಿಂದ ಮಾಡಿಸಲ್ಪಟ್ಟಿತು) ಇದೊಂದು ಉದಾಹರಣೆ. ಮರಾಠಿಯಲ್ಲಿಯ ಲಿಂಗಪದ್ಧತಿ ಇನ್ನೊಂದು ಕುರುಹು. ಸಂಸ್ಕೃತ ಶಬ್ದಗಳು, ಅವುಗಳಿಂದ ಹುಟ್ಟಿಕೊಂಡ ತದ್ಭವಗಳು ತಮ್ಮ ಮೂಲ ಲಿಂಗಗಳೊಡನೆ ಮರಾಠಿಯಲ್ಲಿ ಕಾಣಿಸಿಕೊಳ್ಳುತ್ತವೆ. ಸಂಸ್ಕೃತದಲ್ಲಿಯ ಸಂಧಿನಿಯಮ ಬಿಟ್ಟರೆ ಭಾರತೀಯ ಆರ್ಯ ಭಾಷೆಗಳಲ್ಲಿ ಸಂಧಿಯಾಗುವುದಿಲ್ಲ. ಮರಾಠಿಯಲ್ಲೂ ಅಷ್ಟೆ. ಆದರೆ ಕನ್ನಡದ ಸಂಪರ್ಕದಿಂದಾಗಿ ಮರಾಠಿಯಲ್ಲಿ ಸ್ವರಲೋಪಸಂಧಿ, ಅದೂ ಮೊದಲ ಶಬ್ದ 'ನ' ಇದ್ದಾಗ ದೃಗ್ಗೋಚರವಾಗುತ್ತದೆ. ಉದಾಹರಣೆಗೆ ನ + ಉರೇ = ನುರೇ; ನ + ಅಸೇ = ನಸೇ;

ಈ 'ಆರ್ಯ'ಭಾಷೆ ಹಳಗನ್ನಡದ ಅನೇಕ ವ್ಯಾಕರಣ ರೂಪಗಳನ್ನು ತನ್ನದಾಗಿಸಿಕೊಂಡಿದೆ. ಗುಜರಾತೀ ಹಿಂದೀ ಮುಂತಾದ ಆರ್ಯಭಾಷೆಗಳ ಮೇಲೆ ಕನ್ನಡ ಯಾವ ಪರಿಣಾಮವನ್ನು ಬೀರುವಂತಿರಲಿಲ್ಲ. ಆದರೆ ಪರೋಕ್ಷವಾಗಿ ಮರಾಠಿಯ ಮೂಲಕ ಹೋಗಿರಬಹುದಾದ ಕೆಲವು ನಿಟ್ಟುಗಳನ್ನು ಗುರುತಿಸಬಹುದಾಗಿದೆ. ಇವುಗಳಲ್ಲಿ ನನಗನಿಸುವ ಮಟ್ಟಿಗೆ ಬಹುಮುಖ್ಯವಾದದ್ದು ತುಮಂತ. ಗಂತುಂ (ಹೋಗಲಿಕ್ಕೆ) ಈ ಸಂಸ್ಕೃತ ಶಬ್ದದ ಸಮಾಂತರ ರೂಪಗಳು ಹೀಗೆ: ಮರಾಠಿ ಜಾಣೇಸ; ಹಿಂದಿ ಜಾನೇಕೇಲಿಯೇ; ಗುಜರಾತೀ- ಜವಾಮಾಟೇ ಇತ್ಯಾದಿ. ಕನ್ನಡದಲ್ಲಿ ಚತುರ್ಥೀ ವಿಭಕ್ತಿಯ ಪ್ರತ್ಯಯವು ತುಮಂತ ಸಾಧಿಸಿದಂತೆ, ಮರಾಠಿ, ಹಿಂದಿ, ಗುಜರಾತಿಗಳಲ್ಲೂ ಚತುರ್ಥೀ ವಿಭಕ್ತಿ ಪ್ರತ್ಯಯ-ಅವ್ಯಯವಗಳೇ ತುಮಂತ ಸಾಧಿಸಿದುದು ಸ್ಪಷ್ಟವಾಗಿದೆ.

ಷಷ್ಠೀ-ವಿಭಕ್ತಿಯ ಅ, ಆ ಪ್ರತ್ಯಯಗಳು ಮರಾಠಿಯಲ್ಲಿ ಚಾ, ಚೀ, ಚೇ ಆದುದನ್ನು ನಾನು ಚರ್ಚಿಸಿದ್ದೇನೆ. ಇದು ಹಿಂದಿಯಲ್ಲಿ ಕಾ, ಕೀ, ಕೇ ಗುಜರಾತಿಯಲ್ಲಿ ನಾ, ನೀ, ನೇ ಆಗಿರುವದು ಸಾಧ್ಯವಾಗಿದೆ.

ಈ ಸೂತ್ರಗಳಲ್ಲದೆ ಅನೇಕ ಕನ್ನಡ ಶಬ್ದಗಳು ಮರಾಠಿಯಿಂದ ಅನ್ಯ ಆರ್ಯ ಭಾಷೆಗಳಿಗೆ, ವಿಶೇಷತಃ ಹಿಂದಿ ಗುಜರಾತಿಗಳಿಗೆ ಹೋಗಿವೆ. ಪ್ರಾದೇಶಿಕ ಸಂಪರ್ಕದಿಂದಾಗಿ ಇದು ಅನಿವಾರ್ಯ.

ಕನ್ನಡ ಮರಾಠಿ ಭಾಷೆಗಳ-ಸಂಸ್ಕೃತಿಗಳ ತೌಲನಿಕ ಅಭ್ಯಾಸ ಬೆಳೆದಂತೆ ಈ ಚಿತ್ರ ಇನ್ನಷ್ಟು ಸ್ಪಷ್ಟವಾಗಬಹುದಾಗಿದೆ.

# ೨. ಹಿನ್ನೆಲೆ–ಕನ್ನಡ

ಕಾವೇರಿಯಿಂದಮಾ ಗೋ–
ದಾವರಿವರಮಿರ್ದ ನಾಡದಾ ಕನ್ನಡದೊಳ್
ಭಾವಿಸಿದ ಜನಪದಾ ವಸು–
ಧಾವಲಯ ವಿಲೀನ ವಿಶದ ವಿಷಯ ವಿಶೇಷಂ

ಎಂದಾಗಿ ಕವಿರಾಜಮಾರ್ಗವನ್ನು ರಚಿಸಿದ ಶ್ರೀವಿಜಯನು ಕರ್ನಾಟಕವನ್ನು ಬಣ್ಣಿಸಿದ್ದಾನೆ. ಅವನಿಗೆ ಆಶ್ರಯವಿತ್ತ ಮಳಖೇಡದ ರಾಷ್ಟ್ರಕೂಟವಂಶದವನಾದ ಅಮೋಘವರ್ಷನು ಕ್ರಿ.ಶ. ೮೧೪ ರಿಂದ ೮೭೮ರವರೆಗೆ ರಾಜ್ಯವಾಳಿದನು.

ಮೇಲಿನ ಕಂದಪದ್ಯದಲ್ಲಿ ಬರುವ ಕನ್ನಡ ಶಬ್ದವು ಪ್ರದೇಶ ಸೂಚಕವಾಗಿದೆ. ಎಂದಿನಿಂದಲೂ ಪ್ರದೇಶಗಳಿಂದ ಭಾಷೆಗಳ ಹೆಸರುಗಳು ಹುಟ್ಟಿದವೇ ವಿನಾ ಭಾಷೆಗಳಿಂದ ಪ್ರದೇಶಗಳನ್ನು ಗುರುತಿಸಿಲ್ಲ. ಪ್ರಾಕೃತ ಚಂದ್ರಿಕೆಯಲ್ಲಿ ಬರುವ ಪ್ರಾಕೃತಭಾಷೆಯ ೨೭ ಉಪಭೇದಗಳನ್ನು ನೋಡಿರಿ.

ವ್ರಾಚಡೋ ಲಾಟ ವೈದರ್ಭಾವುಪನಾಗರ ನಾಗರೌ
ಬಾರ್ಬರಾವನ್ತ್ಯ ಪಾಂಚಾಲ ಟಾಕ್ಕ ಮಾಲವ ಕೈಕಯಾಃ
ಗೌಡಾಢ್ರ ಹೈವ ಪಾಶ್ಚಾತ್ಯ ಪಾಂಡ್ಯ ಕೌಂತಲ ಸೈಂಹಲಾಃ
ಕಾಲಿಂಗ್ಯ ಪ್ರಾಚ್ಯ ಕಾರ್ಣಾಟಕಾಂಚ ದ್ರಾವಿಡ ಗೌರ್ಜರಾಃ
ಆಭಿರೋ ಮಧ್ಯದೇಶೀಯಃ ಸೂಕ್ಷ್ಮಭೇದ ವ್ಯವಸ್ಥಿತಾಃ
ಸಪ್ತವಿಂಶತ್ಯಪಭ್ರಂಶಾ ವೈತಾಲಾದಿ ಪ್ರಭೇದತಃ

ಈ ಭಾಷೆಗಳಲ್ಲಿ ವೈದರ್ಭವೆಂಬ ಹೆಸರು ಬಂದಿದೆ. ಮಹಾರಾಷ್ಟ್ರವೆಂಬ ಹೆಸರು ಬಂದಿಲ್ಲ. ಕಾರಣ ಇಷ್ಟೇ, ಆಗ ಮಹಾರಾಷ್ಟ್ರವೆಂಬ ಪ್ರದೇಶವೇ ಇರಲಿಲ್ಲ.

ಕ್ರಿ.ಶ. ೬೩೪ರಲ್ಲಿಯ ಐಹೊಳೆ (ಜಿ.ವಿಜಾಪುರ)ಯ ಮೆಗುತಿ ಜಿನಾಲಯದ ಗೋಡೆಯ ಮೇಲೆ ಬರೆಯಲಾದ ಸಂಸ್ಕೃತ ಶಿಲಾಲೇಖ ೨ನೆಯ ಪುಲಿಕೇಶಿಯ ನರ್ಮದಾ ನದಿಯವರೆಗಿನ ರಾಜ್ಯ ವವಸ್ಥೆಯನ್ನು ಬಣ್ಣಿಸುತ್ತ ಅವನ ಸಾಮ್ರಾಜ್ಯದಲ್ಲಿ ಮೂರು ಮಹಾರಾಷ್ಟ್ರಕ (ತ್ರಯಾಣಾಂ ಮಹಾರಾಷ್ಟ್ರಕಾನಾಂ)ಗಳಿದ್ದವೆಂದು ಹೇಳುತ್ತದೆ. ಇಲ್ಲಿ ಮಹಾರಾಷ್ಟ್ರಕಗಳೆಂದರೆ ರಾಜ್ಯದ ಭಾಗಗಳು ಅಷ್ಟೇ. ಆದರೆ ಮಹಾರಾಷ್ಟ್ರದ ಇತಿಹಾಸಕಾರರು ಈ ಮಹಾರಾಷ್ಟ್ರಕಗಳೆಂದರೆ ಮಹಾರಾಷ್ಟ್ರದ ಭಾಗಗಳು, ಅಂದರೆ ೨ನೆಯ ಪುಲಿಕೇಶಿ ಮರಾಠಿ ಅರಸು, ಚಾಲುಕ್ಯರು ಮಹಾರಾಷ್ಟ್ರಕ್ಕೆ ಸೇರಿದವರು ಎಂದೆಲ್ಲ ವಾದಿಸಿದ್ದಾರೆ.

ಕಲುಚೂರಿಯರನ್ನು ಸೋಲಿಸಿ ಮಂಗಲೀಶನೆಂಬ ಚಾಲುಕ್ಯನು
ಚಾಲುಕ್ಯರ ರಾಜ್ಯವನ್ನು ಮಹಾರಾಷ್ಟ್ರದಲ್ಲಿ ಸ್ಥಾಪಿಸಿದ ಬಳಿಕ ಅದು

> ಅವಿರತವಾಗಿ ಕ್ರಿ.ಶ. ೭೫೩ರವರೆಗೆ ವೈಭವೋಪೇತವಾಗಿ ನಡೆಯಿತು. ಇದರ ಶಾಸನ ೯೯೦೦೦ ಊರುಗಳ ಮೇಲೆ ಹಾಗೂ ಮಹಾರಾಷ್ಟ್ರದ ಮೂರು ವಿಭಾಗಗಳ ಮೇಲೆ ಇದ್ದಿತೆಂದು ಹೇಳುವ ಶಿಲಾಲೇಖವೊಂದಿದೆ.[1]

ಎಂದು ಮರಾಠಿ ಸಂಶೋಧಕ ಕೃ. ಪಾಂ. ಕುಲಕರ್ಣಿ ಅವರು ಹೇಳಿದ್ದು ದಿಟ್ಟತನದ್ದೇ ಸರಿ.

ಚಾಲುಕ್ಯರ ನಂತರ ಕ್ರಿ.ಶ. ೭೫೭ರಲ್ಲಿ ರಾಷ್ಟ್ರಕೂಟ ರಾಜ್ಯದ ಉದಯವಾಯಿತು. ಕ್ರಿ.ಶ. ೯೭೫ರವರೆಗೆ ಆಳಿದ ಪರಾಕ್ರಮಿ ಸಮ್ರಾಟರು ನರ್ಮದಾ ನದಿಯಿಂದ ಕಾವೇರಿಯವರೆಗೆ ಹಾಗೂ ಅರಬೀ ಸಮುದ್ರದಿಂದ ವೆಂಗಿ ಚಾಳುಕ್ಯರಾಜ್ಯದವರೆಗಿನ ಪ್ರದೇಶವನ್ನು ಪಾದಾಕ್ರಾಂತ ಮಾಡಿಕೊಂಡಿದ್ದರು. ಇವರು ಸಂಸ್ಕೃತ ಹಾಗೂ ಕನ್ನಡ ಕವಿಗಳಿಗೆ ಆಶ್ರಯವಿತ್ತರು.

ಕನ್ನಡ ಕವಿರಾಜಮಾರ್ಗವನ್ನು ಬರೆದ ಶ್ರೀವಿಜಯನಂತೂ ಪ್ರಸಿದ್ಧ ಕವಿಯೇ ಸರಿ. ಅವನು ಸಂಸ್ಕೃತದಲ್ಲಿ ಪ್ರಶ್ನೋತ್ತರ ರಾಗಮಾಲಿಕೆಯನ್ನು ರಚಿಸಿದನು. ಅವನಂತೆಯೆ ಆಸ್ಥಾನ ಕವಿಗಳಾದ ಗುಣಚಂದ್ರನು ಆದಿಪುರಾಣವನ್ನೂ, ಜಿನಸೇನಾಚಾರ್ಯನು ಪಾರ್ಶ್ವಾಭ್ಯುದಯವನ್ನೂ, ವೀರಾಚಾರ್ಯನು ಗಣಿತ ಸಾರಸಂಗ್ರಹವನ್ನೂ ಸಂಸ್ಕೃತದಲ್ಲಿ ರಚಿಸಿದರು.

ಕನ್ನಡದ ಆದಿಕವಿ ಎನಿಸಿದ ಪಂಪನು ರಾಷ್ಟ್ರಕೂಟರ ಮಾಂಡಲಿಕನಾಗಿದ್ದ ವೇಮಲವಾಡದ ಎರಡನೆಯ ಅರಿಕೇಸರಿಯ ಆಸ್ಥಾನದಲ್ಲಿದ್ದನು. ಇವನು ಆದಿಪುರಾಣ ಹಾಗೂ ವಿಕ್ರಮಾರ್ಜುನ ವಿಜಯಗಳೆಂದು ಎರಡು ಉದ್ದಾಮ ಕೃತಿಗಳನ್ನು ರಚಿಸಿದನು. ಇನ್ನೊಬ್ಬ ವಿಖ್ಯಾತ ಕವಿ ಪೊನ್ನನು ಮೂರನೆಯ ಕೃಷ್ಣನ ಆಸ್ಥಾನದಲ್ಲಿದ್ದನು.

ರಾಷ್ಟ್ರಕೂಟರ ಮಾಂಡಲಿಕರಾಗಿದ್ದ ತಲಕಾಡಿನ ಗಂಗರಸರೂ ಕನ್ನಡ ಸಾಹಿತ್ಯದ ರಚನೆಗೆ ಪ್ರೋತ್ಸಾಹವಿತ್ತರು. ಕೊನೆಯ ಮೂವರು ಗಂಗರಸರ ಆಳಿಕೆಯ ಸಮಯದಲ್ಲಿ ದಂಡನಾಯಕ ಹಾಗೂ ಮುಖ್ಯಮಂತ್ರಿಯಾಗಿದ್ದ ಚಾವುಂಡರಾಯ ಕನ್ನಡ, ಸಂಸ್ಕೃತ ಹಾಗೂ ಪ್ರಾಕೃತ ಭಾಷೆಗಳಲ್ಲಿ ಪರಿಣತಿ ಹೊಂದಿದ್ದನು. ರನ್ನ, ನಾಗವರ್ಮ, ಕೇಶಿರಾಜ ಮೊದಲಾದ ಶ್ರೇಷ್ಠ ಕನ್ನಡ ಕವಿಗಳಿಗೆ ಆಶ್ರಯವಿತ್ತಿದ್ದನು.

ಶ್ರವಣಬೆಳಗೊಳದ ವಿಂಧ್ಯಗಿರಿಯಮೇಲೆ ೫೭ ಅಡಿಗಳ ಗೊಮ್ಮಟ ವಿಗ್ರಹವನ್ನು ಸ್ಥಾಪಿಸಿದ ಶ್ರೇಯವೂ ಚಾವುಂಡರಾಯನದು. ಈ ಮೂರ್ತಿಯ ಅಡಿಯ ಹತ್ತಿರ

*ಶ್ರೀ ಚಾವುಂಡರಾಜೇಞ್ ಕರವಿಯಲೇಞ್ (ಶಾಸನ ಕ್ರ. ೨೭೬)*
*ಗಂಗರಾಜೇ ಸುತ್ತಾಲೇ ಕರವಿಯಲೇ (ಶಾಸನ ಕ್ರ. ೨೭೭)*

---

1. ಮರಾಠಿ ಭಾಷಾ ಉದ್ಗಮ ವ ವಿಕಾಸ ಪು. ೧೪೯

ಈ ವಾಕ್ಯಗಳು ಮರಾಠಿಯಲ್ಲಿಯ ಆದ್ಯ ಶಿಲಾಲೇಖಗಳೆನಿಸಿವೆ. ಇದೊಂದರ ಆಧಾರದಮೇಲೆ "ಮಹಾರಾಷ್ಟ್ರದ ಅರಸರು ಶ್ರವಣಬೆಳಗೊಳದವರೆಗೆ ತಮ್ಮ ರಾಜ್ಯ ಬೆಳೆಸಿದ್ದರು" ಎಂದು ಲ.ರಾ.ಪಾಂಗಾರಕರರಂತಹ ಮರಾಠಿ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ! ಹಾಗಿದ್ದ ಪಕ್ಷದಲ್ಲಿ ಅದೇ ಸ್ಥಳದಲ್ಲಿ ಬರೆಯಲಾಗಿದ್ದ

*ಶ್ರೀ. ಚಾಮುಣ್ಡರಾಜನ್ ಶೆಯ್‌ವಿತ್ತಾನ್ (ಶಾಸನ ಕ್ರ. ೨೬೩)*

ಎಂಬ ತಮಿಳು ಭಾಷೆಯ ತಮಿಳು ಲಿಪಿಯ ಲೇಖದ ಆಧಾರದಿಂದ ಶ್ರವಣಬೆಳಗೊಳದ ಮೇಲೆ – ಪರ್ಯಾಯವಾಗಿ ಕರ್ನಾಟಕದ ಮೇಲೆ ಅದೇ ಕಾಲಕ್ಕೆ ತಮಿಳು ಅರಸರೂ ರಾಜ್ಯವಾಳುತ್ತಿದ್ದಾರೆಂದು ವಾದಿಸಲೂ ಬಹುದಾಗಿದೆ. ಶ್ರವಣಬೆಳಗೊಳ ಹಾಗೂ ಅದರ ಪರಿಸರದಲ್ಲಿ ಐದುನೂರಾ ಐವತ್ತಕ್ಕೂ ಹೆಚ್ಚು ಕನ್ನಡ ಲಿಪಿಯಲ್ಲಿಯ ಕನ್ನಡ-ಸಂಸ್ಕೃತ ಭಾಷೆಯಲ್ಲಿಯ ಕಲ್ಬರೆಹಗಳು ಇದ್ದರೇನಂತೆ!

> ರಾಷ್ಟ್ರಕೂಟ ಮನೆತನದ ೧೯ ಅರಸರು ಕ್ರಿಸ್ತೋತ್ತರ ೭೫೩ರಿಂದ ೯೭೪ರವರೆಗೆ ಮೊದಲಿನ ಮರಾಠವಾಡದಲ್ಲಿ ಇದ್ದ ಮಾನ್ಯಖೇಡ (ಮಳಖೇಡ) ಇಲ್ಲಿ ಅವಿಚ್ಛಿನ್ನವಾಗಿ ರಾಜ್ಯ ಆಳಿದರು.[2]

ಎಂದು ಕೃ.ಪಾಂ. ಕುಲಕರ್ಣಿ ಅವರು ಹೇಳುವಲ್ಲಿಯೂ ರಾಷ್ಟ್ರಕೂಟರೂ ಮರಾಠಿ ಅರಸರೇ ಎಂದು ಧ್ವನಿತವಾಗುತ್ತದೆ.

'ರಟ್ಟ' 'ರಾಷ್ಟ್ರಕೂಟ' ಮತ್ತು 'ರಾಠೋಡ' ಪದಸಾಮ್ಯಗಳಿಂದಾಗಿ ರಾಷ್ಟ್ರಕೂಟರು ರಾಜಪುತಾನದ ರಾಠೋಡ ಪಂಗಡಕ್ಕೆ ಸೇರಿದವರಿರಬಹುದೆಂದು ಫ್ಲೀಟ್ ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರು ಊಹಿಸಿದ್ದರು. ಇದೂ ಸರಿಯಲ್ಲ.

ಧ್ರುವ, ಮೂರನೆಯ ಗೋವಿಂದ ಮತ್ತು ಮೂರನೆಯ ಇಂದ್ರ ಹಾಗೂ ಕೃಷ್ಣ ಇವರು ಉತ್ತರ ಭಾರತದ ದಿಗ್ವಿಜಯ ನಡೆಸಿದ ಕಾಲದಲ್ಲಿ ಹಲವು ರಾಷ್ಟ್ರಕೂಟರು ಅಲ್ಲಿ ನೆಲೆಸಿ ಅವರೇ ಮುಂದೆ ರಾಠೋಡರೆಂದು ಪ್ರಸಿದ್ಧಿಗೆ ಬಂದವರೆಂದು ತಿಳಿದು ಬರುತ್ತದೆ.[3]

ರಾಷ್ಟ್ರಕೂಟ ಸಾಮ್ರಾಟರು 'ಲಟ್ಟನೂ(ಲೂ)ರು ಪುರವರಾಧೀಶ್ವರ' ಎಂದು ಬಿರುದು ಹೊಂದಿದ್ದರು. ಈ ಲಟ್ಟನೂರು ಹಿಂದಿನ ಉಸ್ಮಾನಾಬಾದ ಜಿಲ್ಹೆಯಲ್ಲಿಯ ಲಾತೂರು (ಇತ್ತೀಚೆಗೆ ಇದು ಮಹಾರಾಷ್ಟ್ರದಲ್ಲಿ ಜಿಲ್ಹೆಯ ಸ್ಥಳವೂ ಆಗಿದೆ). ರಟ್ಟ-ಲಟ್ಟ ಇದು ಶೌರ್ಯ-ಪರಾಕ್ರಮಕ್ಕೆ ಮರಾಠಿಯಲ್ಲಿ ಇನ್ನೊಂದು ಹೆಸರು.

*ತೂಜ್ ಶೂರವೃತ್ತಿಚಾ ರಾಠಿ । ಕ್ಷತ್ರಿಯಾಮಾಝಿ ರಾಠಿ*
*ತೂರಘೇಯಾ ಲಾಠೇಪಣಾಚಾ ಆಹೋಃ । ತಿಹಿಜ್ ಲೋಕಿಜ್ (೨-೯)*

---

2. ಮರಾಠಿ ಭಾಷಾ ಉದ್ಗಮ ವ ವಿಕಾಸ ಪು. ೧೯೦
3. ದಕ್ಷಿಣ ಭಾರತದ ಇತಿಹಾಸ - ಬಿ.ಷೇಕ್ ಅಲಿ ಮತ್ತು ಜಿ.ಆರ್ ರಂಗಸ್ವಾಮಯ್ಯ

ನೀನು ಶೂರವೃತ್ತಿಯ ಆಶ್ರಯಸ್ಥಾನ. ಕ್ಷತ್ರಿಯರಲ್ಲಿ ರಾಜ. ನಿನ್ನ
ಪರಾಕ್ರಮದ ಕೀರ್ತಿ ಮೂರೂ ಲೋಕಗಳಲ್ಲಿ.

ಎಂದು ಜ್ಞಾನೇಶ್ವರಿಯಲ್ಲಿ ಶ್ರೀಕೃಷ್ಣ ಅರ್ಜುನನಿಗೆ ಹೇಳುತ್ತಾನೆ. ಇನ್ನೂ ಕೆಲವು ಉಲ್ಲೇಖಗಳು ಹೀಗಿವೆ.

*ಅವಿದ್ಯಾ ಜೇಣೆಜ್ ಲಾಠೀ (೧೩ - ೧೧೩)*
ಯಾವುದರಿಂದ ಅವಿದ್ಯೆ ಬಲಶಾಲಿಯಾಗಿದೆಯೋ–

*ಐಸಾ ಸ್ವಯಂಭು ಜೋ ಜೀವ ಲಾಟುಗ (೧೮ - ೮೫೪)*
ಸ್ವಯಂಭೂವಾಗಿರುವ ಸಹಜ ಪರಾಕ್ರಮ.

*ತೇ ಆತಾಚ್ ಲಾಠೇಪಣೇಜ್ ಕಾಜ್ ನ ಜುಝೂವೆಜ್ (೨-೨೧೯)*
ಈಗ ಶೌರ್ಯದಿಂದ ಏಕೆ ಯುದ್ಧ ಮಾಡಬಾರದು?

ಜ್ಞಾನೇಶ್ವರನ ಸಮಕಾಲೀನನಾದ ಭಾಸ್ಕರ ಭಟ್ಟನು ರಚಿಸಿದ ಶಿಶುಪಾಳವಧದಲ್ಲಿ ಇನ್ನೊಂದು ಪ್ರಯೋಗ ಹೀಗಿದೆ.

*ಐಸೇ ಘರಲಾಠೇಳ ಬೋಲಾಜ್*
ಇಂತಹ ಮನೆಪರಾಕ್ರಮದ ಮಾತುಗಳಿಂದ –

ರಾಷ್ಟ್ರಕೂಟದ ನಂತರ ಕರ್ನಾಟಕದಲ್ಲಿ ರಾಜ್ಯ ಸ್ಥಾಪಿಸಿದವರು ಕಲ್ಯಾಣದ ಚಾಲುಕ್ಯರು. ತೈಲ, ತೈಲಪ್ಪ, ತೈಲಪ್ಪಯ್ಯ ಎಂದು ಶಿಲಾಲೇಖಗಳಲ್ಲಿ ಹೆಸರಿಸಲಾದ ೨ ನೆಯ ತೈಲಪನು ಇವರ ಮೂಲ ಪುರುಷ. ಕ್ರಿ. ಶ. ೯೭೩ ರಿಂದ ಕ್ರಿ. ಶ. ೧೧೮೯ ರವರೆಗೆ ಈ ಮನೆತನದ ಅರಸರು ರಾಜ್ಯವಾಳಿದರು. ಇವರ ಅಂಕಿತ ಪ್ರದೇಶ ದಕ್ಷಿಣದಲ್ಲಿ ಶಿವಮೊಗ್ಗ ಚಿತ್ರದುರ್ಗಗಳವರೆಗೂ ಉತ್ತರಕ್ಕೆ ಗೋದಾವರಿಯವರೆಗೂ ಹಬ್ಬಿತ್ತು. ಕೊಂಕಣವೂ ಇವರ ಸೊತ್ತಾಗಿತ್ತು. ಕನ್ನಡದ ಉದ್ದಾಮ ಕವಿ ರನ್ನನಿಗೆ ತೈಲಪನು ಆಶ್ರಯವಿತ್ತನು. ಬಿಲ್ಹಣನು ವಿಕ್ರಮಾಂಕದೇವಚರಿತೆ ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದನು. ೩ನೆಯ ಸೋಮೇಶ್ವರನು ಸ್ವತಃ ಕವಿಯಾಗಿದ್ದು ಮಾನಸೋಲ್ಲಾಸ (ಅಭಿಲಷಿತಾರ್ಥ ಚಿಂತಾಮಣಿ) ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದನು. ಅದರಲ್ಲಿ

*ಮಹಾರಾಷ್ಟ್ರೇತು ಯೋಷಿದ್ಭಿಃ ಓವಿರ್ಗೇಯಾತು ಕಂಡನೇ*
ಮಹಾರಾಷ್ಟ್ರದಲ್ಲಿ ಸ್ತ್ರೀಯರು ಕುಟ್ಟುವಾಗ ಓವಿ ಹಾಡುತ್ತಾರೆ

ಎಂಬ ಉಲ್ಲೇಖದೊಡನೆ ಆ ಓವಿಗಳ ಮಾದರಿಯನ್ನು ಕೊಡಲಾಗಿದೆ. ಆ ಓವಿಗಳು ಕೆಳಗಿನಂತಿವೆ.

*ಜೇಣೆ ರಸಾತಲ ಉಣೂ ಮತ್ಸ್ಯರೂಪೇ ವೇದ ಆಣಿಯಲೇ*
*ಮನುಶಿವಕ ವಾಣಿಯಲೇ*
*ತೋ ಸಂಸಾರ ಸಾಯರ ತಾರಣು ಮೋಹಂತೋ ನಾರಾಯಣು*
*ಕೂರ್ಮನಾಗಿ ಮಂದರ ದೇವಚ (ರ?) ದೇವಚೇಶಾಲಾನು*
*ಸುರರಿಗಮೃತ ಸಾಧಿಸಿಕೊಟ್ಟ ದೇವನೆಮಗೀಗೆ ವರವಸೂವರೂಪೇ*

*ಪಾಥಾಲು ಪೈಸಿ ದಾಣತು ಹರಿಣಕಳಪು ಚಮಾಚುವಿದಾಥ ಗೋವಿಂದ*
*ಧರಣ ಉದ್ಧರಿಯಮ್*
*ಸೌ ದೇಉ ಮಂದರ ದುಹೋಚ್ಚ ಉವರ್ಧಂಡೇನೀ*
*ಶ್ರೀ ನಾರಸಿಂಹದ್ಯೆ (ತ್ಯ)*
*ಹಿರಣ್ಯಕಶಿಪುರೋಸ್ಸು ಗೋಹವಕ್ಷಿವಂ ವೇನಾದ್ಯೆ ಬುಥುಂ*
*ಮನವಲವೆಂಡಿಣಾ ನಿಚ್ಚಂಡಮಯು*
*ವಾಮನುಭೂಥಲಕೇ ತ್ರಿದೈತ್ಯ ಬಲಿರಿಲ್ಲಿನಿ*
*ಭೂಮಿ ತ್ರಿಪುರಥು ದೋನ್ನಿ ವಲೂಕ ಸುಥೌಮೇರಸ್ಮಧುಕಾರನ್*
*ಜೇ ಬ್ರಹ್ಮಣೇರಕುಲೇ ಉಪಜೀಯ್ಯಾ ಕಾತ್ರವೀಯಾ*
*ಜೇಣೇ ಬಾಹೂಫರಸೇ ಖಾಂಡಿಯಾ ಪರಸುರಾಮ ದೇಉ*
*ತೋ ಮಹಾಮಂಗಲ ಕರಉ*
*ನಂದಗೋಕುಲಮ್ ಜಾಯೌ ಕನ್ಹ ಜೋ ಗೋಪೀ ಜನೇ*
*ವಡಿಹೇ ಲೀಟೆ ನಯಣೇ ಜೋಪಿಯಾ ಮಹಣಾಧರ*
*ಅಪಿನಹ್ಮಣ ಹಕ್ಕಾರಿಯಾ ಕನ್ಹಾ ಭರತಾಸೌ ಅಹ್ಮೇಣಾಂ ಚಂತಿಯಾದೇಉ*
*ಬುದ್ಧರೂಪೇ ಜೋ ದಾಣವ ಸುರವಂಚಣ ವೇದ ದೂಷಣಪೂಲ್ಲಹಣ*
*ಮಾಯಾ ಮೋಹಿಯಾ ತೋ ದೇಉ ಮಾಝು ಪಾಸಾಉ ಕರೂ*
*ಜೋ ಗೋಪಿಜನೇ ಗಾಇಜೆ ಬಹುಪರಿರೂಪೇ ನಿಹಿ*
*ಗೋಮಯ ಸೈಕಃ ಶೇಷನಲೇ ಸುಲಘು ಶಶಜನಭಾಸ ವಂಕಸೇ*

ಇದರ ಪೂರ್ತಿ ಪಾಠ ಕೊಡುವ ಉದ್ದೇಶವಿಷ್ಟೇ. ಮಾನಸೋಲ್ಲಾಸದ ಕರ್ತೃ, ಕಲ್ಯಾಣ ಚಾಲುಕ್ಯರ ಅರಸು ಮೂರನೆಯ ಸೋಮೇಶ್ವರನು ಆಳಿದ ಕಾಲ ಕ್ರಿ.ಶ. ೧೧೨೭ ರಿಂದ ೧೧೩೮. ಅವನ ಪೂರ್ವದ ಕಾಲದ ಅದೆಷ್ಟೋ ಮರಾಠಿ ಭಾಷೆಯಲ್ಲಿಯ ಶಿಲಾಲೇಖಗಳು ತಾಮ್ರಪಟಗಳು ದೊರೆತಿರುವಾಗ (ಗ್ರಾಂಥಿಕ ಸಾಹಿತ್ಯವಲ್ಲ) ಮೇಲ್ಕಾಣಿಸಿದ ಓವಿಗಳನ್ನು ಅರ್ಥವಿಸುವುದು ಮರಾಠಿ ಪಂಡಿತರಿಗೆ ನುಂಗಲಾರದ ಬಿಸಿ ತುಪ್ಪದಂತಾಗಿದೆ. ಇವುಗಳ ಪೈಕಿ ಎರಡು ಸಾಲು ಮಾತ್ರ ಅವರಿಗೆ ಅರ್ಥೈಸಲು ಸಾಧ್ಯವಾಗಿದೆ.

*ಜೇಣೇಜ್ ರಸಾತಲಉಣೂ ಮತ್ಸ್ಯರೂಪೇ ವೇದ ಆಣಿಯಲೇ*

ಮೀನಿನ ರೂಪದಲ್ಲಿ ಯಾರು ರಸಾತಲದಿಂದ ವೇದ ತಂದರೋ

ಮತ್ತು

*ತೋ ದೇಉ ಮಾಝು ಪಾಸಾಉ ಕರೂ*

ಆ ದೇವರು ನನಗೆ ಪ್ರಸನ್ನನಾಗಲಿ.

ಈ ಮರಾಠಿ ಸಾಲುಗಳಲ್ಲದೆ ಕನ್ನಡದ

*ಕೂರ್ಮನಾಗಿ ಮಂದರ ದೇವಚ (ರ?) ದೇವ . . . .*
*ಸುರರಿಗಮೃತ ಸಾಧಿಸಿಕೊಟ್ಟ ದೇವನೆಮಗೀಗೆ ವರವ ಸೂವರ ರೂಪೇ*

---

4. ಜ. ಶಾಂ. ದೇಶಪಾಂಡೆ ಅವರು ಸಂಪಾದಿಸಿದ ನವೇ ನವನೀತದಿಂದ

ಈ ಸಾಲುಗಳೂ ಇವೆ. ಕೆಲವು ಸಾಲುಗಳ ಮೇಲೆ ತೆಲಗು ಭಾಷೆಯ ಛಾಯೆ ಇದ್ದರೆ ಇನ್ನು ಹಲವೆಡೆ ಪ್ರಾಕೃತ-ಅಪಭ್ರಂಶದ ಶಬ್ದಗಳೂ ಬಂದಿವೆ. ಮಹಾರಾಷ್ಟ್ರೇಲು ಯೋಷಿದ್ಭಿ: ಎಂದು ಹೇಳಿದ ಮಾತ್ರಕ್ಕೆ ಆ ಅರಸು ಮರಾಠಿ ಭಾಷಿಕನೆಂದೂ ಅವನ ರಾಜ್ಯ ಮಹಾರಾಷ್ಟ್ರದ್ದೆಂದೂ ಸಾಧಿಸುವ ಪಂಡಿತರಿಗೆ ಅದು ಹಾಗಲ್ಲ ಎಂದು ಹೇಳಬೇಕಾಗಿದೆ. ಮೂರನೆಯ ಸೋಮೇಶ್ವರನಿಗೆ ಅಭಿಪ್ರೇತವಿದ್ದು ಕೃಷ್ಣಾ-ಗೋದಾವರಿಯ ನಡುವಣ ಈಗಿನ ಮಹಾರಾಷ್ಟ್ರವಲ್ಲ ಎಂದೂ ಸ್ಪಷ್ಟವಾಗಿದೆ.

ಕಲ್ಯಾಣದ ಚಾಲುಕ್ಯರ ನಂತರ ಅಧಿಕಾರಕ್ಕೆ ಬಂದವರು ಕಲ್ಯಾಣದ ಕಳಚೂರ್ಯರು. ಮೂರನೆಯ ಸೋಮೇಶ್ವರನ ಸಾಮಂತನಾಗಿದ್ದ ಬಿಜ್ಜಳನು ಕ್ರಿ.ಶ. ೧೧೫೬ ರಲ್ಲಿ ಚಾಳುಕ್ಯರ ಸಿಂಹಾಸನವನ್ನು ವಶಪಡಿಸಿಕೊಂಡನು. ಆ ವಂಶದ ರಾಜರ ಆಳಿಕೆ ೨೮ ವರ್ಷ ಮಾತ್ರ. ಆದರೆ ಆ ಕಾಲದಲ್ಲಿಯ ವೀರಶೈವ ಮತದ ಪ್ರಚಾರದಿಂದಾಗಿ ಕರ್ನಾಟಕದ ಸಾಂಸ್ಕೃತಿಕ ಇತಿಹಾಸಕ್ಕೆ ಹೊಸ ತಿರುವು ಬಂದಿತು. ಕರ್ನಾಟಕ ಆಂಧ್ರಗಳಲ್ಲಿ ಪಸರಿಸಿದ ವೀರಶೈವ ಮತವು ಗೋದಾವರಿಯ ಸೀಮೆಯವರೆಗೂ ಬೆಳೆಯಿತು.

ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತ್ರವೆಂಬ ತೆಲಗು ಕೃತಿಯಲ್ಲಿ (ಕ್ರಿ.ಶ. ೧೧೯೦) ಶ್ರೀಶೈಲದ ಯಾತ್ರಾರ್ಥಿಗಳು ಹಾಡುವ ಒಂದ 'ಆರೇ' ಹಾಡು ಉಲ್ಲಿಖಿತವಾಗಿದೆ.

*ಮಾಗಾರಗಾನಕೋ ಮಜ ಚಾವು ಮ್ಹಣತ*
*ಭಾಗವೋದೇ ವಾಟೇ ಭಕ್ತ ತೇ ಮ್ಹಣತ*
*ಚರಲಿಂಗ ಗುರುಲಿಂಗ ಶಂಭೂಸ ಮ್ಹಣತ*
*ಮರವರ ಕೆತ್ತದೂರಿ ಮರುಖ ಮ್ಹಣತ*
*ಅಖೇ ಶ್ರೀ ಕೈಲಾಸ ದೇಖೀ ದೂರೀ ಮ್ಹಣತ*
*ಸುಖಮುಖ ಜಾಲೋ ಮರುಖ ತೇ ಮ್ಹಣತ*
*ಮಗ ಮಹಾರಾಟಚೀ ಮಹಾದೇವು ಯಾಜೀ*
*ಗಗನರಣಾ ಯಾಜೀ ಕೈಲಾಸ ಯಾಜೀ*
*ಅಖಮರಣಾ ಯಾಜೀ ಸುಖದೇವು ಯಾಜೀ*
*ಸುಖಕರ ಆವಲಾಚಿ ಶುಭದೇವು ಯಾಜೀ*
*ಆಖಿರೇವಹೀ ಭಗತ ಆಮಲೇ ಲಿಂಗ*
*ಶ್ರೀಗಿರಿಮಲ್ಲಯ್ಯಾ ವರಮ ದೀಯಂತ*
*ಸುಖತಾಲ ಜತಿಮನ ದೇಖಿಲ ನಾಚೀ*
*ಮಹಾರಾಜಾ ಶ್ರೀ ಗಿರಿಮಲ್ಲಯ ರಾಣಾ*
*ಆಳಾನಿಬಂಧನ ತಾಳ ಗೀತಾಚಾ*
*ಮಾಲಾ ಸಮರ್ಪಣ ಮಲ್ಲಯ ರಾಣಾ*
*ಸಾರಪಿತ ಸಂತಾಪ ಸಂಸಾರನಾಟಕನೇ*
*ಪರ್ವತ ಮಲ್ಲಯ್ಯ ಸರ್ವಜ್ಞಗಾತೀ*

*ಆಮಚೇನಿ ಪುನರ್ಭವುನಿ ಚಿತ್ತೇಜ್*
*ಆಮುಚೇ ಮಹಾಭಕ್ತ ಲಕ್ಷಸಂಮೇಳ*
*ಶರಣ ಹೇಚಿ ಮರಜವಳ ವ್ಹಾಣತ*
*ವರಪುವಿ ಬೇಗ ವರದು ಹೇಳುತ್ತ*[5]

ಇದರಲ್ಲಿಯ ಕೊನೆಯ ಸಾಲು ಕನ್ನಡವೆನ್ನುವುದು ಸ್ಪಷ್ಟ.

ಹೀಗೆ ವರ್ಧಿಷ್ಣುವಾಗಿದ್ದ ವೀರಶೈವ ಮತವು ಮುಂದೆ ಸೇವುಣ ರಾಜರ ಕಾಲದಲ್ಲೂ ಅಭಿವೃದ್ಧಿ ಹೊಂದಿತು.

ರಾಷ್ಟ್ರಕೂಟರ ಕಾಲದಲ್ಲಿ ನಾಸಿಕ ಪ್ರಾಂತದಲ್ಲಿ ತಳ ಊರಿದ ಸೇವುಣರು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಅವರ ಸಾಮಂತರಾಗಿ ಬೆಳೆದರು. ಐದನೆಯ ಭಿಲ್ಲಮನು ಪ್ರಬಲನಾಗಿ ಕ್ರಿ.ಶ. ೧೧೮೩ ರಲ್ಲಿ ಸ್ವತಂತ್ರ ರಾಜ್ಯ ಸ್ಥಾಪಿಸಿದನು. ಅವನ ರಾಜ್ಯವು ಇಂದಿನ ವಿಜಾಪುರ, ಸೊಲ್ಲಾಪುರ, ಗುಲಬರ್ಗಾ, ರಾಯಚೂರು ಜಿಲ್ಹೆಗಳನ್ನಲ್ಲದೆ ಸೇವುಣದೇಶವನ್ನೂ ಒಳಗೊಂಡಿದ್ದಿತು. ಮೊದಲಿದ್ದ ರಾಜಧಾನಿ ಸೇವುಣಪುರ (=ಸಿನ್ನರ, ಈಗಿನ ನಾಸಿಕ ಜಿಲ್ಹೆಯಲ್ಲಿಯ ತಾಲೂಕು ಸ್ಥಳ) ವನ್ನು ದೇವಗಿರಿಗೆ ಬದಲಾಯಿಸಿದನು.

ಈ ಸೇವುಣರು ಕರ್ನಾಟಕದವರೇ. ಮಹಮ್ಮದೀಯ ಚರಿತ್ರಕಾರರು ಅವರನ್ನು ಯಾದವರೆಂದು ಕರೆದರು. ಅದನ್ನೇ ಅನುಸರಿಸಿ ಫ್ಲೀಟ್, ಭಾಂಡಾರಕರ, ಆಳತೇಕರ-ರಂತಹ ಇತಿಹಾಸ ತಜ್ಞರು ಅವರನ್ನು ದೇವಗಿರಿ ಯಾದವರೆಂದೇ ಗುರುತಿಸಿದರು. ಆದರೆ ಸೇವುಣರ ಸಮಕಾಲೀನ ರಾಜವಂಶಗಳಾದ ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಕಾಕತೀಯರು ಮುಂತಾದವರ ಶಿಲಾ-ಶಾಸನಗಳಲ್ಲಿ ಎಲ್ಲಿಯೂ ದೇವಗಿರಿಯ ಯಾದವರು ಎಂಬ ಹೆಸರು ಕಾಣುವುದಿಲ್ಲ. ಹೇಮಾದ್ರಿಯೂ ತನ್ನ ರಾಜಪ್ರಶಸ್ತಿ ಗ್ರಂಥದಲ್ಲಿ ಅವರನ್ನು ಸೇವುಣರೆಂದೇ ಕರೆದಿದ್ದಾನೆ.

ತಮ್ಮವೇ ಆದ ಶಾಸನಗಳಲ್ಲಿ ಸೇವುಣರು ಯಾದವ ನಾರಾಯಣ ಎನ್ನುವ ಬಿರುದಿನೊಂದಿಗೆ ಸೇವುಣ ಚಕ್ರವರ್ತಿ, ಸೇವುಣ ವಂಶದರಸು ಎಂಬ ಹೆಸರಿನಿಂದ ಕರೆಯಲ್ಪಟ್ಟಿದ್ದಾರೆ.

ವಿದರ್ಭದಲ್ಲಿ ರೂಢವಾಗಿದ್ದ ಮಹಾನುಭಾವೀ ಸಂಪ್ರದಾಯದ ಗ್ರಂಥ-ವೊಂದರಲ್ಲಿ (ಕಿ. ಶ. ೧೩ ನೆಯ ಶತಮಾನ) ಮಹಾರಾಷ್ಟ್ರ ಹಾಗೂ ಸೇವುಣರ ಬಗ್ಗೆ ಹೀಗೆ ಉಲ್ಲೇಖವಿದೆ :

*ಸಾರೀ ಲಕ್ಷ ದೇಶ ಮಹಾರಾಷ್ಟ್ರ ; ತೇಥಿಚೇ ಶಹಾಣೇ ಸುಭಟು*
*ವೇದಶಾಸ್ತ್ರ ಚಾತುರ್ಯಾಚೇ ಪೇಠು ಭರ್ಲೆವಿ ; ಕಿಯೇ ದೇಶೀ*
*ಐಸೇ ತೇ ಮಹಾರಾಷ್ಟ್ರರಾಯೇ ಸುಂದರು; ವರೀ ಮಹಾರಾಷ್ಟ್ರಭಾಷಾಚತುರು;*

---

5. ಜ್ಞಾನೇಶ್ವರಪೂರ್ವ ಕೆಲುಗು ಕಾವ್ಯಾತೀಲ ಮರಾಠಾ ಉತಾರಾ - ಲೇಖಕ ಚಿಂ.ಗ. ಕರ್ವೇ ಭಾರತ ಇತಿಹಾಸ ಸಂಶೋಧಕ ಮಂಡಳದ ಪೌಷ ೧೮೬೩ ಚೈತ್ರ ೧೮೬೪ ಸಂಚಿಕೆ

> ಅರವತ್ತು ಲಕ್ಷದ ಮಹಾರಾಷ್ಟ್ರ ದೇಶ. ಅಲ್ಲಿಯ ಅರಸರು ಶಿಹಾಣರು. ಆ ದೇಶದಲ್ಲಿ ವೇದಶಾಸ್ತ್ರ ಚಾತುರ್ಯದ ಪೇಟೆ ತುಂಬಿದೆ. ಇಂತಹ ಮಹಾರಾಷ್ಟ್ರದ ರಾಜರು ಸುಂದರರು. ಮೇಲಾಗಿ ಮಹಾರಾಷ್ಟ್ರ ಭಾಷೆಯಲ್ಲಿ ಚತುರರು.

ಕ್ರಿ. ಶ. ೧೨೮೪ ರಲ್ಲಿ ರಚಿತವಾದ ಲೀಳಾಚರಿತ್ರದಲ್ಲಿಯ ಉಲ್ಲೇಖವಿದು.

*ತೇಹಿ ಭಣತಲೇ; ಹಾತೀ ಸೇಹಾಣ ಮಾರಿಲಾ; ಪಾಟ ಸೇಹಾಣ ಭೇದಿಲಾ; ನರಸಿಂಹದೇಓ ಪಳಾಲಾ; ಆಮಣದೇಆಚೇ ಡೋಳೇ ಕಾಢಿಲೇ; ರಾಮದೇಉ ರಾವೋ ರಾಜೀಇ ಬೈಸಲಾ.*

> ಅವರು ಹೇಳಿದರು. ಕೈಯಾರೆ ಸೇವುಣನನ್ನು ಕೊಂದರು. ಪಟ್ಟಸೇವುಣನನ್ನು ಭೇದಿಸಿದರು. ನರಸಿಂಹದೇವ ಓಡಿಹೋದ. ಆಮಣದೇವನ ಕಣ್ಣು ಕಿತ್ತಿದರು. ರಾಮದೇವರಾಯ ಪಟ್ಟಕ್ಕೆ ಕುಳಿತ.

(ಈ ಹೇಳಿಕೆಗಳಿಗೆ ಐತಿಹಾಸಿಕ ಆಧಾರವಿದೆ. ಕ್ರಿ.ಶ. ೧೨೭೧ ರಲ್ಲಿ ಮಹಾದೇವರಾಜ ಸತ್ತ. ಇಲ್ಲಿ ಕೊಂದರು ಎಂದು ಹೇಳಿದ್ದಾರೆ.ಅವನ ಪಟ್ಟಸೇವುಣ-ಉತ್ತರಾಧಿಕಾರಿ-ಆಮಣದೇವನ ಕೊಲೆಮಾಡಿ ರಾಮದೇವರಾಯ ರಾಜ್ಯಕ್ಕೆ ಬಂದ. ಆಮಣದೇವನಿಗೆ ನೆರವಾದವ ಹೊಯ್ಸಳರ ಮೂರನೆಯ ನರಸಿಂಹ.)

ಇಲ್ಲಿ ಇನ್ನೊಂದು ಸ್ವಾರಸ್ಯಕರ ಸಂಗತಿ ಹೇಳಬೇಕು. ರಾಷ್ಟ್ರಕೂಟರ ಶೌರ್ಯಧೈರ್ಯಗಳಿಂದಾಗಿ ರಟ್ಟ > ಲಟ್ಟ > ಲಾಠ >, ಲಾಠೇಪಣ ಎಂದು ಪರಾಕ್ರಮ ಅರ್ಥದಲ್ಲಿ ಶಬ್ದ ಬಂದಂತೆ (ಇದು ಮುಂದೆ ವ್ಯಂಗಾರ್ಥದಲ್ಲಿ ಲಠ್ಠ = ದಪ್ಪ ಎಂದಾಗಿ ಉಳಿದಿದೆ.) ಸೇವುಣರ ಜಾಣ್ಮೆಯನ್ನು ಮೆಚ್ಚಿಕೊಂಡು ಸೇವುಣ > ಸೇಹಾಣೀ > ಸಿಹಾಣಾ > ಶಹಾಣಾ ಎಂಬ ಶಬ್ದ ಜಾಣ ಅರ್ಥದಲ್ಲಿ ರೂಢವಾಗಿದೆ. ಕನ್ನಡದಲ್ಲಿ ಶಾಣ್ಯಾ ಆಗಿ ಬಂದಿದೆ. (ಶಂ. ಗೋ. ತುಳಪುಳೆಯವರು ಶಿಕ್ಷಣಕ > ಶಹಾಣಾ ಎಂದು ವ್ಯುತ್ಪತ್ತಿ ತೆಗೆದಿದ್ದಾರೆ.)

*ಏಥ ಚಾತುರ್ಯ ಸಿಹಾಣೇಇ ಜಾಲೇಇ ಪ್ರೇಮ ರುಚೇಸೀ ಆಲೇಇ (೧.೩೫)*

> ಇಲ್ಲಿ (ಈ ಮಹಾಭಾರತದ ಕಥೆಯಲ್ಲಿ) ಚಾತುರ್ಯವು ಜಾಣವಾಯಿತು, ಪ್ರೇಮವು ಮಧುರವಾಯಿತು

ಎಂದು ಜ್ಞಾನೇಶ್ವರರು ಹೇಳುತ್ತಾರೆ.

ಕ್ರಿ. ಶ. ೧೧೭೩ ರಿಂದ ೧೩೧೨ ರವರೆಗೆ ಆಳಿದ ಸೇವುಣರಾಜರು ಕರ್ನಾಟಕದವರೆಂದು ಹೇಳಿದೆಯಷ್ಟೆ? ಇದಕ್ಕೆ ಆಧಾರಗಳೇನು? ನಾಸಿಕ ಜಿಲ್ಹೆಯಲ್ಲಿಯ ಸಿನ್ನರವನ್ನು ಮೊದಲು ರಾಜಧಾನಿ ಮಾಡಿಕೊಂಡಿದ್ದರೂ ನಂತರ ಅದನ್ನು ಉಸ್ಮಾನಾಬಾದ ಜಿಲ್ಹೆಯಲ್ಲಿಯ ದೇವಗಿರಿಗೆ ತಂದ ಈ ಮನೆತನ ಭಾಂಡಾರಕರ, ಆಳತೇಕರ ಅವರು ಪ್ರತಿಪಾದಿಸುವ ಹಾಗೆ ಮಹಾರಾಷ್ಟ್ರದ್ದೇ ಏಕೆ ಆಗಿರಬಾರದು?

೧. ಸೇವುಣಪುರ (ಸಿನ್ನರ) ದಲ್ಲಿ ರಾಜಧಾನಿ ಸ್ಥಾಪಿಸಿದವನು ಮೊದಲನೆಯ ಸೇವುಣಚಂದ್ರ. ಇವನಿಂದಲೇ ಈ ಮನೆತನಕ್ಕೆ ಸೇವುಣರೆಂದು ಹೆಸರು ಬಂದಿತು. ಇವನ ನಂತರ ಅಧಿಕಾರಕ್ಕೆ ಬಂದವನು ಧಡಿಯಪ್ಪ. ಶಾಸನಗಳಲ್ಲಿ ಇವನ ಹೆಸರು ದಡಿಪಕ, ದ್ಧಾಡಿಯಪ್ಪ, ಮತ್ತು ಧಡಿಯಸ ಎಂಬ ರೂಪಗಳಲ್ಲಿ ಕಾಣುತ್ತದೆ. ಇವನ ನಂತರದ ಅರಸುಗಳು ಭಿಲ್ಲಮ. ರಾಜುಗಿ, ವಾಡುಗಿ (ವಡ್ಡಿಗ, ವಂದಿಗ ಒಂಡುಗಿ ಎಂಬ ರೂಪಗಳೂ ಶಾಸನಗಳಲ್ಲಿವೆ.) ಧಡಿಯಮ ಹಾಗೂ ೨ನೆಯ ಭಿಲ್ಲಮ ಬಳಿಕ ವೇಸುಗಿ ಹಾಗೂ ೩ನೆಯ ಭಿಲ್ಲಮ. ಇವೆಲ್ಲ ಕನ್ನಡವೆನಿಸುವ ಹೆಸರುಗಳಾಗಿವೆ.

೨. ಭಡೋಚ (ಆಗಿನ ಭರವಸ)ದ ಪ್ರಧಾನಿಯ ಪುತ್ರನಾಗಿ ಹುಟ್ಟಿ, ಸಂಸಾರ ತೊರೆದು, ಸನ್ಯಾಸಿಯಾಗಿ ವಿದರ್ಭಕ್ಕೆ ಬಂದ ಚಕ್ರಧರ ಸ್ವಾಮಿಯ ನೆನಪು, ಆಖ್ಯಾಯಿಕೆ, ಪ್ರವಾಸ ವರ್ಣನೆಗಳನ್ನು ಒಳಗೊಂಡ ಗ್ರಂಥವೇ ಲೀಳಾಚರಿತ್ರೆ. ಇದನ್ನು ರಚಿಸಿದವನು ಜ್ಞಾನೇಶ್ವರರ ಸಮಕಾಲೀನ, ರಿಧಪುರದ ಮ್ಹಾಯಿಂಭಟ್ಟ (ಶಕೆ ೧೨೦೫). ಈ ಕೃತಿಯಲ್ಲಿ ಕನ್ನಡದ ಅನೇಕ ವೈಶಿಷ್ಟ್ಯಗಳು ಕಾಣುತ್ತವೆ. ಗೋಸಾವಿ, ಸರ್ವಜ್ಞರೆಂದು ಹೆಸರಿಸಲಾದ ಚಕ್ರಧರರು "ಉಣ್ಣುವುದಿಲ್ಲ". ಅವರಿಗೆ "ಆರೋಗಣೆ" ಯಾಗುತ್ತದೆ. (ಲೀಳಾ ೨೩೨, ४೫೧-४೫೬) ಅವರು ಬಂದಾಗ ಕೂಡ್ರಲು "ಅಡಣೀ" (ಅಡ್ಡಣಿಗೆ) (ಲೀಳಾ ४೫೬) ಅವರ ಭಕ್ತರು "ರಗಟೆ" (ಕನ್ನಡದ್ದೇ ಅರ್ಥ) ಬಳಸುತ್ತಾರೆ. (ಲೀಳಾ ೩೯೩) "ಮಾಂಡಾ" (ಮಂಡಿಗೆ) 'ರೋಟ" (ರೊಟ್ಟಿ) ಗಳನ್ನು ಆರೋಗಣೆಯಲ್ಲಿ ಒಪ್ಪಿಸುತ್ತಾರೆ. (ಲೀಳಾ ೨೯೩, ೩೧೯, ೨೯೨) ಆರೋಗಣೆಯ ನಂತರ

*ವೀಡೆ ವೋಳಗವೀಲೇ (ಲೀಳಾ ೨೩೧)* ವೀಳ್ಯ ಓಲಗಿಸುತ್ತಾರೆ.
*ರಾಣೇಯಾಂಸೀ ವೀಡಾ ವೋಪಾಗಾ (ಲೀಳಾ ೨೩೫)* ರಾಜರಿಗೆ ವೀಡೆ ಒಪ್ಪಿಸಿರಿ

ಎಂಬುದಾಗಿ ಸಂದರ್ಭವೂ ಬರುತ್ತದೆ.

ಆಳರಸರ ಭಾಂಡಾರಿ ಪರಸನಾಯಕ ಸತ್ತ. ಆಗ ಸುತ್ತಲಿನವರೆಲ್ಲ ಅಳುತ್ತಾರೆ.

ಮಾಝೀಯಾ ಪರಸ್ಯೆಯಾ, ಮಾಝೀಯಾ ಪರಸನಾವಿಕಾ
ಮಾಝೀಯಾ ಪರಸೋಬಾ
ನನ್ನ ಪರಸಯ್ಯಾ, ನನ್ನ ಪರಸನಾಯಕಾ, ನನ್ನ ಪರಸೋಬಾ

ಅವನ ಅಗ್ನಿಸಂಸ್ಕಾರ ನಡೆದಾಗ ಹಿಂಬದಿಯಿಂದ ಪರಸನಾಯಕ ಪ್ರತ್ಯಕ್ಷನಾಗಿ ತಾನೂ ಅಳತೊಡಗುತ್ತಾನೆ. ಚಕ್ರಧರರು ಅವನನ್ನು ಕೇಳುತ್ತಾರೆ.

*ತುಮ್ಹಿ ಕಾ ಗಾ ರಡತಾ ಪರಸೇಯಾ* ಪರಸ್ಯೆಯಾ ನಿವೇಕೆ ಅಳುತ್ತೀರಿ?
ಸತ್ತವನನ್ನು ಬದುಕಿಸಿದ ಈ ಪವಾಡದಲ್ಲಿ (ಲೀಳಾ ೨೫೩) ಬರುವ ಕನ್ನಡದ ಅಯ್ಯ ರೂಪ ಕಾಣಬಹುದು.
*ಪಾಹಾಜ್ ಪಾ (ಲೀಳಾ ೨೪೯)* 'ನೋಡಪ್ಪಾ
ಎನ್ನುವಲ್ಲಿ ಕನ್ನಡದ 'ಅಪ್ಪ' ಇದ್ದಾನೆ.

ಪ್ರಸಾದಗ್ರಹಣದ ನಂತರ ಚಕ್ರಧರರು ಮನೆಯಿಂದ "ಹೊರಗೆ ಹೋಗು"ವದಿಲ್ಲ, "ವಿಜಯಂಗೈ"ಸುತ್ತಾರೆ. (ಲೀಳಾ ೨೩೬, ೨೪೩)

ಈಗಿನ ಔರಂಗಾಬಾದ, ಬೀಡ ಅಹಮ್ಮದನಗರ ಜಿಲ್ಹೆಗಳಲ್ಲಿಯ ಚಕ್ರಧರರ ಪ್ರವಾಸದ ವೃತ್ತಾಂತವನ್ನೊಳಗೊಂಡ ಲೀಳಾ ಚರಿತ್ರದ ಉತ್ತರಾರ್ಧದಲ್ಲಿ ಅಲ್ಲಲ್ಲಿ ಲಿಂಗಾಚೇ ದೇವುಳ (ಲಿಂಗದ ಗುಡಿಗಳು) ದೃಗ್ಗೋಚರವಾಗುತ್ತವೆ. (ಲೀಳಾ ೨೩೪, ೨೩೬, ೨೪೩) ಕಳಚೂರ್ಯರ ನಂತರವೂ ವೀರಶೈವ ಧರ್ಮದ ಉಚ್ಛ್ರಾಯಕ್ಕೆ ಇವು ಪ್ರತೀಕವಾಗಿವೆ.

೩. ಸೇವುಣರ ಕಾಲದಲ್ಲಿಯ ಸುಮಾರು ಐದುನೂರಕ್ಕೂ ಹೆಚ್ಚು ಶಿಲಾಲೇಖ ಹಾಗೂ ತಾಮ್ರಪಟಗಳು ಈಗ ಉಪಲಬ್ಧವಾಗಿವೆ. ಇವುಗಳಲ್ಲಿ ಹೆಚ್ಚಾಗಿ ಕನ್ನಡಭಾಷೆ ಕನ್ನಡ ಲಿಪಿಯಲ್ಲಿ ಬರೆದವುಗಳಾಗಿವೆ. ಮಿಕ್ಕ ಕೆಲವು ಸಂಸ್ಕೃತ ಭಾಷೆ ಕನ್ನಡ ಲಿಪಿಯಲ್ಲಿಯೂ, ಸಂಸ್ಕೃತಭಾಷೆ ದೇವನಾಗರೀ ಲಿಪಿಯಲ್ಲಿಯೂ ಇವೆ. ಈ ರಾಜಮನೆತನದ ಕೊನೆಯ ಕಾಲಕ್ಕೆ ಸೇರಿದ ಸುಮಾರು ಇಪ್ಪತ್ತು ಲೇಖಗಳು ಮಾತ್ರ ಮರಾಠಿ ಭಾಷೆ ದೇವನಾಗರೀ ಲಿಪಿಯಲ್ಲಿವೆ.

೪. ಮಹಾನುಭಾವ ಸಾಹಿತ್ಯದಲ್ಲಿ (೧೩ನೆಯ ಶತಮಾನ) ಬರುವ ಒಂದು ಸಂದರ್ಭ ಲಕ್ಷಣೀಯವಾಗಿದೆ.

*ಐಸೇ ತೇ ಮಹಾರಾಷ್ಟ್ರರಾಯೇ ಸುಂದರು ವರೀ ಮಹಾರಾಷ್ಟ್ರಭಾಷಾ ಚತುರು*

ಇಂತಹ ಆ ಮಹಾರಾಷ್ಟ್ರದ ಅರಸರು ಸುಂದರರು, ಮೇಲಾಗಿ ಮಹಾರಾಷ್ಟ್ರಭಾಷೆಯಲ್ಲಿ ಚತುರರು.

ಸೇವುಣ ರಾಜರು ಮರಾಠಿ ಭಾಷಿಕರೇ ಆಗಿದ್ದರೆ ಅವರ ಮಹಾರಾಷ್ಟ್ರ ಭಾಷಾ ಚಾತುರ್ಯದ ಬಗ್ಗೆ ಉಲ್ಲೇಖ ಆವಶ್ಯಕವಿರಲಿಲ್ಲ. "ಮೇಲಾಗಿ" ಎನ್ನುವಲ್ಲಿ ಅವರು ಮೂಲತಃ ಮರಾಠಿ ಭಾಷಿಕರಲ್ಲವೆಂಬುದು ಮನದಟ್ಟಾಗಬೇಕು.

೫. ಹಾಗಾದರೆ ಸೇವುಣರು ತಾವು ಯಾದವ ನಾರಾಯಣರೆಂದೋ ಯದುವಂಶ ಸಂಜಾತರೆಂದೋ ಕರೆದುಕೊಂಡದ್ದೇಕೆ?

ಪಲ್ಲವರ ನಂತರ ದಕ್ಷಿಣಭಾರತದಲ್ಲಿ ಆಳಿದ ಅನೇಕ ರಾಜಮನೆತನಗಳು ಬ್ರಾಹ್ಮಣ ಅಥವಾ ಕ್ಷತ್ರಿಯ ವರ್ಣಗಳಿಗೆ ಸೇರಿದವುಗಳಾಗಿರಲಿಲ್ಲ. ಅವರು ತಮ್ಮ ಸ್ವಪರಾಕ್ರಮದಿಂದ ರಾಜ್ಯಕಟ್ಟಿ ಆಳಿದವರಾಗಿದ್ದರು. ಶಾಸ್ತ್ರದಂತೆ ಬ್ರಾಹ್ಮಣ, ಕ್ಷತ್ರೀಯರಲ್ಲದವರಿಗೆ ರಾಜ್ಯಾಭಿಷೇಕ ಮಾಡಿಸಿಕೊಳ್ಳುವ ಅಧಿಕಾರವಿರಲಿಲ್ಲ. ಛತ್ರಪತಿ ಶಿವಾಜಿಯ ರಾಜ್ಯಾಭಿಷೇಕಕ್ಕೆ ಮಹಾರಾಷ್ಟ್ರದ, ಅಷ್ಟೇ ಏಕೆ, ದಕ್ಷಿಣಭಾರತದ ಬ್ರಾಹ್ಮಣರಾರೂ ಪೌರೋಹಿತ್ಯ ಸ್ವೀಕರಿಸಲು ಸಿದ್ಧರಾಗಲಿಲ್ಲ. ಕಾಶಿಯಿಂದ ಗಾಗಾಭಟ್ಟನನ್ನು ಕರೆಸಿ ಆ ಸಂಸ್ಕಾರ ಮಾಡಲಾಯಿತು.

ಇದೇ ಶತಮಾನದ ಆರಂಭದಲ್ಲಿ ಕೊಲ್ಹಾಪುರದ ಶಾಹೂ ಮಹಾರಾಜರಿಗೆ, ಅವರು ಬ್ರಾಹ್ಮಣ ಅಥವಾ ಕ್ಷತ್ರಿಯರಲ್ಲದ ಕಾರಣ, ಅವರಿಗೆ ವೇದ ಕೇಳುವ ಅಧಿಕಾರವಿಲ್ಲವೆಂಬ ನಿರ್ಣಯದೊಡನೆ ದೊಡ್ಡ ಸಾಮಾಜಿಕ ವಾದವೇ ತಲೆಯೆತ್ತಿತು.

ಇಂತಹ ವಿಚಾರ ಸರಣಿಯಿಂದ ಪಾರಾಗಲು ಸೇವುಣರೇ ಆಗಲಿ, ಹೊಯ್ಸಳರೇ ಆಗಲಿ, ತಾವು ಯದುವಂಶದವರೆಂದು ಹೇಳಿಕೊಂಡರೆ ಆಶ್ಚರ್ಯ ಪಡಬೇಕಿಲ್ಲ. (ರಾಜವಾಡೆಯವರು ಸಂಪಾದಿಸಿದ ಜ್ಞಾನೇಶ್ವರಿಯ ಪ್ರತಿಯಲ್ಲಿ "ಇಂದುವಂಶ ವಿಲಾಸು" (೧೮-೧೭೮೩) ಎಂಬುದಾಗಿ ರಾಜ ರಾಮಚಂದ್ರರಾಯನ ಉಲ್ಲೇಖ ಬರುತ್ತದೆ. ೩೭೪ ವರ್ಷಗಳ ನಂತರ ಏಕನಾಥನಿಂದ ಶುದ್ಧೀಕರಿಸಲಾದ ಜ್ಞಾನೇಶ್ವರಿಯ ಇತರ ಪ್ರತಿಗಳಲ್ಲಿ "ಯದುವಂಶ ವಿಲಾಸು" ಎಂದು ಅವನನ್ನು ಬಣ್ಣಿಸಲಾಗಿದೆ. ಇದು ಚಿಂತನೀಯ.)

ಹೀಗೆ ಕ್ರಿ.ಶ. ೫೪೦ ರಿಂದ ಕ್ರಿ. ಶ. ೧೩೦೯ ರವರೆಗೆ, ಸುಮಾರು ಏಳುನೂರು ವರ್ಷಕ್ಕೂ ಹೆಚ್ಚು ಕಾಲ ಕರ್ನಾಟಕದ ಅರಸರು ಕೃಷ್ಣಾ-ಗೋದಾವರಿಯ ನಡುವಣ ಪ್ರದೇಶವನ್ನು ಅವಿರತವಾಗಿ ಆಳಿದ ಬಗ್ಗೆ ಐತಿಹಾಸಿಕ ಆಧಾರಗಳಿವೆ.

ಆದರೆ ಇಷ್ಟು ಹೇಳಿದ ಮಾತ್ರಕ್ಕೆ ಅಥವಾ "ಕಾವೇರಿಯಿಂದಂ ಆ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್" ಎಂದು ಶ್ರೀ ವಿಜಯನು ಹೇಳಿದ ಮಾತ್ರಕ್ಕೆ, ಗೋದಾವರಿ ನದಿಯವರೆಗಿನ ಪ್ರದೇಶದಲ್ಲೆಲ್ಲವೂ ಕನ್ನಡವೇ ಮನೆ ಮಾತಾಗಿತ್ತು ಎಂದು ಭಾವಿಸಬಹುದೇ? ಹಾಗೆ ಇದ್ದುದೇ ಆದರೆ, "ತಿರುಳ್ ಕನ್ನಡದ ನಾಡು ಕಿಸುವೊಳಲು, ಕೊಪಣ, ಪುಲಿಗೆರೆ, ಒಂಕುಂದದ" ವರೆಗೆ ಮಾತ್ರ ಸೀಮಿತವಾಗುವ ಕಾರಣವೇನು? ಈ ತಿರುಳ್ಗನ್ನಡ ನಾಡಿನ ಉತ್ತರಕ್ಕೆ ಗೋದಾವರಿಯವರೆಗೆ ವಾಸಿಸುವ ಜನ ಆಡುತ್ತಿದ್ದ ಭಾಷೆ ಯಾವುದು?

ಪಂಪಭಾರತದಲ್ಲಿ (ಕ್ರಿ.ಶ. ೯೪೧) ಅರ್ಜುನನ್ನು ಹೊಗಳುವ ಸಂದರ್ಭದಲ್ಲಿ ದ್ರೋಣಾಚಾರ್ಯರ ಬಾಯಲ್ಲಿ "ಅರೇ ಹೋಯ" ಎಂಬ ಶಬ್ದಗಳು ಬರುತ್ತವೆ. ಜನ್ನನ (ಕ್ರಿ.ಶ. ೧೨೦೯) ಅನಂತನಾಥ ಪುರಾಣದಲ್ಲಿ ಒಬ್ಬ ಪ್ರತಿಹಾರಿಯ ಬಾಯಿಯಲ್ಲಿ "ಊಠಿ ಊಠಿ ಮಾಗಾ ಬೈಸ ಜಾ ತೂ ಹಳೂ" (ಏಳು, ಏಳು ಸಾವಕಾಶವಾಗಿ ನೀನು ಹಿಂದೆ ಹೋಗಿ ಕೂಡ್ರು) ಎಂಬ ಮಾತು ಬರುತ್ತದೆ. ಆ ಕಾಲದಲ್ಲಿ ಕನ್ನಡ ಅರಸರ ಆಶ್ರಯದಲ್ಲಿ ಕೆಲಸಕ್ಕಿದ್ದ 'ಅರೆ'ಯರು ಬಳಸುವ ಭಾಷೆಯ ಪರಿಣಾಮವಾಗಿ ಇಂತಹ ಶಬ್ದಗಳು ಕನ್ನಡ ಸಾಹಿತ್ಯಕ್ಕೆ ಸೇರಿರಬಹುದೆಂದು ಶಂ. ಬಾ. ಜೋಶಿ ಅಭಿಪ್ರಾಯ ಪಟ್ಟಿದ್ದಾರೆ.[6] ಸೇವಕರು ಆಡುವ ಮಾತುಗಳು ಶಿಷ್ಟಸಾಹಿತ್ಯದಲ್ಲಿ ಸುಲಭವಾಗಿ ಸೇರುತ್ತವೆಯೆನ್ನುವುದು ಸರಿಯಾಗಲಿಕ್ಕಿಲ್ಲ.

ವಚನ ಸಾಹಿತ್ಯದಲ್ಲಿ ಬರುವ ಕೆಲವು ಸಂದರ್ಭಗಳನ್ನೂ ನೋಡಬಹುದು.

*"ಹೆಂಡತಿಯಿಲ್ಲದ ಗಂಡಂಗೆ ಆರು ಮಾನಿಸ ಮಕ್ಕಳು*
*ಅಖಂಡಿತ ಗುಹೇಶ್ವರ ಹಾ ನಿರಾಳು ರೇ"*

---

6. ಕನ್ನಡದ ನೆಲೆ ಪು. ೩೪

ಉಳಿದೆಡೆಯಲ್ಲಿ ನಿರಾಳ ಪದ ಬಳಸುವ ಅಲ್ಲಮಪ್ರಭು ಇಲ್ಲಿ ನಿರಾಳು ಎಂದು ಶಬ್ದ ಬಳಸಿದ್ದಾರೆ. "ಎಲೇ, ಇವನು ಬೇರೆಯವನು" ಎನ್ನುವುದು ಸಂದರ್ಭದ ದೃಷ್ಟಿಯಿಂದಲೂ ಸೊಗಸಾಗಿದೆ.

ಇನ್ನೊಂದೆಡೆ ಅಲ್ಲಮ "ತ್ರಾಸು ಕಾಂಟಲಾ" ಎಂದು ಶಬ್ದ ಬಳಸಿದ್ದಾರೆ. ತ್ರಾಸು ಎಂದರೇನೋ ತಕ್ಕಡಿ (ತರಾಜೂ). ಆದರೆ ಕಾಂಟಲಾ? ಅವರ ವಚನ ಸಂಗ್ರಹಿಸಿದ ಸಂಪಾದಕರೆಲ್ಲ ಪ್ರಶ್ನೆ ಚಿಹ್ನೆ ಹಾಕಿದ್ದಾರೆ. ಮರಾಠಿಯಲ್ಲಿ ಕಾಂಟಾ, ಕಾಂಟಲಾ ಎಂದರೂ ತಕ್ಕಡಿಯೇ.

ಸಿದ್ಧರಾಮೇಶ್ವರ-ಬಸವೇಶ್ವರ ವಚನಗಳಲ್ಲಿ ಕೂಡ ಅನೇಕ ಮರಾಠಿ ಶಬ್ದಗಳನ್ನು ಬಳಸಲಾಗಿದೆ.

ಬಸವೇಶ್ವರ ವಚನದಲ್ಲಿ "ಕೊಂಡ ಮಾಱೆಂಗೆ ಪೋಪುದು ತಪ್ಪದು" ಎಂದು ಒಂದು ಸಂದರ್ಭ ಬರುತ್ತದೆ. ಇಂದಿನವರೆಗೆ ಯಾವ ಕೋಶಕಾರನಿಗೂ, ಯಾವ ಸಂಪಾದಕನಿಗೂ ಇದರ ಅರ್ಥ ಹಚ್ಚಲು ಬಂದಿಲ್ಲ. ಕೊಂಡಂತೆ ಮಾರಾಟ ಎಂದು ಅರ್ಥ ಹೇಳಿ ಒಂದೆಡೆ (ಬಸವಣ್ಣನವರ ವಚನಗಳು-ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಕಟಣೆ ೧೯೬೮) ಸಂಪಾದಕರು ದಾಟಿಕೊಂಡಿದ್ದಾರೆ. ಮರಾಠಿಯಲ್ಲಿ ಕೋಂಡಣೇ ಎಂದರೆ ಬಂಧಿಸುವದು (ಅಲೆಮಾರಿ ದನಗಳನ್ನು ಬಂಧಿಸಿಡುವ ಜಾಗಕ್ಕೆ ಕೋಂಡವಾಡೆ ಎನ್ನುವದು ಈಗಲೂ ಉತ್ತರ ಕರ್ನಾಟಕದಲ್ಲಿ ರೂಢಿಯಲ್ಲಿದೆ) ಮಾರಣೇ ಎಂದರೆ ಹೊಡೆಯುವದು. ಅತ್ತಿತ್ತ ಹೋಗಲಾರದಂತೆ ಬಂಧಿಸಿ ಹೊಡೆಯುವದು ಕೊಂಡಮಾರಣೆ. ವಾಚ್ಯಾರ್ಥಕ್ಕಿಂತ 'ಸಂಕಟ' ಎಂಬರ್ಥದಲ್ಲಿ ಇದು ಅಲಂಕಾರಿಕವಾಗಿ ಇಂದಿಗೂ ಮರಾಠಿಯಲ್ಲಿ ಬಳಸಲಾಗುತ್ತದೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಲ್ಲಿ ಬರುವ ಇನ್ನೂ ಕೆಲವು ಮರಾಠಿ ಶಬ್ಧಗಳು ಇಂತಿವೆ.

ಅವುಟು - ಮೂರೂವರೆ (ಓಂ ಶಬ್ದದಲ್ಲಿಯ ಅ + ಉ + ಮ್ ಕೂಡಿ ಮೂರೂವರೆ ಮಾತ್ರೆಗಳು. ಇದರಿಂದ ಈ ಶಬ್ದ ಬಂದಿರಬೇಕು.)

ಕರೋಟಿ - ತಲೆಬುರುಡೆ (ವಾಸ್ತವವಾಗಿ ತೆಂಗಿನ ಪರಟೆಗೆ ಮರಾಠಿಯಲ್ಲಿ ಕರೋಟಿ, ಕರವಂಟಿ ಎನ್ನುತ್ತಾರೆ. ತಲೆಪರಟೆಗೆ ಶಬ್ದ ಕವಟೀ. ಕನ್ನಡದಲ್ಲಿ ಎರಡಕ್ಕೂ ಪರಟೆ ಎನ್ನುವ ಒಂದೇ ಶಬ್ದವಿದ್ದುದರಿಂದ ಕನ್ನಡಿಗರು ಮರಾಠಿ ಮಾತನಾಡುವಾಗ ಇಂತಹ ಅನಾಹುತಗಳಾಗುತ್ತವೆ!)

ಧವಳಾರ - ಸುಣ್ಣ ಹಚ್ಚಿದ ಮನೆ

ಬಜಾವಣೆ - ವಾದ್ಯ ಬಾರಿಸುವಿಕೆ.

ಲೆಂಕಡಿಂಗರ - ಸೇವಕ (ಮೂಲತಃ ಮರಾಠಿಯಲ್ಲಿ ಲೆಂಕ ಎಂದರೂ ಮಗ, ಡಿಂಗರ ಎಂದರೂ ಮಗನೇ)

ಸಿನೆ - ನೀಚ, ಕೇಡಿಗ (ಮರಾಠಿಯಲ್ಲಿಯ ಅರ್ಥಭಿನ್ನ) ಮತಪ್ರಚಾರಕ್ಕಾಗಿ

ಶರಣರು ಸಂಚರಿಸುವಾಗ ಅಲ್ಲಿಯ ಜನರ ಭಾಷೆಯ ಛಾಯೆ ಅವರ ಭಾಷೆಯ ಮೇಲೂ ಬೀಳುವುದು ಸಹಜ.

೧೩ ನೆಯ ಶತಮಾನದಲ್ಲಿಯ ಮಹಾನುಭಾವ ಗ್ರಂಥದಲ್ಲಿ ಮಹಾರಾಷ್ಟ್ರ ಪ್ರದೇಶದ ಬಗ್ಗೆ ಹೀಗೆ ವರ್ಣನೆ ಬರುತ್ತದೆ.

*ಪಶ್ಚಿಮೇ ತ್ರ್ಯಂಬಕೂ ಪೂರ್ವ ಸಾಗರವೇರ್ಥಿ ದ್ವಾದಶಯೋಜನೇ ಉಭಯ ಗಂಗಾ ತೀರೀಜ್. ಐಸೇ ತೇಜ್ ಗಂಗಾತಟ ಮಹಾರಾಷ್ಟ್ರೀಜ್ ವಸಿದೇ ಪುಣ್ಯಾತನ. ತಿಯೇ ಮಹಾರಾಷ್ಟ್ರೀಜ್ ಗಂಗಾತೀರೀ ಮಹಂತು. ತೇಥ ಸದಾಜ್ ಈಶ್ವರಾವತಾರ ಕ್ರಿಡತು.*

*ದೇಶ ಮ್ಹಣಜೇ ಖಂಡಮಂಡಳ. ಧ್ವಸೆ ಫಲಟಾಣಾ ಪಾಸೋನಿ ದಕ್ಷಿಣೇಸಿ ಮರ್ಹಾಟೀ ಭಾಷಾ ಚೆಜತುಲಾಜ್ ಠಾಈಜ್ ವರ್ತೇಇನ್ ತೇ ಏಕಮಂಡಲ. ತಯಾಸಿ ಉತ್ತರೇ ಬಾಲೇಘಾಟಾಚಾ ಸೇವಟ ಅಸೇ. ಐಸೆ ಏಕ ಖಂಡಮಂಡಳ. ಮಗ ಉಭಯ ಗಂಗಾತೀರ ತೇಹೀ ಏಕ ಖಂಡಮಂಡಳ. ಆನ ತಯಾ ಪಾಸೌನಿ ಮೇಘಕರ ಘಾಟ ತೇಇನ್ ಏಕ ಮಂಡಳ. ತಯಾ ಪಾಸೌನಿ ಆವಘೇ ವರಾಡ ತೇಇನ್ಹಿ ಏಕ ಮಂಡಳ. ಪರ ಅಘವೀಚ ಮಿಳೌನಿ ಮಹಾರಾಷ್ಟ್ರಚಿ ಬೋಲಿಜೇ ಕಿಂಚಿತ್ ಕಿಂಚಿತ್ ಭಾಷೇಚಾ ಪಾಲಟ ಅಸೇ. ಮ್ಹಣೌನಿ ಖಂಡಮಂಡಳೇ ಮ್ಹಣಾವೀಜ್. ಮಗ ಏಲೇ ಮಂಡಳೀಚಾ ಪೈಲಾ ಮಂಡಳಾಸಿ ಜಾಏ. ಆನ ಪೈಲೇ ಮಂಡಳಿಂಚಾ ಏಲಾಸಿ ಏ. ತಯಾ ಮರುಹಾಟೀ ತೇಚಿ ಸೇವಟ ಜಾಣಾವೇ.*

> ಪಶ್ಚಿಮಕ್ಕೆ ತ್ರಿಂಬಕು. ಪೂರ್ವಕ್ಕೆ ಸಮುದ್ರದವರೆಗೆ ಗಂಗಾ (ಗೋದಾವರಿ) ನದಿಯ ಎರಡೂ ದಂಡೆಗೆ ಹನ್ನೆರಡು ಯೋಜನ. ಹೀಗೆ ಗಂಗಾ (ಗೋದಾವರಿ) ದಡದಲ್ಲಿ ಪುಣ್ಯಾತನ ವಾಸವಾಗಿದೆ. ಆ ಮಹಾರಾಷ್ಟ್ರದಲ್ಲಿ ಗಂಗಾ (ಗೋದಾವರಿ) ತೀರದಲ್ಲಿ ಮಹಂತರು. ಅಲ್ಲಿ ಸದಾಕಾಲವೂ ಈಶ್ವರಾವತಾರದ ಕ್ರೀಡೆ.
>
> ದೇಶವೆಂದರೆ ಖಂಡಮಂಡಳ. ಫಲಟಣದಿಂದ ದಕ್ಷಿಣಕ್ಕೆ ಎಲ್ಲಿಯವರೆಗೆ ಮರಾಠಿ ಭಾಷೆ ಇದೆಯೋ ಅದು ಒಂದು ಮಂಡಳ. ಅದಕ್ಕೆ ಬಾಲೇಘಾಟ ಉತ್ತರದ ಸೀಮೆ. ಹೀಗೆ ಒಂದು ಖಂಡಮಂಡಳ. ಗಂಗಾ (ಗೋದಾವರಿ) ನದಿಯ ಉಭಯ ತೀರಗಳು, ಅದೂ ಒಂದು ಖಂಡಮಂಡಳ ಹಾಗೂ ಅಲ್ಲಿಂದ ಮೇಘಕರ ಘಾಟ ಒಂದು ಮಂಡಳ. ಅಲ್ಲಿಂದ ಇಡೀ ವರ್ಹಾಡ. ಅದೂ ಒಂದು ಮಂಡಳ. ಇವೆಲ್ಲವನ್ನೂ ಕೂಡಿ ಮಹಾರಾಷ್ಟ್ರವೆಂದೇ ಅನ್ನುತ್ತಾರೆ. ಅಲ್ಪಸ್ವಲ್ಪ ಭಾಷೆಯ ಭೇದವಿರುವುದರಿಂದ ಖಂಡಮಂಡಳವೆನ್ನಬೇಕು. ಬಳಿಕ ಈ ಕಡೆಯ ಮಂಡಳಿಯವ ಆ ಕಡೆಯ ಮಂಡಳಕ್ಕೆ ಹೋಗುತ್ತಾನೆ. ಆ ಕಡೆಯ ಮಂಡಳದವ ಈ ಕಡೆ ಬರುತ್ತಾನೆ. ಅವರದು ಅದೇ ಸೀಮೆ ಎನ್ನಬೇಕು.

ಇದರ ಅರ್ಥ ಇಷ್ಟೆ. ಕನ್ನಡದ ಅರಸರು ಗೋದಾವರಿಯವರೆಗೆ ವಿಜಯಯಾತ್ರೆ ಮಾಡಿ ನೂರಾರು ವರ್ಷ ರಾಜ್ಯವಾಳಿದರೂ ನೀರಾ-ಗೋದಾವರಿಯ ನಡುವಿನ ಭಾಗದಲ್ಲಿ ಜನ ಮರಾಠಿಯೆನ್ನುವ ಭಾಷೆ ಬಳಸುತ್ತಿದ್ದರು. ಆ ಪ್ರದೇಶಕ್ಕೆ ಅವರು ಮಹಾರಾಷ್ಟ್ರವೆಂದೂ ಅನ್ನುತ್ತಿದ್ದರು.

# ೩. ಹಿನ್ನೆಲೆ–ಮರಾಠಿ

ಜ್ಞಾನೇಶ್ವರಕಾಲೀನ ಸಾಹಿತ್ಯದಲ್ಲಿ ಮರಾಠಿ ಶಬ್ದವು ಒಂದು ವಿಶಿಷ್ಟ ಭಾಷೆಗಾಗಿ ಬಳಸಲಾಗುತ್ತಿರಲಿಲ್ಲ. ಸರ್ವೇಸಾಧಾರಣವಾಗಿ ಸಹಜ, ಸುಲಭ ಅರ್ಥದ ವಿಶೇಷಣವೆಂದೂ ಬಳಸಲಾಗುತ್ತಿತ್ತು. ಇದರ ಅರ್ಥವೇನೆಂದರೆ ಆ ಕಾಲದಲ್ಲಿ ಭಾಷಾ ವಿಷಯಕ ಅರ್ಥವು ಈ ಶಬ್ದಕ್ಕೆ ಒದಗಿರಲಿಲ್ಲ.

ಹೀಗೆ ಹೇಳಿದವರು ವಿ. ಭೀ. ಕೋಲತೆ[1]. ಇದನ್ನೇ ಎತ್ತಿ ಹಿಡಿದು ಮರ್‍ಹಾಟ ಶಬ್ದವು ಸುಲಭ, ಸರಳ ಅರ್ಥದಲ್ಲೂ, ಮರ್‍ಹಾಟೀ ಶಬ್ದವು ವಿಶಿಷ್ಟ ಭಾಷೆಯ ಅರ್ಥದಲ್ಲೂ ರೂಢವಾಗಿತ್ತೆಂದು ಶಂ. ಗೋ. ತುಳಪುಳೆ ಹೇಳುತ್ತಾರೆ.[2]

ಆದರೆ ಮರ್‍ಹಾಟ ಶಬ್ದವು ಸುಲಭ, ಸಹಜ ಅರ್ಥದಲ್ಲಿ ಬಳಸಲಾದ ಕಾರಣವೇನಿರಬಹುದೆಂದು ಯಾರೂ ತಲೆಕೆಡಿಸಿಕೊಂಡಂತಿಲ್ಲ. ಸಂಸ್ಕೃತವು ಜನಸಾಮಾನ್ಯರಿಗೆ ಅರ್ಥವಾಗದ, ತಿಳಿಯಲಾಗದ ಭಾಷೆ, ಅಂತೆಯೇ 'ಮರ್‍ಹಾಟ'ವು ಸರಳ, ಸುಲಭವೆಂದು ಭಾವಿಸಿರಬಹುದೇ?

ಜ್ಞಾನೇಶ್ವರರು ಹಾಗೆ ಭಾವಿಸಿದಂತಿಲ್ಲ.

*ಆಣಿ ತೋ ಮಿಯಾಜ್ ಹಾ ಆತಾಜ್ ವ್ಯಾಸಾಚಿ ಪದೇಚಿಜ ಪಾಹಾತ*
*ಪಾಹಾತಾಜ್ ಆಣಿಲಾ ಶ್ರವಣಪಥಾ ಮರ್‍ಹಾಟಿಯಾ (೧೮-೧೭೪೭)*

(ವ್ಯಾಸರು ಶ್ರೀಕೃಷ್ಣನ ಉಕ್ತಿಯನ್ನು ಗ್ರಂಥದಲ್ಲಿ ತಂದದ್ದನ್ನು) ನಾನು ಈಗ ವ್ಯಾಸರ ಹೆಜ್ಜೆಗಳನ್ನು ನೋಡುತ್ತ ಮರ್‍ಹಾಟಿಯ ಶ್ರವಣ ಪಥದಲ್ಲಿ ತಂದಿದ್ದೇನೆ.

ಎಂದು ಹೇಳುತ್ತಾರೆ. ಗರುಡ ಆಕಾಶದಲ್ಲಿ ಹಾರಾಡುತ್ತಿದೆಯೆಂದರೆ ಅದೇ ರೆಕ್ಕೆಯೊಡೆದ ಮರಿಹಕ್ಕಿ ತಾನು ಹಾರಬಾರದೇ? ಗೀತಾಈಶ್ವರನಿಗೆ ವ್ಯಾಸರು ಕುಸುಮ ಮಾಲೆ ತೊಡಿಸಿದರೆ ನಾನು ಕರಿಕೆ ಏರಿಸಬಾರದೇ, ಎಂದೆಲ್ಲ ಅವರು ಕೇಳುತ್ತಾರೆ. ಸಂಸ್ಕೃತಭಾಷೆ ಕಠಿಣ. ಜನಸಾಮಾನ್ಯರಿಗೆ ಅರ್ಥವಾಗುವಂತಿಲ್ಲ. ಆದಕ್ಕಾಗಿ ನಾನು ಮರ್‍ಹಾಟಿ ಭಾಷೆಯಲ್ಲಿ ಹೇಳುತ್ತೇನೆ, ಎಂದು ತಪ್ಪಿಯೂ ಅವರು ಹೇಳಲಿಲ್ಲ.

ಏಕೆಂದರೆ ಆಗ ಇದ್ದ ಕಾರಣವೇ ಬೇರೆ. ಅವರಿಗೆ ಅಥವಾ ಆಗಿನ ಜನಸಾಮಾನ್ಯರ ಅನಿಸಿಕೆಯನ್ನು ಅವರು ಸ್ಪಷ್ಟಪಡಿಸಿದರೆಂದು ಭಾವಿಸುವುದಾದರೆ ಜನರಿಗೆ ಕಠಿಣವೆನಿಸಿದ್ದು ಸಂಸ್ಕೃತವಲ್ಲ, ಕನ್ನಡ!

---

1. ಮರಾಠೀಚೇ ಮಾಹೇರ ಪು. ೪೮೭ ರಿಂದ ೪೯೫
2. ಯಾದವಕಾಲೀನ ಮರಾಠೀ ಭಾಷಾ ಪು. ೫೭

ಕನ್ನಡವೆಂದರೆ ಗೂಢ, ಕ್ಲಿಷ್ಟ, ಕಠಿಣವೆಂಬರ್ಥದ ಈ ಓವಿಗಳನ್ನು ನೋಡಬೇಕು.

*ಆತಾಜ್ ಕೇಕೆ ನಾವಾಜ್ ಸಾವಾಜ್ ಗೂಜ, ಹೃಗಾತಾಜ್ ಕಾನಡೇ ಹಾನ*
*ಆವಡೇಲ ತುಜ ತರಿ ಸಾಂಘೇನಿ ಜ್ಞಾನ ಸಹಜ ವಿಜ್ಞಾನೇಸೀ (೯.೪೨)*

ಈಗ ಗೂಢವಾದ್ದರಿಂದ ಅದೆಷ್ಟು ರೀತಿಯಲ್ಲಿ ಹೇಳಿದರೂ ನಿನಗೆ ಕಠಿಣ (ಕಾನಡಾ) ವೆಂದು ಹಿಡಿಸಲಾರದು. ಆದ್ದರಿಂದ ಜ್ಞಾನವಿಜ್ಞಾನಗಳೊಡನೆ ಸುಲಭ ರೀತಿಯಲ್ಲಿ ಹೇಳುತ್ತೇನೆ.

*ಹೇ ಪರಿಸತಾಜ್ ಜರಿ ಕಾನಡೇಜ್ ತರಿ ಜಾಣಾವಾಜ್ ಪಾರ್ಥು ಉಘಡೇಜ್*
*ಶ್ರೀಕೃಷ್ಣಸೂಪಾಚೇಂ ಚ ರೂಪಡೇ ಓತಲೇ ಆಹೇ (೬.೧೨೦)*

ಇದು ಕೇಳುವುದಕ್ಕೆ ಕಠಿಣವೆನಿಸಿದರೂ ಅರ್ಜುನನೆಂದರೆ ಶ್ರೀಕೃಷ್ಣನ ಸುಖದ ರೂಪವನ್ನೇ ಎರಕ ಹೊಯ್ದಿದ್ದಾನೆಂದು ತಿಳಿಯುವ್ವ.

*ಪರೇಹುನೀ ಪರತಾ ವೈಖರಿಯೇ ಕಾನಡಾ*
*ವಿಠ್ಠಲ ಉಭಾ ಭೀಮಾತೀರಿ (ಏಕನಾಥ ಅಭಂಗ ೫೯೪)*

ಪರಕ್ಕಿಂತ ಪರವಾದ (ಪರಾತ್ಪರ) ಗೂಢವಾದ (ಕಾನಡಾ) ವೈಖರಿಯ ವಿಠ್ಠಲ ಭೀಮಾ ನದಿಯ ದಂಡೆಯ ಮೇಲೆ ಪ್ರಕಟವಾಗಿದ್ದಾನೆ.

*ಕಾನಡಾ ಹೋ ವಿಠ್ಠಲ ಕರ್ನಾಟಕು ಯೇಣೇ ಮಜ ಲಾವಿಲೇ ವೇಧಿಂ*
*(ಜ್ಞಾನೇಶ್ವರ ಅಭಂಗ ೬)*

ಕರ್ನಾಟಕದ ವಿಠ್ಠಲನು ಗೂಢನಾಗಿದ್ದಾನೆ. ಇವನು ನನಗೆ ವೇಧ ಹಚ್ಚಿದ್ದಾನೆ.

*ವಿಠ್ಠಲ ಕಾನಡೇ ಬೋಲೂಜ್ ಜಾಣೇ ತ್ಯಾಚೀ ಭಾಷಾ ಪುಂಡಲೀಕ ನೇಣೇ (ನಾಮದೇವ ಅಭಂಗ ೧೦೮೬)*

ವಿಠ್ಠಲ ಗೂಢ (ಕಾನಡೇ) ಮಾತನಾಡಬಲ್ಲ. ಅವನ ಮಾತು ಪುಂಡಲೀಕನಿಗೆ ತಿಳಿಯದು.

ಮುಂದೆ ಕ್ರಿ.ಶ. ೧೫೬೦ ರಲ್ಲಿ ಬರೆಯಲಾಗಿದೆಯೆಂದ ಗ್ರಂಥರಾಜದಲ್ಲಿಯ ಈ ಓವಿ ನೋಡಬೇಕು.

*ಶ್ರೀ ಸದ್ಗುರೂಚೇ ಚರಣ ಹೃದಈಜ್ ಬಳಕಟ ಧರೂನ ಕಾನಡೇಜ್‌ನಾ ಮರ್‍ಹಾಟೇ ವಚನ ಆಇಕಾವೇ ಯಯಾಚೇಜ್*

ಶ್ರೀ ಸದ್ಗುರುವಿನ ಚರಣಗಳನ್ನು ಹೃದಯದಲ್ಲಿ ಗಟ್ಟಿಯಾಗಿ ಹಿಡಿದು ಕಠಿಣ (ಕಾನಡೇ) ವಿದ್ದದ್ದನ್ನು (ಬಿಟ್ಟು) ಇವರ ಸುಲಭ (ಮರ್‍ಹಾಟೇ) ವಚನಗಳನ್ನು ಕೇಳಬೇಕು.

ದಾಸಬೋಧದಲ್ಲಿಯೂ (ಕ್ರಿ. ಶ. ೧೬೫೦) ಇಂತಹ ಒಂದು ಶ್ಲೋಕ ಬಂದಿದೆ.

*ಕಾನಡೇಜ್‌ಚ ಅಭ್ಯಾಸವೇ ಸಾವಕಾಶ (೬.೧.೨೩)*

ಕಠಿಣವಾದದ್ದನ್ನೇ ನಿಧಾನವಾಗಿ ಅಭ್ಯಸಿಸಬೇಕು.

ತದ್ವಿರುದ್ಧವಾಗಿ ಮರ್ಹಾಟವೆಂದರೆ 'ಸುಲಭ' 'ಸರಲ', 'ಸ್ಪಷ್ಟ'

*ಮಜ ವಿವೇಕು ತೋ ಸಾಂಘಾವಾ ಮರ್ಹಾಟಾ ಜೀ (೩.೧೭)*

ನನಗೆ ವಿವೇಕವನ್ನು ಸುಲಭರೀತಿಯಲ್ಲಿ ತಿಳಿ ಹೇಳಬೇಕು.

*ಮಾಝಾ ಮರ್ಹಾಟಾಚಿ ಬೊಲು ಕವತಿಕೇಂ ಪರಿ ಅಮೃತಾತೇಂ ಹೀ ಪೈಜೇಸೀಂ ಜೀಂಕೇ (೬.೧೪)*

ನನ್ನ ಸರಲವಾದ ಭಾಷೆ ಕೌತುಕದಿಂದ ಪೈಪೋಟಿಯಲ್ಲಿ ಅಮೃತವನ್ನು ಗೆಲ್ಲುವದು.

*ತೊ ಶಾಂತೂ ಚ ಅಭಿನವ್ಯೆಲ ತೇ ಪರಿಯಸಾಂ ಮರ್ಹಾಟೇ ಬೋಲ (೪.೨೧೧)*

ಆ ಶಾಂತರಸವು ಪ್ರಕಟವಾಗುವಂತಹ ಸುಲಭವಾದ ಭಾಷೆ ಕೇಳಿರಿ.

ಎಂದೆಲ್ಲ ಜ್ಞಾನೇಶ್ವರರು ಹೇಳುತ್ತಾರೆ. ಕನ್ನಡವು ರಾಜಭಾಷೆಯಾಗಿ ನೆಲೆಸಿದಾಗ ಅ-ಪರಿಹಾರ್ಯವಾಗಿ ಆ ಭಾಷೆಯಲ್ಲಿ ವ್ಯವಹರಿಸಲೇಬೇಕಾದಾಗ ಇಂತಹ ಒಂದು ಪ್ರತಿಕ್ರಿಯಾತ್ಮಕ ನಿಲುವು ಅನಿವಾರ್ಯವೇನೋ?

ಈ ಪ್ರತಿಕ್ರಿಯೆ ಇಂದಿನ ಮರಾಠಿ ಸಂಶೋಧಕರಲ್ಲೂ ಇದೆ. ತಮ್ಮ ಭಾಷೆ ಹಳೆಯದು. ಅದಕ್ಕೂ ಇತಿಹಾಸ ಇದೆ, ಪರಂಪರೆಯಿದೆ ಎನ್ನುವ ಅಭಿನಿವೇಶದಲ್ಲಿ ಅವರು ಯಾವಾವ ಸಿದ್ಧಾಂತಗಳಿಗೆ ಜೋತುಬಿದ್ದಿದ್ದಾರೆಂಬುದನ್ನು ಮುಂಬರುವ ಪುಟಗಳಲ್ಲಿ ನೋಡಬಹುದಾಗಿದೆ. ಇಂತಹದೇ ಒಂದು ಸಿದ್ಧಾಂತ ಮರಾಠಿಭಾಷೆ ಅಪಭ್ರಂಶ ಭಾಷೆಯಿಂದ ಹುಟ್ಟಿತು ಎಂಬುದು. ಅದಕ್ಕೆ ಅವರ ವಿವರಣೆ ಹೀಗೆ.

ಮರ್ಹಾಟಿಗೆ ದೇಶೀ ಎಂದೂ ಇನ್ನೊಂದು ಅಭಿದಾನ.

*ಹಾಂಹೋ ನವಲ ಸೋಹೇ ದೇಶೀ ಮರ್ಹಾಟೀ ಬೋಲಿಜೇ ತರಿ ಐಸೀ*
*ವಾಣೇಂ ಉಮಟತ ಆಹೇ ಮಾ ಆಕಾಶೀಂ ಸಾಹಿತ್ಯಾ ರಂಗಾಚೇಂ (೬.೧೩೩)*

ಅಯ್ಯಾ, ಸಾಹಿತ್ಯರಂಗದ ಆಕಾಶದಲ್ಲಿ ದೇಶೀ ಮರ್ಹಾಟಿಯಲ್ಲಿ ಹೇಳಿದುದು ಅಲಂಕಾರ ರೂಪವಾಗಿ ಶೋಭಿಸುತ್ತದೆ ಎಂದರೆ ಆಶ್ಚರ್ಯವಲ್ಲವೇ?

*ತೈಂ ಮಾಹೇಷಾನ್ವಯ ಸಂಭೂತೇಂ ಶ್ರೀನಿವೃತ್ತಿನಾಥಸುತೇಂ*
*ಕೇಲೇ ಜ್ಞಾನದೇವೇಂ ಗೀತೇ ದೇಶೀಕಾರ ಲೇಣೇಂ (೧೮-೧೭೮೪)*

ಆದಿನಾಥ ಶಂಕರ ಪರಂಪರೆಯಲ್ಲಿ ಹುಟ್ಟಿದ ಶ್ರೀ ನಿವೃತ್ತಿನಾಥನ ಸುತನಾದ (ಜನ್ಯಭಾವದಿಂದ ಜ್ಞಾನೇಶ್ವರರು ನಿವೃತ್ತಿನಾಥನ ತಮ್ಮ. ಅವನ ಶಿಷ್ಯರಾದದ್ದರಿಂದ ಸುತನೆಂದುಕೊಂಡಿದ್ದಾರೆ) ಜ್ಞಾನದೇವನು ಗೀತೆಗೆ ದೇಶೀಕಾರ ಅಲಂಕಾರ ತೊಡಿಸಿದನು.

*ದೇಶಿಯೇಚೇನಿ ನಾಗರಪಣೇಂ ಶಾಂತುಶೃಂಗಾರಾತೇಂ ಜೇಣೇಂ*
*ವೋವಿಯಾ ಕೀಂ ಹೋಂತಿ ಲೇಣೇಂ ಸಾಹಿತ್ಯಾಸಿ (೧೦-೪೧)*

ದೇಸಿಯ ಸೌಂದರ್ಯದಿಂದ ಶಾಂತ (ರಸ)ವು ಶೃಂಗಾರ (ರಸ) ವನ್ನು ಗೆಲ್ಲುವದು. (ಈ) ಓವಿಗಳು ಸಾಹಿತ್ಯಕ್ಕೆ ಅಲಂಕಾರಗಳಾಗುವವು.

*ಆಣಿ ದೇಶೀ ಆಣಿ ಸಂಸ್ಕೃತವಾಣೀ ಏಕಾಭಾವಾಟಾಚೀ ಸುಖಾಸನೀ*
*ಶೋಭತೀ ತೇ ಆಣಿ ಚೋಖಟಾ ಆಕಣಾವೀ (೧೦-೪೪)*

ದೇಶೀ ಹಾಗೂ ಸಂಸ್ಕೃತಭಾಷೆಗಳು ಒಂದೇ ಸುಖಾಸನದಲ್ಲಿ ಶೋಭಿಸುತ್ತವೆ. ಅದನ್ನು ನೀವು ಚೊಕ್ಕಟವಾಗಿ ಕೇಳಿರಿ.

ಆದರೆ ಮರಾಠಿ ಎಂದರೆ ದೇಶೀ ಹಾಗೂ ಈ ಕೆಳಗೆ ಕೊಟ್ಟ ಉಲ್ಲೇಖಗಳಿಂದ ದೇಶಿ ಎಂದರೆ ಅಪಭ್ರಂಶ ಭಾಷೆ, ಹೀಗೆ ಮರಾಠಿ ಭಾಷೆಯು ಅಪಭ್ರಂಶ ಭಾಷೆಯಿಂದ ಹುಟ್ಟಿತು ಎಂದು ಕೋಲತೆ-ತುಳಪುಳೆಯವರು ನಿರ್ಣಯಕ್ಕೆ ಬಂದಿರುವುದು ಅವಸರದ್ದಾಗಿದೆ.

ಕವಿಗಳು ತಮ್ಮ ಭಾಷೆಗೆ ದೇಶೀ ಭಾಷೆಯೆಂದಿದ್ದಾರೆ. ಅಪಭ್ರಂಶ ಎಂಬ ಶಬ್ದ ಬಳಸುವದು ಅವರಿಗೆ ಹಿಡಿಸಿಲ್ಲ. ವೈಯ್ಯಾಕರಣಿಗಳು ಮಾತ್ರ ಎರಡನೆಯ ಹೆಸರಿನಿಂದಲೇ ಭಾಷೆಯನ್ನು ಗುರುತಿಸಿರುವದು ಗಮನಾರ್ಹ.

(ಪಾಹುಡದೋಹಾದ ಮುನ್ನುಡಿ. ಪುಟ ೬. ಸಂ. ಹಿರಾಲಾಲಜೈನ)

ದೇಸಿಲಿ ವಅನಾ ಸಬಜನ ಮಿಠ್ಠಾ ತೈಂ ತೈಸನ ಜಮ್ಪಓ ಅವಹಟ್ಠಾ

ದೇಸೀ ಭಾಷೆ ಎಲ್ಲರಿಗೆ ಹಿಡಿಸುವುದು. ಅದಕ್ಕೆ ಅಪಭ್ರಂಶವೆನ್ನುತ್ತಾರೆ.
(ವಿದ್ಯಾಪತಿ ಠಕ್ಕುರನ ಕೀರ್ತಿಲತಾ)

ಮೊದಲನೆಯದಾಗಿ ಸಂಸ್ಕೃತವಲ್ಲದ, ಸಂಸ್ಕೃತ ಮೂಲವಲ್ಲದ ಎಲ್ಲ ಭಾರತೀಯ ಭಾಷೆಗಳ ಶಬ್ದಗಳು ದೇಶೀಗಳೇ[3]. ಶಬ್ದಸಿದ್ಧಿಯಲ್ಲೂ ತತ್ಸಮ, ತದ್ಭವ, ದೇಶಿ ಎಂದು ಪದಪ್ರಯೋಗ ಆಗಿದೆ. ಷಷ್ಠೋಽತ್ರ ಭೂರಿಭೇದೋ ದೇಶವಿಶೇಷಾದಪಭ್ರಂಶಃ ಎಂದು ರುದ್ರಟನು ತನ್ನ ಕಾವ್ಯಾಲಂಕಾರದಲ್ಲಿ (೨.೧೨) ಹೇಳಿದ್ದಾನೆ.

ಎರಡನೆಯದಾಗಿ ಅಪಭ್ರಂಶಭಾಷೆ ಉತ್ತರಭಾರತವನ್ನೆಲ್ಲ ವ್ಯಾಪಿಸಿತ್ತು. ಕಾಶ್ಮೀರಿ, ಪಹಾಡೀ, ಪಂಜಾಬೀ, ನೇಪಾಳಿ, ಸಿಂಧೀ, ಹಿಂದಿ, ಬಿಹಾರೀ, ಬಂಗಾಲಿ, ಉಡಿಯಾ, ರಾಜಸ್ಥಾನೀ, ಗುಜರಾತೀ ಹಾಗೂ ಮರಾಠಿ ಇವಿಷ್ಟು ಭಾಷೆಗಳು ಅಪಭ್ರಂಶ ಭಾಷೆಯಿಂದ ಹುಟ್ಟಿದವುಗಳಾಗಿವೆ. ಮರಾಠಿ ಒಂದೇ ಹುಟ್ಟಿಲ್ಲ.

ಈ ಅಪಭ್ರಂಶ ಭಾಷೆಯ ಸಾಹಿತ್ಯವನ್ನು ಸ್ಥೂಲವಾಗಿ ಪಶ್ಚಿಮ ದಕ್ಷಿಣ ಹಾಗೂ ಪೂರ್ವದ ಭಾಗದವುಗಳೆಂದು ಗುರುತಿಸಲು ಯತ್ನಿಸಿದವರು ಜಿ. ವ್ಹಿ. ತಗಾರೆ[4].

ಅವರ ಅಭಿಪ್ರಾಯದಂತೆ ದಕ್ಷಿಣ ಅಪಭ್ರಂಶ ಭಾಷೆಯು ಮರಾಠಿ ಮಾತನಾಡುವ ಪ್ರದೇಶದಲ್ಲಿ - ಆಗಿನ ಮಹಾರಾಷ್ಟ್ರ, ವರ್‍ಹಾಡ, ಮಧ್ಯಪ್ರದೇಶ ಹಾಗೂ ನಿಜಾಮ ಸಂಸ್ಥಾನದಲ್ಲಿಯ ಮರಾಠಿ ಮಾತನಾಡುವ ಪ್ರದೇಶ ವ್ಯಾಪಿಸಿತ್ತು.

---

3. ಹೇಮಚಂದ್ರನ ದೇಶೀನಾಮಮಾಲಾ ನೋಡಿರಿ
4. Historical Grammar of Aphabhramsha 1948. P. 15

ದಕ್ಷಿಣ ಅಪಭ್ರಂಶ ಭಾಷೆಯಲ್ಲಿಯ ನಾಲ್ಕೇ ನಾಲ್ಕು ಕೃತಿಗಳು ದೊರೆತಿದ್ದು ಅವುಗಳಲ್ಲಿಯ ಶಬ್ದಸಿದ್ಧಿ, ವ್ಯಾಕರಣ ಮುಂತಾದವುಗಳು ಅಂದಿನ ಮರಾಠಿಗೆ ಅಡಿಗಲ್ಲಾದವು ಎಂದು ತುಳುಪುಳೆ ತಿಳಿಯುತ್ತಾರೆ. ಆ ನಾಲ್ಕು ಕೃತಿಗಳು ಇಂತಿವೆ.

ಪುಷ್ಪದಂತನ ಜಸಹರಚರಿಉ, ಣಾಯಕುಮಾರ ಚರಿಉ ಮತ್ತು ಮಹಾಪುರಾಣ (ತಿಸಠ್ಠಿ ಮಹಾಪುರಿಸ ಗುಣಾಲಂಕಾರು). ಕನಕಾಮರನ ಕರಕಂಡ ಚರಿಉ.

ಮಹಾಪುರಾಣವನ್ನು ಸಂಪಾದಿಸಿದ ಪಿ.ಎಲ್. ವೈದ್ಯರು ಪುಷ್ಪದಂತನು ಮಳಖೇಡದವನೆಂದೂ ಅವನ ಕೃತಿಗಳ ರಚನಾಕಾಲ ಕ್ರಿ.ಶ. ೯೬೫ ರಿಂದ ೯೭೨ ಎಂದೂ ಸಿದ್ಧಪಡಿಸಿದ್ದಾರೆ. ಮಳಖೇಡದ ರಾಷ್ಟ್ರಕೂಟದ ಅರಸು ೨ನೆಯ ಕೃಷ್ಣ ಹಾಗೂ ಅವನ ನಂತರದ ಕಾಲದಲ್ಲಿಯ ಅರಸರ ಮಂತ್ರಿಗಳ ಆಸರೆಯಲ್ಲಿ ಪುಷ್ಪದಂತನು ತನ್ನ ಕೃತಿಗಳನ್ನು ರಚಿಸಿದನೆಂದು ಕವಿಚರಿತೆಕಾರರು ಹೇಳಿದ್ದಾರೆ. (ಪುಟ. ೫೦೩.)

ಕನಕಾಮರನು ಆಸ್ಸಯೆಯವನೆಂದೂ ಕ್ರಿ.ಶ ೯೭೫ ರಿಂದ ೧೦೭೫ರ ಕಾಲಾವಧಿಯಲ್ಲಿ ಜೀವಿಸಿದ್ದನೆಂದೂ ಕರಕಂಡ ಚರಿಉದ ಸಂಪಾದಕರಾದ ಹೀರಾಲಾಲ ಜೈನರು ಅಭಿಪ್ರಾಯಪಟ್ಟಿದ್ದಾರೆ.

ಮರಾಠಿ ಭಾಷೆಯ ಉಪಪತ್ತಿ ಶೋಧಿಸುವದಕ್ಕೆ ಈ ನಾಲ್ಕು ಕೃತಿಗಳನ್ನು ಬಿಟ್ಟರೆ ತುಳಪುಳೆಯವರ ಅಭಿಪ್ರಾಯದಲ್ಲಿ ಐದನೆಯ ಸ್ರೋತವಿಲ್ಲ.

ಈ ಎಲ್ಲ ವಾದಗಳಲ್ಲಿ ಸಾಕಷ್ಟು ವಿರೋಧಾಭಾಸವಿದೆ. ಅಪಭ್ರಂಶ ಭಾಷೆಯಲ್ಲಿ ಪ್ರಾದೇಶಿಕವೆಂಬ ಭೇದಗಳು ಮೂಲತಃ ಇಲ್ಲವೇ ಇಲ್ಲ. ತಗಾರೆಯವರು ಹೇಳುವ ದಕ್ಷಿಣ ಅಪಭ್ರಂಶದ ಎಂಟು ವ್ಯವಚ್ಛೇದಕ ಲಕ್ಷಣಗಳು ದಕ್ಷಿಣದ ಅಪಭ್ರಂಶ ಭಾಷೆಗೆ ಮಾತ್ರ ಸೀಮಿತವಾಗಿಲ್ಲ. ಅವು ಪೂರ್ವದ ಪ್ರಾಕೃತ ಅಪಭ್ರಂಶ ಭಾಷೆಯ ಸಾಹಿತ್ಯದಲ್ಲೂ ಹೇರಳವಾಗಿ ಕಾಣಸಿಗುತ್ತವೆಯೆಂದು ಜಗದೀಶ ಪ್ರಸಾದ ಕೌಶಿಕ ಅವರು ತಮ್ಮ ಭಾರತೀಯ ಆರ್ಯ ಭಾಷಾಓಂಕಾ ಇತಿಹಾಸ ಪುಸ್ತಕದಲ್ಲಿ ಸಪ್ರಮಾಣವಾಗಿ ಖಂಡಿಸಿದ್ದಾರೆ. ಇಲ್ಲಿ ಈ ವಿಷಯವನ್ನು ಇನ್ನೊಂದಿಷ್ಟು ವಿಸ್ತೃತವಾಗಿ ವಿವೇಚಿಸುವುದು ಅವಶ್ಯವಾಗಿದೆ.

೧. ತಗಾರೆಯವರ ಉಪಪತ್ತಿಗಳು

(i) ಸಂಸ್ಕೃತ ಕ್ಷ > ದಕ್ಷಿಣ ಅಪಭ್ರಂಶಖ
ಉದಾಹರಣೆ : ಕ್ಷಣಾರ್ಧ > ಖಣಾದ್ಧ ಕ್ಷೀಣ > ಖೀಣ ಕ್ಷೇತ್ರ > ಖೆತ್ತ

(ii) ಸಂ. ಕ್ಷ > ದಅಪ. ಚ
ಕ್ಷಣ > ಚಣ ಕ್ಷುರಿಕಾ > ಚುರಿಅ ಕ್ಷುಧಾತೃಷ್ಣಾ > ಚುಹಾತಣ್ಹಾ
ಸಂ. ಕ್ಷ > ದಅಪ. ಛ

(iii) ರಕ್ಷಪಾಲ > ರಖ್ಖಪಾಲ ಲಾಕ್ಷಾರಸ > ಲಖ್ಖಾರಸ ಅಕ್ಷರ > ಅಖ್ಖರ
ಭುಕ್ಷ > ಭುಖ್ಖ
ಸಂಸ್ಕೃತಕ್ಷದಿಂದ ಖ ಆದ ಉದಾಹರಣೆಗಳು ಮರಾಠಿಯಲ್ಲಿವೆ.
ಕ್ಷೇಮ > ಖೇಂವ (೧೧.೨೮೫) (೮. ೧೪೬)
ಅಕ್ಷರ > ಅಖರ (೬-೧೯೪) ಚೋಕ್ಷ > ಚೋಖ (೧೩-೭೬)
(೧೮-೫೨೪)

ಸಂಸ್ಕೃತ ಕ್ಷ ದಿಂದ ಮರಾಠಿಯಲ್ಲಿ ಛ ಅಥವಾ ಛ್ಛ ಆದ ಉದಾಹರಣೆಗಳು ಇಲ್ಲ. ತುಳಪುಳೆಯವರೂ ಕೊಟ್ಟಿಲ್ಲ.

> ಪುಷ್ಪದಂತ ಹಾಗೂ ಕನಕಾಮರದಲ್ಲಿ ಖ ರೂಪಗಳು ದೊರೆಯುತ್ತಿದ್ದರೂ ದಕ್ಷಿಣ ಅಪಭ್ರಂಶ ಭಾಷೆಯು ಛ ರೂಪ ಬಹುಲದ್ದಾಗಿದೆ.

ಎಂದು ತಗಾರೆಯವರೇ ತಮ್ಮ ಪುಸ್ತಕದಲ್ಲಿ (ಪು. ೮೮) ಹೇಳುತ್ತಾರೆ! ಕನ್ನಡದಲ್ಲಿ ಮಾತ್ರ ಹೀಗೆ ತದ್ಭವಗಳಾಗಿವೆ. ಕ್ಷುರಿಕಾ > ಚೂರಿ ಕ್ಷಣ > ಚಣ.

ಇನ್ನು ಸಂಸ್ಕೃತ ಕ್ಷದಿಂದ ಮರಾಠಿಯಲ್ಲಿ ಖ ಆದದ್ದಾದರೂ ಕ ಲೋಪವಾಗಿ ಷ > ಖ ಆಗಿರಬಹುದೇನೋ ಎನ್ನುವದು ವಿಚಾರಣೀಯ. ಉದಾ : ಶೇಷ > ಶೇಖ (೧.೧೬೦) ೧೫-೪೦೩) ವಿಶೇಷ > ವಿಶೇಖ (೧೮-೧೨೦೬) ದೋಷ > ದೋಖ (೧.೨೬೨) (೧೩.೮೬) ವರ್ಷ > ವರಿಖ (೬.೪೬೩) ವಿಷ > ವಿಖ (೨.೨೦೬) ವೇಷ > ವೇಖ (೧೩.೧೦೫೩) ಅಪಭ್ರಂಶದಲ್ಲಿ ಮಾತ್ರ ಸಂಸ್ಕೃತ ಷ > ಸ ಆಗುತ್ತದೆ. ಉದಾ : ಸರೋಷಃ > ಸರೋಸು (೪೩೯-೩) ಅಶೇಷಂ > ಅಸೇಸು (೪೪೦.೧) ಕರಿಷ್ಯಾಮಿ > ಕರೀಸು (೩೯೬.೪) ಕಷಾಯ > ಕಸಾಯ.

(ಇಲ್ಲಿ ಮರಾಠಿಯ ಸಂದರ್ಭ ಜ್ಞಾನೇಶ್ವರಿ; ಅಪಭ್ರಂಶ ಸಂದರ್ಭ ಹೇಮಚಂದ್ರನ ಅಪಭ್ರಂಶ ವ್ಯಾಕರಣ. ಸಂಪಾದಕರು ಎನ್. ಸುರೇಶಕುಮಾರ)

೨. ಹನ್ನೊಂದನೆಯ ಶತಮಾನದ ಕರಕಂಡು ಚರಿಉದಲ್ಲಿ ದೊರೆಯದ ಆದರೆ ಪುಷ್ಪದಂತನ ಕೃತಿಗಳಲ್ಲಿ ದೊರೆಯುವ ಈ ರೂಪಗಳ ಬಗ್ಗೆ ತಗಾರೆಯವರಿಗೆ ಚಿಂತೆಯಾಗಿದೆ!

ಸಂ. ಭ್ರಮರ > ಭವಾರ ಕುಮಾರಿ > ಕುವರಿ, ಚಾಮರ > ಚವರೆ

> ಪುಷ್ಪದಂತನ ಕೃತಿಗಳಲ್ಲಿ ಹಾಗೂ ಯಾದವ ಆಳಿಕೆಯ ಮರಾಠಿಯಲ್ಲಿ ದೊರೆಯುವ ಸಂಸ್ಕೃತ ಮ > ವ, ಕರಕಂಡ ಚರಿಉದಲ್ಲಿ ಏಕೆ ದೊರೆಯುವದಿಲ್ಲವೆಂಬುದೇ ದೊಡ್ಡ ಪ್ರಶ್ನೆಯಾಗಿದೆ.[5]

---

5. Historical Grammar of Apabhramsa P. 83

ಪುಷ್ಪದಂತಕವಿ ಮಳಖೇಡದ ರಾಷ್ಟ್ರಕೂಟರ ಆಸ್ಥಾನದಲ್ಲಿದ್ದವ. ಅಲ್ಲಿಯ ಜನರ ಭಾಷೆ ಕನ್ನಡ. ಸಂಸ್ಕೃತ-ಅಪಭ್ರಂಶ ಭಾಷೆಗಳು ಪಂಡಿತಭಾಷೆಗಳು. ಕನ್ನಡ ಶಾಂತಿಪುರಾಣವನ್ನು ರಚಿಸಿದ (ಕ್ರಿಶ. ೯೫೦) ಪೊನ್ನನೂ ಮೂರನೆಯ ಕೃಷ್ಣನ ಆಸ್ಥಾನ ಕವಿಯೇ. ಕ್ರಿ.ಶ. ೮೫೩ ರಲ್ಲಿದ್ದ ಅಸಗನಂತಹ ಪ್ರತಿಭಾವಂತ ಕವಿಗಳು ಕನ್ನಡ, ಸಂಸ್ಕೃತಗಳಲ್ಲಲ್ಲದೆ ಅಪಭ್ರಂಶ ಭಾಷೆಯಲ್ಲಿಯೂ ಕಾವ್ಯ ಬರೆಯುತ್ತಿದ್ದರು. ಕನ್ನಡದಲ್ಲಿ ಕುಮಾರಸಂಭವ, ಸಂಸ್ಕೃತದಲ್ಲಿ ಶಾಂತಿಪುರಾಣ, ವರ್ಧಮಾನ ಪುರಾಣ ಬರೆದ ಕವಿ ಅಸಗ ಅಪಭ್ರಂಶದಲ್ಲಿ ವೀರ ಜಿಣೇಂದ್ರ ಚರಿಉ ಕೃತಿಯನ್ನು ರಚಿಸಿದ ಬಗ್ಗೆ ಸಂದರ್ಭಗಳು ದೊರೆಯುತ್ತವೆ.

ಪತ್ತನೆಯ ಶತಮಾನದ ಮಧ್ಯದಲ್ಲಿ ಹರಿವಂಶ ಪುರಾಣವನ್ನು ಅಪಭ್ರಂಶದಲ್ಲಿ ರಚಿಸಿದ ಧವಲ ಕವಿಯು ಅಸಗು ಮಹಕಇ ಜೇಣ್ ಸುಮಣೋಹರು, ವೀರ ಜಿಣೇಂದ್ರ ಚರಿಉ ಕಿಉ ಸುಂದರು ಎಂದು ಬಣ್ಣಿಸಿದ್ದಾನೆ.

*ತಂ ಕಹಮಿ ಪುರಾಣು ಪ್ರಸಿದ್ಧಣಾಮು*
*ಸಿದ್ಧತ್ಥವರಿಸಿ ಭುವಣಾಹಿರಾಮು*
*ಭುವಣೇಕ್ಕ ರಾಮು ರಾಯಾಹಿ ರಾಉ*
*ಜಹಿಙ್ ಅಚ್ಛಇ ತುಡಿಗು ಮಹಾಣುಭಾಉ*
*ತಂದೀಣದಿಣ್ಣ ಘಣಕಣಯ ಪಯರು*
*ಮಹಿ ಪಡಿಭ ನುಂತು ಮೇ ಪಾಡಿಣಯವರು*

ಎಂಬುದಾಗಿ ಪುಷ್ಪದಂತ ತನ್ನ ಆಶ್ರಯದಾತ ಮೂರನೆಯ ಕೃಷ್ಣನನ್ನು (ಕ್ರಿ.ಶ. ೯೩೯ ರಿಂದ ೯೬೮) ತಿಸಟಿ ಮಹಾಪುರಿಸ ಗುಣಲಂಕಾರದಲ್ಲಿ (ಪ್ರಥಮ ಸಂಧಿ ಮೂರನೆಯ ಕಡವಕ) ಬಣ್ಣಿಸಿದ್ದಾನೆ.

೩. ರಾಷ್ಟ್ರಕೂಟರ ರಾಜ್ಯದಲ್ಲಿ ಕನ್ನಡವು ಜನಪದ ಭಾಷೆಯಾಗಿತ್ತೇ ವಿನಾ ಅಪಭ್ರಂಶವಲ್ಲ. ಪಂಡಿತ ಭಾಷೆಯ ಮೇಲೆ ಕನ್ನಡದ ಪ್ರಭಾವ ಆಗಿರಬಹುದೆಂಬ ಕಿಂಚಿತ್ತು ಸಂಶಯವು ತಗಾರೆಯವರಿಗೆ ಬಂದಂತಿಲ್ಲ. ಹಾಗೇನಾದರೂ ಬಂದಿದ್ದರೆ ಅವರು 'ಸೂರ್ಯ' ಅರ್ಥದ 'ಣೇಸರ' ಶಬ್ದದ ವ್ಯುತ್ಪತ್ತಿಗಾಗಿ 'ದಿನೇಶ್ವರ'ನಿಗೆ ಶರಣು ಹೋಗಬೇಕಿರಲಿಲ್ಲ.[6] ಹಳಗನ್ನಡದ ನೇಸಱು ಸಾಕಾಗಿದ್ದ! (ನೇಸಱ್ ಮೂಡಿದುದು ಬಕಂಗೆ ಪಿಱಿತ್ತು ಮೂಡುವ ತೆರದಿಂ ಪಂಪಭಾರತ ೩-೨೭)

> ೩. ಶಬ್ದಜಾಲನೆ ಹಾಗೂ ಪದ ಸಂಯೋಜನೆಗಳು ಪ್ರತಿಯೊಂದು ಭಾಷೆಯ ಬೆನ್ನೆಲುಬಾಗಿವೆ. ಇವೇ ಆ ಭಾಷೆಯ ಆಕಾರ ಹಾಗೂ ವೈಶಿಷ್ಟ್ಯಗಳನ್ನು ವರ್ಷಾನುಗಟ್ಟಲೆ ಉಳಿಸಿಕೊಳ್ಳುತ್ತವೆ. ಆದುದರಿಂದ ತುಲನಾತ್ಮಕ ಶಬ್ದಭಾಂಡಾರವು ತುಲನಾತ್ಮಕ ವ್ಯಾಕರಣಕ್ಕಿಂತ ಗೌಣವಾದುದು.[7]

---

6. Historical Grammar of Apabhramsa P. 60
7. Comparative Grammar of Dravidian Languages P. 452

ಎಂದು ಕಾಲ್ಡವೆಲ್‌ರು ಹೇಳಿದ್ದನ್ನು ಉದ್ಧರಿಸುತ್ತ, ಣಾಯಕುಮಾರಚರಿಉ ಹಾಗೂ ಜಸಹರಚರಿಉ ಪುಸ್ತಕಗಳ ಕೊನೆಯಲ್ಲಿ ಸಂಪಾದಕರು ಕೊಟ್ಟ ಶಬ್ದಗಳ ಪಟ್ಟಿಯಲ್ಲಿಯ ೧೭೧ ಶಬ್ದಗಳನ್ನು ಮಾತ್ರ ಆಯ್ದುಕೊಟ್ಟು ತುಳಮುಳೆಯವರು ಅಪಭ್ರಂಶ ಭಾಷೆಯ ಶಬ್ದಋಣವನ್ನು ಹೀಗೆ ಸ್ಪಷ್ಟಪಡಿಸಿದ್ದಾರೆ.

> ಮುಂದೆ, ಮೇಲಿನ ಎರಡು ಗ್ರಂಥಗಳಲ್ಲಿಯ ಹಾಗೂ ಯಾದವ ಮರಾಠಿಯಲ್ಲಿಯ ರೂಪಗಳನ್ನು ತೋರಿಸುವ ಆಯ್ದ ಶಬ್ದಗಳ ಪಟ್ಟಿ ಕೊಟ್ಟರೆ. ಇದರಿಂದ ಮರಾಠಿಯು ಅಪಭ್ರಂಶದಿಂದ ಪಡೆದ ಶಬ್ದಋಣ ಎಷ್ಟು ಮಹತ್ವದ್ದೆಂದು ಅರಿವಾಗುವದು.[8]

ಈ ೧೭೧ ಶಬ್ದಗಳಲ್ಲಿಯ ಸುಮಾರು ನೂರಕ್ಕೂಹೆಚ್ಚು ಶಬ್ದಗಳನ್ನು ತಗಾರೆಯವರು ತಮ್ಮ ಗ್ರಂಥದಲ್ಲಿ ಗಣನೆಗೆ ತೆಗೆದುಕೊಂಡೇ ಇಲ್ಲ! ಅಂದರೆ ಇವು ಅಪಭ್ರಂಶ ಶಬ್ದಗಳಾಗಿರದೆ ಪ್ರಾಕೃತದ ತತ್ಸಮ ಶಬ್ದಗಳಾಗಿರಬೇಕು. ಉಳಿದ ಶಬ್ದಗಳ ಬಗ್ಗೆ ಕೂಡ ಸಂದೇಹ ಇದ್ದೇ ಇದೆ. ಉದಾಹರಣೆಗಾಗಿ ಓಳಗ ಶಬ್ದವನ್ನು ಅವ + ಲಗ್ ದಿಂದ ತಗಾರೆಯವರು ಸಾಧಿಸಿದ್ದು, ತುಳಮುಳೆ ಇದನ್ನು ಅಪಭ್ರಂಶ ಋಣದಲ್ಲಿ ಹಾಕಿದ್ದಾರೆ. ಇದು ಕನ್ನಡ ಶಬ್ದವೆಂದೂ ಮುಂದೆ ಅವರೇ ಒಪ್ಪಿಕೊಂಡಿದ್ದಾರೆ. (ಪು. ೧೦೩)

ಇದೂ ಅಲ್ಲದೆ ಅವರು ಹೇಮಚಂದ್ರನ ದೇಶೀನಾಮ ಮಾಲೆಯಲ್ಲಿಯ ೧೩೮ ಶಬ್ದಗಳ ಹಾಗೂ ಅವುಗಳ ಜ್ಞಾನೇಶ್ವರೀ ಕಾಲೀನ ರೂಪಗಳ ಪಟ್ಟಿಯನ್ನು ಕೊಟ್ಟಿದ್ದಾರೆ. (ಪು. ೭೭ ರಿಂದ ೮೩) ಉಕ್ಕುರಡ, ಕೊಡ್ಡ, ಚೋಜ್ಜ, ಟಂಟ, ಡೋಲೋ, ಮೇರ, ಸೆಳ್ಳಿ ಇಂತಹ ಅನೇಕ ಶಬ್ದಗಳು ಎರಡೂ ಯಾದಿಗಳಲ್ಲಿ ಬಂದಿವೆ.

೪. ತಗಾರೆಯವರೇ ಒಪ್ಪಿಕೊಂಡಂತೆ ಪುಷ್ಪದಂತನ ಕೃತಿಗಳ ಕಾಲ ಕ್ರಿ.ಶ. ೯೬೫ ರಿಂದ ೯೭೨. ಕನಕಾಮರನ ಕಾಲ ೯೬೫ ರಿಂದ ೧೦೨೫. ಇವರಿಬ್ಬರನ್ನುಳಿದು ದಕ್ಷಿಣ ಅಪಭ್ರಂಶಭಾಷೆಯ ಲೇಖಕರಾರೂ ದೊರೆತಿಲ್ಲ. ಪುಷ್ಪದಂತನ ಕಾಲದ ಜಾನಪದ ಭಾಷೆ ಅಪಭ್ರಂಶವಂತೂ ಇರಲಿಲ್ಲ. ಇಂತಹ ಅಪಭ್ರಂಶ ಭಾಷೆಯಿಂದ ಮರಾಠಿ ಹುಟ್ಟಿತೆಂದು ಇಟ್ಟುಕೊಂಡರೆ ಆ ಭಾಷೆಯ ಉಗಮದ ಕಾಲವು ೧೧ನೆಯ ಶತಮಾನದ ನಂತರದ್ದೆಂದಂತಾಯಿತು. ಹಾಗಾದರೆ ಶ್ರೀ ಚಾವುಂಡರಾಜೇಂ ಕರವಿಯಲೇಂ ಈ ಶ್ರವಣಬೆಳಗೊಳದ ಶಿಲಾಲೇಖ ಮರಾಠಿಯದಲ್ಲವೇ? ಅಥವಾ ಇದನ್ನು ತದನಂತರ ಕ್ರಿ.ಶ. ೧೨೦೦ ರಲ್ಲಿ ಅಪಭ್ರಂಶ ಭಾಷೆಯ ಪ್ರಭಾವ ಕಡಿಮೆಯಾಗಿ ಮರಾಠಿ ಬೆಳೆದ ಬಳಿಕ ಬರೆಯಲಾಯಿತೆನ್ನಬಹುದೇ?

***

---

8. ಯಾದವಕಾಲೀನ ಮರಾಠಿ ಭಾಷಾ ಪು. ೪೭

# ೪. ಅಪಭ್ರಂಶ, ಮರಾಠಿ ಹಾಗೂ ಕನ್ನಡ

ಅಪಭ್ರಂಶ ಭಾಷೆಯಲ್ಲಿಯ ಕೇವಲ ಎರಡು ಗ್ರಂಥಗಳನ್ನು - ಅಲ್ಲ, ಆ ಗ್ರಂಥಗಳಲ್ಲಿ ಬರುವ ಶಬ್ದಗಳ ಪಟ್ಟಿಗಳನ್ನು ಪರಿಶೀಲಿಸಿದ ತುಳಪುಳೆಯವರು ಮರಾಠಿ ಅಪಭ್ರಂಶದ ವಾರಸುದಾರವೆಂದು 'ಸಪ್ರಮಾಣವಾಗಿ' ಸಿದ್ಧಮಾಡಿದ್ದಾರೆ![1] ಹಾಗಿದ್ದರೆ 'ಅಪಭ್ರಂಶಕ್ಕೆ ಮೊದಲು 'ಮರಾಠಿ' ಇರಲಿಲ್ಲವೆ?, ಶ್ರವಣಬೆಳಗೊಳದ ಶಿಲಾಲೇಖವು (ಚಾವುಂಡರಾಯೇಜ್ ಕರವಿಯಲೇಜ್) ಮರಾಠಿ ಅಲ್ಲವೇ ಎಂದೆಲ್ಲ ಪ್ರಶ್ನೆಗಳನ್ನು ಈಗಾಗಲೇ ಎತ್ತಿದ್ದೇನೆ.

ಈಗ ಈ ಅಪಭ್ರಂಶ ಭಾಷೆಯದೇ ಅಂದರೆ ತುಳಪುಳೆಯವರು ಪರಿಶೀಲಿಸಿದ ಶಬ್ದಗಳ ಪಟ್ಟಿಯದೇ - 'ಕುಂಡಲಿ' ಹಾಕುವ ಸಾಹಸ ಮಾಡುತ್ತಿದ್ದೇನೆ. (ಸಂದರ್ಭಗ್ರಂಥಗಳು : ಣಾಯಕುಮಾರ ಚರಿಉ ಕವಿಪುಷ್ಪದಂತ - ಸಂಪಾದನೆ ಹಿರಾಲಾಲ ಜೈನ

ಜಸಪರಚರಿಉ - ಕವಿ ಪುಷ್ಪದಂತ - ಸಂಪಾದನೆ ಡಾ. ಪಿ.ಎಲ್ ವೈದ್ಯ)

ಈ ಶಬ್ದಗಳ ಮೂಲಗಳನ್ನು ನಾನೇ ಹೇಳುವದು ಹಾಸ್ಯಾಸ್ಪದವಾದೀತು.

ಜಸಹರಚರಿಉ : (ಸಂಸ್ಕೃತ ಅರ್ಥಗಳನ್ನು ಡಾ. ವೈದ್ಯ ಕೊಟ್ಟಿದ್ದಾರೆ.)

| | | |
|---|---|---|
| ಮೇರ | - | ಮರ್ಯಾದಾ ಇತ್ಯರ್ಥೇ ದೇಶೀ |
| ಲಲ್ಲ | - | ಅಸ್ಪಷ್ಟ ಭಾಷೀಯಾರ್ಥೇ ದೇಶೀ |
| ಸಣ್ಣ | - | ಸಂಜ್ಞಾ |
| ಸದ್ದ | - | ಶಬ್ದ |
| ಸಿಢಿಲ | - | ಶಿಥಿಲ |
| ಸಿರಿ | - | ಶ್ರೀ |
| ಸಿಂಗಾರ | - | ಶೃಂಗಾರ |
| ಅಇಅಡ್ಡ ಅತಿ | - | 'ಅಡ್ಡ' ವಿಕಟಾರ್ಥೇ ದೇಶೀ |
| ಅಸಇ | - | ಅಸಕೃತ್ (ಅಸೈಇ್!) |
| ಆಣಾ | - | ಆಜ್ಞಾ |
| ಕಕ್ಕಸ | - | ಕರ್ಕಶ |
| ಕಜ್ಜ | - | ಕಾರ್ಯ |
| ಕಾಹಲ | - | ವಾದ್ಯವಿಶೇಷಃ |
| ಕುಂಟ | - | ಕುಬ್ಜ? |
| ಕೂರ | - | ಓದನಾರ್ಥೇ ದೇಶೀ |

1. ಯಾದವಕಾಲೀನ ಮರಾಠೀ ಭಾಷಾ ಪು. ೪೭, ೫೮ ಇತ್ಯಾದಿ

ಕೋಡಿ - ಕುಕ್ಕುಟಃ
ಕೊಡ್ಡ - ಕೌತುಕ
ಘಠ್ಠ - ಘೃಷ್ಟ
ಚಂಡಮಾರೀ - ಕಾತ್ಯಾಯನೀ
ಚಾಮುಂಡ-ಚಂಡ - ಭಯಂಕರ
ಚೇ - ಮ್ಯ ಇತ್ಯರ್ಥೇ ದೇಶೀ
ಚೊಜ್ಜ - ಕೌತೂಹಲಾರ್ಥೇ
ಛಜ್ಜ - ಶೋಭಾಯಾಂ ದೇಶೀ
ಛಣ - ಕ್ಷಣ
ಣಣ್ಣ (ನನ್ನ) - ನ + ಅನ್ಯ
ದಾಢಾ - ದಂಷ್ಟ್ರಾ ಅರ್ಥೇ ದೇಶೀ
ಮಲ್ಲಿ - ಶಬರ ಜಾತಿ ವಿಶೇಷಃ

ಣಾಯಕುಮಾರ ಚರಿಉ (ಸಂಸ್ಕೃತ ಅರ್ಥಗಳನ್ನು ಕೊಟ್ಟವರು ಹಿರಾಲಾಲಜೈನ)

ಅಮ್ಮ - ಅಂಬ
ಅರಿಸ - ಅರಿ + ಈಶ
ಅವ್ವೋ - ಖೇದೇ
ಅಂಬಇಯ - ಅಂಬಿಕಾ
ಈಸೀಸೀ - ಈಷದ್‌ಈಷದ್
ಉರ - ಮರ
ಓಲಗ - ಅವಲಗ್
ಓಸರ - ಅಪಸ್ರ
ಕತ್ತರಿ - ಕರ್ತರಿ
ಕುಂದವ್ವ - ಕುಂದವ್ವಾ (ಹೆಸರಿರಬಹುದೇ?)
ಕೊಟ್ಟ - ಕೋಷ್ಟ
ಕೊಂತ - ಕುಂತ - ಆಯುಧ ವಿಶೇಷಃ
ಗಉಡ - ಗೌಡ
ಗಲಗಿಜ್ಜ - ? (ಕೊರಳಗೆಜ್ಜೆ)
ಗೊಂದಲ - ಆಕ್ರಂದ
ಚೂರ - ಚೂರ್ಣ
ಜೀಯ - ಜೀವಾ
ಜುವ್ವಣ-ಜೋವ್ವಣ - ಯೌವನ
ತಣಅ - ಸಂಬಂಧಾರ್ಥೇ (ತನಕ)
ದಿಣ ಣೇಸರ - ದಿನೇಶ್ವರ
ಡಿಲ್ಲ - ಡಿಂಭ

ಘುಸ - ಭೃಜ ಸ್ಪೃಶ (ಪೂಂಸು)
ಮದ್ದಲ - ವಾದ್ಯವಿಶೇಷ
ಮಹಗ್ಗೆ - ಮಹ್ಯಮ್

ಇವಿಷ್ಟು ಜರಡಿ ಆಡಿಸಿ ತೆಗೆದ ಶಬ್ದಗಳು.

ಎರಡೂ ಕೃತಿಗಳಲ್ಲಿ ಕನ್ನಡದ 'ಉಳ್ಳ' (ಅಪಭ್ರಂಶ 'ಉಲ್ಲ') ಪ್ರತ್ಯಯ ತಗುಲಿ ಸಿದ್ಧವಾದ ಶಬ್ದಗಳಿವು.

ಣಾಯ ಕುಮಾರ ಚರಿಉ

ಅಹರುಲ್ಲ - ಅಧರ+ಉಲ್ಲ ; ಕರಹುಲ್ಲ - ಕರಭ+ಉಲ್ಲ ; ಕಮಲುಲ್ಲ - ಕಮಲ+ಉಲ್ಲ, ಕಲಣುಲ್ಲ - ಕಲನ + ಉಲ್ಲ; ಗಂಡ್ಯಲುಲ್ಲ - ಗಂಡತಲ + ಉಲ್ಲ; ಜುಗಲುಲ್ಲ - ಯುಗಲ+ಉಲ್ಲ. ದುವ್ವಯಣುಲ್ಲ - ದುರ್ವಚನ+ಉಲ್ಲ; ಭವಣುಲ್ಲ-ಭವನ+ಉಲ್ಲ;

ಜಸಹರಚರಿಉ

ಹಿಯಉಲ್ಲ-ಹೃದಯ+ಉಲ್ಲ; ಕಂದುಲ್ಲ-ಕಂದ+ಉಲ್ಲ; ಗರಲುಲ್ಲ-ಗರಲ+ಉಲ್ಲ.

ಮೂರನೆಯದಾಗಿ, 'ಯ' ವಿಕರಣದೊಂದಿಗೆ ಷಷ್ಠಿಯ 'ಅ' ಪ್ರತ್ಯಯವೂ ಜಸಹರ ಚರಿಉದಲ್ಲಿ ದೃಗ್ಗೋಚರವಾಗುತ್ತದೆ. ಉದಾಹರಣೆ ಚಣ್ಡಿಯ ಸಮಾಣ - ಚಂಡಿಯ ಸಮಾನ.

ನಾಲ್ಕನೆಯದಾಗಿ, 'ಚೇತನಭಾವದಲ್ಲಿಯ ತನ 'ಪ್ರತ್ಯಯಕ್ಕೆ ಕಲಿತನಂ, ಚದುರತನಂ, ಆಳ್ತನಂ, ಎಗ್ಗತನಂ ಎಂಬುದಾಗಿ ಕೇಶಿರಾಜನು ಉದಾಹರಣೆ ಕೊಡುತ್ತಾನೆ. (ಸೂತ್ರ ೨೪೮). ಈ 'ತನ' ಪ್ರತ್ಯಯವು 'ತ್ತಣ' ವಾಗಿ ಅಪಭ್ರಂಶದಲ್ಲಿ ಕಾಣಿಸಿಕೊಳ್ಳುತ್ತದೆ.

ಜಸಹರ ಚರಿಉ:

ರೋಯತ್ತಣ - ರೋಗಿತ್ವ; ವುಡ್ಢತ್ತಣ-ವೃದ್ಧತ್ವ; ಅಚಲತ್ತಣ-ಅಚಲತ್ವ ಕುಕಇತ್ತಣ-ಕುಕವಿತ್ವ;

ಣಾಯಕುಮಾರ ಚರಿಉ:

ಕುಡಿಲತ್ತಣ - ಕುಟಿಲತ್ವ; ಚವಲತ್ತಣ-ಚಪಲತ್ವ; ಣಿಚ್ಚೇಲತ್ತಣ-ನಿಶ್ಚೇಲತ್ವ

ಧವಲತ್ತಣ-ಧವಲತ್ವ; ಧುತ್ತತ್ತಣ-ಧೂರ್ತತ್ವ; ಫರುಸತ್ತಣ-ಪರುಷತ್ವ

ಕನ್ನಡದ 'ತನ' ಪ್ರತ್ಯಯವು ತಮಿಳು ತೆಲಗುಗಳಲ್ಲಿಯೂ ಬಳಕೆಯಲ್ಲಿದೆ-ಯೆಂದು ಹೇಳಿದ ಪ್ರ.ಗೋ. ಕುಲಕರಣಿ ಅವರು ಕೊಡುವ ಉದಾಹರಣೆಗಳು.[2]

---

2. ಕನ್ನಡ ಭಾಷೆಯ ಚರಿತ್ರೆ ಪು. ೩೬೫

ತಮಿಳು : ಪೆರುಮಿತಮ್ (ಕನ್ನಡ : ಪಿರಿಯತನಂ)

ತೆಲಗು : ಕಲಿತನಮು (ಕನ್ನಡ : ಕಲಿತನಂ)

ಈ ಮಧ್ಯದ್ರಾವಿಡ ಪ್ರತ್ಯಯದ ಮೂಲ 'ತಾನ್' (ತನ್) ಎಂಬ ಸರ್ವನಾಮದಲ್ಲಿದೆ ಎಂದೂ ಅವರು ಊಹಿಸಿದ್ದಾರೆ. ಆದರೆ ಅವರಿಗೇಕೋ ಅದು ಭರವಸೆಯದೆನಿಸಿಲ್ಲ. ಸಂಸ್ಕೃತದ 'ತ್ವಂ' ದಿಂದ ಬಂದಿರಲೂಬಹುದು ಎಂದು ಅವರು ಹೇಳುತ್ತಾರೆ. ಹಾಗಾದರೆ ಯಾವುದು ಸರಿ?

ಅಪಭ್ರಂಶದ ವ್ಯಾಕರಣ ವಿವರಿಸುವಾಗ ಹೇಮಚಂದ್ರನು ತ್ವತಲೋಃಪ್ಪಣಃ (ಸೂತ್ರ ೪೩೭) ಎಂದು ಹೇಳುತ್ತಾನೆ. ಅದಕ್ಕೆ ಉದಾಹರಣೆ : ವಡ್ಡಪ್ಪಣು ಪರಿ ಪಾವಿಅಇ >ಮಹತ್ತ್ವಂ ಪುನಃ ಪ್ರಾಪ್ಯತೇ (೪೩೭-೧) ಅಂದರೆ ಸಂಸ್ಕೃತದ 'ತ್ವ' ಇದ್ದಲ್ಲಿ ಅಪಭ್ರಂಶದ 'ಪ್ಪಣ' ಪ್ರತಯ ಬರುತ್ತದೆ. ಆದರೆ ೪೩೭ ನೇಯ ಸೂತ್ರಕ್ಕೆ ಕೊಟ್ಟ ೩ನೆಯ ದೋಹೆಯ ಉದಾಹರಣೆ ನೋಡಿರಿ.

*ಜಿಜ್ವ ಜಿಜ್ವ ವಡುತ್ತಣು ಲಹಹಿಂ ತಿಜ್ವ ತಿಜ್ವ ನವಹಿಂ ಸಿರೇಣ (ಸಂ) ಯಥಾ ಯಥಾ ಮಹತ್ತ್ವಂ ಲಭಂತೇ ತಥಾ ತಥಾ ನಮಂತಿ ಶಿರಸಾ*

ಅಂದರೆ ಮೇಲಿನ 'ವಡ್ಡಪ್ಪಣು' ಆದ ಶಬ್ದ ಇಲ್ಲಿ 'ವಡುತ್ತಣು' ಆಯಿತು. ಪುಷ್ಪದಂತ ೧೦ನೆಯ ಶತಮಾನದವ. ಅವನ ಮೇಲ್ಕಾಣಿಸಿದ ಕೃತಿಗಳಲ್ಲೆಲ್ಲೂ 'ಪ್ಪಣ' ಪ್ರತ್ಯಯ ಬಳಕೆಯಾಗಿಲ್ಲ. ಹೇಮಚಂದ್ರ ೧೨ನೆಯ ಶತಮಾನದವ. ಅವನು ಕೊಡುವ ಉದಾಹರಣೆಗಳಲ್ಲಿ 'ತ್ತಣ' 'ಪ್ಪಣ' ಎರಡೂ ಪ್ರತ್ಯಯಗಳು ಹತ್ತಿವೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಮೊದಲ ಪ್ರತ್ಯಯ 'ತ್ತಣ'. ಅದು ಕ್ರಮೇಣ 'ಪ್ಪಣ' ಕ್ಕೆ ದಾರಿ ಮಾಡಿ ಕೊಟ್ಟಿತು.

ಈ ವಿವೇಚನೆಯಿಂದಾಗಿ ತುಳಪುಳೆಯವರ ವ್ಯುತ್ಪತ್ತಿ (ಸಂ) ತ್ವ > ಪ್ವ > ಪ್ಪ; ಪಣ ಇದು ನಿರಾಧಾರವೆನಿಸುತ್ತದೆ. ಸರಿಯಾದ ವ್ಯುತ್ಪತ್ತಿ ಹೀಗೆ (ಕ) ತನ > ತ್ತಣ (ಅನುವಾದಿತಗೊಂಡು) = ಪ್ಪಣ

ಕನ್ನಡ 'ತಾನು' ಶಬ್ದಕ್ಕೆ ಸಂಸ್ಕೃತ ಪ್ರತಿಶಬ್ದ 'ಆತ್ಮನ್'. 'ಆತ್ಮನಸ್ತು ಕಾಮಾಯ' 'ಆತ್ಮೈವ ರಿಪುರಾತ್ಮನಃ' 'ಆತ್ಮೌಪಮ್ಯೇನ ಸರ್ವತ್ರ' ಇವೆಲ್ಲ ಇದಕ್ಕೆ ಉದಾಹರಣೆಗಳು.

ಈ 'ಆತ್ಮನ್' ಶಬ್ದ ಅಪಭ್ರಂಶದಲ್ಲಿ 'ಅಪ್ಪಾ' ಆಗಿದೆ! (ಣಾಯಕುಮಾರ ಚರಿಉ ೧.೧೦.೯; ೨.೬.೨೦) 'ಅಪ್ಪ' ಎಂದೂ ಪ್ರಯುಕ್ತವಾಗಿದೆ. (ಜಸಹರಚರಿಉ) ಅಂತ್ಯ ವ್ಯಂಜನವಾದ 'ನ್' 'ಣ' ಆಗಿ ಆತ್ಮನ್ > ಅಪ್ಪಣ ವಾಗಿರುವುದು ಸಹಜ ಸಾಧ್ಯ. ಹೀಗೆ (ಸಂ) ಆತ್ಮನ್ > (ಮರಾಠಿ) ಆಪಣ ಸಿದ್ಧವಾಯಿತು. (ಹಿಂದೀ 'ಆಪ' ದೊಡನೆ ಹೋಲಿಸಬಹುದು.)

*ಜೋ ಆಪಣಾಪೇಂ ಚಿ ಆಪಣೇಯಾಂ ಪ್ರಕಾಶಿತುಸೇ ಧನಂಜಯಾ*
*ತಾಇ ಬಹುಯೋಗೀಯೋ ಜೇಯಾ ನಾಹೀಂ ದುಜೇಂ (೧೫.೩೩೩)*

ಯಾವನು ತನ್ನಷ್ಟು ತಾನೇ ಪ್ರಕಾಶಿಸಿಕೊಳ್ಳುತ್ತಾನೋ, ಅರ್ಜುನಾ,
ಹೆಚ್ಚೇನು ಹೇಳುವುದು ಅವನಂತಹವನಿಗೆ ಇನ್ನೊಬ್ಬ (ಸಾಟಿ) ಇಲ್ಲ.

ಹೀಗೆ ಜ್ಞಾನೇಶ್ವರಿಯಲ್ಲಿಯೇ `ಆಪಣ' ರೂಪದ ಉದಾಹರಣೆ ಇವೆ.

ಕನ್ನಡದ 'ತಾನು' ಅನುವಾದಿತಗೊಂಡು 'ಅಪಣ' ಆಗಿ ಭಾವವಾಚಕ ನಾಮಗಳನ್ನು ಮರಾಠಿಯಲ್ಲಿ ಸಿದ್ಧಿಸಿತೆಂಬುದಕ್ಕೆ ಹೆಚ್ಚು ವಿವೇಚನೆ ಬೇಕಿಲ್ಲ. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳು.

ಕ್ಷೋಭಲೇಪಣೇಜ್ - ಕ್ಷುಬ್ಧತನದಿಂದ (೬.೨೧೫)

ಗಾಢೇಪಣೇಜ್ - ಗಾಢತನದಿಂದ (೫-೧೩೧) ಚೇಇಲೇಪಣ - ಎಚ್ಚರತನ (೧೫-೨೧೬) ಚೋಖಾಳಪಣ ಚೊಕ್ಕತನ (೧೩೩೬.೨) ದಳವೈಪಣಾ - ದಳವಾಯಿತನ (೧.೧೧೫)

ಹಾಗಾದರೆ 'ತನ' ಪ್ರತ್ಯಯವು ನೇರವಾಗಿ ಮರಾಠಿಗೆ ಹೋಗಲಿಲ್ಲವೇ? ಹೋಗಿದೆ. ನನ್ನ ಗಮನಕ್ಕೆ ಬಂದ ಒಂದೇ ಉದಾಹರಣೆ ಇದು.

ಕನ್ನಡದ 'ಅಡ್ಡಿತನ', 'ಅಡ್ಡತನ' ವಾಗಿ ಮರಾಠಿಯಲ್ಲಿ 'ಅಡಚಣ' ಆಗಿದೆ. ('ತ' ವು ಮರಾಠಿಯಲ್ಲಿ 'ಚ' ಆಗುವುದು ಸಹಜ. 'ತ್ಯಶ್ಚಿಷ್ಟಃ ಎಂಬುದಾಗಿ ಪ್ರಾಕೃತ ಹಾಗೂ ಅಪಭ್ರಂಶ ಭಾಷೆಯ ಬಗ್ಗೆ ಹೇಮಚಂದ್ರನ ಸೂತ್ರವೂ ಇದೆ)

ಈ 'ಅಡಚಣ' ಮರಳಿ ಕನ್ನಡಕ್ಕೆ ಬಂದು 'ಅಡಚಣೆ'ಯಾಗಿದೆ!

ಸಂಸ್ಕೃತ-ಪ್ರಾಕೃತಗಳಿಂದ ಅಪಭ್ರಂಶ ಭಾಷೆ, ಅಪಭ್ರಂಶ ಭಾಷೆಯಿಂದ (ಲೇ) ಮರಾಠಿ ಎಂಬ ಸಹಜ, ಸುಲಭ, 'ಲಲಿತವಹ' ಸಿದ್ಧಾಂತ ಮರಾಠೀ ಸಂಶೋಧಕರದು. ಅದಕ್ಕಾಗಿ ಬರುವ ಅಡಚಣೆಗಳನ್ನು ಅವರು ಸರಲವಾಗಿ ಬಗೆಹರಿಸಿದ್ದಾರೆ. ಉದಾಹರಣೆಗೆ

(ಕ) ಪುಷ್ಪದಂತ ಕವಿ - ಅಪಭ್ರಂಶ ಭಾಷೆಯ 'ದಿಗ್ಗಜ'. ಮಳಖೇಡದವ. ಮಳಖೇಡವು ಮಹಾರಾಷ್ಟ್ರದಲ್ಲೇ ಇದೆ.![3]

(ಕ) (೨) ಮಳಖೇಡವು ಮರಾಠವಾಡಾದಲ್ಲಿದೆ![4]

(ಖ) ಪುಷ್ಪದಂತನಿಗೆ ಆಸರೆ ಕೊಟ್ಟವನು ರಾಷ್ಟ್ರಕೂಟ ರಾಜನ (೨ನೆಯ ಕೃಷ್ಣನ) ಮಂತ್ರಿ ಭರತ. ರಾಷ್ಟ್ರಕೂಟ ಅರಸರು, ಅಷ್ಟೇ ಏಕೆ, ಚಾಲುಕ್ಯರು ಕೂಡ (ಐಹೊಳೆಯ ಶಾಸನದಲ್ಲಿಯ ತ್ರಯಾಣಾಂ ಮಹಾರಾಷ್ಟ್ರಕಾಣಾಂ ನೆನಪಿಸಿಕೊಳ್ಳಬೇಕು.) ಮಹಾರಾಷ್ಟ್ರದ ಅರಸರು! (ಕೃ. ಪಾಂ. ಕುಲಕರ್ಣಿ)

---

3. ಯಾದವಕಾಲೀನ ಮರಾಠೀ ಭಾಷಾ ತುಳಮುಳೆ ಪು. ೪೭

4. ಮರಾಠೀ ಭಾಷಾ ಉದ್ಗಮ ವ ವಿಕಾಸ ಕೃ. ಪಾಂ. ಕುಲಕರ್ಣಿ ಪು. ೧೯೦.

(ಗ) ಚಾವುಣ್ಡರಾಯೇಂಜ್ ಕರವಿಯಾಲೇಂಜ್ ಲೇಖ ಶ್ರವಣಬೆಳಗೊಳದಲ್ಲಿದೆ. ಹಾಗೆಂದ ಬಳಿಕ ಮಹಾರಾಷ್ಟ್ರವು ಶ್ರವಣಬೆಳಗೊಳದವರೆಗೆ ಹಬ್ಬಿತ್ತು! (ಲ. ರಾ. ಪಾಂಗಾರಕರ)

'ಅಪ್ರಭ್ರಂಶ ಭಾಷೆಯ ಐತಿಹಾಸಿಕ ವ್ಯಾಕರಣ' ಕುರಿತು ಸಂಶೋಧನೆ ನಡೆಸಿ ಪಿ.ಎಚ್‌ಡಿ. ಪಡೆದ ಜಿ.ವಿ. ತಗಾರೆಯವರು ಭಾರತೀಯ ವಿಶ್ವಕೋಶದಲ್ಲಿ ಅಪಭ್ರಂಶದ ಬಗ್ಗೆ ಟಿಪ್ಪಣಿ ಬರೆಯುವಾಗ ಈ ಗ್ರಂಥಗಳ ಅಭ್ಯಾಸ ಇನ್ನೂ ಸಾಕಷ್ಟು ಆಗಬೇಕು ಎಂದು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಅದು ಸರಿಯೇ. ಆದರೆ ಅಪಭ್ರಂಶ ಭಾಷೆಯ ಮೇಲೆ ದ್ರಾವಿಡ ಭಾಷೆ - ವ್ಯಾಕರಣಗಳ ಪ್ರಭಾವ ಕುರಿತು ಮೂಲಗಾಮಿ ಸಂಶೋಧನವೂ ಆಗಬೇಕಿದೆ. ನನ್ನ ವಿವೇಚನೆ ಶಬ್ದಸೂಚಿಗಳ ಮಟ್ಟಿಗಿದೆ ಎಂದು ಸ್ಪಷ್ಟ ಪಡಿಸಬೇಕು.

ಕೊನೆಯದಾಗಿ ಒಂದು ಕಚಗುಳಿ. 'ಮರಟ್ಟ' ಶಬ್ದವನ್ನು ಪುಷ್ಪದಂತ 'ಸೊಕ್ಕಿನವ' ಎಂಬರ್ಥದಲ್ಲಿ ಬಳಸಿದ್ದಾನೆ.!

'ಸಮರಟ್ಟ' 'ಸಗರ್ವ' ಇತ್ಯರ್ಥೇ ದೇಶೀ (ಜಸಹರಚರಿಉ ಪಿಎಲ್‌ವೈದ್ಯ ಪು. ೧೬೫) ಮರಟ್ಟ - ಗರ್ವ (ಣಾಯಕುಮಾರ ಚರಿಉ ೭,೭.೬ ಸಂ. ಹಿರಾಲಾಲ ಜೈನ)

*:*

# ೫. ಮರಾಠಿಯಲ್ಲಿಯ ಆಖ್ಯಾತಗಳು—೧

ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿಯ ಭೂತಕಾಲವಾಚಕ ಈ ರೂಪಗಳನ್ನು ಪರಾಮರ್ಶಿಸಬೇಕು.

| | | | |
|---|---|---|---|
| ಉತ್ತಮ ಪುರುಷ | | ಆದೇನೆ ಆದೇನು<br>ಇದೇನೆ, ಇದೇನು | ಆದೇವೆ, ಆದೇವು<br>ಇದೇವೆ, ಇದೇವು |
| ಮಧ್ಯಮ ಪುರುಷ | | ಆದೀ, ಇದೀ | ಆದೀರಿ, ಇದೀರಿ |
| ಪ್ರಥಮಪುರುಷ | ಪು. | ಆದಾನೆ, ಆದಾನು<br>ಇದಾನೆ, ಇದಾನು | ಆದಾರೆ, ಆದಾರು<br>ಇದಾರೆ, ಇದಾರು |
| | ಸ್ತ್ರೀ | ಆದಾಳೆ, ಆದಾಳು<br>ಇದಾಳೆ ಇದಾಳು | |
| | ನ.ಪುಂ. | ಆಯ್ತೆ, ಅಯ್ತಿ<br>ಎಯ್ತಿ | ಆದಾವು, ಇದಾವು<br>ಆದಾವೆ, ಇದಾವೆ. |

ಈ ಬಗ್ಗೆ ಪ್ರ. ಗೋ. ಕುಲಕರ್ಣಿಯವರು ಹೇಳುವದು

> "ಮಾಡಿದಾನ್ ನೋಡಿದಾನ್ ಮೊದಲಾದ ಪೂರ್ವದ ಹಳಗನ್ನಡದಲ್ಲಿ ಬಳಕೆಯಲ್ಲಿದ್ದ ಭೂತಕಾಲದ ರೂಪಗಳಂತೆ ಆಗು (ಆಗು) ಧಾತುವಿನಿಂದ ಆಯ್ದೇನ್. ಆಯ್ದಿ, ಆಯ್ದಾನ್ ಆಯ್ದಾಳ್, ಆಯ್ದಾನ್ ಮೊದಲಾದ ಭೂತಕಾಲದ ರೂಪಗಳಾಗಿವೆಯೆಂದು ಹೇಳಬಹುದು.

ಇದೇ ರೀತಿಯಾಗಿ ಬರ್ತೇನು, ಹೋಕ್ಕಿ (ಹೋಗತಿ), ಬಡೀತಾಳು ಇತ್ಯಾದಿಯಾಗಿ ವರ್ತಮಾನಕಾಲದ ರೂಪಗಳೂ ಬಳಕೆಯಲ್ಲಿವೆ.

ಇವುಗಳಿಗೆ ಪ್ರತ್ಯಯಗಳಾಗಿ ಬರುವ ಏನೆ, ಏವೆ, ಈ, ಈರಿ, ಆನೆ, ಆಳೆ, ಆರೆ, ತೇ ಆವೆ ಇವು ಮೂಲತಃ ಯಾವುದೊಂದು ಧಾತುವಿನ ರೂಪಗಳಾಗಿರಬಹುದೆಂದು ತಿಳಿಯಲು ಅವಕಾಶವಿದೆ. ಬೆಳಗಾವಿಯ ಜಿಲ್ಹೆಯ ಉತ್ತರಭಾಗ, ಬಿಜಾಪುರ, ಕಲಬುರ್ಗಿ, ರಾಯಚೂರು ಜಿಲ್ಹೆಗಳಲ್ಲಿ ಇಂದಿಗೂ ಹಾನ, ಹಾಳ, ಹಾರ ರೂಪಗಳು ಸ್ವತಂತ್ರ ಕ್ರಿಯಾಪದಗಳಂತೆ ಬಳಕೆಯಲ್ಲಿವೆ. ಇವು ಆಗು (ಆಗು) ಧಾತುವಿನ ರೂಪಗಳೆಂದು ಕಿಟೆಲ್ ಮೊದಲಾದ ವಿದ್ವಾಂಸರು ಭಾವಿಸುತ್ತಾರಷ್ಟೇ?

ಈ ಕುರಿತು ನನ್ನ ಇನ್ನೊಂದು ಔದ್ಧತ್ಯವನ್ನು ಮನ್ನಿಸಬೇಕು. ಈ ರೂಪಗಳು 'ಆಗು' ಧಾತುವಿಗಿಂತ 'ಆಹ್' ಎಂದು ಪೂರ್ವದ ಹಳಗನ್ನಡದಲ್ಲಿ ಇದ್ದಿರಬಹುದಾದ

ಧಾತುವಿನ ರೂಪಗಳಾಗಿರಬೇಕು. ಇದು ನನ್ನ ಅನಿಸಿಕೆ. ಇದರ ರೂಪಗಳು ಅಪೆನ್, ಅಪೆಂ, ಅಪೆವು, ಅಪಿ ಅಪಿರಿ, ಅಪನ್, ಅಪಳ್, ಅಪರ್, ಅಪ್‌ಕು, ಅಪ್‌ವು. ಹಳಗನ್ನಡದಲ್ಲಿ ದೊರೆಯುವ ಅಪ್ಪೆಂ ಇತ್ಯಾದಿ ರೂಪಗಳು ಅಪ್ ಧಾತುವಿಗೆ ಪ ವಿಕರಣ ಹತ್ತಿ (ನೋಳ್ಪೆಂ, ಮಾಳ್ಪೆಂ, ಕೇಳ್ಪೆಂ ಗಳಂತೆ) ಸಿದ್ಧವಾದವುಗಳು. ಇಲ್ಲಿ ಪ್ರತ್ಯಯಗಳಾಗಿ ಬಂದ ಎನ್, ಎಂ, ಈ (ತುಳುವಿನಲ್ಲಿ ನೀನು ಅರ್ಥದಲ್ಲಿ, ತೆಲುಗಿನಲ್ಲಿ ನೀವು ಅರ್ಥದಲ್ಲಿ) ಅ(ವ)ನ್ ಅ(ವ)ಳ್, ಅ(ವ)ರ (ಅ)ತು (ಅ)ವು ಇವು ಸರ್ವನಾಮಗಳೂ ಹೌದೆಂಬುದನ್ನು ಗಮನಿಸಬೇಕು. ಇನ್ನು ಇವು ಮೊದಲು ಸರ್ವನಾಮಗಳಿದ್ದು ನಂತರ ಪ್ರತ್ಯಯಗಳಾದುವೋ ಅಥವಾ ಪ್ರತ್ಯಯಗಳೇ ಸರ್ವನಾಮಗಳಾದವೋ ಎಂಬುದು ಅಭ್ಯಸಿಸಬೇಕಾದುದು. ಈಗ ಇಲ್ಲಿ ವಿಚಾರಾರ್ಹವಾಗಿರುವ ಶಬ್ದ 'ಅಪ್'. ನನ್ನ ತರ್ಕಕ್ಕೆ ಆಧಾರವಿಲ್ಲದಿಲ್ಲ.

ಜ್ಞಾನೇಶ್ವರೀ ಕಾಲದಿಂದಲೂ ಇಂದಿನವರೆಗೆ ರೂಢಿಯಲ್ಲಿದ್ದ ಒಂದು ಮರಾಠಿ ಶಬ್ದಪ್ರಯೋಗ "ಆಹೇ" ಹಾಗೂ ಅದರ ಇತರ ಸ್ವರೂಪಗಳಾದ ಆಹೇಸಿ, ಆಹಾ, ಆಹೀ ಇತ್ಯಾದಿ. ಉದಾಹರಣೆಗಳನ್ನು ಮುಂದೆ ಕೊಡುತ್ತಿದ್ದೇನೆ. ಇಲ್ಲಿ ಹೇಳಬೇಕಾದ ಮುಖ್ಯ ಅಂಶವೆಂದರೆ ಈ "ಆಹೇ" ಶಬ್ದಕ್ಕೆ ಮರಾಠಿ ವ್ಯಾಕರಣಕಾರರಿಗೆ ಮೂಲ ದೊರೆಯದಿರುವದು. ('ಆಹೇ' ದ ಅರ್ಥ ಇದ್ದೇನೆ. ಇದ್ದಾನೆ, ಇದ್ದಾಳೆ, ಇದೆ) ಜೂಲ್ ಬ್ಲೋಕ್ ಅವರು 'ಅಹ' ಕ್ರಿಯಾಪದವನ್ನು ಸಂಸ್ಕೃತ ಅಭವತಿಯಿಂದ, ಟರ್ನರ್ ಅವರು 'ಅಸ್'ದಿಂದ, ಮಾಸ್ಟರ ಅವರು ಸಂಸ್ಕೃತ 'ಅಭಾ'ದಿಂದ ವ್ಯುತ್ಪಾದಿಸಿದ್ದಾರೆ. ಅಭವತಿ ಮತ್ತು ಅಭಾ ಸಂಸ್ಕೃತ ಮೂಲಗಳು 'ಇರು' ಅರ್ಥವನ್ನು ಸೂಚಿಸುವುದಿಲ್ಲ. 'ಅಸ' ಕ್ರಿಯಾಪದ ಸಂಸ್ಕೃತದಿಂದ ನೇರವಾಗಿ ಮರಾಠಿಗೆ ಬಂದಿರುವದರಿಂದ ಹಾಗೂ ಸ > ಹ ಆಗದಿರುವದರಿಂದ ಅಸ > ಅಹ ಬೆಳವಣಿಗೆ ಸ್ವೀಕೃತವಾಗಿಲ್ಲ. ಹೀಗಾಗಿ 'ಅಹ' ಶಬ್ದಕ್ಕೆ ಸರ್ವಸಮ್ಮತ ವ್ಯುತ್ಪತ್ತಿ ದೊರೆತಿಲ್ಲ.

ಈ ದೃಷ್ಟಿಯಿಂದ ಹಳಗನ್ನಡದ 'ಅಪ' ಧಾತುವಿನ ಉತ್ತಮ ಪುರುಷದ ಏಕವಚನ ರೂಪ ಅಪೇನ್ > ಮರಾಠಿ ಆಹೇ, ಬಹುವಚನದ ಅಪೆಮ್ > ಮರಾಠಿ ಆಹೋಂ, ಪ್ರಥಮಪುರುಷ ಏಕವಚನ ಅಪನ್ > ಮರಾಠಿ ಆಹೇ ಹೀಗೆ ರೂಪಗಳನ್ನು ಸಾಧಿಸುವದು ಇಷ್ಟವಾದೀತು. ಇನ್ನು ಜ್ಞಾನೇಶ್ವರಿಯಲ್ಲಿಯ ಹಾಗೂ ಸಮಕಾಲೀನ ಮರಾಠಿ ಸಾಹಿತ್ಯದಲ್ಲಿಯ ರೂಪಗಳನ್ನು ನೋಡಬೇಕು.

*ಗರಗರಾ ಆಹಾಟ ಭವಂಡತಾಂ ತೈಸಾ ದೋನ್ಹೀದಳಾಂ (ಶಿಶುಪಾಳವಧ)*

ಎರಡೂ ಸೈನ್ಯಗಳನ್ನು ಆಟದಲ್ಲಿ ಗರಗರನೆ ತಿರುಗಿಸುತ್ತ ಆಹನು ಅವರಂತೆ,

*ತೋ ವಾಚ್‌ವಿಸಿ ಸಂಘಾತಾ ನಾಹೀ ಆನಕು (ರುಕ್ಮಿಣೀಸ್ವಯಂವರ)* (ನ + ಆಹೇ = ನಾಹೀ)

ಅವನು (ಅವನನ್ನು) ಉಳಿಸು ಕಾಯುವವರು ಮತ್ತಾರು ಅಲ್ಲ (ಅಹಲ್+ಅ)

*ಅಪರಾಧು ತೋ ಆಣಿಕು ಆಹೇ (೧.೬೬)*

ಅಪರಾಧವು ಮತ್ತೊಂದೇ ಆಹದು. (ಆದೆ)

*ಕಾಇ ಭಾನುತೇಜೇಜ್ ಖದ್ಯೋತಾ ಶೋಭಾ ಆಥಿ (೧.೬೭)*

ಸೂರ್ಯನ ಪ್ರಕಾಶದಲ್ಲಿ ಮಿಂಚು ಹುಳಕ್ಕೆ ಶೋಭೆ ಆಯ್ತೆಯೇ?

*ಮುಜ್‌ಕೇಯಾಜ್ ಆಥಿ ಭಾರತೀ (೧.೭೮)*

ಮೂಕನೂ ಸರಸ್ವತಿ ಆಗುತ್ತಾನೆ. (ಶಬ್ದಶಃ ಮೂಕನಿಂದಲೂ ಸರಸ್ವತಿ ಆಹತು)

*ಪಾಠಿಜ್ ನಿವೃತ್ತಿ ಕರ್ಣತಾಳೇಜ್ ಆಹಳಿ ತೇ ಪೂಜಾ ವಿಧುಳೇಜ್ (೧೭.೭)*

ಆಹದ (ಆದ, ಇಲ್ಲಿ 'ಪೂಜಾ' ಸ್ತ್ರೀಲಿಂಗ ಶಬ್ದವಿರುವುದರಿಂದ - ಳ್ ಶಬ್ದ ಪ್ರಯೋಗ ಲಕ್ಷಣೀಯ) ಆ ಪೂಜೆಯು, ಬಳಿಕ ನಿವೃತ್ತಿರೂಪದ ಕರ್ಣತಾಲದಿಂದ ಆರಳಲು (ಸಂಸ್ಕೃತ 'ವಿದಲನ' ಶಬ್ದದಿಂದಾಗಿ ಬಳಸಿದ ಶಬ್ದ 'ವಿದುಳೇಜ್', ವಿದಲನಕ್ಕೆ ನಾಶ ಚೂರುಚೂರು ಮಾಡುವದು ಎಂದು ಅರ್ಥವಿದ್ದಂತೆ ಆರಳುವುದು ಎಂಬರ್ಥವೂ ಇದೆ. ನೋಡಿರಿ. ಚೆನ್ನಬಸವ ಪುರಾಣ ೬.೮೧. ದಾಂಡೇಕರರು ಪೂಜೆಯನ್ನು ಕರ್ಣತಾಲಗಳಿಂದ ಕೆಡಿಸಿ, ನಾಶಪಡಿಸಿದ್ದಾರೆ. ಮಹಾಗಣಪತಿಯೇ ಅಂತಹವರನ್ನು ಕ್ಷಮಿಸಬೇಕು!)

*ತೇವಿ ಭೇದಬುದ್ಧಿಚಿಯೇ ತುಳೇಜ್ ಫಾಲೂನಿ ಸೂರ್ಯಶ್ಲೇಷಾಚೇಜ್ ಕಾಜ್‌ಟಾಳೇಜ್ ತೂಕಿಲಾಸಿ ತೇಜ್ ಆಲ್ಹೇಜ್ ಪುರೇಜ್ ಕರೀಜ್ ಜೀ (೧೬.೨೮)*

ಭೇದಬುದ್ದಿಯ ತಕ್ಕಡಿಯಲ್ಲಿ (ಪರಡಿಗಳಲ್ಲಿ), ಸೂರ್ಯನ ಉಪಮೆಗಳ ತ್ರಾಸಕಾಂಟಲಾದಲ್ಲಿ (ನೀನು) ತೂಗಿದೆ. ಆದು ಇರಲಿ (ಆಹಲ್+ಇ) ಸ್ವಾಮಿ ಸಾಕು ಮಾಡಿರಿ.

*ಮಾಝೇಜ್ ಪೈಲಪಣ ಜಾಯೇ ಭಕ್ತು ಹೇಜ್ ಆಇಲ ಠಾವಿ (೧೪.೩೯೧)*

ನನ್ನದು ಆಚೆಗೆ ಹೋಗಿದೆ. (ನಾನು ಮಾಯೆಯ ಆಚೆಗೆ ಹೋಗಿದ್ದೇನೆ) ಭಕ್ತನು ಆಹಲ್ (ಇತ್ತ) ನಿಂತಿದ್ದಾನೆ.

*ಜೇಯಾ ಜೇಜ್ ಆರ್ಹಾಜ್ ಪರೌತೇಜ್ (೧೫.೭೫)*

ಯಾವುದಕ್ಕೆ ಈಚೆಯ (ಆಹಲ್+ಅ) ಆಚೆಯ

*ಜೋ ಆಂಗಾಥಿಲಾ ಆನಂದು ಸುರತೇಜ್‌ವಿಣ (೧೫.೭೪)*

ಯಾವುದು ಕಾಮಕ್ರೀಡೆಯಿಲ್ಲದೆ ಆನಂದವನ್ನು ಅಂಗೈಸಿತೋ (ಅಂಗ+ಆಹ್‌ತೇ)

*ಮೋಕಾಟು ಕೋಣಾಜ್ ನಾಜ್‌ತುಡೇ (೧೩.೬೬೮)*

ಬಿಟ್ಟದ್ದು (ದನ ಇತ್ಯಾದಿ) ಯಾರದು ಆಗಲಿಕ್ಕಿಲ್ಲ? (ನ+ಆಹ್+ತು)

*ನಕೋ ಬಾಪಾ ಶಾಸ್ತ್ರಾ ಇಯಾ ಆತಳೋಜ್ ದೇವ್ರೋಜ್ (೧೮.೧೪೯೫)*

ಅಪ್ಪಯ್ಯಾ, ಈ ಶಾಸ್ತ್ರವನ್ನು (ಅಂತಹನಿಗೆ) ಕೊಡುವದು (ಶಾಸ್ತ್ರ ಶಬ್ದವನ್ನು ಇಲ್ಲಿ ಸ್ತ್ರೀಲಿಂಗದಲ್ಲಿ ಬಳಸಲಾಗಿದ್ದರಿಂದ ಆಹತೆ + ಳ್) ಬೇಡ.

*ಆತಾಜ್ ವಿಶ್ವಾತ್ಮಕೇಜ್ ದೇವೇಜ್ ಏಣೇಜ್ ವಾಗ್ಯಜ್ಞೇಜ್ ತೋಷಾವೇಜ್ (೧೮-೧೭೭೨)*

ಈಗ ವಿಶ್ವರೂಪನಾದ ಪರಮಾತ್ಮನು ಈ ವಾಗ್ಯಜ್ಞದಿಂದ ಸಂತುಷ್ಟನಾಗಬೇಕು.

ಕೊನೆಯ ಉದಾಹರಣೆಯಲ್ಲಿಯ ಆತಾಜ್ ಶಬ್ದದ ಬೆಳವಣಿಗೆ ಸ್ವಾರಸ್ಯಕರವಾದದ್ದು. ಮರಾಠಿಯಲ್ಲಿ 'ತಾಜ್' ಇದೊಂದು ಧಾತುಸಾಧಿತದ ಪ್ರತ್ಯಯ. ವಸ್ತುತಃ ಇದು ಅಖಂಡ ಪ್ರತ್ಯಯವಲ್ಲ. 'ತ+ಆಜ್' ಹೀಗೆ ಇದರ ಭಾಗಗಳು. 'ತ'ದ ಬಗ್ಗೆ ನಾವು ಕೃದಂತ ಶೀರ್ಷಿಕೆಯಡಿ ಸಾಕಷ್ಟು ಚರ್ಚಿಸಿದ್ದೇವೆ. ಇನ್ನು 'ಆಜ್' ದ ಬಗ್ಗೆ ಮರಾಠಿ ಪಂಡಿತರ ಅಭಿಪ್ರಾಯಗಳಿವು:

**ತುಳಪುಳೆ :** ಸಂಸ್ಕೃತದ ಆತ್ಮನೇಪದಿ ಧಾತುಗಳ ವರ್ತಮಾನಕಾಲವಾಚಕ ಧಾತುಸಾಧಿತಗಳಿಗಾಗಿ (ಪರಸ್ಮೈಪದಗಳಿಗೆ 'ಅತ್' ದಂತೆ) ಇರುವ ಪ್ರತ್ಯಯ 'ಮಾನ' > ಪ್ರಾಕೃತ 'ಮಾಣ' > ಮರಾಠಿ 'ಆಜ್'. ಪ್ರಾಕೃತದಲ್ಲೇ 'ಮಾಣ' > ಆಣ' ಪ್ರತ್ಯಯ ಸೂಚಿಸಿದ್ದಾರೆ. ಆದರೆ ಅವರು 'ಆಣ'ದ ಪ್ರಯೋಗ ತೋರಿಸಿಯೇ ಇಲ್ಲ. ಭರತ ಮುನಿಯ ನಾಟ್ಯಶಾಸ್ತ್ರದ ಛಂದೋವಿಭಾಗದಲ್ಲಿ ಕೊಟ್ಟ ಈ ಲಕ್ಷಣಪದ್ಯ ನೋಡಬೇಕು. (೩೨.೨೨೦)

*ಮೇಘವಿದಾಣಂ ಅವಧೂಣಯ ಮಾಣೋ ಕಮ್ಪಯಮಾಣೋ ಕುಮುದು ವಣಾಣಿ <ಮೇಘವಿತಾನಮವಧೂನಯಮಾನಃ ಕಮ್ಪಯಮಾನಃ ಕುಮುದವನಾನಿ* ಹೇಮಚಂದ್ರನೂ *ಕ್ರಿಯತಿಪತ್ತೇಃ ಸ್ಥಾನೇ ನ್ತಮಾಣೌ ಆದೇಶಾ ಭವತಃ // ಹೋನ್ತೊ// ಹೋಮಾಣೋ//* (೮.೩.೧೮೦) ಎಂದೇ ಹೇಳಿದ್ದಾನೆ. ಹೀಗಾಗಿ 'ಆಣ'ದ ವ್ಯುತ್ಪತ್ತಿ ಸಿದ್ಧವಾಗಿಲ್ಲ.

**ಜೂಲ್‌ಬ್ಲೋಕ್ :** ಇದು ವರ್ತಮಾನ ಕಾಲವಾಚಕ ಧಾತುಸಾಧಿತದ ತೃತೀಯಾ ವಿಭಕ್ತಿಯನ್ನು ಸಾಧಿಸಿರಬಹುದು. ನನಗೆ ಎನಿಸುವ ಮಟ್ಟಿಗೆ ಬ್ಲೋಕ್-ಮಾಸ್ತರ್‌ರು ವ್ಯುತ್ಪತ್ತಿಯ ತೀರ ಹತ್ತಿರ ಬಂದಿದ್ದಾರೆ. ಆದರೆ ವಿಭಕ್ತಿ ಪ್ರತ್ಯಯಗಳ ಮೇಲಾದ ಹಳಗನ್ನಡದ ಪರಿಣಾಮ ತಿಳಿಯದ್ದರಿಂದ ಅವರಿಗೆ ವಿಭಕ್ತಿಗಳಲ್ಲಿ ಒಂದಿಷ್ಟು ಗೊಂದಲವಾಗಿದೆ. ಈ 'ಆಜ್' ಪ್ರತ್ಯಯ ಮೂಲತಃ ಕನ್ನಡದ ಷಷ್ಠಿಯ 'ಅ'. ಚತುರ್ಥಿಗಾಗಿಯೂ ಮರಾಠಿಯಲ್ಲಿ ಇತರೆಡೆ ಬಳಸಲಾದಂತೆ (ಉದಾಹರಣೆ : *ಬಾಶಿಂಗೇಜ್ ನೋವರೇಯಾ ಬಾಂಧಿತಾತಿ (ರುಕ್ಮಿಣೀಗೀತ)* ಮದುಮಗನಿಗೆ ಬಾಸಿಂಗಳನ್ನು ಕಟ್ಟುತ್ತಾರೆ) ವರ್ತಮಾನಕಾಲವಾಚಕ ಧಾತುಸಾಧಿತಗಳಿಗೆ ಹತ್ತಿ ಜಾತಾಜ್ (ಹೋಗುತ್ತಿರಲಾಗಿ) ಯೇತಾಜ್ (ಬರುತ್ತಿರಲಾಗಿ) ಸಾಂಗತಾಜ್ (ಹೇಳುತ್ತಿರಲಾಗಿ) ಎಂಬ ರೂಪಗಳನ್ನು ಸಾಧಿಸುತ್ತವೆ. ಉದಾಹರಣೆಗಳು.

*ದೋನ್ಹಿ ದಳೇಜ್ ಭಿಡತಾಜ್ ವೀರಾಂಚೇಜ್ ಪೀರ ಝಾಲೇ (ಶಿಶುಪಾಳವಧ)*

ಎರಡೂ ಸೈನ್ಯಗಳು ಎರಿಹೋಗುತ್ತಿರಲಾಗಿ ವೀರರ ಹಿಟ್ಟಾಯಿತು.

*ರವಿಚಂದ್ರಾ ರಾಹುಮೇಳು ಹೋಜ್‌ತಾ ಪಾಹಾವಾ ಪುಣ್ಯಕಾಳು (೧೭.೨೭೧)*

ರವಿ, ಚಂದ್ರ, ರಾಹುಗಳ ಮೇಳ ಆಗುತ್ತಿರಲಾಗಿ ಪುಣ್ಯಕಾಲ ನೋಡಬೇಕು.

*ಜೇಜ್ ದೋಹಿಜ್ ಮಾಜಿ ಕಿಜೇಜ್ ಆಸೇ ತೇಜ್‌ದೋನ್ಹಿಜ್*
*ಸಾಂಡಿತಾಜ್ ಚಿ ದೀಸೇ (೧೭-೩೧೩)*

ಎರಡರಲ್ಲಿ ಯಾವುದು ಮೂರನೆಯದಿದೆಯೋ ಅದು ಎರಡನ್ನೂ ತ್ಯಜಿಸುತ್ತಿರಲಾಗಿ ಕಾಣುತ್ತದೆ.

ಆತಾಜ್ ಶಬ್ದ, ಇದೇ ರೀತಿಯಾಗಿ ಹಳಗನ್ನಡದ 'ಅಹ್' ಧಾತುವಿಗೆ 'ತ + ಆಜ್' ಪ್ರತ್ಯಯ ಹತ್ತಿ 'ಇರುತ್ತಿರಲಾಗಿ' ಎಂಬ ಅರ್ಥ ಹೊಂದಿ, ಅದು ಬೆಳೆದು 'ಈಗ' ಎಂಬರ್ಥವನ್ನು ಪಡೆದಿದೆ. ನಾಗವರ್ಮನ ಕಾವ್ಯಾವಲೋಕನದಲ್ಲಿಯ (೧.೫.೧೭) ಭವತ್+ಕಾಲ ಶಬ್ದದೊಡನೆ ಇದನ್ನು ಹೋಲಿಸಬಹುದಾಗಿದೆ.

'ಆತಾಜ್'ದ ಬಗ್ಗೆ ನನಗೆ ಹೊಳೆದ ಇನ್ನೊಂದು ಪರ್ಯಾಯವನ್ನು ಇಲ್ಲಿ ಹೇಳಲೇಬೇಕು.

'ಪ್ರಾದುರ್ಭಾವೇ' ಅರ್ಥದಲ್ಲಿ ಕೇಶಿರಾಜನು 'ಆಗು' ಧಾತು ಹೇಳಿದ್ದಾನಷ್ಟೇ? 'ಹೋಗು' ಅರ್ಥದಲ್ಲಿ ಹಳಗನ್ನಡದಲ್ಲಿ 'ಪೋ' 'ಪೋಗು' ಹೀಗೆ ಎರಡೂ ಧಾತುಗಳಿದ್ದು ಅವುಗಳಲ್ಲಿ 'ಪೋ' ಇದೇ ಮೂಲ. ವರ್ತಮಾನಕಾಲದ ಆಖ್ಯಾತ ಪ್ರತ್ಯಯಗಳು ಹತ್ತುವಾಗ ಈ, ಕಾ, ತೊ, ಬಾ, ಬೇ ಮೊದಲಾದ ಏಕಾಕ್ಷರ ಧಾತುಗಳಿಗೆ ಯ ಕಾರವು ವಿಕರಣವಾಗುವಂತೆ (ಈಯು, ಕಾಯು, ತೊಯ್ಯು, ಬಾಯು, ಬೇಯು) ಪೋ ಧಾತುವಿಗೂ ಯ ಕಾರವು ವಿಕರಣವಾಗುವುದು ಸರ್ವ ವಿದಿತ. ಅದೇ ರೀತಿಯಾಗಿ ಇಲ್ಲಿ ಭೂತಕಾಲವಾಚಕ ರೂಪಗಳಾದ ವಿಕರಣದೊಂದಿಗೆ ಸಿದ್ಧವಾಗುತ್ತವೆ.

ಈ ಧಾತುಗಳಂತೆಯೇ 'ಆಗು' (ಪ್ರಾದುರ್ಭಾವೇ ಅರ್ಥದಲ್ಲಿ) ಶಬ್ದಕ್ಕೆ ಮೂಲಧಾತು 'ಆ' ಎಂದಿರಬೇಕು. ಇದರಿಂದಲೇ 'ಆಯಿತು' 'ಆದ' 'ಆದುದು' ಮೊದಲಾಗಿ ರೂಪಗಳು ಸಿದ್ಧವಾದವು (ಇಲ್ಲಿ 'ಗು' 'ಕು' ಅಪ್ರಸ್ತುತ). ಮರಾಠಿಯಲ್ಲಿ 'ಆತಾಜ' ರೂಪಕ್ಕೆ 'ಆ' ಮೂಲಧಾತುವಾಗಿರಲೂ ಸಾಧ್ಯ.

❋❖❋

# ೬. ಮರಾಠಿಯಲ್ಲಿಯ ಆಖ್ಯಾತಗಳು

### ಶಕ್ಯಾರ್ಥ ಇಷ್ಟಾರ್ಥ ಪ್ರಯೋಗಗಳು :

*ಬೆರಸಿರೆ ಕನ್ನಡದೊಳ್ ಬನ್ಧುರಮಾಗದು ಕಾವ್ಯರಚನೆ (ಕವಿರಾಜಮಾರ್ಗ ೧.೫೩) ಇದಂ ಕಡೆಗಣಿಸಲಾಗ (ಪಂಪಭಾರತ ೭.೬೭) ಪೊನ್ನ ಆನ್ದಳಮ್ ಎನ್ದು ಇನ್ತು ಸನ್ಧಿಯುಂ ಕೆಡಿಸಲ್ ಆಗದು (ಶಬ್ದಮಣಿದರ್ಪಣ ೭೫)*

ಇಂತಹ ಸಂದರ್ಭಗಳಲ್ಲಿ ಆಗ, ಆಗದು ಪ್ರಯೋಗ ಇಷ್ಟಾರ್ಥವನ್ನು ಸೂಚಿಸುತ್ತದೆ. ಶಕ್ಯವಿಲ್ಲವೆಂದಲ್ಲ. ಆದರೆ ಇಲ್ಲಿ ಅವು ಇಷ್ಟವಲ್ಲ. ಹಳಗನ್ನಡದ ಆಜ್ ಧಾತುವಿನ ಪ್ರಯೋಗಗಳು ಮಾತ್ರ ಶಕ್ಯಾರ್ಥವನ್ನು ಸಮಾಸಾದಿಸುತ್ತವೆ.

*ಗೆಲಲಾಜದೊಡಣ್ಮ ಸಾವುದಾಳ್ಗನಿತೆ ಗುಣಂ*
*ಗೆಲಲುಂ ಸಾಯಲುಮಾಜದೆ ತೊಲಗಿದೊಡೆ (ಗದಾಯುದ್ಧ)*
*ದಾರಿವನೆತ್ತಲಾರ್ಪನೆನಲೇಜೆಸುವುದ್ಧತವೃತ್ತಿ ನಾಡೆಯುಂ (ಪಂಪರಾಮಾಯಣ)*
*ವಿಳಾಸಿನಿಯರಂ ಕಳುಪೆ ಬಂದ ಸಖಿಯರವರೀರ್ವರಿರವ ಕಂಡು*
*ಕರೆಯಲಾಜದೆ ಪೋಗಲುಂ ಮೀಜಲುಂ ಅಜಿಯದೆ (ಮಲುಹಣ ರಗಳೆ-ಹರಿಹರ)*

ಆಗು, ಆಜ್ ಗಳಲ್ಲಿಯ ಸೂಕ್ಷ್ಮಭೇದವನ್ನು ನಂತರ ಕಡೆಗಣಿಸಲಾಯಿತೆಂಬುದೇನೋ ನಿಜವೇ. ಜ್ಞಾನೇಶ್ವರೀಯಲ್ಲಿ ಬರುವ ಇಷ್ಟಾರ್ಥಗಳನ್ನು ಶಕ್ಯಾರ್ಥವೆಂದು ತುಳಪುಳೆಯವರು ಗಣಿಸಿದ್ದರಿಂದ ಈ ವಿವೇಚನೆ ಆವಶ್ಯಕವೆನಿಸಿತು.

*ಜಳತಾಜ್ ಘರಿಜ್ ನ ರಿಗವೇ ವ್ಯಾಘ್ರಾವಿವರಾ ನ ವಚವೇ ವಸ್ತೀಜೇವಿ (೧೩.೫೧೩).*
ಸುಡುವ ಮನೆಯಲ್ಲಿ ಹೋಗಲಾಗದು. ವಸತಿಗಾಗಿ ಹುಲಿಯ ಗುಹೆಯಲ್ಲಿ ಹೋಗಲಾಗದು, ಹಾಗೆ.

*ನ ಕರವೇ ಉಸಿಸೀ ಅಜಗರಾಚೀ (೧೩.೫೧೪)*
ಹೆಬ್ಬಾವನ್ನು ತಲೆದಿಂಬು ಮಾಡಲಾಗದು.

ರಿಗವೇ, ವಚವೇ, ಕರವೇ ಗಳಲ್ಲಿಯ -ವ ಪ್ರತ್ಯಯವನ್ನು ಕೆಲಪಂಡಿತರು ಪ್ರಯೋಜಕದ ಪ್ರತ್ಯಯ-ಅವಕ್ಕೆ ಹೋಲಿಸಿದ್ದರೆ ಬ್ಲೋಕ್ ಅವರು ಸಂಸ್ಕೃತ ತವ್ಯ-ದಿಂದ - ಅವವನ್ನು ಉತ್ಪಾದಿಸಿದ್ದಾರೆ. ಮಾಸ್ತರ್, ತುಳಪುಳೆ ಇದರ ಮೂಲ ಅಜ್ಞಾತ-ವೆಂದು ಭಾವಿಸುತ್ತಾರೆ.[1] ಇದರಲ್ಲಿ ಅವರು ಗೊಂದಲಕ್ಕೀಡಾಗಬೇಕಾಗಿರಲಿಲ್ಲ. ರಿಗವೇ, ವಚವೇ, ಕರವೇ ಇವು ರಿಗಾವೇ, ವಚಾವೇ, ಕರಾವೇ ಈ ಕ್ರಿಯಾಪದಗಳ ಸಂಕ್ಷಿಪ್ತ ರೂಪಗಳೆನ್ನಬಹುದು. ಇನ್ನು ಈ ಕ್ರಿಯಾಪದಗಳ ಮೂಲ ಸ್ವರೂಪ ಬೇರೆಡೆ ಹೇಳಿದಂತೆ ಹಳಗನ್ನಡವನ್ನು ಆಧರಿಸಿದ್ದು.

---

1. ಯಾದವಕಾಲೀನ ಮರಾಠೀ ಭಾಷಾ ಪು. ૩೧೨.

ರಿಗಾವೇ > ರಿಗೋ ಯೇ > ಹೋಗಬಹುದು (ಯೇ-ಬಪ್ಪುದು, ಬಹುದು)

ನ ರಿಗಾವೇ > ರಿಗೋ ನ ಯೇ > ಹೋಗಬಾರದು. ಇದೇ ರೀತಿಯಾಗಿ ನ ವಚಾವೇ ಹೋಗಬಾರದು, ನ ಕರಾವೇ ಮಾಡಬಾರದು.

ನನ್ನ ಈ ಅಭಿಪ್ರಾಯಕ್ಕೆ ಪುಷ್ಟೀಯಾಗುವಂತೆ ತುಳಪುಳೆಯವರೇ ಇನ್ನೂ ಒಂದು ಉದಾಹರಣೆ ಕೊಟ್ಟಿದ್ದಾರೆ.[2]

*ಜೈಸೇ ಶಿಷ್ಯಾತೇಜ್ ಗುರು ಸರ್ವಥಾ ನೈಯೇ ಆಪ್ಪೇರುಜ್ (೨.೬೦)*

ಗುರುವು ಶಿಷ್ಯನನ್ನು ಎಂದಿಗೂ ಕಡೆಗಣಿಸಬಾರದು ಹಾಗೆ–

ಯೇ ಶಬ್ದದ ವಿವೇಚನೆಯಡಿ ಇನ್ನೂ ಸಾಕಷ್ಟು ಉದಾಹರಣೆಗಳಿವೆ.

## ತುಮಂತ

ಕರ್ತುಂ, ಗಂತುಂ, ವಕ್ತುಂ (ಮಾಡಲು, ಹೋಗಲು, ಹೇಳಲು) ಇಂತಹ ರೂಪಗಳಿಗೆ ಸಂಸ್ಕೃತ ವ್ಯಾಕರಣದಲ್ಲಿ ತುಮಂತವೆನ್ನುತ್ತಾರೆ. ಹಳಗನ್ನಡದಲ್ಲಿ ಅಲ್ ಪ್ರತ್ಯಯದೊಂದಿಗೆ ಈ ರೂಪಗಳು ಸಿದ್ಧವಾದವು. ಎನಲ್ ತಕ್ಕಂ, ಆನಲ್ ಕೊಣ್ಡಂ, ಉಣಲ್ ಬನ್ದಂ, ಕೊಲಲ್ ಬಗೆದಂ ಎಂಬುದಾಗಿ ಕೇಶಿರಾಜನು ಉದಾಹರಣೆ ಕೊಡುತ್ತಾನೆ (ಸೂತ್ರ ೮೦). ವಾಕ್ಯದಲ್ಲಿಯ ಕ್ರಿಯೆಗೆ ಅಲ್ ಪ್ರತ್ಯಯದೊಡನೆ ಬಂದ ಪದಗಳು ಉದ್ದೇಶ, ಕಾರಣಗಳನ್ನು ಒದಗಿಸಿದವು.

*ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ (೧.೪೫ ಗೀತೆ)*

ಅಯ್ಯೋ, ಎಂತಹ ಪಾಪವನ್ನು ನಾವು ಮಾಡಲು ತೊಡಗಿದ್ದೇವೆ!

ಈ ಉದಾಹರಣೆಯಲ್ಲಿಯೂ ಕರ್ತುಂ ಪದದ ಪ್ರಯೋಜನವನ್ನು ಈಕ್ಷಿಸಬಹುದು.

ಆದರೆ ಹಳಗನ್ನಡದಲ್ಲಿಯೇ ಅಲ್ ಪ್ರತ್ಯಯ ಉದ್ದಿಷ್ಟವನ್ನಲ್ಲದೆ ಅಪೂರ್ಣವಾದ, ಮುಖ್ಯವಲ್ಲದ ಕ್ರಿಯೆಯನ್ನು ಸಾಧಿಸತೊಡಗಿತು. ಈ ಉದಾಹರಣೆ ಗಮನಿಸಬೇಕು.

*ಪಾದಪದ್ಮಂಗಳನ್ ಒತ್ತುತ್ತಿರಲ್ ಶೂದ್ರಕ ನೃಪತಿ ಸುಖಾಸೀನನ್ ಆಗಿರ್ದನ್ ಆಗಳ್* (ಶಬ್ದಮಣಿದರ್ಪಣ ಸೂತ್ರ ೨೬೦)

ಇಲ್ಲಿ ಒತ್ತುತ್ತಿರಲ್ ಉದ್ದಿಷ್ಟವನ್ನಲ್ಲ, ಅಪೂರ್ಣ ಕ್ರಿಯೆಯನ್ನು ಸೂಚಿಸಿದ್ದು ಸ್ಪಷ್ಟವಾಗಿದೆ.

ಅಂತೆಯೇ, ಈ ಭೇದವನ್ನು ಸ್ಪಷ್ಟಪಡಿಸುವದಕ್ಕಾಗಿಯೇ, ಉದ್ದಿಷ್ಟ ಸೂಚಿಸುವ ರೂಪಗಳಿಗೆ ಅಲ್ ಅಲ್ಲದೆ ಕೆ ಈ ಚತುರ್ಥಿ ವಿಭಕ್ತಿಯನ್ನು ಸೇರಿಸಲಾಯಿತು. ಉದಾಹರಣೆಗಳು:

*ನುಡಿಯಲ್ಕೆ ಬಂದಂ, ಪೇಳಲ್ಕೆ ಕೇಳ್ದಂ, ಚಿತ್ರಿಸಲ್ಕೆ ವೇಟ್ ಸುವರ್ಣೋತ್ಕರಮಂ*

---

2. ಯಾದವಕಾಲೀನ ಮರಾಠೀ ಭಾಷಾ ಪು. ೩೧೩.

*(ಶಬ್ದಮಣಿದರ್ಪಣ ಸೂತ್ರ ೨೪೭) ತೆಂಕನಾಡ ಮಜೆಯಲ್ಲಿ ಎಷ್ಟುಂ ಮನಂ ಬರ್ದುಮೆ? (ಪಂಪಭಾರತ ೪.೩೧)*

ಮರಾಠಿಯಲ್ಲಿ ಚತುರ್ಥಿಯ ಪ್ರತ್ಯಯ-ಅವ್ಯಯಗಳೇ ತುಮಂತಭಾವವನ್ನು ಸಾಧಿಸಿದ್ದನ್ನು ನಾವು ನೋಡುತ್ತೇವೆ.

*ಡಾವಲಾವೇಯಾ ಮಾತಂಗಸದನು ಜೈಸೇ (೧೮.೫೪೫)*
ಹೊಲಗೇರಿಯನ್ನು ತಪ್ಪಿಸಲಿಕ್ಕೆ ಎಂಬಂತೆ

(ಇಲ್ಲಿ ಕನ್ನಡದ ಷಷ್ಠಿಯ ವಿಭಕ್ತಿಪ್ರತ್ಯಯ ಆ ಚತುರ್ಥೀಭಾವ ಸಾಧಿಸುವದಕ್ಕಾಗಿ ಬಳಸಲಾಗಿದೆಯೆಂಬುದನ್ನು ಮನಗಾಣಬಹುದು.)

*ಉಭೇಜ್ ಸೇತ ಚಾರಿಲೇಜ್ ಪಿಕಾವೇಯಾ ನುರೇ (೧೮.೨೪೭)*
ಬೆಳೆದ ಹೊಲವನ್ನು ಮೇಯ್ದಿತು. ಒಕ್ಕಲಿಕ್ಕೆ ಉಳಿಯಲಿಲ್ಲ.
*ಜೇಜ್ ಜಾಣತಲೇಯಾ ಸಾರಿಜ್ ಸಂಸಾರಾ ಕಾಢೂನಿ ಠಾಜ್‌ರೀ (೧೩.೮೬೩)*
ಯಾವುದನ್ನು ಅರಿಯುವುದಕ್ಕೆ ಸಂಸಾರದ ಬೇಲಿ (ಕಂಟೆ)ಯನ್ನು ತೆಗೆದು–
*ಮಗ ತೇಯಾ ಮಾನಣೇಯಾಜ್ ಸಾರಿಜ್ ದೇಹಬಂದಿಸಾಳೀ ಕಿರೀಟೀ (೧೮-೩೮೯)*
(ದೇಹವೇ ಆತ್ಮವೆಂದು) ಬಳಿಕ ಮಾನಿಸಲಿಕ್ಕೆ, ರಾಜನೇ, ದೇಹದ ಕಾರಾಗೃಹದಲ್ಲಿ –

ಮರಾಠಿ ಸಂಶೋಧಕರು ಇವು ತುಮಂತಗಳೇ ಅಲ್ಲವೇನೋ ಎನ್ನುವಷ್ಟು ದುರ್ಲಕ್ಷಿಸಿದ್ದಾರೆ. ಅದು ಅವರಿಗೆ ಅನಾನುಕೂಲವೂ ಹೌದು. ಕಾರಣವಿಷ್ಟೇ. ತುಮಂತಭಾವವನ್ನು ಸಂಸ್ಕೃತ ಪ್ರಾಕೃತಗಳಲ್ಲಿ ಚತುರ್ಥಿ ವಿಭಕ್ತಿಯ ಪ್ರತ್ಯಯದಿಂದ ಸಾಧಿಸಲಾಗುವುದಿಲ್ಲ. ಅವರಿಗೆ ಬರವಣವಾದ ದ್ರಾವಿಡ ಭಾಷೆಗಳಲ್ಲಿ ಅದು ಇದೆ. ಅಥವಾ ಅವರ ಅಜ್ಞಾನವೂ ಇರಲು ಸಾಧ್ಯ.

ಇನ್ನು ಅವರು ಭಾವಿಸುವ ತುಮಂತದ ವ್ಯುತ್ಪತ್ತಿ ಹೀಗೆ. ಸಂಸ್ಕೃತ ತುಮ್ > ಪ್ರಾಕೃತ ಇಉಮ್ > ಮರಾಠಿ ಉಂ > ಉಜ್ ಪ್ರಾಕೃತದಲ್ಲಿ ದಾಉಜ್, ಘೇತಉಜ್ ಎಂದು ಪ್ರಯೋಗಗಳಿವೆ. ಮರಾಠಿಯಲ್ಲಿ ಉಜ್, ಓಜ್ ಹಾಗೂ ಔಜ್ ಪ್ರತ್ಯಯಗಳಿಂದ (ಮಾತ್ರ) ತುಮಂತಗಳು ಸಿದ್ಧವಾಗುತ್ತವೆಯೆಂದು ಅವರ ಅಭಿಮತ. ತುಳುಪುಳೆಯವರು ಕೊಡುವ ಉದಾಹರಣೆಗಳಿವು. (ಪು. ೩೦೦)

*ವಿನವುಜ್ ಪಾಹೇ (೧.೬೬)* ಬಿನ್ನವಿಸತೊಡಗಿದ್ದೇನೆ.
*ಫೋಟಉಜ್ ಭರುಜ್ ಪಾಹೇ ವಿಕಸರಾ (೧೫-೭೦)* ಒಮ್ಮೆಯೆ ಗುಟುಕರಿಸಲಿಕ್ಕಿಸಿದನು
*ಸರಿತಾ ಜೈಸೀ ಚಹೋಜ್ ಲಾಗೇ (೧೨.೩೬)* ನದಿ ಏರತೊಡಗುವ ಹಾಗೆ.
*ಜೇಜ್ ಜೀವಾತೇಜ್ ರಂಜೌಜ್ ಜಾಣೇಜ್ (೧೪-೧೫೫)* ಯಾವುದು ಜೀವವನ್ನು ರಂಜಿಸಬಲ್ಲುದೋ
*ಗುಜತಸ್ಥೀ ತುರುಘಾಜ್ ಠಾಇಜ್ ಲವೌಜ್ ನ್ಯೆವಿ (೯.೪೧)*
ಗುಟ್ಟನ್ನಾದರೂ ನಿನ್ನ ಬಳಿ ಬಚ್ಚಿಡಬಾರದು.

ಉಜ್, ಓಜ್, ಔಜ್ ಪ್ರತ್ಯಯಗಳುಳ್ಳ ಧಾತುಸಾಧಿತಗಳನ್ನು ನಾನು ಕನ್ನಡದ ಕೃನ್ನಾಮಗಳನ್ನಾಗಿ ಅನುವಾದಿಸಿದ್ದೇನೆ. ಇವುಗಳ ಮುಂದೆ ಕನ್ನಡದ 'ಅಲ್ಕೆ' ಪ್ರತ್ಯಯವನ್ನು ತಗುಲಿಸಿದರೆ ಅರ್ಥಭೇದವೆನಿಸಲಿಕ್ಕಿಲ್ಲ, ರೂಪಭೇದವಾಗುತ್ತದೆ. ತುಳಪುಳೆಯವರಿಗೆ ಈ ರೂಪಭೇದವೇ ಅಭಿಪ್ರೇತವಾಗಿದೆ. ಈ ಬಗ್ಗೆ ವಿವೇಚಿಸುವಾಗ ಕೆಲವು ವಿಷಯಗಳನ್ನು ಸ್ಪಷ್ಟಪಡಿಸುವುದು ಇಲ್ಲಿ ಅಗತ್ಯ.

'ಹಾಡಬಾರದು' (ಗಾವೂ ನಯೇ) ಈ ಕ್ರಿಯಾಪದ ಇಷ್ಟಾರ್ಥ ಸೂಚಿಸುತ್ತದೆ. 'ಹಾಡಲಿಕ್ಕೆ ಬಾರದು' (ಗಾವಯಾಸ ನ ಯೇ) ಈ ಕ್ರಿಯಾಪದ ಶಕ್ಯಾರ್ಥ ಸೂಚಿಸುತ್ತದೆ. ಮೊದಲನೆಯ ಕ್ರಿಯಾಪದದಲ್ಲಿಯದು ಧಾತು ಸಾಧಿತ. ಎರಡನೆಯದು ತುಮಂತ. ಕನ್ನಡದಲ್ಲಿಯ ಗೊಂದಲವನ್ನೇ ಸ್ಪಷ್ಟ ಪಡಿಸುವದಾದರೆ 'ಹಾಡಲು ಬಾರದು' ಇದು ಇಷ್ಟಾರ್ಥ ಸೂಚಿಸುವ ಧಾತು ಸಾಧಿತ ಪ್ರಯೋಗವೋ, ಶಕ್ಯಾರ್ಥ ಸೂಚಿಸುವ ತುಮಂತದ ಬಳಕೆಯೊ? ಆಡು ಮಾತಿನಲ್ಲಿ ಈ ಪ್ರಯೊಗವಿದೆಯೆಂದು ಹೇಳಬೇಕಾಗಿದೆ. ಹಳಗನ್ನಡ ಗ್ರಂಥಕಾರರು ಮಾತ್ರ ಇದನ್ನರಿತೇ ಪೇಳಲ್ಕೇ ಕೇಳ್ದಂ ಎಂಬುದಾಗಿ ಸ್ಪಷ್ಟವಾಗಿ ಪ್ರಯೋಗಿಸಬೇಕಾಯಿತು. ಮರಾಠಿ ಸಂಶೋಧಕರಿಗೆ (ಬಹುಶಃ ಕನ್ನಡದಿಂದಲೇ ಮರಾಠಿಗೆ ಹೋದ) ಈ ಗೊಂದಲ ಅರ್ಥವಾಗಿಲ್ಲವೆನ್ನಬೇಕಾಗುತ್ತದೆ. ಇಲ್ಲದಿದ್ದರೆ ಸಾಠೀಜ್, ಲಾಗೀಜ್, ಆ ಪ್ರತ್ಯಯ ಹತ್ತಿ ಸಿದ್ಧವಾದ ತುಮಂತಗಳನ್ನು ಕಡೆಗಣಿಸಿ ಊಜ್, ಔಜ್ ಪ್ರತ್ಯಯ ತಗುಲಿದ ಧಾತುಸಾಧಿತಗಳಿಗೇ ತುಮಂತವೆನ್ನುತ್ತಿದ್ದರೇ?

ಹಾಗಿದ್ದರೆ ಈ ಊಜ್, ಓಜ್, ಔಜ್ ಪ್ರತ್ಯಯಗಳು - ಇವು ತುಮಂತ ಸಾಧಕವಾಗಿರದಿದ್ದರೆ - ಎಲ್ಲಿಂದ ಬಂದವು? ಇವುಗಳ ಪ್ರಯೋಜನವೇನು?

ಕನ್ನಡದಲ್ಲಿ ವರ್ತಮಾನಕಾಲ ಹಾಗೂ ಭವಿಷ್ಯಕಾಲವಾಚಕ ಕೃದಂತಗಳನ್ನು ಸಾಧಿಸಲು 'ಉವ' ಪ್ರತ್ಯಯವಿದೆ. (ಇದು ಆಡು ಮಾತಿನಲ್ಲಿ 'ಓ' ಕೂಡ ಆಗಿದೆ.) ಇದೇ ಮರಾಠಿಯಲ್ಲಿ ಊಜ್, ಓಜ್, ಔಜ್ ಆಗಿಹೋಗಿದೆ.

'ಉವ'ಕ್ಕೆ 'ಅದು' ಅಂತ್ಯ ಪ್ರತ್ಯಯವಾದಾಗ ಹೇಳುವದು ಮಾಡುವದು ಇತ್ಯಾದಿಯಾಗಿ ಕೃನ್ನಾಮಗಳಾಗುತ್ತವೆ. (Infinitive) 'ಅ' ಪ್ರತ್ಯಯ ಹತ್ತಿಯೂ ಕೃನ್ನಾಮಗಳಾಗುತ್ತವೆ. ಬಳಕೆಯಲ್ಲಿ ಅ ಪ್ರತ್ಯಯಾಂತ ಕೃನ್ನಾಮಗಳೇ ಇರುವುದರಿಂದ ಉಡ, ತರ, ಪ್ರಯೋಗಿಸೆ (ಶಬ್ದಮಣಿದರ್ಪಣ ಸೂತ್ರ ೨೪೬, ೩೨೫) ರೂಪಗಳೇ ಮಾನ್ಯವೆನಿಸಿವೆ.

## ಲ್ಯಬಂತ

ನೋಡಿ, ಮಾಡಿ, ಕರೆದು, ಬಿಟ್ಟು ಇಂತಹ ಭೂತಕಾಲವಾಚಕ ಅವ್ಯಯಗಳಿಗೆ ಸಂಸ್ಕೃತ ವ್ಯಾಕರಣದಲ್ಲಿ ಲ್ಯಬಂತವೆಂದು ಹೆಸರು. ಸಂಸ್ಕೃತದಲ್ಲಿ ಇದು 'ತ್ವಾ' ಪ್ರತ್ಯಯದಿಂದ ಸಿದ್ಧವಾಗುತ್ತದೆ. ದೃಶ್‌ದಿಂದ ದೃಷ್ಟ್ವಾ, ಕೃದಿಂದ ಕೃತ್ವಾ, ವಸ್‌ದಿಂದ ಉಷಿತ್ವಾ, ಪಠ್‌ದಿಂದ ಪಠಿತ್ವಾ ಇತ್ಯಾದಿಯಾಗಿ.

ಮರಾಠಿಯಲ್ಲಿ 'ಊನಿ' 'ಔನಿ' ಪ್ರತ್ಯಯದಿಂದ ಲ್ಯಬಂತ ಸಾಧಿಸಲಾಗುತ್ತಿದೆ. ಮರಾಠಿಯು ಆರ್ಯಭಾಷೆ. ಆಂದಬಳಿಕ ಸಂಸ್ಕೃತ ಪ್ರಾಕೃತಗಳಿಂದಲೇ ಎಲ್ಲವೂ ಬರಬೇಕಲ್ಲ? ಇನ್ನು 'ಊನಿ' ಗೂ 'ತ್ವಾ'ಕ್ಕೂ ಸಂಬಂಧ ಕಲ್ಪಿಸುವುದು ಹೇಗೆ? ಮರಾಠಿ ಸಂಶೋಧಕರು ಸಾಧಿಸಿದ್ದು ಹೀಗೆ. ಸಂಸ್ಕೃತ ತ್ವಾನಮ್ > ಪ್ರಾಕೃತ ತ್ತಾಣಂ ತ್ತೂಣಂ ಊಣಂ = ಅಪಭ್ರಂಶ ಏಪಿಣು, ಏಪಿಣು > ಮರಾಠಿ ಊನಿ, ಔನಿ.

ಅವರಲ್ಲಿ ಜೂಲ್ ಬ್ಲೋಕ್ ಅವರು ಮಾತ್ರ ಇದು ಪಂಚಮಿ ವಿಭಕ್ತಿಯ ಪ್ರತ್ಯಯವೆಂದು ಅಭಿಪ್ರಾಯ ಪಟ್ಟಿದ್ದಾರೆ.[3] ಈ ಊನಿ ಔನಿಯ ವ್ಯುತ್ಪತ್ತಿಯನ್ನು ನಾವು ಬೇರೆಡೆ ಚರ್ಚಿಸಿದ್ದೇನೆ. ಹಳಗನ್ನಡದಲ್ಲಿಯ ಇಂ ಪ್ರತ್ಯಯಾಂತ ಈ ಲ್ಯಬಂತಗಳನ್ನು ಪರಿಶೀಲಿಸಬೇಕು.

*ಕಾನೀನಂ ದ್ರೋಣನದೀಸೂನುಗಳಟಿದಿಂ ಬಟಿಕ್ಕೆ (ಗದಾಯುದ್ಧ)*
*ಕಟಿದಿಂ ಬಳಿಯಂ (ಪಂಪರಾಮಾಯಣ ೧.೬೭ವ) ನೆಗಟ್ದಿಂ ಬಿಟಿಕ್ಕೆ (ಚೆನ್ನಬಸವ ಪುರಾಣ ೯.೧೩೦) ನೋಡಿಂ ಬಟಿಯಂ (ಪಂಪ ರಾಮಾಯಣ ೧೫.೧೦) ತನು ಸೋಕಿಂ ಮೆಯ್ಗೆ ರೋಮಾಂಚಮನೊದವಿಸಿ (ಪಂಪ ರಾಮಾಯಣ)*

ಇವುಗಳಲ್ಲಿಯ ಪಂಚಮಿ ಭಾವವು ಸ್ಪಷ್ಟವಾಗಬೇಕು. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳು.

*ತೋ ಅಣಕಾಜ್ ಹೀಜ್ ಪಾಜಳಲಾ ಜಾಳೌನಿ ಘಾಲೀ (೧.೨೫೭)*
ಅದು (ಆ ಅಗ್ನಿಯು) ಮತ್ತಷ್ಟು ಪ್ರಜ್ವಲಿಸಿದರೆ (ಮನೆಯನ್ನು) ಸುಟ್ಟು ಹಾಕುತ್ತದೆ.
*ಯಾವರಿ ವೈಕುಂಠ ನಾಥು ದೇಖೌನಿ ಸಖೇದು ಪಾರ್ಥು (೧.೨೬೨)*
ಇದರ ಮೇಲೆ ('ಬಳಿಕ' ಅರ್ಥದಲ್ಲಿಯ ಕನ್ನಡ ಪ್ರಯೋಗ ಅನುವಾದಿತವಾದುದನ್ನು ಗಮನಿಸಬೇಕು.) ವೈಕುಂಠನಾಥನು ದುಃಖಿತನಾದ ಪಾರ್ಥನನ್ನು ನೋಡಿ,
*ಮಾಝಾಜ್ ಚಿತ್ತಿಜ್ ಜೇಜ್ ಹೋಜ್‌ತೇಜ್ ಮಿಜ್ ವಿಚಾರೂನಿ ಬೋಲಿಲಾ ಯೇಥೇಜ್ (೨.೫೨)*
ನನ್ನ ಮನಸ್ಸಿನಲ್ಲಿ ಏನು ಇತ್ತೋ (ಅದನ್ನು) ನಾನು ಯೋಚಿಸಿ ಇಲ್ಲಿ ಹೇಳಿದೆ.
*ಅಪತ್ಯಾತೇಜ್ ಮಾಯೇ ಓಸಂಡೂನಿ ಜರಿ ಜಾಯೇ (೨.೬೧)*
ತಾಯಿ ಕೂಸನ್ನು ತ್ಯಜಿಸಿ ಹೋದರೆ –

ಹಳಗನ್ನಡದಲ್ಲಿ ಇಂ ಪ್ರತ್ಯಯಾಂತ ಲ್ಯಬಂತಗಳು ಮಾತ್ರ ಇವೆಯೇ? ಉಂ ಪ್ರತ್ಯಯಾಂತಗಳೂ ಇಲ್ಲವೇ? ಉದಾಹರಣೆಗಳನ್ನು ನೋಡಬೇಕು.

---

3. La Formation de la Langue Marathe

*ಉಲ್ಲಸಿತ ಧೂಮಕೇತು ಶತಮಾಗಿಯುಂ ಪ್ರಶಾಂತೋಪದ್ರವಮುಂ ಪರಿಪೂರ್ಣದ್ವಿಜ ರಾಜಸನಾಥಮಾಗಿಯುಂ (ಕರ್ಣಾಟಕ ಕಾದಂಬರಿ ೧.೧೮೭ವ)*
*ಕಲಿಕಾಲದ ದೆಸೆಯುಂ ಮೊದಲಾಗಿ ಪೂರ್ದಲಜೆಯದು ಮಜೆದುಂ (ಆದೇ ೧.೧೮೮)*
*ಮಹಾಪ್ರಾಸಾದ ಸದನಂಗಳೊಳ್ ಸುಟೆದುಂ (ಆದೇ ೨. ೩೦ ವ)*
*ತಮ್ಮ ಮಗನಾದಯ್ಯಲುಂ ಮನಃಕ್ಷತಮನಾಜೆಸಲುಂ ಎಂದು ಆಜಸುತ್ತುಂ ಬಂದು (ಗದಾಯುದ್ಧ)*

ಇನಾಗಮದೊಡನೆ ಪಂಚಮಿಾ ಭಾವದ ಪ್ರತ್ಯಯವನ್ನು ಪಡೆದು ಲ್ಯಬಂತಗಳಾದಂತೆ ಕನ್ನಡದ 'ಉಂ' ಪ್ರತ್ಯಯ 'ಉನು' ಆಗಿ ನೇರ ಲ್ಯಬಂತಗಳಾದದ್ದನ್ನು ನಾವು ಕಾಣಬಹುದು. ಉದಾಹರಣೆಗಳು.

*ಫೇತಲಾ ಆಸೇ ಭ್ರಾಂತಿ ಕವಳುನು (೨.೭೫)*
ಭ್ರಾಂತಿಯನ್ನು ಅಪ್ಪಿಕೊಂಡಿದ್ದನು.
*ಉಡೇ ತೇಜ್ ಫಳಕಟ ಜಾಹೋಜ್ ಆಲೇಜ್ (೨.೧೩೦)*
ಹಾರಿದ್ದು ಸಿಪ್ಪೆ (ಯೆಂದು) ತಿಳಿದು ಬಂತು.
*ಮಗ ನಾಥಿಲೇಜ್ ಶೋಚೂಜ್ ಬೈಸಿಜೇ (೨.೧೯೬)*
ಬಳಿಕ ಇಲ್ಲದ್ದನ್ನು ಶೋಚಿಸಿ ಕೂಡ್ರುವುದು.
*ದಳವಾಡೇಜ್ ಝಾಡೂನು ಚೋಖಟ (೧೮-೩೭)*
ಕಲ್ಲುಗಳನ್ನು ಚೊಕ್ಕಟವಾಗಿ ಜಾಡಿಸಿ (ಹಸನಮಾಡಿ)



*ಜೈಸೇಜ್ ಸಂಸಾರಾಮಾಜೀ ಅವತರೌನು ಉದ್ಧರಿಲೇ ಭಕ್ತಜನು*
*ತೈಸೇಜ್ ತೇಆ ಸರ್ಪಮುಖಾಮಾಂಜೀ ರಿಗೌನು ಆಮಲೀ ರಕ್ಷಿತಾ ಜಾಲಾ (ವತ್ಸಹರಣ)*
ಜಗತ್ತಿನಲ್ಲಿ ಅವತರಿಸಿ ಭಕ್ತಜನರನ್ನು ಉದ್ಧರಿಸಿದನು. ಆದರಂತೆ ಆ ಸರ್ಪದ (ಅಧಾಸುರ) ಬಾಯಿಯಲ್ಲಿ ಹೋಗಿ ನಮ್ಮನ್ನು ರಕ್ಷಿಸುವವನಾದನು.

ಆದರೆ ಕನ್ನಡದಲ್ಲಿ ಹೆಚ್ಚಾಗಿ ಬರುವ ಇ ಕಾರಾಂತ ಉ ಕಾರಾಂತ ಲ್ಯಬಂತಗಳು ಮರಾಠಿಯಲ್ಲಿ ನೇರ ಕಾಣಸಿಗುವುದಿಲ್ಲ. ಹಳಗನ್ನಡದಲ್ಲಿಯ ಉದಾಹರಣೆಗಳು.

*ಸಂಜಯಂ ಕುರುರಾಜನಂ ನೋಡಿ (ಗದಾಯುದ್ಧ)*
*ಆಗಳಾ ಸ್ಯಂದನಮಂ ಸುತ್ತಿಮುತ್ತಿ (ಪಂಪರಾಮಾಯಣ)*
*ನಿಚ್ಚಂ ಸಹಸ್ರ ಹೊನ್ನಂ ಲೆಕ್ಕವಂ ಮಾಡಿ (ಮಲಹಣನ ರಗಳೆ, ಹರಿಹರ)*
*ಹೆತ್ತ ತಾಯ ಮಾಜೆ ತೊತ್ತು ಕೊಂಬರೇ (ಹರಿಶ್ಚಂದ್ರ ಕಾವ್ಯಸಂಗ್ರಹ)*
*ಬಸವಟೆದು ಕಣ್ಣನೀರಿಂದೆಸೆಗೆಟ್ಟೆಲೆ ಮಗನೆ (ಕರ್ಣಾಟಕ ಕಾದಂಬರಿ ೧.೧೪೯)*
*ಮೃಣಾಳ ನಾಳಂಗಳಂ ಮೆಲ್ದು (ಆದೇ ೧.೧೪೪ವ)*
*ಒಳಗಣಂ ಸಿಡಿಲ್ದು ದೈವವಶದಿಂ ಗಾಳಿಯೊಳ್ ತೆರಳ್ದು ತಜಗೆಲೆಯ ರಾಶಿಯೊಳ್ ಪೋಗಿ ಬಿರ್ದು (ಆದೇ ೧.೧೫೩ವ)*

ತೃತೀಯಾ ಪಂಚಮೀ ವಿಭಕ್ತಿ ಕಾರಕ ಇಂ ದಿಂದ ಇ, ಧಾತುಸಾಧಿತ ಕಾರಕ

ಊಂ ದಿಂದ ಊ ಆಯಿತೆಂದು ಕಟೇಲ್ ಅಭಿಪ್ರಾಯ ಪಟ್ಟಿದ್ದಾರೆ. ಹೀಗೆ ಲ್ಯಬಂತದ ಪ್ರಯೋಗಗಳನ್ನು ಕನ್ನಡ ಮರಾಠಿಗಳಲ್ಲಿ ನೋಡಿದ ಬಳಿಕ ಪ್ರಾಕೃತದಲ್ಲಿ ಒಂದಿಷ್ಟು ಕಣ್ಣಾಡಿಸುವುದು ಸ್ವಾರಸ್ಯಕರವೆನಿಸಬಹುದು. ಭರತಮುನಿಯು ತನ್ನ ನಾಟ್ಯಶಾಸ್ತ್ರದ ಛಂದೋವಿಭಾಗದಲ್ಲಿ (೩೨ ನೆಯ ಅಧ್ಯಾಯದಲ್ಲಿ) ಕೊಡುವ ಪ್ರಾಕೃತ ಕಾವ್ಯದ ಲಕ್ಷಣ ಪದ್ಯಗಳಲ್ಲಿಯ ಉದಾಹರಣೆಗಳಿವು.

*ಸಂಸ್ಕೃತ : ಜಲದನಾದಂ ಶ್ರುತ್ವಾ ಕುಞ್ಜರಃ*
*ಪ್ರಾಕೃತ : ಜಲದಣಾದಯಂ ಸುಣಿಯ ಕುಞ್ಜರೋ (೩೨-೯೧)*
*ಕನ್ನಡ : ಆನೆಯು ಮೋಡದ ಸದ್ದನ್ನು ಕೇಳಿ*
*ಸಂಸ್ಕೃತ : ದೃಷ್ಟ್ವಾ ಪಾದಪಂ ಹಂಸೀ ಪ್ರರುದಿತಾ*
*ಪ್ರಾಕೃತ : ದಟ್ಟೂಣ ಪಾದಪಂ ಹಂಸೀ ಪರುಣೆಆ (೩೨.೯೩)*
*ಕನ್ನಡ : ಮರವನ್ನು ನೋಡಿ ಹೆಣ್ಣು ಹಂಸವು ರೋದಿಸಿತು.*

ಇಲ್ಲಿ ಶ್ರುತ್ವಾ > ಸುಣಿಯ; ದೃಷ್ಟ್ವಾ > ದಟ್ಟೂಣ; ಪ್ರಾಕೃತದಲ್ಲಿಯ ಊಣ ಪ್ರತ್ಯಯವು ದ್ರಾವಿಡಭಾಷೆಗಳಿಂದ ಹೋದುದೇ ಎಂಬುದು ಮಾತ್ರ ಚಿಂತನೀಯವಾಗಿದೆ.

## ಕೃದಂತಗಳು

ಸಂಸ್ಕೃತದಲ್ಲಿ ವರ್ತಮಾನಕಾಲವಾಚಕ ಧಾತುಸಾಧಿತಗಳು 'ಅತ್' ಪ್ರತ್ಯಯದ ರೂಪಗಳೊಡನೆ ಸಿದ್ಧವಾಗುತ್ತವೆ. ಭಗವದ್ಗೀತೆಯಲ್ಲಿಯ ಈ ಉದಾಹರಣೆ ನೋಡಬೇಕು.

*ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ (೫.೮)*
ನೋಡುವವನು, ಕೇಳುವವನು, ಸ್ಪರ್ಶಿಸುವವನು, ಮೂಸುವವನು, ತಿನ್ನುವವನು, ಹೋಗುವವನು, ಮಲಗುವವನು, ಉಸಿರಾಡುವವನು.

ಈ 'ಅತ್' ಪ್ರತ್ಯಯದಿಂದ ಮರಾಠಿಯಲ್ಲಿ 'ತ' ಪ್ರತ್ಯಯ ಬಂದಿತೆಂದು ಮರಾಠಿ ಸಂಶೋಧಕರು ಭಾವಿಸುತ್ತಾರೆ. ಅವರು ತೋರುವ ಬೆಳವಣಿಗೆ ಹೀಗೆ. ಸಂಸ್ಕೃತ ಅತ್ > ಪ್ರಾಕೃತ ನ್ತ > ಅಪಭ್ರಂಶ ನ್ತ > ಮರಾಠಿ ತ ಇದಕ್ಕೆ ಆಧಾರವಾಗಿ ಅವರು ಹೇಮಚಂದ್ರನ ಸೂತ್ರವನ್ನು (ಪ್ರಾಕೃತ ವ್ಯಾಕರಣ ೮.೩.೧೮೦) ಹೇಳುತ್ತಾರೆ.

*ಕ್ರಿಯತಿ ಪತ್ತೇಃ ಸ್ಥಾನೇ ನ್ತಮಾಣೌ ಆದೇಶೌ ಭವತಃ॥ ಹೋನ್ತೋ॥ ಹೋಮಾಣೋ ॥ ಅಭವಿಷ್ಯದಿತ್ಯರ್ಥಃ*

ಅಂದರೆ ಭೂ (ಭವ) > ಹೋ ಧಾತುವಿನ ರೂಪಗಳು ಹೋನ್ತೋ ಹೋಮಾಣೋ (ಪರಸ್ಮೈಪದದಲ್ಲಿ ಹೋನ್ತೋ ಆತ್ಮನೇಪದದಲ್ಲಿ ಹೋಮಾಣೋ)

ಮರಾಠಿಯಲ್ಲಿ ಪರಸ್ಮೈ-ಆತ್ಮನೇ ಪದಗಳು ಇಲ್ಲ. ಎರಡನೆಯದಾಗಿ ಆದೇಶವಾಗುವ ಪ್ರತ್ಯಯಗಳು ನ್ತ ಹಾಗೂ ಮಾಣ. ಬರಿ ನ್ತ ಒಂದೇ ಅಲ್ಲ. ನ್ತ

ಕೂಡ ನ್ತೋ ಆಗಿಯೇ ಬರುತ್ತದೆ. ಹೀಗಿರುವಾಗ ಪ್ರಾಕೃತದಿಂದಲೇ ಮರಾಠಿಗೆ ತ ಬಂದಿತೇ, ಎಂಬುದು ಪುನರ್‌ಪರಿಶೀಲನೆಗೆ ತಕ್ಕುದು. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳನ್ನು ನೋಡಬೇಕು.

*ಅಶೇಷೀಜ್ ಹೀಜ್ ವ್ಯಾಪಾರೀಜ್ ವರ್ತ್ತತು ಅಸೇ (೫-೪೦)*

ಎಲ್ಲ ವ್ಯವಹಾರಗಳಲ್ಲಿಯೂ ಇರುತ್ತ ಅನೆ.

*ಸ್ವಾನುಭಾವಸುಖ ಚ ಕವತಿಕೇಜ್ ದಾಖವಿತಾಜ್ ಜಾಇಜೇ (೬.೪೯)*

ಸ್ವಾನುಭಾವದ ಸುಖವನ್ನೇ ಕೌತುಕದಿಂದ ತೋರಿಸುತ್ತ ಹೋಗುವದು.

*ಪ್ರಜಾ ಆಪುಲೇನಿ ಅಭಿಲಾಖೇಜ್ ಕರಿತ ಚ ಅಸೇ (೮-೧೮೩)*

ಪ್ರಜೆಯು ತನ್ನ ಅಭಿಲಾಷೆಯಿಂದ (ವ್ಯವಹಾರವನ್ನು) ಮಾಡುತ್ತಲೇ ಇರುತ್ತದೆ.

*ಅಧಿಕಾಧಿಕ ಉತಾನ್ಹೀ ವಾಢವೀತು ಅಸೇ (೧೩.೧೧೪೨)*

ತೀವ್ರ ಇಚ್ಛೆಯನ್ನು ಹೆಚ್ಚು ಹೆಚ್ಚು ಬೆಳೆಸುತ್ತ ಇರುತ್ತಾನೆ.

*ಮಾರ್ಗಾಮಾರ್ಗ ಏಕೀವಡೇ ಕರೀತು ಚಾಲೇ (೧೮.೬೨೨)*

ಹಾದಿ ಅಡವಿಗಳನ್ನು ಒಂದಾಗಿ ಮಾಡುತ್ತ ನಡೆಯುತ್ತಾನೆ.

ಮರಾಠಿ ಸಂಶೋಧಕರು ಇಂತಹ ಉದಾಹರಣೆಗಳನ್ನು ಕೊಟ್ಟು ಈ ವಿಷಯ ಇಲ್ಲಿಗೆ ಮುಗಿಸಿದ್ದಾರೆ. ಅಂದರೆ ಸಂಸ್ಕೃತದ ಅತ್ ದಿಂದ ಮರಾಠಿ ತ ವರ್ತಮಾನಕಾಲವಾಚಕ ಧಾತುಸಾಧಿತಗಳನ್ನು ಸಿದ್ಧಿಸಿತು. ಅವುಗಳಿಗೆ ಇವು ಉದಾಹರಣೆಗಳು.[4] ಆಯಿತು.

ಆದರೆ ಆಗುವದಿಲ್ಲ. ಜ್ಞಾನೇಶ್ವರಿಯಲ್ಲಿಯವೇ ಮುಂದಿನ ಉದಾಹರಣೆಯನ್ನು ನೋಡಬಹುದು.

*ತೋ ಗಾಜತ ಅಸೇ ಅದ್ಭುತು ತಿಜ್‌ಹಿಜ್ ಲೋಕಾಜ್‌ಅಜ್‌ತು ಪ್ರತಿಧ್ವನಿ ನ ಸಮಾತು ಉಪಜತಸೇ (೧.೧೨೬)*

ಅದು ( ಆ ಸಿಂಹನಾದವು) ಅದ್ಭುತವಾಗಿ ಗದ್ದರಿಸಿ ಇತು. ಮೂರೂ ಲೋಕಗಳಲ್ಲಿ ಹಿಡಿಸಲಾರದ ಪ್ರತಿಧ್ವನಿ ಹುಟ್ಟಿ ಇತು.

*ಕ್ಷೋಭವೇ ಚರಾಚರ ಕಾಜ್‌ಪತ ಅಸೇ (೧.೧೨೯)*

ಕ್ಷುಬ್ಧವಾದ ಚರಾಚರವು ನಡುಗಿ ಇತು.

*ಜೇ ಸಾರಥ್ಯ ಪಾರ್ಥಾಚೇಜ್ ಕರಿತು ಅಸೇ (೧.೧೪೨)*

ಯಾವ (ಭಕ್ತರ ಮೇಲಿನ ಪ್ರೇಮವು) ಅರ್ಜುನನ ಸಾರಥ್ಯವನ್ನು ಮಾಡಿಇತು.

*ಜೇ ಕೌರವದಳೇಜ್ ಗಾಜತ ಹೋತೇ (೧.೧೪೫)*

ಯಾವುದು ಕೌರವ ಸೈನ್ಯದಲ್ಲಿ ಅಬ್ಬರಿಸುತ್ತ ಇತ್ತೋ

4. ಯಾದವಕಾಲೀನ ಮರಾಠೀ ಪು. ೨೯೦.

*ತೈಸಾ ಹೃದಯಾಪ್‌ತೆಜ್ ಭೇದಿತು ವೀರಾಂಚೇಯಾ (೧.೧೬೨)*
ಹಾಗೆ ವೀರರ ಹೃದಯಗಳನ್ನು ಭೇದಿಸಿ (ಇತು)

ಇವೆಲ್ಲ ಉದಾಹರಣೆಗಳಲ್ಲಿ ತ, ತು, ಪ್ರತ್ಯಯಾಂತ ಧಾತುಸಾಧಿತ ಪದಗಳು ಭೂತಕಾಲವನ್ನು ನಿರ್ದೇಶಿಸುತ್ತವೆ. ಅಂದರೆ ಇಂತಹ ಧಾತುಸಾಧಿತಗಳು ವರ್ತಮಾನ ಕಾಲವನ್ನಷ್ಟೇ ಅಲ್ಲ, ಭೂತಕಾಲವನ್ನು (ಸಂಸ್ಕೃತ ಕನ್ನಡಗಳಲ್ಲಿಯಂತೆ) ಬಿಂಬಿಸುತ್ತವೆ. ಇಂದಿನ ಮರಾಠಿಯಲ್ಲಿ ಸುಲಭವಾಗಿ ಹೀಗೆ ಹೇಳಬಹುದು.

*ತೋ ಘರೀಜ್ ಜಾತ ಆಹೇ*-ಅವನು ಮನೆಗೆ ಹೋಗುತ್ತ ಇದ್ದಾನೆ.
*ತೋ ಘರೀಜ್ ಜಾತ ಹೋತಾ* - ಅವನು ಮನೆಗೆ ಹೋಗುತ್ತ ಇದ್ದನು.
*ತೋ ಘರೀಜ್ ಜಾತ ಅಸೇಲ* - ಅವನು ಮನೆಗೆ ಹೋಗುತ್ತ ಇರಬಹುದು[5]

ಇವು ಅಪೂರ್ಣ ವರ್ತಮಾನಕಾಲ, ಅಪೂರ್ಣ ಭೂತಕಾಲ ಹಾಗೂ ಅಪೂರ್ಣ ಭವಿಷ್ಯಕಾಲದ ಪ್ರಯೋಗಗಳು.

ಇದರಿಂದಾಗಿ ಸಂಸ್ಕೃತ ಅತ್ = ಮರಾಠಿ ತ ಹೀಗೆ ವರ್ತಮಾನಕಾಲವಾಚಕ ಧಾತುಸಾಧಿತದ ಬೆಳವಣಿಗೆಯು ಸರಿಯಲ್ಲವೆಂದಾಯಿತು. ಹಾಗಿದ್ದರೆ 'ತ' 'ತು' ಪ್ರತ್ಯಯಗಳ ಮೂಲವೆಲ್ಲಿರಬಹುದು?

ಹಳಗನ್ನಡದ ವ್ಯಾಕರಣದಲ್ಲಿ 'ಉತು' ಪ್ರತ್ಯಯದಿಂದ ವರ್ತಮಾನಕಾಲ ವಾಚಕ ಕೃದಂತಗಳು ಸಿದ್ಧವಾದವೆಂದು ಭಾವಿಸಲಾಗಿದೆ ನಗುತಂ ಬನ್ದಂ, ಪುಗುತುಂ ಇರ್ದಂ, ಕರೆಯುತುಂ ಪೋದಂ ಎಂಬುದಾಗಿ ಕೇಶಿರಾಜನೂ ಉದಾಹರಣೆ ಕೊಡುತ್ತಾನೆ (ಸೂತ್ರ ೨೮೦). ಇನ್ನೂ ಕೆಲವು ಉದಾಹರಣೆಗಳು.

*ಎಂದು ಪಟಿಯಿಸುತ್ತುಂ ಬರ್ಪ ಗುರುಜನದ ಸರಮಂ (ಗದಾಯುದ್ಧ)*
*ನಿಜ ಜನನೀ ಜನಕರ್ ಅಜಿಸುತ್ತುಂ ಬಂದರ್ ಎಂಬುದುಂ (ಅದೇ)*
*ಹಾ ಕರ್ಣ ಎನುತುಮಂತೆ ಮೂರ್ಛೆಗೆ ಸಂದಂ (ಅದೇ)*
*ಜಾನಕಿಗೆ ಸುಟ್ಟಿ ತೋಱುತ್ತಮಱಿಪಿದಳ್ (ಪಂಪರಾಮಾಯಣ)*
*ಸಿಡಿಲಂತೆ ಮೊಳಗಿ ನೆಲನಂ ಪೊಡೆಯುತ್ತುಂ ಪತ್ತುದೆಸೆಗಮವ್ವಳಿಸುತ್ತುಂ (ಅದೇ)*
*ಮೊದಲ್ ನಡುಗುತ್ತುಂ ಪ್ರಣಯ ಪ್ರಕೋಪ ಭರದಿಂದೆಯ್ತುಂದು (ಕಾದಂಬರಿ ೨.೩೦)*
*ಬಾಷ್ಪಾಂಬು ಸಂತತಿಯನೆ ಸುರಿಯುತ್ತಮಿರ್ಪುದುಂ (ಅದೇ ೨.೪೪ವ)*

ಕನ್ನಡ ವೈಯಾಕರಣಿಗಳು ಹೀಗೆ ಉತುಂ ದಿಂದ ಸಿದ್ಧವಾದ ಧಾತು ಸಾಧಿತಗಳಿಗೆ ವರ್ತಮಾನ ನ್ಯೂನರೂಪನೆಂದು ಹೆಸರಿಸಿದ್ದು ಸಹಾಯಕ ಕ್ರಿಯಾಪದಗಳ ನೆರವಿನಿಂದ ಮೂರೂ ಕಾಲಗಳನ್ನು ಸಾಧಿಸುತ್ತವೆಂದು ಹೇಳಿದ್ದಾರೆ. ಇವೇ ಸಂಯುಕ್ತ ಕ್ರಿಯಾ ರೂಪಗಳು[7]. ಉಚ್ಚಾರ ಸೌಲಭ್ಯಕ್ಕಾಗಿ 'ಉತುಂ'

---

5. ಆಕರ : ಸುಗಮ ಮರಾಠೀ ವ್ಯಾಕರಣ ಲೇಖನ - ಮೋ.ರಾ.ವಾಳಂಬೇ ಪು. ೬೬
6. A Grammar of Kannada Language - F Kittel P. 109

ಪ್ರತ್ಯಯಾಂತ ಶಬ್ದಗಳು, 'ಉತು' ಅಂತಗಳಾಗಿ ಆಡುಮಾತಿನಲ್ಲಿ 'ಅತು' 'ಅತ' ಅಂತಗಳಾಗಿವೆ. ಮರಾಠಿಗೆ ಹೋದ 'ಅತ' ಸಂಯುಕ್ತ ಕ್ರಿಯಾ ರೂಪಗಳಿಗಾಗಿ ಮೂರೂ ಕಾಲಗಳಲ್ಲಿ ಸಂಚರಿಸಿದೆಯೆಂದು ಬೇರೆ ಒಡೆದು ಹೇಳಬೇಕಾಗಿಲ್ಲ.

# ೭. ಮರಾಠಿಯಲ್ಲಿಯ ಆಖ್ಯಾತಗಳು-3

ಲ ವಿಕರಣದೊಂದಿಗೆ ಅಥವಾ ಇಲ್ಲದೆಯೆ ಏ, ಏಜ್, ಈ, ಈಜ್, ಆ ಪ್ರತ್ಯಯಗಳು ಹತ್ತಿ ಜ್ಞಾನೇಶ್ವರಕಾಲೀನ ಮರಾಠಿಯಲ್ಲಿ ವರ್ತಮಾನ, ಭೂತ ಹಾಗೂ ಭವಿಷ್ಯತ್‌ಕಾಲವಾಚಕ ಕ್ರಿಯಾಪದಗಳು ಸಿದ್ಧವಾಗಿವೆ. ಇವೆಲ್ಲ ಪ್ರತ್ಯಯಗಳ ರೂಪಗಳು ಮೂರೂ ಕಾಲಗಳಲ್ಲಿ ಬಳಸಲಾಗಿವೆ. ಜ್ಞಾನೇಶ್ವರಪೂರ್ವಕಾಲೀನ ಲೇಖಗಳಲ್ಲೂ ಇವು ಕಾಣಸಿಗುತ್ತವೆ. ಉದಾಹರಣೆಗಾಗಿ ಏ ಮತ್ತು ಏಜ್ ಪ್ರತ್ಯಯಗಳು.

*ತಾನ್ಹೇಯಾಂಚೇ ಲಾಗೇ ಝಟೇಜ್ ತರಿ ತೇಣೆಜ್ ಅಧಿಕೇಜ್‌ಚಿ ಪಾನ್ಹಾ ಫುಟೇ ರೋಸೆಜ್ ಪ್ರೇಮ ದುಣಾವಟೇಜ್ (೯.೧೮)*

ಮಗುವಿನ ಒದ್ದಾಟದಿಂದಾಗಿ ಮೊಲೆಯಲ್ಲಿ ಹೆಚ್ಚಾಗಿಯೇ ಹಾಲು ಬರುತ್ತವೆ. ಕೋಪದಿಂದ ಪ್ರೇಮವು ದ್ವಿಗುಣಿತಗೊಳ್ಳುತ್ತದೆ.

*ತೇಜ್ ಚಾಂದಿಣೇಜ್‌ಯಾಜ್‌ತೇಜ್ ಹ್ಮಣೇ ಪಿವಳೇಜ್(೯.೧೪೦)*

(ಕಾಮಣಿಯಾದವನು) ಆ ಬೆಳದಿಂಗಳಿಗೆ ಹಳದಿ ಎನ್ನುತ್ತಾನೆ.

*ಏಥ ಸನಕಾದಿಕ ವೇಡೇಪಿಜ್‌ಸೇ ಜಾಲೇ (೯.೩೭೭)*

ಇಲ್ಲಿ ಸನಕ ಮೊದಲಾದವರು ಹುಚ್ಚರಾದರು.

*ಶರೀರ ಜಾಜ್‌ತಕ್ಷಣೇಜ್ ದೇವಚಿ ಜಾಲೇ (೯.೩೫೧)*

ಶರೀರ ಕಳೆದ ಕ್ಷಣದಲ್ಲಿ ದೇವನೇ ಆಗುವನು.

*ಸಹಸ್ರಕರಾಚಿಯೇ ದಿಠೀ ಪುಢಾಜ್ ಚಂದ್ರು ಹೀ ಲೋಪೇ (೯.೩೭೫)*

ಸೂರ್ಯನ ದೃಷ್ಟಿಯೆದುರು ಚಂದ್ರನೂ ಲೋಪಗೊಳ್ಳುತ್ತಾನೆ.

*ಭಗವದ್ಗೀತಾ ವೋವಿಜ್ ಗಾಪಿ ಐಸೇಜ್ ಕೇಲೇಜ್ (೧೦-೧೯)*

ಭಗವದ್ಗೀತೆಯನ್ನು ಓವಿಯಾಗಿ ಹಾಡುವಂತೆ ಮಾಡಿದನು.

*ಪೂರ್ವಕಾಂಡ ವಾಖಾಣಿಲೇ (೧೦.೨೨)*

ಪೂರ್ವ ಕಾಂಡವನ್ನು ಒಕ್ಕಣಿಸಿದೆನು.

*ಏಕಿಜ್ ಆಕಾಶೀಜ್ ಸೂರ್ಯಾತೇಜ್ ಧರಿಲೇಜ್ ಏಕಿಜ್ ಚೂಳೇಜ್ ಚಿ ಸಮುದ್ರಾ ಶೋಖಿಲೇಜ್ (೧೦.೩೬)*

ಒಬ್ಬನು ಆಕಾಶದಲ್ಲಿ ಸೂರ್ಯನನ್ನು ಹಿಡಿದನು. ಒಬ್ಬನು ಗುಟುಕಿನಲ್ಲಿಯೇ ಸಮುದ್ರವನ್ನು ಹೀರಿದನು.

*ಜೇ ಜೇ ಭೇಟೇ ಭೂತ ತೇಜ್ ತೇಜ್ ಮಾನಿಜೇ ಭಗವಂತ (೧೮.೧೦೬)*

ಯಾವಾವ ಪ್ರಾಣಿ ಕಾಣುವುದೋ ಅದನ್ನು ಭಗವಂತನೆಂದು ಮನ್ನಿಸಬೇಕು.

ಈ, ಈಜ್ ಪ್ರತ್ಯಯಗಳು

*ಕಾಜ್ ಅಶೌಚೀ ಮಂತ್ರೇಜ್ ಬೀಜೇಜ್ ಕಥಿಲೀಜ್ (೯.೧೭೬)*

ಅಶೌಚವಿದ್ದವನಿಗೆ ಬೀಜಮಂತ್ರ ಹೇಳಿದಂತೆ

*ಮನೀಜ್ ಜೇ ವಾಹಿಲೀ ಆಸ್ಥಾ (೯.೩೫೦)*

ಮನಸ್ಸಿನಲ್ಲಿ ಯಾವ ಆಸ್ಥೆ ವಹಿಸುತ್ತಾನೋ

*ಕ್ಷೀರಸಾಗರಾಚೀ ಚಿ ವಾಟೀ ಕರೂನಿ ಠೇವಿಲೀ (೧೦.೧೭)*

ಕ್ಷೀರಸಾಗರದ್ದೇ ಬಟ್ಟಲು ಮಾಡಿ ಇಟ್ಟನು.

*ತೈಸೀ ಭಕ್ತಾಜ್ ಗೀತೇಸೀಜ್ ಭೇಟೀ ಕರೀ ಜೋ ಆದರೇಜ್‌ಸೀಜ್ (೧೮.೧೫೦೩)*

ಆದರಂತೆ ಯಾರು ಆದರದಿಂದ ಭಕ್ತರಿಗೆ ಗೀತೆಯೊಡನೆ ಬೆಟ್ಟಿ ಮಾಡಿಸಿ ಕೊಡುವರೋ

*ಶ್ರವಣೇಜ್ ಪಾಪೇಜ್ ಜಾಜ್‌ತೀ (೧೮.೧೫೨೬)*

ಶ್ರವಣದಿಂದ ಪಾಪಗಳು ಹೋಗುವವು.

ಆ ಪ್ರತ್ಯಯ

*ದುಷ್ಕೃತೀ ಜರ್ಹೀಜ್ ಜಾಲಾ ತರ್ಹೀಜ್ ಅನುತಾಪತೀರ್ಥಿಜ್ ನ್ಹಾಲಾ ನ್ಹಾಉನಿಯಾಜ್ ಮಜಆಜ್‌ತು ಆಲಾ ಸರ್ವಭಾವೇಜ್ (೯.೪೧೬)*

ದುಷ್ಕೃತ್ಯ ಮಾಡಿದವನು ಆಗಿದ್ದರೂ ಪಶ್ಚಾತ್ತಾಪ ತೀರ್ಥದಲ್ಲಿ ಮೀಯುತ್ತಾನೆ. ಮಿಂದು ನನ್ನೊಳಗೆ ಸರ್ವಭಾವದಿಂದ ಬರುತ್ತಾನೆ.

ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಬರುವ ಈ ಸರ್ವಕಾಲೀನ ಕ್ರಿಯಾರೂಪಗಳು ಸಂಸ್ಕೃತದಿಂದಾಗಲೀ ಅಪಭ್ರಂಶದಿಂದಾಗಲೀ ಬಂದವುಗಳಲ್ಲ. ಭೂತಕಾಲಕ್ಕಾಗಿ ಆಖ್ಯಾತ ಪ್ರತ್ಯಯಗಳಿಗಿಂತ ಹೆಚ್ಚಾಗಿ ಧಾತುಸಾಧಿತ ಕೃದಂತಗಳನ್ನು ಇಂದಿಗೂ ಬಳಸಲಾಗುತ್ತದೆ. ಇದರಿಂದಾಗಿಯೇ ಹನ್ನೊಂದನೆಯ ಶತಮಾನಕ್ಕಿಂತ ಮೊದಲು ಭವಿಷ್ಯತ್‌ಕಾಲವನ್ನು ಸೂಚಿಸುವುದಕ್ಕಾಗಿ ವರ್ತಮಾನ ಕಾಲವಾಚಕ ರೂಪಗಳನ್ನು ಬಳಸಲಾಗುತ್ತಿತ್ತು[1] ಎಂದು ಆಲ್ಫ್ರೇಡ್ ಮಾಸ್ಟರ್ ಅಭಿಪ್ರಾಯಪಟ್ಟಿದ್ದಾರೆ. ಮರಾಠಿಯಲ್ಲಿ ಜ್ಞಾನೇಶ್ವರಪೂರ್ವಕಾಲಿನ ಗ್ರಾಂಥಿಕ ಸಾಹಿತ್ಯ ದೊರೆತಿಲ್ಲ. ದೊರೆತ ಶಿಲಾಲೇಖ ತಾಮ್ರಪಟಗಳು ಬೆರಳ ಮೇಲೆಣಿಸುವಷ್ಟು, ಇವಿಷ್ಟೇ ಆಧಾರಗಳ ಮೇಲೆ ವ್ಯಾಕರಣದ ನಿಯಮಗಳನ್ನು ಊಹಿಸುವುದು ಸುಲಭಸಾಧ್ಯವಲ್ಲ. ಆದರೂ ತದನಂತರದ ಜ್ಞಾನೇಶ್ವರಕಾಲೀನ ಸಾಹಿತ್ಯದಲ್ಲಿ ದೊರೆಯುವ ಹೇರಳ ಉದಾಹರಣೆಗಳನ್ನು ಪರಿಶೀಲಿಸಿದರೆ ಮಾಸ್ಟರ್ ಅವರ ಅಭಿಪ್ರಾಯದ ಮನವರಿಕೆಯಾಗದಿರದು. ಇಂದಿಗೂ ಕನ್ನಡದಲ್ಲಷ್ಟೇ ಏಕೆ, ಮರಾಠಿಯಲ್ಲಿ ಕೂಡ ವರ್ತಮಾನಕಾಲದ ಕ್ರಿಯಾರೂಪಗಳು ಭವಿಷ್ಯದರ್ಥದಲ್ಲೂ ಬಳಸಲಾಗುತ್ತಿವೆ.

---

1. A Grammar of old Marathi 214

ಹೀಗೆ ಒಂದು ಕಾಲದ ಕ್ರಿಯಾರೂಪಗಳನ್ನು ಇನ್ನೊಂದು ಕಾಲಕ್ಕಾಗಿ ಬಳಸುವ ಮರಾಠಿಯಲ್ಲಿಯ ರೂಢಿ ಹಳಗನ್ನಡದಿಂದ ಪ್ರಭಾವಿತವಾದುದ್ದೆಂದು ಧಾರಾಳವಾಗಿ ಹೇಳಬಹುದು.

*ಬಾಹುಬಲಿ ಮುನಿಯಲ್ಲಿಗೆ ಬಂದೆಱಗಿ ಮಾನಕಷಾಯಮಂ ಕಳೆಯೆ*
*ಜ್ಞಾನೋತ್ಪತ್ತಿಯಾದುದು. (ಚಾವುಂಡರಾಯ ಪುರಾಣ) ತಂದಮೂಲ್ಯ*
*ವಸ್ತುಗಳನವಂಗೆ ತೋಱುವುದುಂ - ಪಾರ್ವನಿರ್ದಪನೆಂದು ಪೇೞ್ವುದುಂ -*
*ಪೆಱಗಯ್ಯಂ ಕಟ್ಟಿ ತಂದೊಪ್ಪಿಸುವುದುಂ (ದುರ್ಗಸಿಂಹನ ಪಂಚತಂತ್ರ)*

ಎಂದೆಲ್ಲ ಉದಾಹರಣೆಗಳನ್ನು ಕೊಡಬಹುದಾಗಿದೆ.

## ಪ ವಿಕರಣ

ಕನ್ನಡದಲ್ಲಿ -ಅಪ, -ದಪ, -ದಪ್ಪ ವಿಕರಣಗಳು ಹತ್ತಿ ವರ್ತಮಾನಕಾಲದ ಕ್ರಿಯಾಪದಗಳು ಸಿದ್ಧವಾಗುವವೆಂದು ಕೇಶಿರಾಜನು ಹೇಳಿದ್ದಾನೆ. (ಶಬ್ದಮಣಿದರ್ಪಣ ಸೂತ್ರ ೫೪, ೨೩೨, ೨೪೯ ನೋಡಬೇಕು) ಇದಕ್ಕೆ ಉದಾಹರಣೆಯಾಗಿ ಜಗುಳ್ದಪಂ ನೋಡಿದಪಂ, ಬನ್ದಪುದು, ಬರೆದಪ್ಪಂ ಕರೆದಪ್ಪಂ, ಇತ್ಯಾದಿಯಾಗಿ ರೂಪಗಳನ್ನು ಉಲ್ಲೇಖಿಸಿದ್ದಾನೆ. ಆದರೆ ಪ ವಿಕರಣದೊಂದಿಗೆ ಸಾಧಿಸಲಾದ ಕ್ರಿಯಾಪದಗಳು ವರ್ತಮಾನಕಾಲವನ್ನಷ್ಟೇ ಅಲ್ಲ, ಭೂತ ಹಾಗೂ ಭವಿಷ್ಯತ್ ಕಾಲವನ್ನು ಸೂಚಿಸುತ್ತವೆ. ಉದಾಹರಣೆಗಳನ್ನು ನೋಡಬೇಕು.

## ಭವಿಷ್ಯತ್‌ಕಾಲ

*ಸ್ವವೈರಿ ವಿಧ್ವಂಸನಂ ಗೆಯ್ದಪ್ಪೆಂ - ಈತಂಗರಸು ಮಾಡಿದಪ್ಪೆಂ (ವಡ್ಡಾರಾಧನೆ)*
*ಪಿರಿಯ ಮಗನನೀಗಳೆ ಹೋಗಿ ಕೊಂದಪೆಂ (ಪಂಚತಂತ್ರ) ಗಂಗಾಸುತಂ*
*ಪೃಥಾಸುತರಂ ಗೆಲ್ದೊಡೆ ತಪಕೆ ಪೋಪೆಂ - ಮೊಕ್ಕಳಮೇಕೆ ನೀಂ ಪಳಂಚಲಿದಪೆ -*
*ಪಗೆವಾಡಿಯೊಳ್ ನಗಿಸಿ ಕೊಂಡೊಡೆ ಬಂದಪುದೇಂ ಸುಯೋಧನಾ -*
*ಸೂಟ್ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್ - (ಎಲ್ಲವೂ ವಿಕ್ರಮಾರ್ಜುನ*
*ವಿಜಯ)*

## ಭೂತಕಾಲ

*ಪಿರಿದೊಂದಾದರದಿಂ ನಡಪಿದಪ್ಪರಪ್ಪುದಱಿಂದಂ (ವಿಕ್ರಮಾರ್ಜುನವಿಜಯ)*

## ವರ್ತಮಾನ ಕಾಲ

*ನಿನ್ನ ನೆತ್ತರ ಸವಿನೋಟ್ಪಿನಂ ಬಯಸಿ ಬಾತಪೆಂ (ಗದಾಯುದ್ಧ) ಕುಲಮನೆ*
*ಮುನ್ನಮುಗ್ಗಡಿಪಿರೇಂ ಗಳ (ವಿಕ್ರಮಾರ್ಜುನವಿಜಯ)*

ಹಳಗನ್ನಡದ ಈ ಪ ವಿಕರಣವು ಜ್ಞಾನೇಶ್ವರೀಕಾಲೀನ ಮರಾಠಿಗೂ ಹೋಗಿದೆ. ಕೆಳಗಿನ ಉದಾಹರಣೆಗಳನ್ನು ನೋಡಬೇಕು.

*ಏಣೇಜ್ ಕಾರಣೇಜ್ ಹ್ಮಣಿಪೇ (೧.೪೭)*

ಈ ಕಾರಣದಿಂದಾಗಿ ಹೇಳುತ್ತೇನೆ

*ಜೋ ಕಾಜ್ ತುಹ್ಮೀ ಸಿಕ್ಯಾಪಿಲಾ (೧.೯೫)*

ನೀವು ಅದೇನು ಕಲಿಸಿದ್ದಿರೋ

*ಸ್ನೇಹಾಲಾಗಿ ಮಾಯೇ ಹ್ಮಣಿಪೇ (೨-೪೨)*

ಮಮತೆಗಾಗಿ ತಾಯಿ ಎನ್ನುತ್ತಾರೆ.

*ತೋ ತೂರ್ಘೇಜ್ ವಾಕ್ಯವಾಜಚೂನಿ ನ ಜೇಜ್‌ಪೇಜ್ ಆಣಿಕೇ (೨.೬೪)*

ಅದು (ಆ ಶೋಕವು) ನಿನ್ನ ಮಾತನ್ನುಳಿದು ಮತ್ತೆ ಜಿನುಗಲಾರದು.

*ತರ್ಹಿಜ್ ಆಪಣ ಘೇಪೇ ಕೇವಳ ಆರ್ತ್ರಿ ಚಿ ಜೋಗೇಜ್ (೨.೨೬೨)*

ಆದರೂ ಬರಿ ನೀರಡಿಕೆಯಿದ್ದಷ್ಟನ್ನೇ ನಾವು ತೆಗೆದುಕೊಳ್ಳುತ್ತೇವೆ.

*ದೇಖೈಜ್ ಅಗ್ನೀಮಾಝಿ ಘಾಪತಿ (೨.೩೪೬)*

ನೋಡ್ಯೆ, ಬೆಂಕಿಯಲ್ಲಿ ಹಾಕುತ್ತಾರೆ.

*ಜೈಸಾ ಭೂತಚೇಷ್ಟಾ ಗಭಸ್ತೀ ಘೇಪವೇ ನಾ (೩.೧೨೯)*

ಪ್ರಾಣಿಮಾತ್ರಗಳ ಕರ್ಮಬಂಧವನ್ನು ಸೂರ್ಯನು ಸ್ವೀಕರಿಸದಿರುವಂತೆ

*ಐಸೇಜ್ ವಿಚಾರಿತಾಜ್ ವಿಚಕ್ಷಣ ಗುಂಪೌನಿ ಠೇಲೇ (೪.೮೪)*

ಹೀಗೆ ಕೇಳಿದಾಗ ಪಂಡಿತರು ಗುಣಗುಣಿಸುತ್ತ ಕುಳಿತರು.

*ಅಕಾಳಿಚೇಜ್ ಅಭ್ರೇಜ್ ಜೈಸೀಜ್ ಊರ್ಮಿಪೀಣ ಆಕಾಶೀಜ್ ಹಾರಪತಿ ಆಪೈಸೀಜ್ (೪.೧೧೬)*

ಅಕಾಲಮೇಘಗಳು ಕಸುವು ಇಲ್ಲದೆಯೆ ಆಕಾಶದಲ್ಲಿ ಬಂದು ಹಾರಿಹೋಗುವಂತೆ

*ಪವನಾಚೇನಿ ಕೋಪೇಜ್ ಪಾಣಿಯೇಜ್ ಚಿ ಜೋ ಪಳಿಪೇ ತೋಪ್ರಳಯಾನಳು ಕಾಇ ದಡಮೋ ತೃಣೇ ನಾವೇಜ್ (೪.೧೭೫)*

ಗಾಳಿಯ ಕೋಪವನ್ನೇ (ಬಳಸಿ) ಕೊಂಡು, ನೀರನ್ನೆಲ್ಲ ಒಳಗೊಂಡ ವಡವಾನಲವನ್ನು ಹುಲ್ಲು ಕಡ್ಡಿಯಿಂದ ಆರಿಸಲಾದೀತೇ?

ಡಾಡರೆಟ್ ಅವರು ಈ ಪ ವಿಕರಣ ಸಂಸ್ಕೃತ ಪ್ಯ > ಪ್ರಾಕೃತ ಪ್ಪ > ಮರಾಠಿ ಪ ಹೀಗೆ ಸಾಧಿತವಾಯಿತೆಂದು ಹೇಳುತ್ತಾರೆ.[2] ಮಾಸ್ಟರ್ ಅವರಾಗಲೀ ಇತರ ಸಂಶೋಧಕರಾಗಲೀ ಈ ವ್ಯುತ್ಪತ್ತಿಯನ್ನು ಒಪ್ಪುವುದಿಲ್ಲ. ಸಂಸ್ಕೃತದಲ್ಲಿ ಕರ್ಮಣಿ ಕ್ರಿಯಾಪದವನ್ನು ಸಾಧಿಸಲು ಪ್ಯ ವಿಕರಣ ಬೇಕಿಲ್ಲ, ಯ ಸಾಕು. ಅಲ್ಲದೆ ಮೇಲೆ ತೋರಿಸಿದ ಉದಾಹರಣೆಗಳಲ್ಲಿ ಮ್ಹಣಿಪೇ, ಸಿಕ್ಯಾಪಿಲಾ, ಘೇಪೇ, ಘಾಪತಿ, ಗುಂಪೌನಿ ಇವು ಕರ್ತರಿ ಪ್ರಯೋಗದಲ್ಲಿವೆ. ತುಳಮಳೆಯವರು ಹೇಳುವಂತೆ ಪ ಇದು ಕರ್ಮಣಿ ವಿಕರಣವಲ್ಲ. ಸಂಸ್ಕೃತ ಪ್ಯದಿಂದಲೂ ಬಂದಿಲ್ಲ. ಇದರ ಮೂಲ ಹಳಗನ್ನಡ.

---

2. A Grammar of the Jnaneshwari

## ಇಜ ವಿಕರಣ

ಸಂಸ್ಕೃತ ಹಾಗೂ ತದ್ಭವ ಧಾತುಗಳಿಗೆ - ಇಸು - ಅಸು - ಚು - ಸು ವಿಕರಣಗಳು ಹತ್ತಿ ಸಕರ್ಮಕ ಹಾಗೂ ಅಕರ್ಮಕ ಕ್ರಿಯಾಪದಗಳು ಮತ್ತು ಕನ್ನಡ ಧಾತುಗಳಿಗೆ ಇವು ಹತ್ತಿ ಸಕರ್ಮಕ ಹಾಗೂ ಪ್ರಯೋಜಕ ಕ್ರಿಯಾಪದಗಳು ಸಿದ್ಧವಾಗುವವೆಂದು ಕೇಶಿರಾಜನು ಹೇಳುತ್ತಾನೆ. ರಾಗಿಸು, ಭಂಗಿಸು, ಭೂಪಿಸು, ನಿರ್ಣಯಿಸು, ಭೋಗಿಸು ಪ್ರೇರಿಸು ಉದಯಿಸು ಇತ್ಯಾದಿಯಾಗಿಯೂ ಗುಡಿಯಿಸು, ನಡೆಯಿಸು, ಬಾಗಿಸು, ತೂಗ್ಗಿಸು, ಕಾಣಿಸು ಮೊದಲಾಗಿಯೂ ಅವನು ಉದಾಹರಣೆಗಳನ್ನು ಕೊಡುತ್ತಾನೆ.[3]

ಈ ಇಸು ವಿಕರಣ ಮರಾಠಿಯಲ್ಲಿ ಇಜ ಆಗಿ ಬಳಸಲಾಗಿದೆ. ಉದಾಹರಣೆಗಳನ್ನು ನೋಡಬೇಕು.

*ಹ್ಮಣೇ ನಿವೃತ್ತಿದಾಸು ಅವಧಾರಿಜೋ (೧.೨)*
ನಿವೃತ್ತಿಯ ದಾಸನು ಹೇಳುತ್ತಾನೆ, ಅವಧರಿಸು
*ಆದರಿಜೋ ಅವ್ಯಂಗು ಸಂನ್ಯಾಸು ತೋ (೧೮-೬೮)*
ಆ ಅವ್ಯಂಗ ಸನ್ನ್ಯಾಸವನ್ನು ಆದರಿಸು
*ರಾಜಸಾಚೇಜ್ ಲಕ್ಷಣ ಸಾಂಘಿಜೈಲ (೧೮-೯೧)*
ರಾಜಸ (ಕರ್ಮ)ಗಳ ಲಕ್ಷಣ ಹೇಳುತ್ತೇನೆ.
*ಸ್ವಚೇಷ್ಟಾ ಸಂಭಾಷಣೇಜ್ ಸಾಂಡಮೀಜತೀ (೧೮.೩೮)*
ತಮ್ಮ ಕರ್ಮಗಳ ಸಂಭಾಷಣೆಗಳು ತ್ಯಜಿಸಲ್ಪಡುತ್ತವೆ.
*ಉದ್ಯೆಜತಾಜ್ ದಿನಕರು (೧೮.೯೭೯)*
ಸೂರ್ಯನು ಉದಯಿಸುತ್ತಲೇ
*ಕಿಜ್ ಉದ್ಯೆಜತಾಜ್ ಚ ದೀಪಿ ಮಧ್ಯಾನ ಹೋಇ (೧೮.೯೯೨)*
ದಿವಸ ಉದಯಿಸುತ್ತಲೇ ಮಧ್ಯಾಹ್ನವಾಗುವುದೇ
*ಸರ್ವಸುಖಿ ಜ್ ಸರ್ವಭೂತೀಜ್ ಸಂಪೂರ್ಣ ಹೋಇಜೋ (೧೮.೧೭೮೮)*
ಸರ್ವಭೂತಗಳಲ್ಲಿ ಸರ್ವಸುಖಗಳಿಂದ ಸಂಪೂರ್ಣವಾಗಲಿ

ಮೂಲ ಸಂಸ್ಕೃತ ಅಥವಾ ತದ್ಭವ ಧಾತುವಿಗೆ ಇಜ ವಿಕರಣದೊಂದಿಗೆ ಏ ಪ್ರತ್ಯಯ ಹತ್ತಲಾಗಿ ಆಜ್ಞಾರ್ಥವಾಚಕ ಪ್ರಥಮ ಪುರುಷ ಏಕವಚನದ ಅರ್ಥವನ್ನು ಕೊಡುತ್ತದೆ. ಉದಾಹರಣೆಗಾಗಿ

*ಮಾಝೀಜ್ ವಿನವಿಲೀಜ್ ತೇಜ್ ಆಇಕಿಜೇ ಅವಧಾನ ಆತಾಜ್ ದೀಜೇ (೧೧.೧೫)*
ನಾನು ಬಿನ್ನವಿಸಿದ್ದನ್ನು ಕೇಳುವುದು. ಈಗ ಲಕ್ಷ ಕೊಡುವುದು
*ಪೂಂಸಾ ಆಪಣ ಚ ಪಢವಿಜೇ ಮಗ ಬೋಲೇ ತಜ್ವ ತಜ್ವ ಮಾಥಾ ತೂಕಿಜೇ (೧೧.೧೭)*
ಗಿಳಿಗೆ ನಾವೇ ಹೇಳಿಕೊಡುವುದು. ಬಳಿಕ (ಅದು) ಹೇಳಿದಾಗ ತಲೆದೂಗುವುದು.

---

3 ಶಬ್ದಮಣಿದರ್ಪಣಂ ಧಾತು ಪ್ರಕರಣಂ

*ಜೇ ಭಗವದ್ಗೀತಾ ಹ್ಮಣಿಜೇ ಜೇ ಬ್ರಹ್ಮೇಶಾನೀಂಜ್ ಪ್ರಸಂಸಿಜೇ*
*ಜೇ ಸನಕಾದಿಕೀಂಜ್ ಸೇವಿಜೇ ಆದರೇಂಜಸೀಂಜ್ (೧.೫೫)*

ಭಗವದ್ಗೀತೆ ಎನ್ನುವುದು ಬ್ರಹ್ಮೇಶರಿಂದ ಪ್ರಶಂಸಿತವಾದುದು. ಸನಕಾದಿಕರಿಂದ ಆದರದಿಂದ ಸೇವಿಸಲ್ಪಟ್ಟದು.

*ಶಬ್ದೇಂಜ್‌ವಿಣ ಸಂವಾದಿಜೇ ಇಂದ್ರಿಯಾಂಜ್ ನೇಣತಾಂಜ್ ಭೋಗಿಜೇ (೧.೫೮)*

ಶಬ್ದಗಳಿಂದಲ್ಲದೆ ಸಂವಾದಿಸುವುದು, ಇಂದ್ರಿಯಗಳಿಂದ ತಿಳಿಯಲಾಗದೆ ಭೋಗಿಸುವುದು.

*ಸಾಂಘೆ ಮುಖ ಕೇವಿ ಪಾಹಿಜೇ ತೂರ್ಘೇಜ್ ಕೃಷ್ಣಾ (೧.೨೨೭)*

ಕೃಷ್ಣಾ, ಹೇಳ್ಳಿ, ನಿನ್ನ ಮುಖವನ್ನು ಹೇಗೆ ನೋಡುವುದು?

*ನಾ ತರಿ ದೇಶ ತ್ಯಾಗೇಜ್ ಜಾಇಜೇ ಕಾಂಜ್ ಗಿರಿಕಂದರ ಸೇವಿಜೇ*
*ಪರಿ ಶಸ್ತ್ರ ಆಜ್‌ತಾಂಜ್ ನ ಧರಿಜೇ ಯಯಾಂಜ್‌ವರಿ (೨.೪೭)*

ದೇಶ ತ್ಯಾಗವನ್ನಾದರೂ ಮಾಡುವುದು. ಗಿರಿಕಂದರ ಸೇವಿಸುವುದು. ಆದರೆ ಇನ್ನು ಮೇಲೆ ಶಸ್ತ್ರವನ್ನು ಧರಿಸುವುದಿಲ್ಲ.

ಇವುಗಳಲ್ಲಿ ಪಾವಣೇ = ಹೊಂದು ಧಾತುವಿನಿಂದ ಆದ ಪಾವಿಜೇ > ಪಾಹಿಜೇ (ಬೇಕು ಅರ್ಥದಲ್ಲಿ) ಮತ್ತು ಹ್ಮಣಣೇ = ಹೇಳು, ಎನ್ನು ಧಾತುವಿನಿಂದ ಮ್ಹಣಜೇ (ಅಂದರೆ ಅರ್ಥದಲ್ಲಿ) ಇವೆರಡು ಅವ್ಯಯ ರೂಪದಲ್ಲಿ ಇಂದಿಗೂ ಮರಾಠಿಯಲ್ಲಿ ಉಳಿದುಕೊಂಡಿವೆ.

## ಐ ಪ್ರತ್ಯಯ

ಮಧ್ಯಮ ಪುರುಷ ಏಕವಚನದ ಕ್ರಿಯಾಪದಗಳನ್ನು ಸಾಧಿಸಲು ಆಯ್ ಪ್ರತ್ಯಯ ಬಳಸಲಾಗುತ್ತದೆ ಎಂದು ಹೇಳಿದ ಕೇಶಿರಾಜನು (ಸೂತ್ರ ೨೫೪) ನುಡಿದಯ್, ಪಾಡಿದಯ್, ಕಣ್ಡಯ್ ಎಂದು ಉದಾಹರಣೆ ಕೊಡುತ್ತಾನೆ. *ಉತ್ತಮನಯ್ ನೀಂ ನವಮ ಲೋಕಪಾಲನೆ ಆವರೊಳ್* (ಕವಿರಾಜಮಾರ್ಗ ೩.೯೭) ಹೀಗೆ ಪ್ರಯೋಗವೂ ಆಗಿದೆ. ಈ ಆಯ್ ಪ್ರತ್ಯಯ ಹಳಗನ್ನಡದಲ್ಲೇ ಐ ಆದದ್ದೂ ದೃಗ್ಗೋಚರವಾಗುತ್ತದೆ.

*ಸಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ (ಆದಿಪುರಾಣ)*
*ಕುಲಮಂ ತುಬ್ಬವವೊಲುಱಿದೆ ನೀಂ ಕಿಡೆ ನುಡಿವೈ (ಪಂಪಭಾರತ)*
*ದೋಷವಿಮೋಕ್ಷಮದೇಕೆ ಕೊಂಡಪ್ಪೈ (ಪಂಪಭಾರತ)*
*ಯೆನಿತಂ ಸಂಸಾರದೊಳಗೆ ತಿದ್ದನೆ ತಿರಿವೈ (ಅಜಿತ ಪುರಾಣ)*
*ಭವಗಹನದೊಳಗೆ ಬಟ್ಟನೆ ಬರ್ಪೈ (ಅಜಿತಪುರಾಣ)*

ಈ ಐ ಪ್ರತ್ಯಯವು ಇದೇ ಪ್ರಯೋಜನಕ್ಕಾಗಿ ಜ್ಞಾನೇಶ್ವರಿಯಲ್ಲಿಯೂ ಬಳಸಲಾಗಿದೆ.

*ತೇಂಜ್ ಝಡಕರಿ ಪುರುಷೋತ್ತಮಾ ಸಾಂಘೈಂಜ್ ಆತಾಂಜ (೨. ೬೩)*

ಪುರುಷೋತ್ತಮನೇ, ಅದನ್ನು ಬೇಗ ಹೇಳ್ಳಿ.

*ದೇಖೈಜ್ ವಿವೇಕಿಯೇ ಜೇ ಹೋಜ್‌ತಿ (೨.೧೦೨)*

ನೋಡೈ, ವಿವೇಕಿಗಳಾಗಿದ್ದವರು

*ಆಇಕೈಜ್ ಶರೀರ ತರಿ ಏಕ ಪರಿ ವಯಸಾ ಭೇದ ಅನೇಕ (೨.೧೦೪)*

ಕೇಳೈ, ಶರೀರವು ಒಂದೇ ಆಗಿದ್ದರೂ ವಯಸ್ಸಿನಂತೆ ಭೇದಗಳು ಅನೇಕ.

*ಅರ್ಜುನಾ ತರಿ ಪರಿಯಸ್ಕೈಜ್ (೨.೨೯೧)*

ಆದುದರಿಂದ ಅರ್ಜುನನೇ, ಕೇಳೈ.

ಜ್ಞಾನೇಶ್ವರಿಯಲ್ಲಿಯ ಐ ಪ್ರಯೋಗ ಆಜ್ಞಾರ್ಥಕ್ಕೆ ಮಾತ್ರ ಸೀಮಿತವಾಗಿದೆಯೆಂಬುದನ್ನು ಇಲ್ಲಿ ಗಮನಿಸಬೇಕು.

## ಓಜ್ ಪ್ರತ್ಯಯ

ಧಾತುಗಳಿಗೆ ಹಳಗನ್ನಡದಲ್ಲಿ ಉವ ಪ್ರತ್ಯಯ ಹತ್ತಿ ಭವಿಷ್ಯತ್ ಕಾಲವಾಚಕ ಕೃದಂತಗಳಾಗಿದ್ದುದು ಸಾಮಾನ್ಯ.

ರನ್ನನ ಗದಾಯುದ್ಧದಲ್ಲಿಯ ಈ ಎರಡು ಕಂದ ಪದ್ಯಗಳನ್ನು ನೋಡಬೇಕು.

*ಎತ್ತುವೆನೊ ಮಂದರಾದ್ರಿಯ*
*ನೊತ್ತುವೆನೊ ರಸಾತಳಕ್ಕೆ ನೆಲನಂ ದೆಸೆಯಂಗೆ ಪತ್ತುವೆನೂ ಪಗೆಯಬೆನ್ನಂ*
*ಪತ್ತುವೆನೊ ದಿಶಾಗಜಂಗಳ ತುತ್ತುವೆನೋ*
*ದಾಂಟುವೆನೊ ಕುಲನಗಂಗಳ*
*ನೀಂಟುವೆನೊ ಚತುಸ್ಸಮುದ್ರಮಂ ರವಿಶಶಿಯಂ*
*ಮೊಂಟುವೆನೊ ಗಗನ ತಳದಿಂ*
*ಗಂಟಲನೊತ್ತುವೆನೊ ಸಕಲ ದಿಕ್ಪಾಲಕರಂ*

ಹೊಸಗನ್ನಡದಲ್ಲೂ ಉವ ಪ್ರತ್ಯಯ ರೂಢಿಯಲ್ಲಿದೆ. ಆಡುಮಾತಿನಲ್ಲಿ ಉವಕ್ಕೆ ಬದಲಾಗಿ ಓ ಬರುತ್ತದೆ. ಉದಾಹರಣೆಗಾಗಿ ಹೋಗೋಬದಲು, ಬರೋ ಮುಂಚೆ, ಹೇಳೋಕಿಂತ ಇತ್ಯಾದಿ, ಇದು ಊ ಕೂಡ ಆಗುತ್ತದೆ. ಉದಾಹರಣೆಗೆ ಕೊಡೂಮುಂದ, ಜಗ್ಗೂವಾಗ ಇತ್ಯಾದಿ. ಹಳಗನ್ನಡದಲ್ಲಿ ಗ್ರಾಂಥಿಕ ಸಾಹಿತ್ಯದಲ್ಲಾಗಲೀ ಶಿಲಾಲೇಖಗಳಲ್ಲಾಗಲೀ ಉವ ಪ್ರತ್ಯಯ ಓ ಅಥವಾ ಊ ಆದಬಗ್ಗೆ ಪ್ರಯೋಗಗಳು ದೊರೆತಿಲ್ಲ. ಆದರೂ ಉಚ್ಚಾರ ಸೌಕರ್ಯ ಗಮನಿಸಿದರೆ ಅಂದಿನ ಆಡು ಮಾತಿನಲ್ಲಿ ಕೂಡ ಭವಿಷ್ಯತ್ ಕಾಲವಾಚಕ ಕೃದಂತಗಳನ್ನು ಸಾಧಿಸಲು ಓ ಹಾಗೂ ಊ ಪ್ರತ್ಯಯ ಬಳಕೆಯಾಗಿರುವುದು ಸಹಜ ಸಾಧ್ಯ. ಜ್ಞಾನೇಶ್ವರೀಕಾಲೀನ ಮರಾಠಿ ಸಾಹಿತ್ಯದಲ್ಲಿ ಕಂಡುಬರುವ ಭವಿಷ್ಯ ಕೃದಂತಗಳ ಪ್ರತ್ಯಯವಾಗಿ ಓಜ್ ಬಳಕೆಗೆ ಬೇರೆ ವ್ಯುತ್ಪತ್ತಿ ದೊರೆಯದ್ದರಿಂದ ಈ ತರ್ಕಕ್ಕೆ ಮೊರೆ ಹೋಗಬೇಕಾಗಿದೆ. ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳನ್ನು ನೋಡಬೇಕು.

*ಪಾರ್ಥಾ ಆಣಿಕ ಹೀ ಪರೀಜ್ ತೋ ಜಾಣೋಜ್ ಯೇ ಅವಧಾರಿಜ್ (೨.೬೫೬)*

ಪಾರ್ಥಾ, ಮತ್ತೂ ಒಂದು ಪರಿಯಿಂದ ಅದನ್ನು ಅರಿಯಬಹುದು, ಕೇಳು.

*ತರಿ ಆಣಿಕ ಕವಣಾ ಸಾಂಘೋಜ್ ಜಾಓಜ್ (೧೧.೭೮)*
*ಆದರೆ ನಾವು ಇನ್ನಾರಿಗೆ ಹೇಳಲು ಹೋಗಬಹುದು.*
*ಆಂಧಳೇಯಾ ಮಧೇಜ್ ದಾಖಉಜ್ ಬೈಸಾ (೧೧.೧೫೭)*
*ಕುರುಡನ ಇದಿರು (ಕನ್ನಡಿ) ತೋರಿಸಲು ಕುಳಿತಿದ್ದೀರಿ.*
*ತೇವಿಜ್ ಚ ಕಾಹಿಜ್ ಬೋಲೋಜ್ ಜಾವ (೧೧.೪೮೩)*
ಆದರಂತೆ ಏನಾದರೂ ಹೇಳಲು ಹೋದರೆ

ಭವಿಷ್ಯಕಾಲವಾಚಕ ಕೃದಂತವು ಹೀಗೆ ಚತುರ್ಥಿಭಾವ ಸೂಚಿಸಲೋ ತುಮಂತವಾಗಿಯೋ ಮರಾಠಿಯಲ್ಲಿ ರೂಢವಾಯಿತು. ಓಜ್ ಪ್ರತ್ಯಯಾಂತ ರೂಪಗಳ ಮುಂದೆ ಯೇ (ಹಳಗನ್ನಡದ ಬರ್ಮದು > ಬಹುದು ಅರ್ಥದಲ್ಲಿ) ಅವ್ಯಯವಾಗಿ ಸೇರಿದಾಗ ಮೊದಲು ಸಾಧ್ಯತೆಯನ್ನು ಸೂಚಿಸಿದರೂ ಕ್ರಮೇಣ ವಿಧ್ಯರ್ಥದ ರೂಪ ಹೊಂದಿದುದೂ ಗಮನಾರ್ಹವಾಗಿದೆ. ಜ್ಞಾನೇಶ್ವರೀಯಲ್ಲಿಯ ಈ ಉದಾಹರಣೆಗಳನ್ನು ನೋಡಬೇಕು.

*ಕಾಇ ಸಂಗಾತವ ಕಾಜಳೀ ದೀಪು ಹ್ಮಣೋಜ್ ಏ (೧೮.೨೭೦)*
(ದೀಪದ) ಜೊತೆಗೆ ಇದ್ದಮಾತ್ರಕ್ಕೆ ಕಾಡಿಗೆಗೆ ದೀಪ ಎನ್ನಬಹುದೇ?
*ತೇಯಾ ಹೀ ವರತೇಜ್ ನಿರ್ಧನ ಐಸೇಜ್ ಹ್ಮಣೋಜ್ ಏ ಕಾಯಿ (೧೬೯೬)*
ಇಷ್ಟಾದ ಮೇಲೂ (ಅವನನ್ನು) ನಿರ್ಧನನೆಂದು ಅನ್ನಬಹುದೇ?

ಹೀಗೆ ಜ್ಞಾನೇಶ್ವರೀಯಲ್ಲಿ ಬರುವ ಹ್ಮಣೋಯೇ, ಪಿಯೋಜ್‌ಯೇ (೧೮-೧೪೭೩) ಘೇಓಜ್‌ಯೇ (೧೭.೫೨) ದಂತಹ ರೂಪಗಳು ಬಳಿಕ ಮ್ಹಣಾವೇ, ಪ್ಯಾವೇ, ಘ್ಯಾವೇ, ಎಂದಾಗಿ (ಹೇಳಬೇಕು, ಕುಡಿಯಬೇಕು, ಕೊಳ್ಳಬೇಕು ಎಂದು) ವಿಧ್ಯರ್ಥ ಸಾಧಿಸುತ್ತವೆ.

*ಮ್ಹಣೌನಿ ತುವಾಜ್ ಜೂಝಾವೇಜ್ (೨.೧೩೬)*
ಅಂತೆಯೆ ನೀನು ಕಾದಬೇಕು.
*ತೇಜ್ ಕಾಜ್‌ಹೀಜ್ ಚ ನ ಲಗೇ ತ್ಯಜಾವೇಜ್(೫.೨೨)*
ಅದಾವುದನ್ನು ತ್ಯಜಿಸಬೇಕಾಗಿಲ್ಲ.

## ಇಲೇಜ್ - ಅಲೇಜ್ ಪ್ರತ್ಯಯ

ಆಗು ಅರ್ಥದಲ್ಲಿ ಹಳಗನ್ನಡದಲ್ಲಿ ಅಲ್ ಎಂಬ ಧಾತು ಬಳಸಲಾಗಿದೆ. ನಿಷೇಧಾರ್ಥಕವಾಗಿ ಅಲ್ಲ, ಅಲ್ತು ಎಂಬ ರೂಪಗಳು ಮುಂದೆ ರೂಢವಾಗಿದ್ದೇನೋ ನಿಜವೇ. ಅದೇ ರೀತಿಯಾಗಿ ಇರು ಅರ್ಥದಲ್ಲಿ ಇಲ್ ಎಂಬ ಧಾತುವೂ ಪ್ರಯೋಗಿಸಲಾಗಿದೆ. ಹಳಗನ್ನಡದ ಅಲ್, ಇಲ್‌ಗಳಿಂದ ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಇಲೇಜ್ ಅಲೇಜ್ ಎಂದಾಗಿ ಭೂತಕಾಲವಾಚಕ ಕರ್ಮಣೀ ಕ್ರಿಯಾಪದಗಳು ಸಿದ್ಧವಾದುದನ್ನು ನೋಡಬೇಕು.

*ಆತಾಜ್ ಆಇಕಾಜ್ ಬರವೇಜ್ ಪೂಸಿಲೇಜ್ ತೇಜ್ (೧೮.೭೪)*

(ಅವನು) ಪ್ರಶ್ನಿಸಿದ್ದನ್ನು ಈಗ ಚೆನ್ನಾಗಿ ಕೇಳಿರಿ.

*ಜೈಸೇಜ್ ಊಂಚೇಜ್ ಉದಕ ಪಡಿಲೇಜ್ ತರಿ ತಳವಟು ವರಿಯೇ ಉಗಲೇಜ್*
*ತೈಸೇಜ್ ನಮಿಜೇ ಭೂತ ದೇಖಿಲೇಜ್ ಐಸಾ ಸ್ವಭಾವೋ ತೇಯಾಜ್ಚಾ*
*(೯.೨೨೩)*

ಮೇಲೆ ನೀರು ಬಿದ್ದಿತು. ಕೆಳಗಿನವರೆಗೆ ಅದು ತಾನಾಗಿ ಹರಿಯಿತು. ಹಾಗೆ ಕಂಡ ಭೂತಮಾತ್ರಗಳನ್ನು ನಮಸ್ಕರಿಸುವುದು ಅವರ ಸ್ವಭಾವ.

*ನಮಿತಾಜ್ ಮಾನಾಭಿಮಾನ ಗಳಲೇ ಹ್ಮಣೌನಿ ಅವಚಿತೇ ಮೀಜ್ ಚಿ ಜಾಲೇ*
*ಐಸೇ ನಿರಂತರ ಮಿಸಳಲೇ ಉಪಾಸಿತಿ (೯.೨೨೬)*

ನಮಸ್ಕರಿಸಿದಾಗ ಮಾನ-ಅಭಿಮಾನಗಳು ಕಳಚಿದವು. ಅಂತೆ ಸಹಜವಾಗಿ ನಾನೇ ಆದರು. ಹೀಗೆ ನಿರಂತರ ಒಂದಾಗಿ ನನ್ನ ಉಪಾಸನೆ ಮಾಡುವರು.

*ಸಾಂಘಿತಲೀ ತುಜಪ್ರತಿ (೯.೨೨೭)*

ನಿನಗೆ ಹೇಳಿದೆನು (ನಿನಗೆ ಹೇಳಲ್ಪಟ್ಟಿತು).

ತೇಥ ದೇವೇಅಜ್ ಹ್ಮಣಿತಲೇಜ್ ರಾಹೇ (೯.೨೩೬)

ಆಗ ದೇವನಿಂದ ಹೇಳಲ್ಪಟ್ಟಿತು, ಇರಲಿ.

ಫಾಜ್‌ಸಾಹೂನಿ ಸೂಟಲಾ ವಿಹಂಗು ಜೈಸಾ (೧೨.೧೮೧)

ಬಲೆಯಿಂದ ತಪ್ಪಿಸಿಕೊಂಡ ಪಕ್ಷಿಯಂತೆ.

## - ಈನ - ಓನ - ಐನ ಪ್ರತ್ಯಯ

ಹಳಗನ್ನಡದಲ್ಲಿ ಆಜ್ಞಾರ್ಥ ಏಕವಚನದ ರೂಪಗಳು -ಎಂ ಪ್ರತ್ಯಯದಿಂದ ಸಾಧಿತವಾಗಿವೆ. "ಆನ್ ಇದಂ ಮೂಟ್ಪೆಂ!" "ಆಂ ಶಿವನಂ ಪೂಜಿಸುವೆಂ" ಎಂಬುದಾಗಿ ಕೇಶಿರಾಜನು ಉದಾಹರಣೆಗಳನ್ನು ಕೊಡುತ್ತಾನೆ. ಈ -ಎಂ ಪ್ರತ್ಯಯ ನಡುಗನ್ನಡದಲ್ಲಿ - ಎನು ಆದದ್ದನ್ನು ಕಾಣುತ್ತೇವೆ. ಆರೊಡನೆ ಕಾದುವೆನು ಕೆಲಬರು ಹಾರುವರು ಕುಮಾರವ್ಯಾಸಭಾರತದಲ್ಲಿಯ ಈ ಉದಾಹರಣೆಯನ್ನು ಗಮನಿಸಬಹುದು. ಹೊಸಗನ್ನಡದಲ್ಲಿಯೂ ಈ ಪ್ರತ್ಯಯ ಉಳಿದುಕೊಂಡಿದೆ.

ಜ್ಞಾನೇಶ್ವರೀಯಲ್ಲಿ ಕನ್ನಡದ - ಎಂ ಪ್ರತ್ಯಯ - ಏನ - ಐನ ಆಗಿ ಅದೇ ಆಜ್ಞಾರ್ಥ ಏಕವಚನವನ್ನು ಸಾಧಿಸಲು ಬಳಸಿದುದನ್ನು ನಾವು ಕಾಣುತ್ತೇವೆ.

*ತೇಯಾ ಕರೀನ ಜೀರ್ಣೋದ್ಧಾರು ಪ್ರತಿಷ್ಠೀನ ಪರಮಾರು (೧೬.೩೫೮)*

ಆದರ (ಅಭಿಚಾರದ) ಜೀರ್ಣೋದ್ಧಾರ ಮಾಡುವೆನು. ಪರ ನಾಶವನ್ನು ಪ್ರತಿಷ್ಠಿಸುವೆನು.

*ಹೋಈನ ಮೀಜ್ ತ್ರಿಭುವನೀಜ್ ಆನಂದಕರು (೧೬.೩೬೦)*

ತ್ರಿಭುವನಗಳಲ್ಲಿ ಆನಂದಕರನಾಗುವೆನು.

*ಸಾಂಘ್ಯೆನ ತುಹ್ಮಾಜ್ (೧೬-೪೬೮)*

ನಿಮಗೆ ಹೇಳುವೆನು.

*ಮಗ ಮಿ ತಾಟ ಕಾಢೀನ ಸೇಜ ಮಿ ಝಾಡೀನ*

*ಚರಣ ಸೇವಾ ಕರೀನ ಮಿ ಚಿ ದೇಖೈಜ್ (೧೩.೪೨೨)*

ಬಳಿಕ ನಾನು ತಟ್ಟೆ ತೆಗೆಯುವೆನು. ಹಾಸಿಗೆ ಜಾಡಿಸುವೆನು.

ಚರಣಸೇವೆ ಮಾಡುವೆನು ನಾನೇ, ನೋಡೈ.

*ಯಾಲಾಗಿ ನವರಸಿಜ್ ವರಿಖೈನ ಮಿಾಜ್ (೧೩.೧೧೬೩)*

ಆದಕ್ಕಾಗಿ ನಾನು ನವರಸದ ಮಳೆಗರೆಯುವೆನು.

*ಬರವಾ ಸಾಂಘ್ಯೆನ ಗ್ರಂಥು (೧೬.೧೧೬೪)*

ಒಳ್ಳೆಯ ಗ್ರಂಥವನ್ನು ಹೇಳುವೆನು.

## ಆಗು ಧಾತುವಿನ ರೂಪವಿಶೇಷಗಳು

ಆಗು ಧಾತುವಿನ ಭೂತಕಾಲವಾಚಕ ಕೃದಂತ ಆಗಿಗೆ - ತು - ಇತ್ತು - ಇತು ಪ್ರತ್ಯಯಗಳು ಹತ್ತಿ ಆಯ್ತು, ಆಯಿತು, ಆಯಿತ್ತು ಎಂಬ ರೂಪಗಳು ಸಿದ್ಧವಾಗುತ್ತವೆ. *ಈ ವಿಭವಮಿನ್ತಾರಿನ್ದಮಾಯ್ತೆಂಬುದಂ ತಾನಾಗಳ್ ಬಗೆವನ್ನೆಗಂ* ಇದು ಆದಿಪುರಾಣದಲ್ಲಿಯ (೨.೬೬) ಒಂದು ಪ್ರಯೋಗ. ಈ ಆಯ್ತು ರೂಪವು ಆಥೀ ಆಇತೀ ಇತ್ಯಾದಿ ರೂಪಗಳಲ್ಲಿ ಜ್ಞಾನೇಶ್ವರೀಯಲ್ಲಿ ಬಳಸಿದುದನ್ನು ಕಾಣಬಹುದಾಗಿದೆ.

*ಪರಿ ಉದ್ಧರಲಾಜ್ ತೂರ್ಝೇ ಪಾಏ ಸಿತಲೇ ಆಥಿ (೧೧.೬೮)*

ನಿನ್ನ ಪಾದ ಸ್ಪರ್ಶಿಸಿ ಆಯಿತು (ನನ್ನ) ಉದ್ಧಾರವಾಯಿತು.

*ಏಕೇಜ್ ಆಯೇಜ್ ಲಾವಣ್ಯಸಾಕಾರೇಜ್ (೧೧.೧೩೮)*

ಒಂದು (ರೂಪವು) ಲಾವಣ್ಯವೇ ಮೈವೆತ್ತಂತೆ ಆಗಿತ್ತು.

*ಚಕ್ರ ಪರಿಜಿತೇಯಾ ಆಇತೀ (೧೧.೨೯೦)*

ಚಕ್ರವನ್ನು ತಿರುವುವುದು ಆಗಿತ್ತು.

*ದೇಹೀಚೀ ಆಇತಿ ರೋಡ (೧೩.೨೧೦)*

ದೇಹವು ತೆಳುವಾಗಿತ್ತು.

*ಪವ್ಹಣಾರು ಆಇತಾ ಕಾಶಿಜ್ ಜೇವಿ (೧೩.೫೪೪)*

ಈಜುವವನ ಕಚ್ಚೆ(ಬಿಗಿ) ಆಗುತ್ತದೆ, ಆ ರೀತಿಯಾಗಿ.

*ಜೋ ಅಂಗಾಥಿಲಾ ಆನಂದು ಸುರತೇಜ್‌ವಿಣ (೧೫.೭೪)*

ಕಾಮಕ್ರೀಡೆಯಿಲ್ಲದೆಯೆ ಆವ ಆನಂದವು ಮೂರ್ತವಾಯಿತೋ

*ಅಂಧಾರಿಜ್ ಭವಂಡಿತಾಜ್ ಕೋಲಿತೀ ತೇ ದಿಸೇ ಜೈಸೀ ಆಯಿತೀ ರೇಖ ಸ್ಯಂಭ (೧೫.೧೩೬)*

ಕತ್ತಲೆಯಲ್ಲಿ ಕೊಳ್ಳಿಯನ್ನು (ಗರಗರ) ತಿರುಗಿಸಿದಾಗ ಅಖಂಡ

ರೇಷೆಯು ಆಗುತ್ತದೆ ಹಾಗೆ.

*ದೋನ್ಹಿ ಆಥಿ ಐಸಾ ಪಡೇ ಭ್ರಮು ಜೇವಿ (೧೫.೧೩೪)*

(ಕಾಗೆಗೆ) ಎರಡೂ (ಕಣ್ಣುಗಳು) ಇವೆ ಎಂದು
ಭ್ರಮೆಯೆನಿಸುವಂತೆ

ಮರಾಠಿ ಸಂಶೋಧಕರು ಆಥಿ, ಆಇತಿ ರೂಪಗಳ ಮೂಲವನ್ನು ಸಂಸ್ಕೃತದ ಅಸ್ತಿ ಮತ್ತು ಆಗತಗಳಲ್ಲಿ ಕಾಣಲು ಯತ್ನಿಸಿದ್ದಾರೆ. ಅರ್ಥದ ದೃಷ್ಟಿಯಿಂದ ಇವು ಯಾವವೂ ಹೊಂದುವುದಿಲ್ಲ. ಅಲ್ಲದೆ ಸಂಸ್ಕೃತದ ಅಸ್ (ಇರು) ಧಾತುವು ಜ್ಞಾನೇಶ್ವರಿಯಲ್ಲಿ ಮರಾಠಿಯ ರೂಪಗಳನ್ನು ಹೊಂದಿ ಬಳಸಲಾಗಿದೆ. ಹೀಗಿರುವಾಗ ಸಂಸ್ಕೃತದ ಅಸ್ತಿಯನ್ನು ತೆಗೆದುಕೊಳ್ಳುವ ಪ್ರಯೋಜನವೂ ಇರಲಿಲ್ಲ. ಮರಾಠಿ ಅಸದ ಪ್ರಯೋಗಗಳು ಹೇರಳವಾಗಿವೆ. ಉದಾಹರಣೆಗಾಗಿ.

*ಅಸತಾ ದೀಪು ಧವಡಿಜೇ (೧.೨೪೬)* ಇದ್ದ ದೀಪವನ್ನು ಕಳೆಯುತ್ತಾರೆ.
*ಅಸತಾ ಪ್ರಕಾಶು ಸಾಂಡಾವಾ (೧.೨೩೯)* ಇದ್ದ ಬೆಳಕನ್ನು ಕಳೆದುಕೊಳ್ಳುವುದು.
*ಅಸತೀ ಕೀರ್ತಿ ಜಾಇಲ (೨.೧೯೮)* ಇದ್ದ ಕೀರ್ತಿಯು ಹೋದೀತು.
*ಏರಿ ತೇ ದುರ್ಮತಿ ಜೇ ಬಹುಧಾ ಅಸೇ ವಿಕರತಿ (೨.೨೪೩)*
ಮಿಕ್ಕದ್ದು ದುರ್ಬುದ್ಧಿ. ಬಹುಶಃ ವಿಕೃತವಾಗಿರುವುದು.

ಆಗು ಧಾತುವಿಗೆ ವಿಧ್ಯರ್ಥ ಪ್ರಥಮ ಪುರುಷದ ಏ ಪ್ರತ್ಯಯ ಹತ್ತಿ ಆಗು + ಏ = ಆಗವೇ (ಆಗುವುದು) ರೂಪ ಸಿದ್ಧವಾಗುತ್ತದೆ. ಜ್ಞಾನೇಶ್ವರೀಯಲ್ಲಿ ಆಗವೇ ಶಬ್ದದ ಪ್ರಯೋಗ ಅಪವಾದಾತ್ಮಕ. ನಿಷೇಧಪರ ನ ಪ್ರತ್ಯಯದೊಡನೆ ನ + ಆಗವೇ = ನಾಗವೇ, ನಾಙ್‌ಗವೇ ರೂಪಗಳ ಮಾತ್ರ ಸಾಕಷ್ಟು ಸಂದರ್ಭಗಳಲ್ಲಿ ಗೋಚರವಾಗುತ್ತವೆ.

*ಜೇಙ್ ಶಂಭೂಚಿಯೇ ಮತಿಸಿ ನಾಙ್‌ಗವೇ (೧೧.೨೭)* ಶಂಕರನ ಬುದ್ಧಿಗೆ ಆಗಲಾರದ್ದು
*ಅಮುರ್ತ್ತ ಹೀ ಮೂರ್ತ್ತಿ ಅಙ್‌ವಗೇ (೬.೧೩೧)* ಅಮೂರ್ತವೂ ಮೂರ್ತವಾಗುವುದಿಲ್ಲ.
*ಹೇ ಪಾರ್ಥಾ ನಾಙ್‌ಗವೇ ತರೀ ಆನ ಕೀಜೇ (೬.೩೦೯)* ಪಾರ್ಥನೇ (ಇದು) ಆಗದಿದ್ದರೆ ಇನ್ನೊಂದು ಮಾಡು
*ತೋ ಕಲ್ಪಾದಿ ಜನ್ಮಾಙ್ ನಾಙ್‌ಗವೇ (೮.೨೫೬)* ಅವನು ಕಲ್ಪದ ಆದಿಯಲ್ಲಿ ಜನ್ಮ ಆಗುವುದಿಲ್ಲ.
*ನಾಙ್‌ಗವೇ ಭ್ರಾಂತಿಲೇಶಾ (೩.೧೨೪)* ಒಂದಿಷ್ಟೂ ಭ್ರಾಂತಿಗೊಳ್ಳುವುದಿಲ್ಲ.
*ವಿಷ ಖಾಣೇಙ್ ನಾಙ್‌ಗವೇ (೧೩.೫೧೬)* ವಿಷ ತಿನ್ನುವುದು ಆಗುವುದಿಲ್ಲ.
*ಹೇಙ್ ಟಾಕತೇಙ್ ಕಿಙ್ ನಾಙ್‌ಗವೇ (೧೪.೧೮೯)* ಇದು ಆಗುವುದೇ ಅಥವಾ ಆಗುವುದಿಲ್ಲವೇ
*ಅವಗೇ ತರುವರೇಙ್ ಭೂಮಿರಸು (೧೪.೨೭೯)* ಭೂಮಿಯಲ್ಲಿಯ ರಸವು ತರುವರಗಳಾಗುವದು.

ಭಾಷೆ ಒಂದು ಜನಾಂಗದ ಜೀವಾಳ. ಅಂತಃಸತ್ವ. ಒಂದು ಅಂಗದ ಪ್ರಯೋಜನವನ್ನು ಜೀವಿ ಬಿಟ್ಟುಕೊಟ್ಟರೆ ಆ ಅಂಗ ಕ್ರಮಶಃ ನಿರ್ವಿಣ್ಣವಾಗಿ

ಅಳಿಸಿಹೋಗುವಂತೆ ಭಾಷೆಯಲ್ಲಿಯ ಬಳಕೆಯಲ್ಲಿಲ್ಲದ ಶಬ್ದಗಳೂ ಪ್ರಯೋಗಗಳೂ ಕಾಲನ ಉದರದಲ್ಲಿ ಲಯವಾಗಿ ಹೋಗುತ್ತವೆ.

ಹಳಗನ್ನಡದ ಪೂರ್ವದಲ್ಲಿ ಇದ್ದ, ಇರಬಹುದಾದ ಕೆಲ ಧಾತುಗಳ ಕೆಲವು ರೂಪಗಳಷ್ಟೇ ಹಳಗನ್ನಡ ಗ್ರಂಥಗಳಲ್ಲಿ, ಶಾಸನಗಳಲ್ಲಿ ಉಳಿದದ್ದನ್ನು ನಾವು ಕಾಣಬಹುದಾಗಿದೆ. ಇದಕ್ಕೆ ಕೆಲ ಉದಾಹರಣೆಗಳನ್ನು ಕೊಡಬಹುದು. 'ಪೋೞ್' ಧಾತುವಿಗೆ ಶಿರೋಧಾರಣ (ಹೊರು) ಎಂದು ಕೇಶಿರಾಜ ಅರ್ಥ ಹೇಳಿದ್ದಾನೆ. ಇದಲ್ಲದೆ ಬಹಿರ್ಗಮ, ಬಹಿರ್ ಭೂ (ಹೊರಗೆ ಹೋಗು, ಹೊರಗೆ ಇರು) ಎಂಬರ್ಥಗಳೂ ಈ ಧಾತುವಿಗೆ ಇದ್ದಿರಬೇಕು. ಆದರ 'ಪೊೞ' 'ಪೊೞಗೆ' ಪೊೞಡು' 'ಹೊೞತು' ಈ ರೂಪಗಳು ಮಾತ್ರ ದೊರೆಯುತ್ತವೆ.

'ಇರು' ಅರ್ಥದ 'ಉಳ್' ಧಾತುವಿನ ಪ್ರಥಮ ಪುರುಷದ ರೂಪ 'ಉಣ್ಟು' ಅಷ್ಟೇ ಹಳಗನ್ನಡದಿಂದ ಇಂದಿನವರೆಗೂ ಬಳಕೆಯಲ್ಲಿದೆ. ಆದರ ಮಿಕ್ಕ ರೂಪಗಳು ಒಳಂ, ಒಳರ್ ಎಂದು ಕೇಶರಾಜನು ಹೇಳುತ್ತಾನೆ (ಸೂ. ೨೯,) ಆದರೆ ನನಗನಿಸುವ ಮಟ್ಟಿಗೆ 'ಒಳ್' ಧಾತುವೇ ಬೇರೆ ಇದ್ದಿರಬಹುದಾಗಿದೆ. ಅದಕ್ಕೆ ಒಂದು ಅರ್ಥ 'ಯೋಗ್ಯವಿರು' ಎಂದಿರಬೇಕು. ಈ ಸಂಸಾರದೊಳ್‌ಬೇಯದನೊಳನೆ (ಆದಿಪುರಾಣ ೩.೬) ಆದನ್ತರಿಸಲೆ ಪೇೞಲಾರ್ಪನೆಮ್ಬವನೊಳನೇ (ಕವಿರಾಜಮಾರ್ಗ ೧.೧೧೧) ಮೊದಲಾದ ಉದಾಹರಣೆಗಳನ್ನು ಪುನಃ ಪರಿಶೀಲಿಸುವುದು ಈ ಸಂದರ್ಭದಲ್ಲಿ ಅಗತ್ಯವಾಗುತ್ತದೆ. 'ಒಳ್' ಧಾತುವಿನಿಂದಾದ ಒಳ್ಳಿತ್ತು, ಒಳಿತ್ತು (ಒಳ್ಳೆಯ) ಈ ಕೃದಂತಗಳನ್ನು ಲಕ್ಷಿಸಿದರೆ 'ಉಳ್' ಮತ್ತು 'ಒಳ' ಧಾತುಗಳ ಅರ್ಥಗಳಲ್ಲಿಯ ಭೇದ ಸ್ಪಷ್ಟವಾದೀತು. ಇಷ್ಟೇ ಏಕೆ, ಅದರಿಂದಾದ ಒಳ್ + ಪು = ಒಪ್ಪು ಈ ಭಾವ ವಾಚಕ ನಾಮ ಸಾಕಷ್ಟು ಪ್ರೇರೆಪಿಸುತ್ತದೆ. ಬೆಚ್+ಪು = ಬೆಪ್ಪು, ಉರ್ + ಪು = ಉಪ್ಪು, ತಳ್+ಪು=ತಪ್ಪು, ಗುಣ್+ಪು = ಗುಂಪು, ಕಮ್+ಪು=ಕಂಪು, ಸೊಂಪು, ಜೊಂಪು, ನೆನಪು, ಕೊಂಡ್+ಪು=ಕೊಂಪು, ಕೊಂಪೆ (ನೋಡಿರಿ, ಮುರಾರಿ ಕೋಂಡಣೇ=ಬಂಧಿಸು, ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ತುಡುಗು ದನ ಬಂಧಿಸುವ ಕೊಟ್ಟಿಗೆ ಅರ್ಥದಲ್ಲಿಯ ಕೊಂಡವಾಡೆ. ಲಿಂಗಪಥವ ತಪ್ಪಿನಡೆವರು ಜಂಗಮ ಮುಖದಿನ್ದೆ ನಿನ್ದೆ ಬನ್ದರೆ ಕೊಣ್ಡಮಾೞಗೆ ಹೋಪುದು ತಪ್ಪದು ಬಸವೇಶ್ವರರ ವಚನಗಳು ೧೦೬ - ಇಲ್ಲಿಯ ಕೊಣ್ಡಮಾೞು ಶಬ್ದಕ್ಕೆ 'Hill Slope?' ಎಂದು ಕಿಟೆಲ್‌ರು ಅರ್ಥ ಹೇಳಿದರೆ 'ಕೊಂಡ ದರಕ್ಕೆ ಮಾರುವುದು' ಇತಿ ಆರ್. ಸಿ. ಹೀರೆಮಠ) ಹೀಗೆ ಮೂಲ ತಿಳಿದ, ತಿಳಿಯದ ಭಾವನಾಮಗಳ ಸರಮಾಲೆಯೇ ಬೆಳೆಯುತ್ತದೆ.

ಈ 'ಒಳ್' ಧಾತುವಿಗೆ ಗ್ರಹಣೇ to contain ಎಂಬ ಇನ್ನೊಂದು ಅರ್ಥವೂ ಇರಬೇಕು. ಇದರಿಂದಲೇ ಒಳ, ಒಳಗೆ ಶಬ್ದಗಳು ಸಿದ್ಧವಾಗಿರಲು ಸಾಧ್ಯ.

ಇದೆ ರೀತಿಯಾಗಿ 'ಅಲ್' ಕೂಡ 'ಇರು' ಅರ್ಥದ ಒಂದು ಧಾತು. ಇದರ ನಿಷೇಧ ರೂಪ ಅ ಪ್ರತ್ಯಯ ಹತ್ತಿ 'ಅಲ್ಲ'. ಕೃನ್ನಾಮ (= ತುಮಂತ, Infinitive) ಗಳನ್ನು ಸಾಧಿಸುವುದಕ್ಕಾಗಿ ಹಚ್ಚುವ ಪ್ರತ್ಯಯ 'ಅಲ್', 'ಅಲು'ಗಳು ಈ ಧಾತುವಿನಿಂದಲೇ ಬಂದಿರಬಹುದಾಗಿವೆ.

ಪ್ರಾದುರ್ಭಾವೇ ಅರ್ಥದಲ್ಲಿಯ 'ಆಗು' ಧಾತುವಿಗೆ ಕಾಲ್ಯಾರ್ಥವೂ ಇರಬೇಕೆಂದು ನನ್ನ ಬಲವಾದ ಅನಿಸಿಕೆಯಾಗಿದೆ. ಇದಕ್ಕೆ ಎರಡೊಂದು ಕಾರಣಗಳಿವೆ. ಮೊದಲನೆಯದಾಗಿ ಕನ್ನಡದಲ್ಲಿಯ ಕಾಲ್ಯಾರ್ಥ ಕ್ರಿಯಾವಿಶೇಷಣಗಳು ಆ(ವಾ)ಗ, ಈ(ವಾ)ಗ, ಯಾವಾಗ. ಎರಡನೆಯದಾಗಿ ಈ ಕಾಲ್ಯಾರ್ಥ ಅವ್ಯಯ ಧಾತುಗಳ ಭೂತಕಾಲವಾಚಕ (ಹಾಗೂ ವರ್ತಮಾನಕಾಲವಾಚಕ) ಕೃದಂತಗಳಿಗೆ ಹತ್ತಿ ಬಂದಾಗ, ಬರುವಾಗ, ಕುಳಿತಾಗ, ನಿಲ್ಲುವಾಗ ಮೊದಲಾದ ರೂಪಗಳು ಸಿದ್ಧವಾಗಿವೆ. ಈ ನನ್ನ ತರ್ಕಕ್ಕೆ ಮರಾಠಿಯಲ್ಲೂ ಒಂದಿಷ್ಟು ಆಧಾರ ದೊರೆತಿದೆ. 'ಆಗು' ಪ್ರಾದುರ್ಭಾವೇ ಅರ್ಥದಲ್ಲಿ ಮರಾಠಿಯಲ್ಲಿ 'ಹೋ' ಎಂಬ ಧಾತು ಇದೆ. (ಸಂಸ್ಕೃತ ಭೂ, ಭವ > ಪ್ರಾಕೃತ ಹೋ > ಮರಾಠಿ ಹೋ) ಇದರ ಕೃನ್ನಾಮವೂ ಹೋ (ಉದಾಹರಣೆಗೆ ಆಗಬಹುದು = ಹೋಯೇ) ತೇಜ್, ಜೇಜ್, ಕೇಜ್ ಈ ಸರ್ವನಾಮಗಳಿಗೆ ಹೋ ಕೃನ್ನಾಮ ಸೇರಿದಾಗ (ಕನ್ನಡದ ಆ + ಆಗ, ಯಾವ + ಆಗ ದಂತೆ) ತೇಹೋ, ಜೇಹೋ, ಕೇಹೋ ರೂಪಗಳಾಗಿ ತೇಹ್ವಾಜ್, ಜೇಹ್ವಾಜ್, ಕೇಹ್ವಾಜ್ ಎಂದು ಮುಂದೆ ಮಾರ್ಪಟ್ಟಿವೆ. ಜ್ಞಾನೇಶ್ವರೀಯಲ್ಲೂ ಬಳಸಲಾಗಿವೆ.

'ಆಗು' ಶಬ್ದಕ್ಕಿರುವ 'ಇರು' ಅರ್ಥವನ್ನು ಕಿಟೆಲ್‌ರು ಗುರುತಿಸಿದ್ದಾರೆ. ಅದಕ್ಕಾಗಿ 'ಅಪ್ಪ' 'ಅಹ' ಕೃದಂತಗಳನ್ನು ಅವರು ಉದಾಹರಿಸಿದ್ದಾರೆ. ಅಂದರೆ ಆಗು = ಉಳ್ ಎಂದಾಯಿತು! ಇನ್ನು ಕನ್ನಡದ ಒಳ್ + ಆಗೆ (= ಒಳಗೆ) ಈ ಶಬ್ದ ಮರಾಠಿಯಲ್ಲಿ ಹೇಗೆ ಹೋಗಿದೆ, ನೋಡಬೇಕು.

ಕನ್ನಡ ಒಳ್, ಮರಾಠಿ ಆಜ್‌ತ + ಕನ್ನಡ ಆಗೆ, ಮರಾಠಿಯಲ್ಲಿ (ಕನ್ನಡದ್ದೇ) ಉಳ್ ನೇರವಾಗಿ, ಹೀಗೆ 'ಒಳಗೆ' ಶಬ್ದ ಮರಾಠಿಯಲ್ಲಿ 'ಆಜ್‌ತುಲು' ಆಗಿದೆ. ಇವು ಉದಾಹರಣೆಗಳು.

*ಧ್ಯಾನಾಚಾಜ್ ಆಜ್‌ತುಲೀಜ್ ಮಢೀಜ್ (೧೮-೭೩೯)*
ಧ್ಯಾನದ ಒಳಗಿನ ಕೋಶದಲ್ಲಿ
*ತೇ ಕಿರ ಭಾಷೇಚಿ ಆಜ್‌ತುಲ (೧೮.೫೯೯)* ಅದು ಭಾಷೆಯೊಳಗಿನದೇ
*ಆಜ್‌ತುಲೀ ಕೃಪೇಚೇನಿ ಬಳೇಜ್ (೧೩.೨೭೪)* ಒಳಗಿನ ಕೃಪೆಯ ಬಲದಿಂದ
*ಆಜ್‌ತುಲ ಜ್ಞಾನ ದೀಸೇ (೧೩.೨೭೪)* ಒಳಗಿನ ಜ್ಞಾನವು ಕಾಣುವುದು.
*ಆಜ್‌ತುಲೀ ಕಡೇ ಮಿ ಚ ಆಹೇ (೧೦.೧೯೮)* ಒಳಗಿನ ಬದಿಗೆ ನಾನೇ ಇದ್ದೇನೆ.

ಹೀಗೆ ಮರಾಠಿಯಲ್ಲಿ ಸಪ್ತಮಿಭಾವದಲ್ಲಿ ಬರುವ 'ಆಜ್‌ತುಲ' ಅವ್ಯಯದ ಮೂಲ ನೋಡಿ ಆಯಿತು.

ಹಳಗನ್ನಡ ಗ್ರಂಥಗಳಲ್ಲಿ - ಇಷ್ಟೇ ಏಕೆ, ಪ್ರಮಾಣಿತ ಸಾಹಿತ್ಯದಲ್ಲಿ ಕಾಣದ ಆದರೆ ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿಯ ಸಪ್ತಮೀಭಾವದ 'ಆಗ' ಹೇಗೆ ಸಿದ್ಧವಾಗಿರಬಹುದು? 'ಊರಲ್ಲಿ', 'ಮುಗಿಲಿನಲ್ಲಿ', 'ಮನೆಯಲ್ಲಿ', 'ಮನಸ್ಸಿನಲ್ಲಿ' ಇಂತಹ ಶಬ್ದಗಳು 'ಊರಾಗ', 'ನೀರಾಗ', 'ಮುಗಿಲಿವಾಗ', 'ಮನ್ಯಾಗ ಮನಸ್ಸಿನಾಗ ಹೀಗೆ ಆಗಿವೆ. ಲಿಖಿತ ರೂಪದಲ್ಲಿ ಇಲ್ಲದ್ದರಿಂದ ಇವು ಮೊದಲಿನವೇ, ಇತ್ತೀಚಿನವೇ ತಿಳಿಯುವುದು ಸಾಧ್ಯವಾಗಿಲ್ಲ.

ಎಂ.ಮರಿಯಪ್ಪ ಭಟ್ಟರು ಮನೆ ಅರ್ಥದಲ್ಲಿಯ (ತಮಿಳು, ಮಲೆಯಾಳಗಳಲ್ಲಿಯ) 'ಅಗ' ಶಬ್ದದಿಂದ 'ಅಗ' ಸಿದ್ಧವಾಗಿ 'ಒಳ್'ಗೆ ಅಂಟಿಕೊಂಡು ದ್ವಿರುಕ್ತಿಯಾಗಿ 'ಒಳಗೆ' ರೂಪಗೊಂಡಿತು ಎಂದು ಭಾವಿಸಿದ್ದಾರೆ. (ಪ್ರಬುದ್ಧ ಕರ್ನಾಟಕ ಸಂ. ೨೯ ಸಂ ೧) ಪ್ರ. ಗೋ ಕುಲಕರಣಿಯವರು ಇದನ್ನು ಅಲ್ಲಗಳೆಯುತ್ತ 'ಹೊರಗೆ' 'ಮೇಗೆ', 'ಕೆಳಗೆ' ಶಬ್ದಗಳನ್ನು ಅನುಲಕ್ಷಿಸಿ 'ಅಗೆ' (= ಮನೆ)ಯ ಅಸ್ತಿತ್ವವನ್ನು ಪ್ರಶ್ನಿಸಿದ್ದಾರೆ. ಳ ಕಾರವು ಲುಪ್ತವಾಗಿ 'ಒಳಗೆ'ಯಿಂದ 'ಅಗ' ಸಿದ್ಧವಾಯಿತೆಂದು ಅವರ ಅನಿಸಿಕೆ.[4] ಒಪ್ಪೋಣ. ಆದರೆ 'ಹೊರಗೆ' 'ಮೇಗೆ', 'ಕೆಳಗೆ'ಗಳಲ್ಲಿ ಬರುವ 'ಅಗೆ' ಎಲ್ಲಿಯದು? ಅದೇನು ಚತುರ್ಥಿ ವಿಭಕ್ತಿಯ ಪ್ರತ್ಯಯವೇ? (ಕಿಟೆಲ್ ಹಾಗೆ ಭಾವಿಸಿದ್ದಾರೆ!)

ಗುರುಗಳ ಕ್ಷಮೆ ಕೋರಿ ನಾನು ಮತ್ತೆ ನನ್ನ ಔದ್ಧತ್ಯವನ್ನೇ ಮುಂದುವರೆಸುತ್ತಿದ್ದೇನೆ. ಈ 'ಅಗೆ' ಮನೆಯಲ್ಲ. ಳ ಕಾರವನ್ನು ಕಳೆದುಕೊಂಡ ವಿಕೃತಿಯೂ ಅಲ್ಲ. ಇದು 'ಆಗು' ಧಾತುವಿನಿಂದಾದ ಕೃನ್ನಾಮ. ಕಣ್ಣಿಗೆ ಕಾಣದ ಮೋರೆಯನ್ನು ಕನ್ನಡಿಯಲ್ಲಿ ನೋಡಿಕೊಳ್ಳುವಂತೆ ಹಳಗನ್ನಡದಲ್ಲಿ ಕಾಣದ್ದನ್ನು ಜ್ಞಾನೇಶ್ವರೀಯಂತಹ ಗ್ರಂಥಗಳಲ್ಲಿ ನೋಡಬೇಕಾಗಿದೆ.

ಒಳ್ + ಅಗೆ = ಆಜ್‌ತ + ಉಲ ಎಂದು ಹೇಳಿ ಆಜ್‌ತುಲ ಶಬ್ದ ಪ್ರಯೋಗಗಳನ್ನು ನೋಡಿದೆವು. ಇಂತಹವೇ ಅನೇಕ ಶಬ್ದಗಳು ಜ್ಞಾನೇಶ್ವರೀಯಲ್ಲಿ ದೊರೆಯುತ್ತವೆ. ಮರಾಠಿ ವೈಯಾಕರಣಿಗಳು ಅವುಗಳಿಗೆ ಸಮಾಧಾನಕರ ವ್ಯುತ್ಪತ್ತಿ ನೀಡಿಲ್ಲ. ಈ ಪ್ರಯೋಗಗಳನ್ನು ನೋಡಬೇಕು.

*ಐತುಲಾ ನಾ ತೇತುಲಾ ಆಯಿತಾ ನಾ ರಚಲಾ (೧೩.೧೧೦೭)*
ಇದರೊಳಗಿನವನಲ್ಲ, ಆದರೊಳಗಿನವನಲ್ಲ ಸ್ವಯಂಭೂ ಅಲ್ಲ,
ಕಟ್ಟಿದವನೂ ಅಲ್ಲ.

(ಐತೇ + ಉಲ = ಇದರ, ಇದನ್ನು + ಉಳ್ಳ; ತೇತೇ + ಉಲ = ಆದರ, ಅದನ್ನು + ಉಳ್ಳ)

*ಬುದ್ಧಿ ಹೀ ಮಾಗಿಲೀಕಡೇ (೧೮.೭೩೭)* ಬುದ್ಧಿಯ ಹಿಂದುಳ್ಳ (ಹಿಂದಿನ) ಕಡೆ.
*ಬಾಹಿರಿಲೇಜ್ ತಿಯೇಜ್ ಹೀಜ್ (೧೮.೪೯೮)* ಹೊರಗುಳ್ಳ ಆ (ಚಕ್ಷು ಇತ್ಯಾದಿ)
(ಮಾಗೇ + ಉಲ = ಹಿಂದೆ ಉಳ್ಳ; ಬಾಹಿರ + ಉಲ =
ಹೊರಗೆ ಉಳ್ಳ)

ಈಗ ಯಾರಿಗಾದರೂ ಪಿತ್ತಿಲ್, ಪಿನ್ತಿಲ್, ಮೊಸನ್ತಿಲ್ ಹಿತ್ತಿಲ್ ಶಬ್ದಗಳು ನೆನಪಾದರೆ ಉಳ್ ಹಾಗೂ ಇಲ್ ಧಾತುಗಳಲ್ಲಿಯ ಅಂತರವನ್ನು ಕಿಟೆಲ್ಲರೂ ಒಪ್ಪಿಲ್ಲವೆನ್ನಬೇಕಾಗುತ್ತದೆ.

ಈಗ ಇನ್ನೊಂದು ವಿವೇಚನೆ. ತೇಜ್ + ಹೋ > ತೇಹೋ > ತೇಹ್ವಾಜ್ = ಅದು + ಆಗ > ಆ + ಆಗ > ಆಗ (ಕಾಲ್ಯಾರ್ಥದಲ್ಲಿ) ಈ ಬೆಳವಣಿಗೆಯನ್ನು

4 ಕನ್ನಡ ಭಾಷೆಯ ಚರಿತ್ರೆ ಪು ೪೯೦

ಹಿಂದೆ ಗುರುತಿಸಿದ್ದೇನೆ. ಸಪ್ತಮಿ ವಿಭಕ್ತಿಯ 'ಇಂ' ಪ್ರತ್ಯಯ ಹತ್ತಿ ತೇವ್ಹಾಜ್‌ವಿಂದ ತೇಂವೀಜ್ ಆಗಿದೆ. ಜ್ಞಾನೇಶ್ವರೀಯಲ್ಲಿ 'ತೇಂವೀಜ್'ಯಿಂದಲೇ ಆರಂಭವಾಗುವ ಓವಿಗಳು ಸುಮಾರು ೭೫! ಅರ್ಥ 'ಹಾಗೆ' 'ಅದರಂತೆ'.

ಅಪ್ಪಂ + ಗೆ > ಅ ಹಂಗೆ > ಹಾಗೆ ಇದನ್ನು ಲಕ್ಷಿಸಿದರೆ 'ತೇಂವೀಜ್' ಹಾಗೂ 'ಹಾಗೆ' ಇವುಗಳಲ್ಲಿಯ ಅರ್ಥಸಾಮ್ಯ ಸ್ಪಷ್ಟವಾಗಬೇಕು.

# ೮.ಮರಾಠಿಯಲ್ಲಿ ವಿಭಕ್ತಿ ಪ್ರತ್ಯಯಗಳು ೧

ಪ್ರಾಕೃತದಲ್ಲಿ ಪ್ರಥಮಾ ವಿಭಕ್ತಿಯ ಪ್ರತ್ಯಯ ಓ ಎಂದಿದ್ದರೆ ಮಾಗಧೀ ಹಾಗೂ ಅರ್ಧಮಾಗಧೀಯಲ್ಲಿ ಅದು ಏ ಎಂದಾಗಿತ್ತು. ಅಪಭ್ರಂಶ ಭಾಷೆಯಲ್ಲಿ ಅದು ಎಲ್ಲೆಡೆ ಉ ಎಂದು ಹೆಚ್ಚಾಗಿತ್ತು ಎಂದು ತಗಾರೆ ಹೇಳುತ್ತಾರೆ.

ಕಾಳಿದಾಸನ ವಿಕ್ರಮೋರ್ವಶೀಯದಲ್ಲಿ (ಕ್ರಿ. ಶ. ಸುಮಾರು ೫೦೦) ನಾಲ್ಕನೆಯ ಅಂಕದಲ್ಲಿ ಈ ಅಪಭ್ರಂಶ ಭಾಷೆಯ ಮೂಲ ದೊರೆಯುತ್ತದೆಯೆಂದು ಹೇಳಲಾಗಿದೆ. ಇದರ ಬಗ್ಗೆ ಸಾಕಷ್ಟು ವಾದವೂ ಇದೆ. ಅದು ಇಲ್ಲಿ ಅಪ್ರಸ್ತುತ. ತಗಾರೆಯವರು ವಿಕ್ರಮೋರ್ವಶೀಯ (ನಾಲ್ಕನೆಯ ಅಂಕ)ದಲ್ಲಿಯೂ ಪ್ರಥಮೆಗೆ ಉ ಕಾರ ಪ್ರತ್ಯಯ ಹತ್ತಿದೆ ಎಂದಿದ್ದಾರೆ. ವರು, ಕೋಲು, ಣಿಸಿಯಾರು ಎಂಬುದಾಗಿ ಉದಾಹರಣೆಗಳನ್ನು ಕೊಟ್ಟಿದ್ದಾರೆ.

ತದನಂತರ ಹತ್ತನೆಯ ಶತಮಾನದ ದೇವಸೇನ, ರಾಮಸಿಂಹ ಇತ್ಯಾದಿ ಲೇಖಕರ ಕೃತಿಗಳಲ್ಲಿ ಕೂಡ ಮೋಹು, ಕಾಲು, ಬುಧವು, ಖವಣು ಎಂದೆಲ್ಲ ಉಕಾರಾಂತ ಪದಗಳು ಸಿದ್ಧವಾಗಿವೆ. ಹೀಗೆ ಅಪಭ್ರಂಶದಿಂದ ಮರಾಠಿಗೆ ಪ್ರಥಮಾ ವಿಭಕ್ತಿಯ ಉ ಪ್ರತ್ಯಯ ಬಂದಿತೆಂದು ತುಳಮುಳೆ ಸಾಧಿಸಿದ್ದಾರೆ.

ಐದನೆಯ ಶತಮಾನದ ವಿಕ್ರಮೋರ್ವಶೀಯವಾಗಲೀ, ಹತ್ತನೆಯ ಶತಮಾನದ ಜೋಯಿಂಡ, ದೇವಸೇನ, ರಾಮಸಿಂಹರ ಕೃತಿಗಳಾಗಲೀ ಅಪಭ್ರಂಶ ಭಾಷೆಯ ಪಶ್ಚಿಮಭೇದದಲ್ಲಿ ಅಂತರ್ಭೂತವಾಗಿವೆ. ಈ ಪಶ್ಚಿಮ ಅಪಭ್ರಂಶವು ಸೌರಾಷ್ಟ್ರದ್ದೆಂದೂ, ಇದರಿಂದ ಗುಜರಾತೀ, ರಾಜಸ್ಥಾನೀ ಹಾಗೂ ಹಿಂದೀ ಭಾಷೆಗಳು ಹುಟ್ಟಿದವೆಂದೂ ತಗಾರೆ ಹೇಳುತ್ತಾರೆ.[1] ಹೀಗಿದ್ದ ಪಕ್ಷದಲ್ಲಿ ಅಕಾರಾಂತ ಪುಲ್ಲಿಂಗ ನಪುಂಸಕಲಿಂಗದ ಮರಾಠಿ ನಾಮಗಳಿಗೆ ಹತ್ತುವ ಉ ಪ್ರತ್ಯಯವು ಪಶ್ಚಿಮ ಅಪಭ್ರಂಶದಿಂದ ಬರುವ ಸಾಧ್ಯತೆಯಂತೂ ಇಲ್ಲ.

ಇನ್ನು ಹತ್ತನೆಯ ಶತಮಾನದ ದಕ್ಷಿಣ ಅಪಭ್ರಂಶ ಭಾಷೆಯಲ್ಲಿ ಕೂಡ ಉ ಪ್ರತ್ಯಯ ಹತ್ತಿ ಪದಗಳು ಸಿದ್ಧವಾಗಿವೆ. ತಗಾರೆಯವರು ಕೊಟ್ಟ ಉದಾಹರಣೆಗಳು.

ಪುಲ್ಲಿಂಗ : ಕಾಲು, ಸುದತ್ತು, ಅರುಹು, ವೇಸು, ಸಾಹಾಕೌ, ವರಯಿತ್ತು ಭೋಲೌ, ವಿಠ್ಠಲೌ, ಆಚೋಬ್ಯೌ, ರಾಣೌ.

ನಪು. ಲಿಂಗ : ಪಚ್ಚಿಟ್ಟು, ಖೇಲು, ಜುನ್ನೌ, ಆಇದ್ದೌ, ಗಾಮು, ಚರಣು, ಮಣು ಈ ಸ್ರೋತದಿಂದ ಮರಾಠಿಗೆ ಉ ಪ್ರತ್ಯಯ ಬಂದಿರಬಹುದೇ?

ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಅಕಾರಾಂತ ಪುಲ್ಲಿಂಗ ಶಬ್ದಗಳಿಗೆ ಉ ಪ್ರತ್ಯಯ ಹತ್ತಿ ಸಿದ್ಧವಾದ ರೂಪಗಳು ಹೀಗೆ.

*ಜೇಥ ಕಾಮು ಉಪನಲಾ ತೇಥ ಕ್ರೋಧು ಆದಿಜ್ಚಿ ಆಲಾ (ಜ್ಞಾನೇಶ್ವರೀ ೨.೩೨೨)*

---

1. Historical Grammar of Apabhramsha p-15

ಕಾಮವು ಹುಟ್ಟಿದಲ್ಲಿ ಕ್ರೋಧವು ಮೊದಲೇ ಬಂದಿರುತ್ತದೆ.

ಮಗ ಪಾರ್ಥು ಕೃಷ್ಣಾತೇಜ್ ಹ್ಮಣೇ (ಜ್ಞಾ ೫.೧)

ಬಳಿಕ ಪಾರ್ಥನು ಕೃಷ್ಣನಿಗೆ ಹೇಳಿದನು.

ಬ್ರಹ್ಮಾ ಪ್ರಾತಃಕಾಳು ವಿಷ್ಣು ತೋ ಮಧ್ಯಾಹ್ನ ವೇಳು (ಜ್ಞಾ. ೧೪.೧೧೧)

ಬ್ರಹ್ಮನ ಪ್ರಾತಃಕಾಲವು, ಅದು ವಿಷ್ಣುವಿನ ಮಧ್ಯಾಹ್ನ ವೇಳೆಯು.

ನಪುಂಸಕಲಿಂಗದ ಶಬ್ದಗಳಿಗೆ ಉ ಪ್ರತ್ಯಯ

ತೇಜ್ ಬಳು ಜಾಣತಿ ನಾ - ಆ ಬಲವು ಅವರಿಗೆ ಗೊತ್ತಿಲ್ಲ.

ದರ್ಶನು ಅಚ್ಯುತಾಚೇಜ್ - ಅಚ್ಯುತನ ದರ್ಶನವು

ತಜ್‌ವ ಅಘಾಸುರಪಣು ಗೇಲೇ ಆಗ ಅಘಾಸುರತನವು ತೊಲಗಿತು

ಮೇಲಿನ ಮೂರು ಉದಾಹರಣೆಗಳು ಭಾಸ್ಕರಭಟ್ಟನ (ಶಕೆ ೧೧೬೦ - ೧೨೨೬) ವತ್ಸಹರಣದಲ್ಲಿಯವು.

ಸ್ತ್ರೀಲಿಂಗದ ಅಕಾರಾಂತ ಶಬ್ದಗಳಿಗೆ ಉ ಪ್ರತ್ಯಯ.

ವರಾತು ವಧುವರಾಚೀ ಮಿರ್ವತಸೇ - ವಧೂವರರ ಮೆರವಣಿಗೆಯು ಶೋಭಿಸುತ್ತಿತ್ತು. (ರುಕ್ಮಿಣೀಸ್ವಯಂವರ)

ಆವೇಶೇ ಪೈಜು ಘೇತಲೀ - ಆವೇಶದಿಂದ ಪಣವನ್ನು ತೊಟ್ಟನು

ತುಜಸಿ ಘೇತಾಜ್ ಹಾತಿಯೆರು ಮಿ ಲಾಜತುಸೇ - ನಿನ್ನೊಡನೆ (ಕಾದಲು) ಶಸ್ತ್ರ ತೆಗೆದುಕೊಳ್ಳಲು ನನಗೆ ಸಂಕೋಚ (ಮೇಲಿನವೆರಡೂ ಶಿಶುಪಾಳವಧದಲ್ಲಿಯವು)

ಹೀಗೆ ಮೂರು ಲಿಂಗದ ಅಕಾರಾಂತ ಶಬ್ದಗಳಿಗೆ ಉ ಪ್ರತ್ಯಯ ಹತ್ತಿ ಪ್ರಥಮಾ ವಿಭಕ್ತಿಯ ಏಕವಚನದ ಪದಗಳಾಗಿವೆ. ತುಳಪುಳೆಯವರು ಉ ಪ್ರತ್ಯಯವನ್ನು ಹೀಗೆ ಸಾಧಿಸಿದ್ದಾರೆ.[2]

ಸಂಸ್ಕೃತ ಸ್ > ಪ್ರಾ ಕೃತ ಓ > ಅಪಭ್ರಂಶಉ > ಮರಾಠಿ ಉ

ಪುತ್ರಸ್ = ಪುತ್ರಃ > ಪುತ್ತೋ > ಪುತ್ತು > ಪೂತು.[2]

ಈ ಪಾದದಲ್ಲಿ ಒಂದಿಷ್ಟು ಕೊಂಕು ಇದೆ. ಸಂಸ್ಕೃತದಲ್ಲಿ ಸ್ ಪ್ರತ್ಯಯ ಅಕಾರಾಂತ ಪುಲ್ಲಿಂಗ ಏಕವಚನ ಶಬ್ದಗಳಿಗೆ ಮಾತ್ರ ಅನ್ವಯಿಸುತ್ತದೆ.

ರಾಮಃ, ದೇವಃ, ವೃಕ್ಷಃ, ಬಾಲಃ ಇತ್ಯಾದಿ

ಸಂಸ್ಕೃತದಲ್ಲಿ ಅಕಾರಾಂತ ಸ್ತ್ರೀಲಿಂಗದ ಶಬ್ದಗಳು ಇಲ್ಲವೇ ಇಲ್ಲ! ನಪುಂಸಕಲಿಂಗದ ಅಕಾರಾಂತ ಶಬ್ದಗಳಿಗೆ ಏಕವಚನದಲ್ಲಿ ಮ್ ಪ್ರತ್ಯಯ ಹತ್ತುತ್ತದೆ, ಸ್ ಅಲ್ಲ. ವನಮ್, ಬಲಮ್, ದರ್ಶನಮ್ ಎಂದಾಗಿ. ಪ್ರಾಕೃತದಲ್ಲೂ ಈ ಮ್ ಪ್ರತ್ಯಯ ಹಾಗೆಯೇ ಉಳಿದಿದೆ. ಉದಾಹರಣೆಗಳು.

---

2. ಯಾದವ ಕಾಲೀನ ಮರಾಠೀ ಭಾಷಾ ಪು . ೨೨೦

*(ಸಂ) ದ್ವಿಪದೀಖಂಡಂ ಖಲ್ವೇತತ್ > (ಪ್ರಾ) ದುಅಈಖಂಡಂ ಕು ಏದಂ*
*ಏತತ್ತನ್ಮಕರಸ್ಥೋದ್ಯಾನಮ್ > ಏದಂ ತಂ ಮಅರಸ್ಥೋದ್ದಾಣಮ್*
*ಏತತ್ಸರ್ವಂ ಸಜ್ಜಮ್ > ಏದಂ ಸವ್ವಂ ಸಜ್ಜಂ*
*ಪ್ರೇಕ್ಷಿತುಂ ಚಾಸ್ತಿ ಮೇ ಕೌತೂಹಲಮ್ > ಪೆಕಿದುಂಚ ಅತ್ಥಿ ಮೇ ಕೋದೂಹಲಂ*

ಇವೆಲ್ಲವೂ ಶ್ರೀ ಹರ್ಷನ (ಏಳನೆಯ ಶತಮಾನದ ಪೂರ್ವಾರ್ಧ) ರತ್ನಾವಲೀ ನಾಟಕವಲ್ಲಿಯವು. ಇವುಗಳ ಬಗ್ಗೆ ತುಳಪುಳೆ ಏನನ್ನೂ ಹೇಳುವುದಿಲ್ಲ. ಇನ್ನು ಸಂಸ್ಕೃತ ಪ್ರಾಕೃತಗಳ ಆಧಾರ ತೆಗೆದುಕೊಳ್ಳದೆಯೆ ಅಪಭ್ರಂಶದ ಉಕಾರವು ಮರಾಠಿಯಲ್ಲಿ ನೇರವಾಗಿ ಬಂದಿತು ಎಂದು ಅವರು ಹೇಳಬಹುದಿತ್ತು. ಆದರೆ ಅಲ್ಲೂ ತೊಡಕು ಇದೆ. ಲಿಂಗಭೇದವಿಲ್ಲದಿದ್ದರೂ ಅಪಭ್ರಂಶ ಭಾಷೆಯಲ್ಲಿ ಉ ಪ್ರತ್ಯಯ ಪ್ರಥಮಾ ವಿಭಕ್ತಿಯನ್ನಷ್ಟೇ ಅಲ್ಲ, ದ್ವಿತೀಯಾ ಹಾಗೂ ಸಂಬೋಧನೆ ವಿಭಕ್ತಿಗಳನ್ನು ಸಾಧಿಸುತ್ತದೆ! ಉಕಾರಸಾಧಿತ ದ್ವಿತೀಯಾ ವಿಭಕ್ತಿಯ ರೂಪಗಳಿಗೆ ತಗಾರೆಯವರು ಕಿತ್ತಣು, ವಯಣು, ಣರರು ಎಂದು ಉದಾಹರಣೆ ಕೊಟ್ಟಿದ್ದಾರೆ. ಆ ಭಾಷೆಯಲ್ಲಿ ದ್ವಿತೀಯಾ, ಸಂಬೋಧನ ವಿಭಕ್ತಿಗಳಿಗೆ ಪ್ರತ್ಯೇಕ ಪ್ರತ್ಯಯಗಳಿಲ್ಲ. ಆದರೆ ಮರಾಠಿಯಲ್ಲಿ ದ್ವಿತೀಯಾ ವಿಭಕ್ತಿಯ ಪ್ರತ್ಯಯಗಳೇ ಬೇರೆ.

ಪಶ್ಚಿಮ ಅಪಭ್ರಂಶದಿಂದ ಹುಟ್ಟಿವೆಯೆನ್ನಲಾದ ರಾಜಸ್ಥಾನೀ, ಗುಜರಾತೀ, ಹಿಂದೀ ಭಾಷೆಗಳಲ್ಲಿ ಪ್ರಥಮಾ ವಿಭಕ್ತಿಗಾಗಿ ಉಪ್ರತ್ಯಯ ಹತ್ತದಿರುವುದರಿಂದಲೂ, ದಕ್ಷಿಣ ಅಪಭ್ರಂಶದಿಂದ ಹುಟ್ಟಿದೆಯೆನ್ನಲಾದ ಮರಾಠಿಯಲ್ಲಿ ಮೇಲ್ಕಾಣಿಸಿದ ಗೊಂದಲವಿರುವುದರಿಂದಲೂ ಜ್ಞಾನೇಶ್ವರಕಾಲೀನ ಮರಾಠಿಯಲ್ಲಿ ಕಾಣಸಿಗುವ ಉ ಪ್ರತ್ಯಯಕ್ಕೆ ಹಳಗನ್ನಡದ ವಿನಾ ಬೇರೆ ಸ್ರೋತವಿಲ್ಲ. ಕಾಲ್ಡವೆಲ್‌ರು ತಮ್ಮ ಕಂಪೆರೆಟಿವ್ಹ್ ಗ್ರಾಮರ್ ಆಫ್ ದ್ರವಿಡಿಯನ್ ಲ್ಯಾಂಗ್‌ವೇಜಿಸ್‌ನಲ್ಲಿ ಇದೇ ಅಭಿಪ್ರಾಯ ಸೂಚಿಸಿದ್ದಾರೆ.

ಕನ್ನಡದಲ್ಲಿ ಪ್ರಥಮಾ ವಿಭಕ್ತಿ ದರ್ಶಕ ಪ್ರತ್ಯಯವಿಲ್ಲವೆಂದು ಕೆಲ ವ್ಯಾಕರಣಕಾರರು ಹೇಳಿದ್ದರೂ, ಹಳಗನ್ನಡದಲ್ಲಿ ಪ್ರಥಮಾ ವಿಭಕ್ತಿ ಸೂಚಿಸುವ ಉಪ್ರತ್ಯಯಾಂತ ಉದಾಹರಣೆಗಳನ್ನು ನೋಡಬಹುದು.

ಗ್ರಂಥಗಳಲ್ಲಿ : ಈ ದೊರೆಯಜಿಮಗನುಂ ವೃಷಸಾದಂ, ವಾಯು ಪುತ್ರಕನುಂ, ಪಾಂಚಾಳಿಯುಂ, ಪರಾಕ್ರಮಯುಮೀ ಪೆರ್ಮಾತುಮೀ ಗಂಡುಮೀ ಸುಭಟಲಾಪಮುಂ, ಸೂತಾವತಾರಮುಂ (ರನ್ನನ ಗದಾಯುದ್ಧ) ಆಯ್ನೂರ್ವರ್ ಕನ್ನೆಯರುಂ (ನಾಗಚಂದ್ರನ ಪಂಪರಾಮಾಯಣ) ಶಿಲಾಲೇಖಗಳಲ್ಲಿ *ಗಾಮುಣ್ಡರು, ದೊಡ್ಡರು, ಪಾರ್ವ್ವರು, ಸಾಮಿಯು, ಆಯ್ಯಣ್ಣಸು, ಭಾರಣಸಿಯು, ಕೆಟೆಯು (ಎಸ್. ಆಯ್. ಆಯ್. ಒಂಬತ್ತು ಕ್ರ ೧೮ ಕಾಲ ಕ್ರಿಶ ೮೮೩, ೮೮೪)*

*ಭವಗಾಮುಣ್ಡಸು ಚನ್ದಗಾಮುಣ್ಡಸು (ಎ. ಕ. ಎಂಟು ಎಸ್ ಬಿ ೫೭೧ ಕಾಲ ಕ್ರಿಶ ೬೯೨)*

*ಸಿವಪ್ಪಾಳಿಯು (ಕ್ರಿ. ಶ. ೭೫೦ ರಿಂದ ೭೭೦)*

*ಪಣು ಮಲ್ಲು (ಎ.ಕ. ಮೈ ಗು ೮೬)*

ಮರಾಠಿಯಲ್ಲಿ ಪ್ರಥಮಾ ವಿಭಕ್ತಿಯ ಬಹುವಚನದ ರೂಪಗಳಲ್ಲಿ ಕನ್ನಡದ ಪ್ರಭಾವ ಅಷ್ಟಾಗಿ ಕಾಣಸಿಗುವುದಿಲ್ಲ. ಆದರೂ ಬಹುವಚನದ ಪ್ರತ್ಯಯವಾದ ರ್ + ಪ್ರಥಮಾ ವಿಭಕ್ತಿಯ ಪ್ರತ್ಯಯ ಉ ಸೇರಿ ಸಿದ್ಧವಾದ ಕೆಲವು ರೂಪಗಳನ್ನು ನೋಡುತ್ತೇವೆ. ಉದಾಹರಣೆಗಳು.

*ತೇ ದಾಶಿರುಜ್ ಹಿಜ್ ಕಿಜ್ ತೇಯಾ ಮಾನ್ಯ ಹೋಯೇ (೧೮-೧೩೯೪)*

ಆ ದಾಸಿಯು ಕೂಡ ಅವನಿಗೆ (ಅರಸನಿಗೆ) ಮೆಚ್ಚುಗೆಯಾಗುತ್ತಾಳೆ.

*ಆಂಧಳೇ ಹಾತಿರುಜ್ ಮಾತಲೇ (೧೯.೬೯೨) ಕುರುಡು ಆನೆಯು ಸೊಕ್ಕಿದಂತೆ*

*ಪಢವಿಲೇಜ್ ಪಾಖಿರುಜ್ ಐಸೇ ನ ಬೋಲೇ (೧೧.೧೭೦)*

ಕಲಿಸಿದ ಪಕ್ಷಿಯೂ ಹೀಗೆ ಮಾತನಾಡುವುದಿಲ್ಲ.

ಇವಲ್ಲದೆ ಆ ಕಾಲದ ಸಾಹಿತ್ಯದಲ್ಲಿ ಗೋವಳರುಜ್, ಕೀಡರುಜ್, ಗೋರುಜ್ ಬಟಿಕುರುಜ್, ಬಟುರುಜ್, ಲೇಕರುಜ್, ವಾಸರುಜ್, ದಾಸರೇಪಣ ಎಂದೆಲ್ಲ ಪ್ರಯೋಗಗಳೂ ದೊರೆಯುತ್ತವೆ. ಮೊದಮೊದಲು ಬಹುವಚನ ದರ್ಶಕವಾಗಿದ್ದರೂ ನಂತರ ಇಂತಹ ರೂಪಗಳು ಮಮತ್ವ (ಲೇಕರುಜ್) ಅಥವಾ ತಿರಸ್ಕಾರ (ಬಟಿಕುರುಜ್ ದಾಸಿರುಜ್) ದರ್ಶಕವಾದವು.

ಜ್ಞಾನೇಶ್ವರೀಯಲ್ಲಿ ಬರುವ ದ್ವಿತೀಯಾ ವಿಭಕ್ತಿಯ ಈ ರೂಪಗಳನ್ನು ಪರಿಶೀಲಿಸಬೇಕು.

*ತೂಜ್ ಮಾಜ್ ಕವಣೇಜ್ ತೋಂಡೇಜ್ ವಾನಾವಾಸಿ (೧೪.೧೪)*

ನೀನು ನನ್ನನ್ನು ಯಾವ ಮುಖದಿಂದ ಬಣ್ಣಿಸುವೆ?

*ಮೂಳಶಾಸ್ತ್ರಪದೇಜ್ೀ ವಾಖಾಣೇನ (೧೪.೨೯)*

ಮೂಲಶಾಸ್ತ್ರ ಪದಗಳನ್ನು ಬಣ್ಣಿಸುವೆ.

*ಆಘವೀಜ್ ಚಿ ಜ್ಞಾನೇಜ್ (೧೪.೪೫)* ಸಮಸ್ತ ಜ್ಞಾನಗಳನ್ನು

*ದೇಹಾಚೇಜ್ ಬೇಳೇಜ್ ಓಲಾಂಡೂನಿ (೧೪.೫೧)* ದೇಹದ ಬೇಲಿಯನ್ನು ದಾಟಿ

*ಜನ್ಮಕ್ಷಯಾಜ್ ಅತೀತ (೧೪.೫೯)* ಜನ್ಮ ಕ್ಷಯವನ್ನು ದಾಟಿ

*ಕೇತೀ ಬೋಲೋ ವಾಯಾಜ್ (೧೪.೭೦)* ಎಷ್ಟು ವ್ಯರ್ಥ(ವನ್ನು) ಹೇಳಲಿ?

*ಐಸೇಜ್ ಲೇಜ್‌ಕರೂಜ್ ಏಕ ಪ್ರಸವಲೀ, ಹೇ ದೇಖ (೧೪.೧೦೫)*

ಇತಂಹ ಒಂದು ಮಗುವನ್ನು ಹಡೆದಳು, ಇದು ನೋಡು.

ಇಲ್ಲಿ ದ್ವಿತೀಯೆಯ ರೂಪಗಳು ಏಜ್, ಆಜ್ ಮತ್ತು ಊಜ್ ಅಂತ್ಯಗಳಾಗಿವೆ ಎಂದು ಹೊರನೋಟಕ್ಕೆ ಎನಿಸಬಹುದು. ಆದರೆ ಇಲ್ಲಿ ಶಬ್ದದ ರೂಪಗಳೇ ಇಂತಿವೆ. ತೋಂಡೇಜ್ (ತೊಂಡದ ಬಹುವಚನ) ಪದೇಜ್ (ಪದ ಶಬ್ದದ ಬಹುವಚನ) ಜ್ಞಾನೇಜ್ (ಜ್ಞಾನ ಶಬ್ದದ ಬಹುವಚನ), ಬೇಳೇಜ್ (ಮೂಲ ಏಕವಚನ) ಲೇಜ್‌ಕರೂಜ್ (ಮೂಲ ಏಕವಚನ) ಜನ್ಮಕ್ಷಯದ ದ್ವಿತೀಯಾ ರೂಪಮಾತ್ರ ಜನ್ಮಕ್ಷಯಾಜ್, ವಾಯಾದ ದ್ವಿತೀಯಾ ರೂಪ ವಾಯಾಜ್ ಹೀಗಿವೆ.

ಆದಾಗ್ಯೂ ಪ್ರಥಮಾ ದ್ವಿತೀಯಾ ವಿಭಕ್ತಿಗಳಿಗೆ ಮರಾಠಿಯಲ್ಲಿ ಪ್ರತ್ಯಯಗಳೇ ಇಲ್ಲವೆಂದು ತುಳಪುಳೆ, ಕೃ. ಪಾಂ. ಕುಲಕರ್ಣಿ ಮೊದಲಾದ ಭಾಷಾತಜ್ಞರು ಭಾವಿಸಿದ್ದಾರೆ.

ತುಳಪುಳೆಯವರಂತೂ ಪ್ರಥಮಾ ದ್ವಿತಿಯಾ ಹಾಗೂ ಕ್ವಚಿತ್ ಸಂಬೋಧನ ಈ ಮೂರೂ ವಿಭಕ್ತಿಗಳ ಮಿಶ್ರಣವಾಗಿ ಒಂದು (ಸಾಕ್ಷಾತ್) ವಿಭಕ್ತಿ ನಿರ್ಮಾಣವಾಯಿತೆಂದು ಭಾವಿಸುತ್ತಾರೆ. ನಾನು ಮೇಲೆ ತೋರಿಸಿದ ಆಜ್, ಜ್ ಅಂತ್ಯದ ರೂಪಗಳನ್ನಂತೂ ಅವರು ಗಣನೆಗೆ ತೆಗೆದುಕೊಂಡಿಲ್ಲ, ಇಷ್ಟೇ ಅಲ್ಲ, ಅವರಾಗಲೀ, ರಾಜವಾಡೆ, ಕುಲಕರ್ಣಿ ಮೊದಲಾಗಿ ಪಂಡಿತರಾಗಲೀ ಜ್ಞಾನೇಶ್ವರೀಕಾಲೀನ ಸಾಹಿತ್ಯದಲ್ಲಿ ವಿಪುಲವಾಗಿ ಕಾಣಸಿಗುವ ತೇಜ್ ಪ್ರತ್ಯಯದ ರೂಪಗಳನ್ನು ಅನಾಯಾಸವಾಗಿ ಕಡೆಗಣಿಸಿದ್ದಾರೆ. ತೇಜ್ ಪ್ರತ್ಯಯದ ವೈಪುಲ್ಯವನ್ನು ತೋರಿಸುವುದಕ್ಕಾಗಿಯೇ ಇಷ್ಟೊಂದು ಉದಾಹರಣೆಗಳನ್ನು ಕೊಡಬೇಕಾಗಿದೆ.

ದಾಮೋದರ ಪಂಡಿತನ (ಕ್ರಿ.ಶ. ೧೨೩೮-೧೩೦೪) ವತ್ಸಹರಣ

*ಶ್ರೀ ಕೃಷ್ಣಾತೇಜ್ ಪುಸಿಜತೇ* - ಶ್ರೀ ಕೃಷ್ಣನನ್ನು ಕೇಳುತ್ತಾರೆ.
*ಪೂರ್ವೇತೇಜ್ ಪಶ್ಚಿಮ ಭಣತಿ* - ಪೂರ್ವವನ್ನು ಪಶ್ಚಿಮವೆನ್ನುತ್ತಾರೆ.
*ಜೇಆತೇಜ್ ಆತ್ಮಾರಾಮು ಧ್ಯಾತಿ* - ಯಾರನ್ನು ಆತ್ಮಾರಾಮನು ಧ್ಯಾನಿಸುತ್ತಾನೋ
*ತೇಆತೇಜ್ ವಿನೋದೇ ಗೌಳಣೀ ನಾಚವಿತಾತೀ* - ಅವರನ್ನು ಗೊಲ್ಲತಿಯರು ಸರಸದಿಂದ ಕುಣಿಸುತ್ತಾರೆ.
*ಶುಕಾದಿ ಕಾಇ ವಾನಿತೇ ಅರೂಪಾ ನಿರ್ಗುಣಾತೇಜ್*
ಶುಕಾದಿ ಮುನಿಗಳು ಅರೂಪ ನಿರ್ಗುಣನನ್ನು ಅದೇನು ಬಣ್ಣಿಸಿಯಾರು?
*ಜೇಆತೇಜ್ ಪ್ರುತೀ ಭಣತೀ ನೇತಿ* - ಯಾವುದನ್ನು ಪ್ರುತಿ ನೇತಿ ಅನ್ನುವುದೋ

ಮಹದಂಬಾಳ (ಕ್ರಿ.ಶ. ೧೨೫೩-೧೩೦೩) ರುಕ್ಮಿಣೀಗೀತ

*ರುಕ್ಮಿಣೀ ಪಾಹೇ ಚಕ್ರಪಾಣೀ ವಲ್ಲಭಾತೇಜ್* - ರುಕ್ಮಿಣಿಯು ಚಕ್ರಪಾಣಿ ಪತಿಯನ್ನು ನೋಡಿದಳು

ಭಾಸ್ಕರಭಟ್ಟ ಬೋರೀಕರನ (ಕ್ರಿ. ಶ. ೧೨೫೮-೧೩೧೮) ಶಿಶುಪಾಳವಧ
*ಮೇಳೌನಿ ಯಾಗದ್ರವ್ಯಾತೇಜ್ ಯಜ್ಞ ಆರಂಭಿಲಾ*
ಯೂಗದ್ರವ್ಯಗಳನ್ನು ಸಂಗ್ರಹಿಸಿ ಯಜ್ಞ ಆರಂಭಿಸಿದನು.
*ಹೇಜ್ ಕಾಇಸೇಜ್ ಮಾತೇಜ್ ಭೇಡಾವಣೇಜ್* - ಇದೇನು ನನ್ನನ್ನು ಹೆದರಿಸುವುದು?
*ತುಮತೇಜ್ ಖಾಣೌನಿ ಕಾಢೈನು* - ನಿಮ್ಮನ್ನು ಅಗೆದು ತೆಗೆದೇನು.

ನರೇಂದ್ರನ (ಕ್ರಿ. ಶ. ೧೨೬೮ ರಿಂದ ೧೩೨೮) ರುಕ್ಮಿಣೀ ಸ್ವಯಂವರ
*ತೋ ಮಾತೇಜ್ ವರೀಲ ಹೇ ಆಸ ಕಾಯಿಸೀ*
ಅವನು ನನ್ನನ್ನು ವರಿಸುತ್ತಾನೆಂಬ ಆಸೆ ಏಕೆ?

*ಮಿಾ ಸದಾ ಸರ್ವೇಶ್ವರಾತೇಜ್ ವಾಖಾಣೆ*
ನಾನು ಯಾವಾಗಲೂ ಸರ್ವೇಶ್ವರನನ್ನು ಬಣ್ಣಿಸುತ್ತೇನೆ.
ಜ್ಞಾನೇಶ್ವರರ ಭಾವಾರ್ಥದೀಪಿಕೆ (ಜ್ಞಾನೇಶ್ವರೀ) (ಕ್ರಿ. ಶ. ೧೨೯೦)
*ಹೃದಯಾತೇಜ್ ಭೇದಿತು ಕೌರವಾಂಚಿಯಾ (೧.೧೬೨)*
ಕೌರವರ ಹೃದಯಗಳನ್ನು ಭೇದಿಸುತ್ತ-
*ಐಸೇಯಾಜ್ ತೇಢ್ಯೆಸೇನಿ ಮಾರೂಜ್ (೧.೨೨೧)*
ಇಂತಹರನ್ನು ಹೇಗೆ ಕೊಲ್ಲಲಿ?
*ಹೇವರ ಭಲೇತೇಜ್ ಕರಿತು (೧.೨೨೫)* ಇಲ್ಲಿಯವರೆಗೆ ಒಳ್ಳೆಯದನ್ನು ಮಾಡಿ
*ಅಪತ್ಯಾತೇಜ್ ಮಾಯೇಜ್ ಓಸಂಡೂನಿ ಜರಿ ಜಾಯೇ (೨.೬೧)*
ತಾಯಿ ಮಗುವನ್ನು ಬಿಟ್ಟು ಹೋದರೂ
*ಏಯಾ ಕಾರಣೇ ಪೂಸಿಲಾ ತೂತೇಜ್ (೩.೧೦)* ಈ ಕಾರಣದಿಂದ ನಿನ್ನನ್ನು ಕೇಳಿದೆನು.
*ಶರೀರಾತೇಜ್ ನ ಪೀಡಾವೇ (೩.೮೯)* ದೇಹವನ್ನು ಪೀಡಿಸಬಾರದು.

ದ್ವಿತೀಯಾ ಭಾವವನ್ನು ಹೀಗೆ ಎರಡು ಬಗೆಯಿಂದ ಸಾಧಿಸಿದುದನ್ನು ನಾವು ಕಾಣಬಹುದಾಗಿದೆ. ಜ್ಞಾನೇಶ್ವರ ಪೂರ್ವಕಾಲೀನ ಶಿಲಾಲೇಖಗಳಲ್ಲಿ ತೇಜ್ ಪ್ರಯೋಗ ಕಂಡುಬಂದಿಲ್ಲ. ಅಲ್ಲಿ ಅಜ್ ಮತ್ತು ಜ್ ಈ ಪ್ರತ್ಯಯಗಳಷ್ಟೇ ನೋಡಲು ದೊರೆಯುತ್ತವೆ. ಹಳಗನ್ನಡದಲ್ಲಿಯ ಇತ್ತೊದಾನ್, ಇದಾನ್, ಪೊರುದುಮಾನ್, ಮಿಕ್ಕುದಾನ್ ಪಲ್ಲವರಂ, ಆಳುತುಂ, ಕಟವಪ್ರವಮ್, ಮನವಮ್ ಈ ದ್ವಿತೀಯಾರ್ಥಿ ಪ್ರಯೋಗಗಳನ್ನು ಹೋಲಿಸಿ ನೋಡಬಹುದಾಗಿದೆ. ವಸ್ತುತಃ ಸಂಸ್ಕೃತದ ಅಮ್ ಪ್ರತ್ಯಯದ ಸಾಮ್ಯತೆಯನ್ನು ಮರಾಠಿ ಪಂಡಿತರು ಎತ್ತಿ ತೋರಿಸಬಹುದಿತ್ತು. ಆದರೆ ಈ ಅಮ್ ಪ್ರಾಕೃತಕ್ಕೆ ಇಳಿದಿದ್ದರೂ ಮಹಾರಾಷ್ಟ್ರಿಗೆ ಇಳಿದಿಲ್ಲ. ಅದಕ್ಕಾಗಿ ಇದರ ಗೋಜೇ ಬೇಡವೆಂದು ಅವರಿಗೆ ಎನಿಸಿರಬೇಕು. ಆದರೆ ತೇಜ್ ಪ್ರತ್ಯಯವನ್ನು ಕಡೆಗಣಿಸುವದಕ್ಕೆ ಯಾವ ಬಲವತ್ತರವಾದ ಕಾರಣವೂ ಕಾಣುವುದಿಲ್ಲ. ಆ ಪ್ರತ್ಯಯವೇ ಲೆಕ್ಕಕ್ಕಿಲ್ಲವೆಂದ ಮೇಲೆ ಅದರ ಮೂಲ ಶೋಧಿಸುವ ತೊಂದರೆಯೂ ಇಲ್ಲ!

ದ್ವಿತೀಯಾ ಭಾವದ ಬಗ್ಗೆ ಇನ್ನಷ್ಟು ವಿವೇಚಿಸುವ ಮುನ್ನ ಚತುರ್ಥೀಭಾವದ ಬಗ್ಗೆ ಪರಿಶೀಲಿಸುವುದು ಉಪಯುಕ್ತವಾದೀತು.

ಜ್ಞಾನೇಶ್ವರೀ ಪೂರ್ವ ಹಾಗೂ ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಚತುರ್ಥಿ ಭಾವ ಎರಡು ರೀತಿಯಿಂದ ಸಾಧಿಸಲಾಗುತ್ತಿತ್ತು.

ಮೊದಲನೆಯದಾಗಿ ಆ, ಅಜ್ ಪ್ರತ್ಯಯಗಳೊಂದಿಗೆ-

ಇವೆಲ್ಲ ಉದಾಹರಣೆಗಳು ಶಿಲಾಲೇಖಗಳಲ್ಲಿಯವು.

*ಸರಭಂಗಾಚಿಆ ಆಸ್ರಮಾ ಆಲೇ (ಉನಕೇಶ್ವರ ಕ್ರಿ.ಶ. ೧೨೮೯)*
ಸರಭಂಗದ ಆಶ್ರಮಕ್ಕೆ ಬಂದರು.

*ಹೇ ಭೂಮಿ ದೇವೇಜ್ ಪುರುಷೇಣ ಜೀವಣಾ ದಿಧಲೀ (ನೇವಾಸೇ ಕ್ರಿ. ಶ. ೧೨೩೯)*

ಈ ಭೂಮಿಯನ್ನು ದೇವಪುರುಷರಿಂದ ಜೀವನಕ್ಕೆ ಕೊಟ್ಟಿದೆ.

*ತೋ ಮಠಾ ದಿನ್ಹಲಾ (ಪಾಟಣ ಕ್ರಿ. ಶ. ೧೨೦೬)*

ಅದನ್ನು ಮಠಕ್ಕೆ ಕೊಟ್ಟರು.

ಎರಡನೆಯದಾಗಿ ತೇಜ್ ಪ್ರತ್ಯಯದೊಂದಿಗೆ.

ಇವೆಲ್ಲ ಉದಾಹರಣೆಗಳು ಜ್ಞಾನೇಶ್ವರೀಯಲ್ಲಿಯವು.

*ಪ್ರಜಾಜ್‌ತೇಜ್ ಶಿಕವೀ ಚತುರಾನನು (೩.೧೧೬)* ಪ್ರಜರಿಗೆ ಬ್ರಹ್ಮನು ಕಲಿಸಿದನು.
*ತೇಆತೇಜ್ ಮಗ ಆಪಾಓ ಥೋರು ಹೋಂವಿ (೩.೧೧೮)* ಬಳಿಕ ಅವನಿಗೆ ದೊಡ್ಡ ಅಪಾಯವಾಗುವದು.

*ತೇಪ್ಹಳೀ ಸಂಜಯೋ ರಾಯಾತೇಜ್ ಹ್ಮಣೇ (೪.೭)* ಆಗ ಸಂಜಯನು ರಾಜನಿಗೆ ಹೇಳಿದನು.

*ಮಗ ಪಾರ್ಥು ಕೃಷ್ಣಾತೇಜ್ ಹ್ಮಣೇ (೫.೧)* ಬಳಿಕ ಪಾರ್ಥನು ಕೃಷ್ಣನಿಗೆ ಹೇಳಿದನು.

*ಬಾಪಾತೇಜ್ ಚ ಜೇವಉಜ್ ಲಾಗೇ (೯.೧೫)* ಅಪ್ಪನಿಗೆ ಉಣಿಸುತ್ತಾನೆ.

*ಅರ್ಜುನಾತೇಜ್ ಶ್ರೀಕಾಂತು ಹ್ಮಣೇ (೧೮.೭೪೧)* ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು.

> ಬ್ಲೋಕ್, ಪಾನಸೇ, ಮಾಸ್ಟರ್ ಮೊದಲಾದ ಮರಾಠಿ ವ್ಯಾಕರಣಕಾರರು ಪ್ರತ್ಯಯೀ ಚತುರ್ಥಿಯ ಬಗ್ಗೆ ಮಾತೆತ್ತುವುದಿಲ್ಲ. ರಾಜವಾಡೆಯವರು ಮಾತ್ರ "ಚತುರ್ಥಿಯ ಬದಲಾಗಿ ಷಷ್ಠಿಯ ರೂಪಗಳನ್ನು ಬಳಸುವ ಪದ್ಧತಿ ಬೆಳೆದಂತೆ ಮೂಲ ಚತುರ್ಥಿಯ ರೂಪಗಳು ಲೋಪವಾಗತೊಡಗಿದ-ವೆಂಬುದು ನಿಜ. ಆದರೂ ಚತುರ್ಥಿ ಪೂರ್ತಿಯಾಗಿ ಲೋಪಗೊಂಡಿಲ್ಲ. ಮಹಾರಾಷ್ಟ್ರೀ ಪ್ರಾಕೃತ ಭಾಷೆಯಲ್ಲಿಯ ಲೋಪಪ್ರಾಯ ಚತುರ್ಥಿಯ ಪುತ್ತಾಆದಿಂದ ಅಪಭ್ರಂಶದ ಮೂಲಕ ಮರಾಠಿಯಲ್ಲಿ ಪೂತಾ ಈ ಚತುರ್ಥೀ ಏಕವಚನದ ರೂಪ ಸಾಧಿಸಲಾಗಿದೆ."[3] ಎಂದಿದ್ದಾರೆ.

ಮಹಾರಾಷ್ಟ್ರೀ ಪ್ರಾಕೃತದಲ್ಲಿ ಚತುರ್ಥಿಗೆ ಸ್ವತಂತ್ರ ಪ್ರತ್ಯಯವಿಲ್ಲ. ಚತುರ್ಥಿ ಷಷ್ಠಿಗೆ ಕೂಡಿಯೇ ಏಕವಚನದಲ್ಲಿ ಸ್ಸ, ಆಯ ಬಹುವಚನದಲ್ಲಿ ಆಣ, ಆಣಮ್, ಎಂದು ಪ್ರತ್ಯಯಗಳಿವೆಯೆಂದು ವರರುಚಿಯು ತನ್ನ ಪ್ರಾಕೃತ ಪ್ರಕಾಶದಲ್ಲಿ ಹೇಳಿದ್ದಾನೆ. ದಶವೈಕಾಲಿಕ ಸೂತ್ರದ ವ್ಯಾಖ್ಯಾನದಲ್ಲಿ ಹರಿಭದ್ರನು ಪ್ರಾಕೃತಶೈಲ್ಯಾ: *ಚತುರ್ಥ್ಯರ್ಥೇ ಷಷ್ಠೀ – ಛಟ್ಠೀ ವಿಭತ್ತಿಏ ಭಣ್ಣಇ ಚಉತ್ಥೀ* ಎಂದು ಹೇಳಿದ್ದಾನೆ ಇದೇ ವ್ಯಾಖ್ಯಾನಕಾರನು ನಂದಿಸೂತ್ರದ ವ್ಯಾಖ್ಯಾನದಲ್ಲೂ ಸೂತ್ರೇ ಷಷ್ಠೀ ಪ್ರಾಕೃತ

3. ಜ್ಞಾನೇಶ್ವರೀತೀಲ ಮರಾಠಿ ಭಾಷೇಚೇಜ್ ವ್ಯಾಕರಣ ಪು-೧೦

ಲಕ್ಷಣಾತು ಚಾತುರ್ಥ್ಯೇ ವೇದಿತವ್ಯಾ ಎಂದು ಹೇಳಿದ್ದಾನೆ. ಮಲಯಗಿರಿಯು ತನ್ನ ಆವಶ್ಯಕಸೂತ್ರದ ವ್ಯಾಖ್ಯಾನದಲ್ಲಿ ಬಹುವಯಣೇಣ ದುವಯಣಂ - ಛಟ್ಠೀ ವಿಭತ್ತೀಏ ಭಣ್ಣಇ ಚಉತ್ಥೀ ಎಂದು ಹೇಳಿ ಜಯಹತ್ಥಾ ತಹಪಾಯಾ ನಮೋತ್ಥು ದೇವಾಓ ದೇವಾಣಂ ಎಂಬುದಾಗಿ ಉದಾಹರಣೆಯನ್ನು ಕೊಟ್ಟಿದ್ದಾನೆ.

ಇದರಿಂದಾಗಿ ರಾಜವಾಡೆಯವರ ವ್ಯುತ್ಪತ್ತಿಯ ಬಗ್ಗೆ ಬೇರೆ ವಿವೇಚನೆ ಬೇಕಾಗಿಲ್ಲ. ತುಳಪುಳೆಯವರು ಮಾತ್ರ ಅಪಭ್ರಂಶ ಭಾಷೆಯಲ್ಲಿಯ ಈ ಕೆಳಗಿನ ಚತುರ್ಥಿ ರೂಪಗಳನ್ನು ಗುರುತಿಸಿದ್ದಾರೆ. ಣರಿಂದಹೋ (ಣಾಯಕುಮಾರ ಚರಿಉ ೧.೮.೧೨) ರಾಯಹೋ (ಅದೇ ೩.೧೮. ೧೯೬) ಸಾಯರಗಯಹಿಜ್ ಸಮಿಲ್ಲಹಿಜ್ (ಸಾವಯಧಮ್ಮದೋಹಾ ೨) ಹೀಗೆ ಅಪಭ್ರಂಶ ಭಾಷೆಯಲ್ಲಿ ಏಕವಚನದಲ್ಲಿ ಹು ಹೋ ಪ್ರತ್ಯಯಗಳೂ ಬಹುವಚನದಲ್ಲಿ ಹುಜ್, ಹಿಜ್ ಪ್ರತ್ಯಯಗಳೂ ಹತ್ತುವವೆಂದು ಹೇಳಿದ್ದಾರೆ. ಇದನ್ನು ಪರೀಕ್ಷಿಸಬೇಕಾಗಿದೆ. ಆದರೂ ಇವುಗಳಿಂದ ಮರಾಠಿಯಲ್ಲಿಯ ಅ ಮತ್ತು ಆ, ತೇಜ್ ಪ್ರತ್ಯಯಗಳು ಹೇಗೆ ಸಿದ್ಧವಾದುದೆಂಬುದನ್ನು ಅವರು ವಿವರಿಸುವುದಿಲ್ಲ. ಅದಕ್ಕೆ ಬದಲಾಗಿ ಸಂಸ್ಕೃತ ಆಯ>ಪ್ರಾಕೃತ ಆಅ, ಆಏ>ಮರಾಠಿ ಆ, ಏ ಎಂದಾಗಿ ಏಕವಚನ ಪ್ರತ್ಯಯಗಳನ್ನೂ ಬಹುವಚನದಲ್ಲಿ ಆಜ್ ಏಜ್ ಪ್ರತ್ಯಯಗಳನ್ನೂ (ಇವುಗಳಿಗೆ ಸಂಸ್ಕೃತವ ಏಭ್ಯ:ದಿಂದ ವ್ಯುತ್ಪತ್ತಿ ತೋರಿಸುವುದು ಅವರಿಗೇ ಹಾಸ್ಯಾಸ್ಪದವೆನಿಸಿರಬೇಕು!) ಸಾಧಿಸಲು ಯತ್ನಿಸಿದ್ದಾರೆ. ಅಲ್ಲದೆ ಆಕಾರಾಂತ ಸ್ತ್ರೀಲಿಂಗಿ ಶಬ್ದಗಳಿಗೆ ಹತ್ತುವ ಯೈ ಪ್ರತ್ಯಯದಿಂದ ಮರಾಠಿಯಲ್ಲಿ ಏ ಹೇಗಾಯಿತೆಂದೂ ಸಂಸ್ಕೃತದಲ್ಲಿಲ್ಲದ ಏಕಾರಾಂತ ಶಬ್ದಗಳಿಗೆ (ಶಬ್ದಗಳಿಲ್ಲವೆಂದಬಳಿಕ ಪ್ರತ್ಯಯಗಳ ಪ್ರಶ್ನೆಯೇ ಇಲ್ಲ!) ಮರಾಠಿಯಲ್ಲಿ ಆ ಪ್ರತ್ಯಯ ಹೇಗೆ ಬಂದಿತೆಂದೂ ಅವರು ಹೇಳುವುದಿಲ್ಲ.

ಸಂಸ್ಕೃತ ಆಯ > ಪ್ರಾಕೃತ ಅ ಅ ಆಏ > ಮರಾಠಿ ಆ, ಏ ಈ ವ್ಯುತ್ಪತ್ತಿ ಬಹು ನುಣ್ಣಗೆನಿಸುತ್ತದೆ. ಆದರೆ ಅಷ್ಟೇ ಜಾರುಗುಳಿ ಕೂಡ! ರತ್ನಾವಲಿಯಲ್ಲಿ ಬರುವ ಈ ಪ್ರಾಕೃತ ಪ್ರಯೋಗ ನೋಡಬೇಕು.

*ಸಂ. ಭೂಮೌ (ಸಪ್ತಮೀ) ಶೀರ್ಷಂ ಪಾತಯಿಷ್ಯಾಮಿ > ಪ್ರಾ. ಭೂಮಿಏ ಸೀಸಂ ಪಾಡಇಸ್ಸಂ*
*ತ್ವಯಾ (ತೃತೀಯಾ) ಅಹಂ ಅತ್ರ ಆಲಿಖಿತಾ >ತಏ ಅಹಂ ಇತ್ಥ ಆಲಿಹಿದಾ.*
*ಏತಯಾ (ತೃತೀಯಾ) ಮಂತ್ರಿತಮ್ >ಏದಾಏ ಮನ್ತಿದಮ್*
*ದಾಸ್ಯಾ: (ಷಷ್ಠೀ) ಪುತ್ರೀ > ದಾಸೀಏ ಧೀದಾ*
*ಪರಿಹಾಸ ಲೀಲಯಾ (ತೃತಿಯಾ) ಇಮಂ ಜನಂ >ಪರಿಹಾಸ ಲೀಲಾಏ ಇಮಂಜನಂ*
*ಮೇಧಾವಿನ್ಯಾ: (ಷಷ್ಠಿ) ಮೇಧಾವಿತ್ವಮ್ >ಮೇಹಾವಿಣೀಏ ಮೇಹಾವಿತ್ತಣಂ*
*ಯಸ್ಯಾ: (ಷಷ್ಠಿ) ಆಲೇಖ್ಯವಿಜ್ಞಾನಂ > ಜಾಏ ಆವಿಣ್ಣಾಣಂ*

ಹೀಗೆ ತೃತೀಯಾ, ಷಷ್ಠೀ, ಸಪ್ತಮೀ ವಿಭಕ್ತಿಗಳಲ್ಲಿ ಪ್ರಾಕೃತವ ಏ ಪ್ರತ್ಯಯ

ಕಾಣಸಿಗುತ್ತದೆ. ಹೀಗಾಗಿ ಮರಾಠಿಯಲ್ಲಿ ಚತುರ್ಥಿಭಾವದ ಪದಗಳಿದ್ದರೂ ಅವುಗಳ ಪ್ರತ್ಯಯದ ಸ್ರೋತ ಸಂಸ್ಕೃತ ಪ್ರಾಕೃತ ಅಪಭ್ರಂಶಗಳಲ್ಲಿ ದೊರೆತಿಲ್ಲ. ಈ ಸಂದರ್ಭದಲ್ಲಿ ಕೃ. ಪಾಂ. ಕುಲಕರ್ಣಿ ಅವರ ವ್ಯುತ್ಪತ್ತಿಯನ್ನು ತೂಗಿ ನೋಡಬೇಕಾಗಿದೆ.

ಅವರು ತೇಜ್ ಪ್ರತ್ಯಯದ (ಚತುರ್ಥಿಯ) ಮೂಲವನ್ನು ಸಂಸ್ಕೃತ ಅರ್ಥೇ> ಮಹಾರಾಷ್ಟ್ರಿ ಅತ್ಥೇ>ಅಪಭ್ರಂಶ ಅಥ್ಯೇ>ಮರಾಠಿ ಥೇ, ಥೇಜ್, ಹೀಗೆ ಶೋಧಿಸಲು ಯತ್ನಿಸಿದ್ದಾರೆ. ಇನ್ನು ಮಹಾರಾಷ್ಟ್ರಿ ಪ್ರಾಕೃತದಲ್ಲಿಯ ಪ್ರತ್ಯಯ ಸ್ಸ, ಆಯ ಎಂದು ವರರುಚಿ ಹೇಳಿರುವಾಗ ಈ ಎಳೆದಾಟ ಅರ್ಥಹೀನವಾಗಿದೆ.

ಹಾಗಾದರೆ ದ್ವಿತೀಯಾ ಭಾವವನ್ನೂ, ಚತುರ್ಥಿ ಭಾವವನ್ನೂ ಸೂಚಿಸುವ ತೇಜ್ ಪ್ರತ್ಯಯದ ಮೂಲವೆಲ್ಲಿಯದು? ಈ ಪ್ರತ್ಯಯ ಮೂಲತಃ ಷಷ್ಠಿಯದು! ಜ್ಞಾನೇಶ್ವರೀಯಲ್ಲಿಯ, ಸಮಕಾಲೀನ ಸಾಹಿತ್ಯದಲ್ಲಿಯ ಈ ಉದಾಹರಣೆ ನೋಡಬೇಕು.

*ನವಲಕ್ಷ ಧೇನು ನಂದಾತೇಜ್* -ನಂದನ ಒಂಬತ್ತು ಲಕ್ಷ ಗೋವುಗಳು (ವತ್ಸಹರಣ)
*ತುಮತೇಜ್ ನಾಜ್‌ಹೀ ಕೃಪೇಜ್ ಆವಾಜ್‌ಕಾ (ಋದ್ಧಿಪುರವರ್ಣನ ೧೮೭)*
ನಿಮ್ಮ ಕೃಪೆಗೆ ಎಣೆಯಿಲ್ಲ (ಆಳವಿಲ್ಲ)

*ಆಮತೇಜ್ ಸಂಬಂಧ ಸೋಹಳೇ (ಋದ್ಧಿಪುರವರ್ಣನ ೭೪)*
ನಮ್ಮ ಸಂಬಂಧವು ಪವಿತ್ರವಾದದ್ದು.

*ಸ್ವರ್ಗಸುಖಾತೇಜ್ ಪೂರೇ (ಋದ್ಧಿಪುರವರ್ಣನ ೨೧೪)*
ಸ್ವರ್ಗ ಸುಖದ ಮಹಾಪೂರದಲ್ಲಿ

*ಮಾಗಿಜತಿ ಮುಖೇ ಶೇಷಾದಿಕಾಜ್‌ತೇಜ್ (ಋದ್ಧಿಪುರವರ್ಣನ ೨೩೩)*
ಶೇಷಾದಿಗಳ ಮುಖದಿಂದ ಬೇಡುವರು.

ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು

*ಸ್ಮಶಾನಾತೇಜ್ ಭೂತೇಜ್ ಜೈಸೀ (೩.೧೧೩)* ಸ್ಮಶಾನದ ಭೂತಗಳಂತೆ
*ಐಸೇಜ್ ವಕ್ತೃತ್ವ ಕವಣಾತೇಜ್ ಆಹೇ (೯.೧೨)* ಇಂತಹ ಮಾತುಗಾರಿಕೆ ಯಾರದು ಇದೆ?
*ಸರ್ವ ಇಂದ್ರಿಯೇಹೀ ಆಶ್ಲೇಷಾವೇ ಸ್ತ್ರೀಯಾತೇಜ್ ಚಿ (೧೬.೩೩೨)*
ಸ್ತ್ರೀಯರ ಸರ್ವ ಇಂದ್ರಿಯಗಳನ್ನು ಆಲಿಂಗಿಸಬೇಕು.
*ಹೇ ಫೂಲ ತುರಂಬೀ ಸುಂದರ ಉಪನಿಷದಾತೇಜ್ (೧೭.೩೪೦)*
ಉಪನಿಷತ್ತಿನ ತುರುಬಿನಲ್ಲಿ ಈ ಹೂವು ಸುಂದರ (ವಾಗಿ ಶೋಭಿಸುತ್ತದೆ)
*ಡೋಳೇಯಾಜ್‌ತೇಜ್ ಆಂಧಾರೇಜ್ ಪೂಸಿಜೇ (೧೮.೧೫೪೫)*
ಕಣ್ಣುಗಳಲ್ಲಿಯ ಕತ್ತಲೆಯನ್ನು ಒರೆಸುವುದು
*ಇಯಾ ಅವಸ್ಥಾಚೀ ಕಾಹೀಜ್ ಕೌರವಾಜ್‌ತೇಜ್ ಪರಿ ನಾಹಿಜ್ (೧೮.೧೬೦೨)*

ಈ ಅವಸ್ಥೆಯು ಪರಿವೆ ಕೌರವನಿಗಂತೂ ಇಲ್ಲ
(ಧೃತರಾಷ್ಟ್ರನದಂತೂ ಅಲ್ಲ)

ಲೀಳಾಚರಿತ್ರ ಉತ್ತರಾರ್ಧದಲ್ಲಿ

*ತುಮತೇಜ್ ಹೀ ವಾಟೀ ಅಸೇ (೨೬೨)*
ಈ ಬಟ್ಟಲು ನಿಮ್ಮದು ಇದೆ.

ದ್ವಿತೀಯಾ ಚತುರ್ಥೀ ಭಾವಗಳನ್ನು ಸಾಧಿಸಿದ ಈ ತೇಜ್ ಪ್ರತ್ಯಯ ಮೂಲತಃ ಷಷ್ಠಿಯದೆಂಬುದು ಹೇಗೆ?

ಇದಕ್ಕಾಗಿ ದೂರ ಹೋಗಬೇಕಿಲ್ಲ. ತೇಜ್‌ದ ಜತೆಗೆ ಅಥವಾ ಅದಕ್ಕೂ ಮೊದಲು ಷಷ್ಠೀಭಾವಕ್ಕಾಗಿ ಪ್ರಯೋಜಿಸಲಾದ ಅ, ಆ ಪ್ರತ್ಯಯಗಳ ಬಳಕೆಯನ್ನು ಪರಿಶೀಲಿಸಬೇಕು.

*ಗೋಮತೀಯೇ ತೀರೀ ನೀಳಿಯಾ ಗುಥರಾ ರಾವೇಯಾ ಗುಜರಾ ಕೃಷ್ಣರಾಯಾ (ಲೀಳಾಚರಿತ್ರ ಉತ್ತರಾರ್ಧ)*
ಗೋಮತೀಯ ತೀರದಲ್ಲಿ ನೀಲಿಯ ಆವರಣ. ಗುರ್ಜರರ ರಾಯ ಕೃಷ್ಣರಾಯ
*ಪಹಿಲೇಆ ಘಾಣೇಆ ದಾಣಾಚೀ ಲೋಟಿ (ಪಾಟಣಶಿಲಾಲೇಖ ಕ್ರಿ. ಶ ೧೨೦೬)*
ಮೊದಲಿನ ಗಾಣದ ಕಾಳಿನ ಪಾತ್ರೆ
*ಕಡುಬೇಆ ಗವತಾ ವೇಂಡೀ -ಪುಜಾರೇಆ (ಅಂಬೇಜೋಗಾಈ ಶಿಲಾಲೇಖ ಕ್ರಿ. ಶ. ೧೨೨೮)*
ಕಣಕೆಯ (ಜೋಳದ ಕಡ್ಡಿ) ಹುಲ್ಲಿನ ಸೂಡು - ಪೂಜಾರಿಯ
*ಸೋನೆಯಾ ಸಹಸ್ರ ಏಕು (ಪಳಸದೇವಲೇಖ ಕ್ರಿ.ಶ. ೧೧೫೭)* ಬಂಗಾರದ ಒಂದು ಸಾವಿರ ಒಂದು
ಜೇಜ್ ಸುವರ್ಣ್ಣ ಲಿಹಲೇ ತೇಜ್ ಕಾಜ್‌ಠೇಅ ಸಮೇತ (ದಿವಾತಾಮ್ರಪಟ ಕ್ರಿ. ಶ. ೧೦೬೦)
ಸುವರ್ಣವೆಂದು ಬರೆದದ್ದು ಕಂಠಿಯ ಸಮೇತ
ಮೇಪುಣೇಯಾ ಮಾನು ಕೇಲಾ (ರುಕ್ಮಿಣೀಗೀತ)
ಬೀಗನ ಸತ್ಕಾರ ಮಾಡಿದನು.
ಜೇಆ ಪಾಸೌನಿ ಜಗಾ ಜನ್ಮ (ವತ್ಸಹರಣ) ಯಾರ + ಇಂದ ಜಗತ್ತಿನ ಜನನವೋ
ತಜ್‌ವ ದೈತ್ಯಾ ಮನೀಜ್ ಹರ್ಖು ಜಾಲಾ (ವತ್ಸಹರಣ) ಆಗ ದೈತ್ಯನ ಮನಸ್ಸಿನಲ್ಲಿ ಆನಂದವಾಯಿತು.
ಬಳಭದ್ರಾ ವೃತ್ತಾಂತು (ರುಕ್ಮಿಣೀಗೀತ) ಬಲಭದ್ರನ ಸುದ್ದಿ
*ಐಸೇಆ ಘರಲಾಠೇಆ ಬೋಲಾ (ಶಿಸುಪಾಲವಧ)* ಇಂತಹ ಮನೆಪರಾಕ್ರಮದ ಮಾತಿನಿಂದ

ಇನ್ನು ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳು
*ಕಾಂಟಿಯೇ ವರಿಲಾ ಸರಡಾ (೧೬.೨೫೩)* ಕಂಟಿಯ ಮೇಲಿನ ಓತಿಕಾಟ

*ಪವಿತ್ರತ್ವ ಜೇವಿ ಭಾಂಡೇಯಾ ಮದ್ಯಾಚಿಯಾ* (೧೬.೨೮೪) ಮದ್ಯದ ಪಾತ್ರೆಯಷ್ಟು ಪಾವಿತ್ರ್ಯ

*ಮಾಸೇಯಾ ಕಾ ನೋಹೇ ನಿಸಂತಾನ (೧೬.೩೦೦)* ಮೀನುಗಳ ನಿಸ್ಸಂತಾನ ಏಕೆ ಆಗುವುದಿಲ್ಲ?

*ಸಮರ್ಥ ಆಪುಲಾ ಖೋಡಾ ಸೀಸೇ ವಹಾವೀ ಜೈಸಾ ಹೋಡಾ (೧೮.೧೦೫೬)*

ಸಿರಿವಂತನು (ಅರಸನು) ತನ್ನ ಕೊರಡನ್ನು ಹೊಲೆಯನ ತಲೆಯ ಮೇಲೆ ಹೊರೆಸಿದಂತೆ.

*ಪಾಡು ತೇಯಾ (೧೮.೧೨೬೫)* ಅವನ ಪಾಡು

*ಸ್ವದೇಹಾ ನಾಜ್‌ವ ಅರ್ಜುನು ಪರದೇಹಾ ನಾಜ್‌ವ ಸ್ವಜನು ಸಂಗ್ರಾಮ ನಾಜ್‌ವ ಮಳಿನು ಪಾಪಾಚಾರು (೧೮.೧೨೭೨)*

ಸ್ವದೇಹದ ಹೆಸರು ಅರ್ಜುನ, ಪರದೇಹದ ಹೆಸರು ಸ್ವಜನ ಸಂಗ್ರಾಮದ ಹೆಸರು ಹೊಲಸು ಪಾಪಾಚಾರ.

*ಕ್ಷತ್ರಿಯಾ ಸಂಸ್ಕಾರು (೧೮.೧೨೮೧)* ಕ್ಷತ್ರಿಯನ ಸಂಸ್ಕಾರ

*ಆಣಿಲಾ ಶ್ರವಣಪಥಾ ಮರ್ಹಾಟಿಯಾ (೧೮.೧೬೮೨)*

ಮರ್ಹಾಟಿಯ ಶ್ರವಣ ಪಥಕ್ಕೆ ತಂದೆನು.

ಲೀಳಾಚರಿತ್ರದಲ್ಲಿಯ ಇನ್ನಷ್ಟು ಉದಾಹರಣೆಗಳು

*ಇಂದ್ರೇಯಾ (೨೫೪)* ಇಂದ್ರನ, *ಪಾಂಡೇಯಾ (೨೫೯)* ಪಾಂಡ್ಯನ

*ವೋಟೆಯಾ ಖಾಲೀ ಸಾಂಡಲಿಯಾ. ಆಸೇತಿ ಗೋಸಾವಿಯಾ ಪುಢೇ ಸಾಲೀ ಕಾಈ (೨೬೦)*

ಕಟ್ಟೆಯ ಕೆಳಗೆ (ಬಾಳೆಹಣ್ಣಿನ ಸಿಪ್ಪೆ) ಒಗೆದಿದ್ದರು. ಗೋಸಾವಿಯ (ಚಕ್ರಧರ ಸ್ವಾಮಿಯ) ಇದಿರು ಸಿಪ್ಪೆ ಏಕೆ?

*ಮಾಝೀಯಾ ಸಾಜಣೀ* ನನ್ನ ಗೆಳತಿ - *ಏಸಿಯಾ ಬೋಲಿಯಾ* - ಇಂತಹ ಮಾತಿನ

ಹೀಗೆ ತೇಜ್ ಪ್ರತ್ಯಯವು ದ್ವಿತೀಯಾ, ಚತುರ್ಥೀ ಹಾಗೂ ಷಷ್ಠೀ ಭಾವಗಳಲ್ಲಿ ಬಳಸಿದ್ದನ್ನು ನೋಡಿಯಾಯಿತು. ಜ್ಞಾನೇಶ್ವರೀಯಲ್ಲಿ ಪ್ರತಿ ಹತ್ತರಲ್ಲಿ ಎಂಟು ತೇಜ್ ಪ್ರಯೋಗಗಳು ದ್ವಿತೀಯಾ ಭಾವದಲ್ಲಿದ್ದರೂ ಅದು ದ್ವಿತೀಯಾ ವಿಭಕ್ತಿ ಪ್ರತ್ಯಯವೆಂದು ಯಾವ ವೈಯ್ಯಾಕರಣಿಯೂ ಒಪ್ಪಿದಂತಿಲ್ಲ. ಸಂಸ್ಕೃತ ಅರ್ಥೇದಿಂದ ಪ್ರಾಕೃತಮಾರ್ಗವಾಗಿ ಚತುರ್ಥಿ ಸಾಧಿಸಿತೆಂದು ಹೇಳುವ ಪಂಡಿತರಿದ್ದಾರೆ. ಆದರೆ ಪ್ರಾಕೃತದಲ್ಲಿ ಚತುರ್ಥಿಗೆ ಪ್ರತ್ಯೇಕ ಪ್ರತ್ಯಯಗಳಿಲ್ಲ. ಮಹಾರಾಷ್ಟ್ರೀ ಭಾಷೆಯಲ್ಲಿ ಚುತುರ್ಥಿ ಷಷ್ಠಿಗೆ ಕೂಡಿಯೇ ಏಕವಚನದಲ್ಲಿ ಸ್ಸ, ಆಯ, ಬಹುವಚನದಲ್ಲಿ ಆಣ, ಆಣಂ, ಪ್ರತ್ಯಯಗಳಿವೆಯೆಂದು ವರರುಚಿ ಹೇಳುತ್ತಾನೆ. ಛಟ್ಠೀ ವಿಭತ್ತೀಏ ಭಣ್ಣಾಇ ಚಉತ್ಥೀ ಚತುರ್ಥಿಗಾಗಿ ಷಷ್ಠಿ ಹೇಳುತ್ತಾರೆ ಎಂದು ಹರಿಭದ್ರ ಮಲಯಗಿರಿಯವರು ಸಾರಿದ್ದಾರೆ (*ಸೂತ್ರೇ ಷಷ್ಠೀ ಪ್ರಾಕೃತ ಲಕ್ಷಣಾತ್ ಚಾತುರ್ಥ್ಯೆ ವೇದಿತವ್ಯಾ*) ತೇಜ್ ಇದು ಷಷ್ಠಿ ವಿಭಕ್ತಿ ದರ್ಶಕ ಪ್ರತ್ಯಯವೆಂದು ಕಣ್ಣೆತ್ತಿ ನೋಡಲು ಸಿದ್ಧರಿಲ್ಲದ

ಕೃಷ್ಣಶಾಸ್ತ್ರಿ ಚಿಪಳೂಣಕರ, ಗೋಡಬೋಲೆ, ಗುಂಜೀಕರ ಹಾಗೂ ಭಾಂಡಾರಕರರಂತಹ ವೈಯ್ಯಾಕರಣಿ ಪಂಡಿತರು ಚ ಪ್ರತ್ಯಯದ ಸುತ್ತು ಮಾತ್ರ ಪ್ರದಕ್ಷಿಣೆ ಹಾಕಿದ್ದಾರೆ.

ಇನ್ನು ಅ ಆ ಇವು ಚತುರ್ಥಿದರ್ಶಕದ ಪ್ರತ್ಯಯಗಳೆಂದೂ ಸಂಸ್ಕೃತ ಆಯದಿಂದ ಬಂದವೆಂದೂ (ಮಹಾರಾಷ್ಟ್ರೀ ಪ್ರಾಕೃತದಲ್ಲಿ ಆಯ ಪ್ರತ್ಯಯವಿದೆ. ಆದರೆ ದಕ್ಷಿಣ ಅಪಭ್ರಂಶದಲ್ಲಿ[4] ಹೋ ಮತ್ತು ಹಾ ಪ್ರತ್ಯಯಗಳಿವೆ) ಸಾಧಿಸುವುದಾದರೆ ಆದರ ಷಷ್ಠಿ ವಿಭಕ್ತಿಯ ಬಳಕೆಯ ಕುರಿತು ಹೇಳುವುದೇನು? ಸಂಸ್ಕೃತ ಸ್ಯ ದಿಂದ ಮರಾಠಿಯಲ್ಲಿ ಅ, ಆ ಆಗಿಲ್ಲವಲ್ಲ?

ಹೀಗೆ ಸಂಸ್ಕೃತವನ್ನು ಬಿಡಲಾಗದೆ, ನೇರವಾಗಿ ದೊರೆಯದಿದ್ದರೆ ಮಹಾರಾಷ್ಟ್ರೀ, ಪ್ರಾಕೃತ, ಅಪಭ್ರಂಶ ಭಾಷೆಗಳ ಮಾರ್ಗವಾಗಿ ಪ್ರತ್ಯಯಗಳೋ ಪ್ರಯೋಗಗಳೋ ಮರಾಠಿಗೆ ಬಂದುವೆಂದು ಸಾಧಿಸುವ ಪಂಡಿತರ ಪ್ರಯತ್ನ ನೋಡಿದಾಗ ಜ್ಞಾನೇಶ್ವರರದೇ ಒಂದು ದೃಷ್ಟಾಂತ ಹೇಳಬೇಕೆನಿಸುತ್ತದೆ.

*ನಿಗಣೇಜ್ಯೂ ಆಣಿ ಪ್ರವೇಶಾ ಚಿತ್ತ ಸೇಜ್‌ದಿತು ಆವಿಜ್‌ಸಾ*
*ಕೋಶಕಾರು ಜೈಸಾ ಜಾಚಿನಲಾ (೧೬.೨೮೦)*

ಹೊರಬರುವ ಹಾಗೂ ಒಳಹೋಗುವ (ತೂತು ಇಡದೆ)
ಆವೇಶದಿಂದ ಮನೆಕಟ್ಟಿ ಸಂಕಟಪಡುವ ಕೋಶ ಕಿಟಕದಂತೆ!

ಸಂಸ್ಕೃತ, ಪ್ರಾಕೃತ ಮೂಲವಾಗಿ ಬಂದಿರದ ಪ್ರಯೋಗಗಳಿಗೆ ದ್ರಾವಿಡ ಭಾಷೆಗಳಲ್ಲೇನಾದರೂ ಆಧಾರ ದೊರೆಯಬಹುದೇ, ಎಂದು ತಪ್ಪಿಕೂಡ ಈ ಜನ ಯೋಚಿಸಲಿಲ್ಲ!

4. Historical Grammar of Apabhramsha P. 134

# ೯. ಮರಾಠಿಯಲ್ಲಿಯ ವಿಭಕ್ತಿ ಪ್ರತ್ಯಯಗಳು -೨

*ಆದರಿಪರ್ ಕೆಲಬರ್ ದೀ*
*ರ್ಘಾದೇಶಮನಗ್ರದಲ್ಲಿ ಷಷ್ಠಿಯಕಾರ*
*ಕ್ಕಾದೀರ್ಘಮನಿರದರೆಬರ್*
*ಚೇದದ ಸಂಭ್ರಮದ ಮೆಯ್ಯೊಳುತ್ಪಾದಿಸುವರ್ (ಶಬ್ದಮಣಿದರ್ಪಣ ೧೨೭)*

ಅ ಎಂಬ ಷಷ್ಠಿಯ ಅಕಾರಕ್ಕೆ ಕೆಲವರು ದೀರ್ಘಾದೇಶವನ್ನು ಬಳಸುವರು ಎಂದು ಹೇಳುವ ವೃತ್ತಿಯೊಡನೆ ನರಕದಾ (ಶಾಸನ ೫೯೭-೬೦೮) ವರ್ಷದಾ, ತೀರ್ಥದಾ (ಶಾಸನ ೮೦೪) ಎಂದು ಉದಾಹರಣೆಗಳನ್ನು ಕೊಡಲಾಗಿದೆ.

*ನೃಪನ ನರಪಾಲ ತನಯನ*
*ನೃಪವಧುವರ್ ನೆರೆದು ಸುಖದಿನಿರೆ ಕೈಕೊಂಡ*
*ತ್ರಪರಿಮಿತ ರಾಗವರ್ದೆಯಂ*
*ನೃಪತಿ ಸನಾಭಿಗಳ್ ಬಂಧು ಜನಿದಾ ಕೆಳೆಯಾ*

ಎಂದೂ ಶ್ರೀವಿಜಯನು ಷಷ್ಠೀ ಪ್ರಯೋಗಗಳ ಉದಾಹರಣೆ ಕೊಡುತ್ತಾನೆ. (ಕವಿರಾಜಮಾರ್ಗ ೨.೨೨)

ಷಷ್ಠಿಯ ಅಕಾರವು ಅದು ಎಂಬ ದರ್ಶಕ ಸರ್ವನಾಮದ ಮೂಲ ರೂಪವಾಗಿದೆ ಎಂದ ಕೇಶಿರಾಜನು ವಿಭಕ್ತಿ ಪ್ರತ್ಯಯಗಳನ್ನು ಹೇಳುವ ಸೂತ್ರಕ್ಕೆ ಕೊಟ್ಟ ಪ್ರಯೋಗದಲ್ಲಿ ಮರದದು ಪಣ್ (ಸೂತ್ರ ೧೦೩) ಎಂದೇ ಉದಾಹರಿಸಿದ್ದಾನೆ.

ಈ ಅ ಕಾರವು ದ್ವಿತೀಯಾಭಾವದಲ್ಲೂ ಬಳಸಲಾಗುತ್ತಿತ್ತೆಂದು ಕೇಶಿರಾಜನು ಹೇಳಿದುದಲ್ಲದೆ ಅದಕ್ಕೆ ಎಲವೊ ನೀನೆನ್ನ ಕೊಂದೆ, ಪೇಱ್ ಪೊಡಮಟ್ಟೆಂ ತೆಂಕನಾಡಂ ಮರೆಯಲ್ಕೆಂದು, ಮನಂ ಬರ್ಕುಮೆ ಎಂಬುದಾಗಿ ಉದಾಹರಣೆಗಳನ್ನು ಕೊಟ್ಟಿದ್ದಾನೆ. (ಸೂತ್ರ ೧೪೫)

ಇನ್ನೊಬ್ಬ ವೈಯಾಕರಣಿಯಾದ ಭಟ್ಟಾಕಳಂಕನು ತನ್ನ ಶಬ್ದಾನುಶಾಸನದ ೨೩೧ನೆಯ ಸೂತ್ರದಲ್ಲಿ ಎನ್ನ ಮಱೆದಂ ಎಂದು ಉದಾಹರಿಸಿದ್ದಾನೆ.

ಹೀಗೆ ಷಷ್ಠಿಯ ಪ್ರತ್ಯಯವು ದ್ವಿತೀಯೆಯ ಭಾವದಲ್ಲಿ ಬಳಸಲಾಗುತ್ತಿತ್ತೆಂದು ರೆ. ಕಿಟಲ್ ಅವರೂ ಅಭಿಪ್ರಾಯ ಪಟ್ಟಿದ್ದಾರೆ. ಪೂರ್ವಕಾಲದ ಆಡುಮಾತಿನಲ್ಲಿ ಅಕಾರಾಂತ ದ್ವಿತೀಯಾ ಪ್ರಯೋಗಗಳು ಮೊದಲಿನಿಂದಲೂ ಇವೆ. ಆದರೆ ಇದು ಅಭಿಜಾತ ಸಾಹಿತಿಗಳಿಗೆ ಸಾಮಾನ್ಯವಾಗಿ ಮಾನ್ಯವಿರಲಿಲ್ಲವೆಂದೂ ತಿಳಿಯಲು ಅವಕಾಶವಿದೆ ಎಂದು ಅವರು ಹೇಳಿದ್ದಾರೆ.[1]

---

1. A Grammar of Kannada Language P. 48

ಈ ಅ ಹಾಗೂ ಆ ಪ್ರತ್ಯಯಗಳು ಯ ವಿಕರಣದೊಂದಿಗೆ ಅಥವಾ ನೇರವಾಗಿ ಕೂಡಿ ಪ್ರಾಚೀನ ಮರಾಠಿಯಲ್ಲಿ ಷಷ್ಠೀಭಾವದರ್ಶಕ ಪದಗಳು ಸಿದ್ಧವಾಗಿವೆ.

ಮೇಘುಣೇ + ಯ + ಆ ಮಾಸು = ಬೀಗ + ನ + ಅ ಸನ್ಮಾನ.
ದೈವ + ಆ ಉದಯೋ = ದೈವ + ದ + ಅ ಉದಯ
ಜೇ + ಆ ಪಾಸೌನಿ = ಆವುದು + ರ + ಅ ಇಂದ
ದೈತ್ಯ + ಆ ಮನೀ = ದೈತ್ಯ + ನ + ಅ ಮನಸ್ಸಿನಲ್ಲಿ
ಘರಲಾರೇ + ಆ ಬೋಲಾ = ಮನೆಹೂರ + ನ + ಅ ಮಾತಿನಿಂದ
ಅನಾತ್ಮೇ + ಯ + ಆ ಆತ್ಮಪ್ರತೀತಿ = ಅನಾತ್ಮ + ನ + ಅ ಆತ್ಮಪ್ರತೀತಿ

ಎಂದೆಲ್ಲ ಹಿಂದಿನ ಪ್ರಕರಣದಲ್ಲಿ ಕೊಟ್ಟ ಉದಾಹರಣೆಗಳು ಹೀಗೆ ಮೈಗೊಳ್ಳುತ್ತವೆ.

ಮರಾಠಿಯಲ್ಲಿ ಶಾಸನ ಸಾಹಿತ್ಯ ಬಹಳ ಕಡಿಮೆ. ಒಟ್ಟು ದೊರೆತ ಶಿಲಾ-ತಾಮ್ರ ಲೇಖಗಳು ಇಪ್ಪತ್ತೈದು ಕೂಡ ಇಲ್ಲ. ಅವುಗಳಲ್ಲಿ ಷಷ್ಠೀ ಭಾವಕ್ಕಾಗಿ ಅ ಮತ್ತು ಆ ಪ್ರತ್ಯಯಗಳೊಂದಿಗೆ ಚ ಪ್ರತ್ಯಯವೂ ಇದೆ. ತೇಜ್ ಪ್ರತ್ಯಯ ಮಾತ್ರ ದೊರೆತಿಲ್ಲ. ಜ್ಞಾನೆಶ್ವರೀಯಲ್ಲಾಗಲೀ ಸಮಕಾಲೀನ ಮರಾಠಿ ಗ್ರಂಥಗಳಲ್ಲಾಗಲ್ಲಿ ಅ, ಆ ಪ್ರತ್ಯಯಗಳ ಜತೆಗೆ ಚ ಹಾಗೂ ತೇಜ್ ಪ್ರತ್ಯಯಗಳು ಕಾಣಸಿಗುತ್ತವೆ. ಅ ಆ ಪ್ರತ್ಯಯದ ಮೂಲ ಹೇಳಿ ಆಯಿತು. ಇನ್ನು ತೇಜ್ ಪ್ರತ್ಯಯ ಹೇಗೆ ಬಂತು? ಎಲ್ಲಿಂದ ಬಂತು?

ಕನ್ನಡದಲ್ಲಿ ಷಷ್ಠೀ ವಿಭಕ್ತಿಯ ಪ್ರತ್ಯಯವಾದ 'ಅ' ಇದು 'ಅದು' ಶಬ್ದದ ಸಂಕ್ಷೇಪವೆಂದು ಮೇಲೆ ಹೇಳಿದೆಯಷ್ಟೇ? ಈ 'ಅದು' ಶಬ್ದದ ಮರಾಠಿ ಅನುವಾದಿತ ರೂಪಾಂತರ 'ತೇಜ್'.

ಈ ಶಬ್ದಋಣವು ಒಂದಿಷ್ಟು ವಿಚಿತ್ರವೆನಿಸಬಹುದು. ಆದರೆ ಇಂತಹ ಅನೇಕ ಹಳಗನ್ನಡ ಶಬ್ದಗಳು ಅನುವಾದ ರೂಪಾಂತರಗೊಂಡು ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಸೇರಿವೆ. ಅದನ್ನು ಕುರಿತು ಮುಂಬರುವ ಪ್ರಕರಣದಲ್ಲಿ ವಿವೇಚಿಸಲಾಗಿದೆ. ಆದರೂ ಇಲ್ಲಿ ಸಂದರ್ಭಕ್ಕಾಗಿ ಕೆಲ ಉದಾಹರಣೆ ಕೊಡುವುದು ಉಚಿತವೆನಿಸಬಹುದು.

೧. ಆಗು ಅರ್ಥದಲ್ಲಿ ಅಪ್ಪು —> ಅಪ್ಪುದು —> ಅಹುದು —> ಹೌದು
ಆಗು = ಹೋ —>ಹೋಯೇ —> ಹೋಯ = ಹೌದು

೨. ಬಾ, ಬರು ಅರ್ಥದಲ್ಲಿ ಬಪ್ಪುದು—>ಬಹುದು (ಉದಾ : ಹೇಳಬಹುದು)
ಬರು = ಯೇ—>ಯೇ (ಉದಾ ಮ್ಹಣೋಜ್ ಯೇ—>ಮ್ಹಣಾವೇ)

೩. ಬರು ಧಾತುವಿನ ಅಕರಣಾತ್ಮಕ ರೂಪ ಬಾರದು (ಉದಾ: ಮಾಡಬಾರದು)
ಅಕರಣಾತ್ಮಕ ನ + ಯೇ (= ಬರು) ನಯೇ (ಉದಾ:ಕರೂಜ್ ನಯೇ)

ಹೀಗೆಯೇ ಹಳಗನ್ನಡದ 'ಅದು' ರೂಪಾಂತರಗೊಂಡು 'ತೇಜ್' ಪ್ರತ್ಯಯವಾಗಿ ಮರಾಠಿ ವ್ಯಾಕರಣ ಸೇರಿಕೊಂಡಿತು.

ಷಷ್ಠೀ ವಿಭಕ್ತಿಯ ಪ್ರತ್ಯಯವು ಕನ್ನಡದಲ್ಲಿ ಚತುರ್ಥೀ, ದ್ವಿತೀಯಾ ಭಾವಗಳಲ್ಲೂ ಬಳಕೆಯಾಗುವುದನ್ನು ಗಮನಿಸಿದರೆ (ಕೃತಿಯುಕ್ತಂ ಷಷ್ಠಿಯೊಳಂ ದ್ವಿತೀಯೆಯೊಳಮಾ ಚತುರ್ಥಿಸಪ್ತಮಿಯೊಳ್ ಶಬ್ದಮಣಿದರ್ಪಣ ಸೂತ್ರ ೧೪೭) ಮರಾಠಿಯಲ್ಲಿ ತೇಜ್ ಪ್ರತ್ಯಯವು ಆಯಾ ಭಾವಗಳಲ್ಲಿ ಬರುವುದು ವಿಶೇಷವೆನಿಸಲಾರದು.

ಇದೇ ಸಂದರ್ಭದಲ್ಲಿ ಒಂದಿಷ್ಟು ಅ-ಪ್ರಾಸಂಗಿಕವೆನಿಸಿದರೂ ಕನ್ನಡದ ಇನ್ನೊಂದು ಲಕ್ಷಣೀಯ ವೈಶಿಷ್ಟ್ಯವನ್ನು ನೆನಪಿಸಿಕೊಳ್ಳುವುದು ಅನಿವಾರ್ಯವಾಗಿದೆ.

ದ್ರಾವಿಡ ಭಾಷೆಗಳಲ್ಲಿ ಆಖ್ಯಾತ ಪ್ರತ್ಯಯಗಳೇ ನಾಮಪದಗಳಲ್ಲಿ ವಿಭಕ್ತಿ ಪ್ರತ್ಯಯಗಳಾಗಿಯೂ ವಿಭಕ್ತಿ ವಿಕರಣಗಳಾಗಿಯೂ ಬಳಸಲಾಗಿವೆ. ಇದನ್ನೇ ರೆ-ಕಿಟೆಲ್‌ರು

(ಕನ್ನಡದಲ್ಲಿ) ಭೂತಕಾಲವಾಚಕ ಕೃದಂತ ಪ್ರತ್ಯಯವು ಷಷ್ಠಿ ವಿಭಕ್ತಿಯ ಏಕವಚನದ ಪ್ರತ್ಯಯವಾಗಿದೆ.

ಎಂದು ಬೇರೆ ಶಬ್ದಗಳಲ್ಲಿ ಹೇಳಿದ್ದಾರೆ.[2] (ಉದಾ : ಹೋದ, ಬಂದ, ಮಾಡಿದ ಇವುಗಳಲ್ಲಿಯ ದ ಪ್ರತ್ಯಯ ಗಿಡದ, ಆಕಾಶದ ಇತ್ಯಾದಿಗಳಲ್ಲಿಯ ಷಷ್ಠಿಯ ಏಕವಚನದ ಪ್ರತ್ಯಯ.)

ಇದೇ ರೀತಿಯಾಗಿ ಮರಾಠಿಯಲ್ಲಿಯ ತೇಜ್ ಪ್ರತ್ಯಯ ಕೂಡ ಷಷ್ಠಿ ಏಕವಚನ್ನಲ್ಲದೆ ಭೂತಕಾಲವಾಚಕ ಕೃದಂತ ವರ್ತಮಾನಕಾಲ ಪ್ರಥಮ ಪುರುಷ ನಪುಂಸಕಲಿಂಗದ ಏಕವಚನವನ್ನು ಸಾಧಿಸುತ್ತದೆ.

ಆಖ್ಯಾತ ಪ್ರತ್ಯಯವಾಗಿ ತೇಜ್

*ಪರದೈವ ರಾಂಗತೇಜ್ ಬಾಳ (ವತ್ಸಹರಣ)*

ಪರದೈವು ಕೂಸಾಗಿ ಅಮ್ಮೆಗಾಲಿಡುತ್ತದೆ

*ಗಿರಿದುರ್ಗ ಜೈಸೇಜ್ ಚಾಲತೇಜ್ (೧.೯೪)*

ಗಿರಿದುರ್ಗವು ಹೇಗೆ ನಡೆಯುತ್ತದೆಯೋ

*ಕೌರವದಳೀಜ್ ಗಾಜತ ಹೋತೇ (೧.೧೪೫)*

*ಕೌರವ ಸೈನ್ಯದಲ್ಲಿ ಗರ್ಜಿಸುತ್ತ ಇತ್ತು.*

*ಮಾಝಾಜ್ ಚಿತ್ತೀಜ್ ಜೇಜ್ ಹೋತೇಜ್ (೨.೫೨)*

ನನ್ನ ಮನಸ್ಸಿನಲ್ಲಿ ಏನು ಇತ್ತೋ

*ಮಿಾ ವಧಿತಾ ಹೇ ಮರತೇ (೨.೧೩೭)*

ನಾನು ಕೊಲ್ಲುವವನು ಇವರು ಸಾಯುವವರು



2. A Grammar of the Kannada Language P. 48

ಈ ತೇಜ್ ಪ್ರತ್ಯಯವು ಜ್ಞಾನೇಶ್ವರ ಪೂರ್ವ ಕಾಲದಿಂದಲೂ ರೂಢಿಯಲ್ಲಿದ್ದು ಚೇಜ್ ಆಗಿದೆ. ತ ದಿಂದ ಚ ಆಗುವ ಪ್ರಕ್ರಿಯೆ ಪ್ರಾಕೃತಕ್ಕಾಗಲೀ ಮರಾಠಿಗಾಗಲೀ ಹೊಸತಲ್ಲ. ತಿಷ್ಠಶ್ಚಿಷ್ಠಃ (೪.೨೯೮) ಎಂದು ಪ್ರಾಕೃತ ವೈಯಾಕರಣ ಹೇಮಚಂದ್ರ ಹೇಳಿದ್ದಾನೆ. ಇದರ ಪುಷ್ಟಿಗಾಗಿ ರತ್ನಾವಲೀ ನಾಟಕದಲ್ಲಿಯ ಕೆಲವು ವಾಕ್ಯಗಳು.

*ತತ್ತಿಷ್ಠ ಮುಹೂರ್ತಂ ಯಾವದನೇನ ದಣ್ಡಕಾಷ್ಠೇನ ಪರಿಪಕ್ವಮಿವ (೨.೪೦)*
*ತಾಚಿಟ್ಠ ಮುಹುತ್ತಅಂ ಜಾವ ಇಮಿಣಾ ದಣ್ಡಕಟ್ಠೇಣ ಪರಿಪಕ್ಕಂ ವಿಅ*
*ಸಾಪಿ ಕನ್ಯಕಾತ್ರೈವ ಆಲಿಖಿತಾ ತಿಷ್ಠತಿ (೨.೬೭)*
*ಸಾಬಿ ಕಣ್ಣಆ ಇಧ ಜ್ಜೇ ವಾಲಿಹಿದಾ ಚಿಟ್ಠಾದಿ*
*ಸೋ ಽತಯಂ ತೇ ಪುರತಸ್ತಿಷ್ಠತಿ (೨.೯೫)*
*ಸೋ ಅಅಂ ದೇ ಪುರದೋ ಚಿಟ್ಠದಿ*
*ನಿವೇದಯಿತು ಕಾಮೋ ದ್ವಾರೇ ತಿಷ್ಠತಿ (೪.೩೪)*
*ಣಿವೇದಿದು ಕಾಮೋ ದುಆರೇ ಚಿಟ್ಠದಿ*

(ಸಂಸ್ಕೃತದಿಂದ ಬರುವಾಗ ತಿಷ್ಠವು ಮಾತ್ರ ಪ್ರಾಕೃತದಲ್ಲಿ ಚಿಟ್ಠವಾದಂತಿದೆ. ಸರ್ವೇಸಾಧಾರಣವಾಗಿ ತ > ದ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಲೇಬೇಕು.)

ಸಂಸ್ಕೃತದಿಂದಾಗಲೀ ಕನ್ನಡದಿಂದಾಗಲೀ ಮರಾಠಿಗೆ ಹೋದ ಶಬ್ದಗಳಲ್ಲಿ ತ > ಚ ಬದಲಾವಣೆ ಕಾಣುತ್ತೇವೆ. ಈ ಚ ದಂತ್ಯತಾಲವ್ಯವೆಂಬುದನ್ನು ಮುಖ್ಯವಾಗಿ ನೆನಪಿನಲ್ಲಿಡಬೇಕು. ಕೆಲವು ಉದಾಹರಣೆಗಳು:

ಸಂ ನಿತ್ಯ > ಮ. ನೀಚ (ತಾಲವ್ಯದ ಸಂಸ್ಕೃತದ ನೀಚನಲ್ಲ!)

ಸತ್ಯ > ಸಾಚ, ತಲ್ಲಖ > ಚಾಲಾಖ, ನೃತ್ಯ > ನಾಚ, ಆತಪ > ಆಚ

ಕನ್ನಡ ತಟ್ಟನೆ > ಮ. ಚಟಕನ ತುಣುಕು > ಚುಣೂಕ ಕನ್ನಡದ 'ಅದು' ದಿಂದ ಮರಾಠಿ ತೇಜ್, ತೇಜ್‌ದಿಂದ ಚೇಜ್ (ದಂತ್ಯತಾಲವ್ಯ) ಈ ರೀತಿಯಾಗಿ ಕನ್ನಡದ ಷಷ್ಠಿ ವಿಭಕ್ತಿಯ 'ಅ' 'ಆ'ದ ಪ್ರವಾಸ ಚೆಜ್‌ದಲಿ ಮುಗಿದಂತಾಗಿದೆ. ಆದರೆ ಮುಗಿದಿಲ್ಲ.

ಪ್ರತಿಯೋಗೀ ಅಂದರೆ ಮುಂದಿನ ಶಬ್ದ ಪುಲ್ಲಿಂಗವಾಗಿದ್ದರೆ ಅನುಯೋಗೀ ಅಂದರೆ ಹಿಂದಿನ ಶಬ್ದಕ್ಕೆ ತಗಲುವ ಷಷ್ಠಿ ಪ್ರತ್ಯಯ ಚಾ, ಬಹುವಚನವಿದ್ದರೆ ಚೇ (ಎರಡೂ ದಂತ್ಯತಾಲವ್ಯಗಳೇ) ಏಕೆ ಆಗಬೇಕು? ಪ್ರತಿಯೋಗೀ ಶಬ್ದ ಸ್ತ್ರೀಲಿಂಗಿಯಾಗಿದ್ದರೆ ಚೀ (ಇಲ್ಲಿ ಮಾತ್ರ ದಂತ್ಯತಾಲವ್ಯಕ್ಕೆ ಪ್ರತ್ಯೇಕ ಅಸ್ತಿತ್ವವಿಲ್ಲ. ಎಲ್ಲೆಡೆ ಅದು ತಾಲವ್ಯವಾಗಿರುತ್ತದೆ!) ಏಕೆ ಆಗಬೇಕು? ಇಲ್ಲಿ ಹಳಗನ್ನಡದ ಸಂಬಂಧ ಎಳ್ಳಷ್ಟೂ ಇಲ್ಲ. ಆದರೂ ಮರಾಠಿಯಲ್ಲಿ ಚೇಜ್, ಚಾ, ಚೀ ದ ಮೂಲ ಪೂರ್ತಿಯಾಗಿ ಗುರುತಿಸುವುದಕ್ಕಾಗಿ ಒಂದಿಷ್ಟು ವಿವೇಚನೆ ಆಗತ್ಯವೆನಿಸುತ್ತದೆ.

ಡಾ. ಭಾಂಡಾರಕರರು ಪ್ರಿಯದರ್ಶಿ ರಾಜನ ಒಂದು ಆಜ್ಞಾ ಪತ್ರದಲ್ಲಿಯ ಅಸ್ತಿ ಪಿ ಚು ಏಕಚಾ ಸಮಾಜಾ ಸಾಧುಮತಾ ದೇವಾನಂ ವಾಕ್ಯವನ್ನು ಉದ್ಧರಿಸಿ

ಸಂಸ್ಕೃತ ಏಕಸ್ಯ > ಪ್ರಾಕೃತ ಏಕತ್ಥ > ಮರಾಠಿ ಏಕಚಾ ಎಂಬುದಾಗಿ ವ್ಯುತ್ಪತ್ತಿ ಸಾಧಿಸಿದ್ದಾರೆ. ಆದರೆ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಸಂ. ಸ್ಯ > ಪ್ರಾ. ಸ್ಸ ಆಗುತ್ತದೆ. (ವರರುಚಿಯ ಪ್ರಾಕೃತಪ್ರಕಾಶ) ತ್ಥ ಅಲ್ಲ. ಹೀಗಾಗಿ ಸ್ಯ ದಿಂದ ಚಾ ಆಗುವ ಪ್ರಶ್ನೆಯೇ ಇಲ್ಲ.

ಕೃಷ್ಣಶಾಸ್ತ್ರೀ ಚಿಪಳೂಣಕರರು ಸಂಸ್ಕೃತದ ತದ್ಧಿತ ಪ್ರತ್ಯಯ ಈಯ ದಿಂದ ಪ್ರಾಕೃತ ಇಜ್ಜ > ಮರಾಠಿ ಚಾ ಆಯಿತು, ಎಂದರು. ಆದರೆ ಸಂಸ್ಕೃತದ 'ದರ್ಶನೀಯ' ಶಬ್ದವು ಪ್ರಾಕೃತದಲ್ಲಿ ದಂಸಣೀಅ ಆಗುತ್ತದಲ್ಲ? (ರತ್ನಾವಲೀ ೧.೨೯, ೨.೪೭) ಶಯನೀಯ > ಸಅಣೀಅ (ಅದೇ ೨.೯೦) ಎಂದೂ ಪ್ರಯುಕ್ತವಾಗಿದೆ. ಹೀಗೆ 'ಈಯ' ದಿಂದ 'ಇಜ್ಜ' ಆಗುವುದಿಲ್ಲ 'ಈಅ' ಆಗುತ್ತದೆ ಎಂಬುದು ಸ್ಪಷ್ಟವಾಯಿತು. 'ಈಅ' ವು ಮರಾಠಿಯಲ್ಲಿ 'ಚಾ' ಆಗುವ ಸಾಧ್ಯತೆಯೇ ಇಲ್ಲ.

ಗೋಡಬೋಲೆಯವರು ಸಂಸ್ಕೃತ 'ಇಕ' ದಿಂದ ಹಿಂದುಸ್ತಾನಿಯಲ್ಲಿ 'ಕಾ', 'ಈನ' ದಿಂದ ಗುಜರಾತಿಯಲ್ಲಿ 'ನೋ' 'ಈಯ' ದಿಂದ ಸಿಂಧಿಯಲ್ಲಿ 'ಜೋ' ಹಾಗೂ ಮರಾಠಿಯಲ್ಲಿ 'ಚಾ' ಪ್ರತ್ಯಯ ಸಿದ್ಧವಾಯಿತೆನ್ನುತ್ತಾರೆ.

ಇವೆಲ್ಲ ವ್ಯುತ್ಪತ್ತಿಗಳನ್ನು ತಳ್ಳಿ ಹಾಕಿದ್ದಾಯಿತು. ತೇಜ್ ದಿಂದ ಚೇಜ್ ಪ್ರತ್ಯಯ ಸಾಧಿಸಿದ್ದಾಯಿತು. ಆದರೆ ಮುಖ್ಯ ಪ್ರಶ್ನೆ ಪ್ರತಿಯೋಗೀ ಶಬ್ದದ ಲಿಂಗವಚನಗಳು ಅನುಯೋಗೀ ಶಬ್ದದ ಪ್ರತ್ಯಯಕ್ಕೆ ಹತ್ತುವ ಕಾರಣವೇನು?

ಸಂಸ್ಕೃತದಲ್ಲಾಗಲೀ ಪ್ರಾಕೃತದಲ್ಲಾಗಲೀ ಹೀಗೆ ಪ್ರತಿಯೋಗೀ ಶಬ್ದದ ಲಿಂಗವಚನಗಳು ಅನುಯೋಗೀ ಶಬ್ದದ ಮೇಲೆ ಪರಿಣಾಮ ಬೀರುವುದಿಲ್ಲ. ಉದಾಹರಣೆಗಾಗಿ

*ಶರೀರಸ್ಯ ವಿನಾಶೇನ > ಸರೀರಸ್ಸ ವಿಣಾಸೇಣ*
*ಸುವರ್ಣಸ್ಯ ಪ್ರತಿಮಾ > ಸುವಣ್ಣಸ್ಸ ಪಡಿಮಾ*
*ಮೋಹಸ್ಯ ದುರ್ಜಯತ್ವಮ್ > ಮೋಹಸ್ಸ ದುಜ್ಜಯತ್ತಂ*

ಇಲ್ಲಿ ವಿನಾಶ, ಪ್ರತಿಮಾ, ದುರ್ಜಯತ್ವ ಈ ಶಬ್ದಗಳು ಕ್ರಮಶಃ ಪುಲ್ಲಿಂಗ, ಸ್ತ್ರೀಲಿಂಗ ಹಾಗೂ ನಪುಂಸಕಲಿಂಗದವು. ಆದರೆ ಅವುಗಳ ಹಿಂದಿನ ಶಬ್ದಗಳ (ಶರೀರ, ಮೋಹ ಇವು ಪುಲ್ಲಿಂಗದ ಶಬ್ದಗಳು, ಸುವರ್ಣ ನಂಪುಸಕಲಿಂಗ) ಷಷ್ಠಿಯ 'ಸ್ಯ' ಪ್ರತ್ಯಯದ ಮೇಲೆ ಯಾವ ಪರಿಣಾಮವನ್ನು ಬೀರಿಲ್ಲ. 'ಸ್ಯ' ಪ್ರತ್ಯಯ ಶರೀರ, ಸುವರ್ಣ ಮೋಹ ಶಬ್ದದ ಲಿಂಗ ವಚನಗಳನ್ನು ಅನುಸರಿಸಿದೆಯಲ್ಲದೆ ವಿನಾಶ ಪ್ರತಿಮಾ ಹಾಗೂ ದುರ್ಜಯತ್ವದ ಲಿಂಗ ವಚನಗಳನ್ನಲ್ಲ.

ಆದರೆ ಮರಾಠಿಯಲ್ಲಿ ಹೀಗಾಗುವುದಿಲ್ಲ. ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳು. ಇವು

*ಭ್ರಾಂತೀಚೇಜ್ ಮಸ್ಯೆರೇಜ್ ಫಿಟೇ (೫.೮೩)* ಭ್ರಾಂತಿಯ ಕತ್ತಲೆ ಕಳೆಯಲಾಗಿ

ಇಲ್ಲಿ ಮಸ್ಯೆರೇ ನಪುಂಸಕಲಿಂಗಿ ಶಬ್ದ. ಆದಕ್ಕಾಗಿ ಭ್ರಾಂತಿಚೇಜ್

*ಐಸಾ ಶ್ರೀಗುರುಂಚಾ ಉವಾಇಲಾ (೫.೧೪೨) ಇಂತು ಶ್ರೀಗುರುವಿನ ಅಭ್ಯಯು*
ಉವಾಇಲಾ ಪುಲ್ಲಿಂಗ ಶಬ್ದ. ಅಂತೆಯೇ ಶ್ರೀಗುರುಂಚಾ
*ಚಿಂತಾಮಣಿಚೀ ಖಾಣಿ ದೇಖಿಲಿ (೧೧.೫೬೬) ಚಿಂತಾಮಣಿಯ ಗಣಿ ನೋಡಿದೆ*
ಖಾಣಿ ಸ್ತ್ರೀಲಿಂಗಿ ಶಬ್ದ. ಅದಕ್ಕೆ ಚಿಂತಾಮಣಿಚೀ

ಹೀಗಾಗುವ ಕಾರಣವೇನು? ಇದು ಮರಾಠಿಗೆ ಸೀಮಿತವಾಗಿಲ್ಲ. ಇತರ ಇಂಡೋ ಆರ್ಯನ್ ಗುಂಪಿಗೆ ಸೇರಿದ ಎಲ್ಲ ನವಭಾಷೆಗಳಲ್ಲಿ ಕಾಣಸಿಗುತ್ತದೆ.

ಈ ಬಗ್ಗೆ ಭಾಷಾವಿಜ್ಞಾನಿಗಳು ಹೇಳುವ ಕಾರಣ ಇಂತಿದೆ. ವಾಕ್ಯದಲ್ಲಿಯ ಪ್ರಥಮಾದಿಂದ ಸಪ್ತಮಿಯವರೆಗಿನ (ಷಷ್ಠಿಯನ್ನುಳಿದು) ರೂಪಗಳು ಕ್ರಿಯಾಪದದೊಂದಿಗೆ ಸಂಬಂಧ ಹೊಂದಿರುತ್ತವೆ. ಆದರೆ ಷಷ್ಠಿಯ ಪದಗಳು ಹಾಗಲ್ಲ. ಅವು ಮುಂದಣ ಪದದ ವಿಶೇಷಣಗಳಾಗಿ ಮಾರ್ಪಡುತ್ತವೆ. ಸಂಸ್ಕೃತ ಮೊದಲ್ಗೊಂಡು ಎಲ್ಲ ಇಂಡೋ ಆರ್ಯನ್ ಭಾಷೆಗಳಲ್ಲಿ ವಿಶೇಷಣವು ವಿಶೇಷ್ಯದ ಲಿಂಗವಚನಗಳನ್ನು ಅನುಸರಿಸುವುದು ವ್ಯಾಕರಣಸಿದ್ಧ ನಿಯಮ. ಉದಾಹರಣೆ.

*ಬಹೂನಿ ಮೇ ವ್ಯತೀತಾನಿ ಜನ್ಮಾನಿ (ಗೀತಾ ೪೫)*
ನನ್ನ (ನನ್ನಿಂದ) ಬಹಳ ಜನ್ಮಗಳು ಕಳೆಯಲ್ಪಟ್ಟವೆ.

ಜನ್ಮಾನಿ ಇದು ಜನ್ಮನ್ ಈ ನಪುಸಕಲಿಂಗದ ಶಬ್ದದ ಪ್ರಥಮಾ ಬಹುವಚನ ರೂಪ. ಅಂತೆಯೇ ಬಹು ವಿಶೇಷಣ ಹಾಗೂ ವ್ಯತೀತ ಈ ಭೂತಕಾಲ ವಾಚಕ ಕರ್ಮಣಿ ಕೃದಂತಗಳು ನಪುಂಸಕಲಿಂಗ ಪ್ರಥಮಾ ಬಹುವಚನದ ರೂಪಗಳನ್ನು ಹೊಂದಿವೆ.

ಈ ವಸ್ತುಸ್ಥಿತಿ ಇಂದಿನ ಭಾಷೆಗಳ ದೃಷ್ಟಿಯಿಂದ ಸರಿಯೆನಿಸಬಹುದು.

ಆದರೆ ಜ್ಞಾನೇಶ್ವರೀಕಾಲೀನ ಹಾಗೂ ತತ್‌ಪೂರ್ವದ ಮರಾಠಿ ಭಾಷೆಯ ಅವಸ್ಥಾಂತರಗಳನ್ನು ನೋಡುವಾಗ ಹಲವು ಘಟ್ಟಗಳು ಸ್ಪಷ್ಟವಾಗಬೇಕು. ಆಗ ಮರಾಠಿಯಲ್ಲಿ 'ಚ' ಅಷ್ಟೇ ಅಲ್ಲ 'ಅ ಆ' ಪ್ರತ್ಯಯಗಳೂ ತೇಜ್ ಪ್ರತ್ಯಯವೂ ಷಷ್ಠೀಭಾವ ಸಿದ್ಧವಾಯಿತಷ್ಟೇ? ಅ, ಆ, ತೇಜ್ ಪ್ರತ್ಯಯ ಆರೋಪದೊಡನೆ ಷಷ್ಠೀರೂಪವಾದಾಗ ವಿಶೇಷಣ ವಿಶೇಷ್ಯಭಾವವು ಎಲ್ಲೆಲ್ಲೂ ಬಂದಿಲ್ಲ. ಉದಾಹರಣೆ ನೋಡಬೇಕು.

ವತ್ಸಹರಣ :

ಜಗಾ ಜನ್ಮ್ಯಾ ಶ್ರೀಚಕ್ರಧರು ಜೇಯ ಕಥಾ ನಾಯಕು, ನವಲಕ್ಷ ಧೇನು ನಂದಾತೇ, ಜೇಆ ನಾಜ್‌ವ ಅಘಾಸುರೂ, ದೈತ್ಯಾಮನೀಜ್ ಹರ್ಖ ಜಾಲಾ.

ರುಕ್ಮಿಣೀಗೀತ

ಮೇಹುಣೇಯೂ ಮೂನು ಕೇಲಾ, ವೈರೀಯಾ ಮುಕ್ತಿ ಮುರಾರೀ ಪಾವಿಲೇ

ಶಿಶುಪಾಳವಧ

ಘಾಯಾ ಸಮೋರು, ಘರಲಾಠೇಅ ಬೋಲಾಜ್, ವಾರೇಅ ಪಾಸೌನಿ, ಸಿಂಹಾಸನಾ ವರೌನಿ

ರುಕ್ಮಿಣೀ ಸ್ವಯಂವರ

ಅನುವಾದಾಪೀ ಪ್ರಾಣಸಖಿಯ, ಆದಿಲಕ್ಷ್ಮೀಯ ಐಸಿಯಾದಾಸಿ, ಶರಣಾಗತ ಪಕ್ಷಿಯ ವಜ್ರಪಂಜರಾ, ವಿನತಿಯವರೀ, ವಾಂಕದಾರೇಯಾ ಬಾಹಿರೀ,

ಜ್ಞಾನೇಶ್ವರೀ

ಪಾಟೇಯಾ ವರಿಲೇಜ್ ಆಖರೇಜ್, ಕ್ಷತ್ರಿಯಾ ಸಂಸ್ಕಾರು ಸಿದ್ಧಾ, ಇಯಾ ರಿತಿ, ಕ್ರೋಧಾ ಐಸಾ ಹಾ ಮಹಾದೋಖು, ವಿರಹಿಣೀತೇಜ್ ಜೀಣೇಜ್, ಪಾಣಿಯಾಜ್ ಜವಳೀ.

ಕಲ್ಪರಹಗಳು

ಸೋನೇಯಾ ಸಾಹಸ್ರು ಏಕು.

ಈ ಉದಾಹರಣೆಗಳು ಇನ್ನೂ ಕೆಲವು ಅಂಶಗಳನ್ನು ಸ್ಪಷ್ಟ ಪಡಿಸುತ್ತವೆ.

'ಆ' 'ಆ' ದ ಬಳಕೆ ಯಾವಾಗ?

೧. ಮುಂದಿನ ಶಬ್ದ ಪುಲ್ಲಿಂಗವಾಗಿದ್ದರೆ

ಜಗಾಜನ್ಮು, ಜೇಯ ಕಥಾನಾಯಕು, ಜೇಅ ನಾಜ್‌ವ
ಮೇಹುಣೇಯೂ ಮಾನು, ಪಕ್ಷಿಯ ವಜ್ರಪಂಜರಾ.

೨. ಮುಂದಿನ ಶಬ್ದ ಅವ್ಯಯವಾಗಿದ್ದರೆ.

ಘಾಯಾ ಸಮೋರು, ವಾರೇಅ ಪಾಸೌನಿ, ಸಿಂಹಾಸನಾ ವರೌನಿ, ಆದಿ ಲಕ್ಷೀಯ ಐಸಿಯಾ, ವಿನತಿಯ ವರೀ, ವಾಂಕದಾರೇಯಾ ಬಾಹಿರೀ ಪಾಟೇಯಾ ವರಿಲೇಜ್, ಪಾಣಿಯಾಜ್ ಜವಳೀ, ಕ್ಷೀರಸಾಗರಾ ಏವಡೇಜ್

೩. ಅಪವಾದಾತ್ಮಕವಾಗಿ

ಇಯಾ ರೀತಿ, ವೈರೀಯಾ ಮುಕ್ತಿ, ಇಲ್ಲಿ ರೀತಿ, ಮುಕ್ತಿ ಸ್ತ್ರೀಲಿಂಗಿ ಶಬ್ದಗಳು. ದೈತ್ಯಾ ಮನೀ, ಇಲ್ಲಿ ಮನ ನಪುಂಸಕಲಿಂಗಿ.

ತೇಜ್‌ದ ಬಳಕೆ ಯಾವಾಗ?

ಮುಂದಿನ ಶಬ್ದ ನಪುಂಸಕಲಿಂಗಿಯಾಗಿದ್ದಾಗ ಮಾತ್ರ.
ಹೇಜ್ ಫೂಲ ಉಪನಿಷದಾತೇಜ್ (೧೭.೩೪೦)
ಧಾವಣೇ ನಾಹಿಜ್ ಶೂದ್ರಾತೇಜ್ (೧೮.೮೮೦)

ತೇಯೂತೇಜ್ ಫಳ ಚಿ ತೇಧ ಜೋಡೇ (೧೮.೧೩೩೫)
ಡೋಳೇಯಾಜ್‌ತೇಜ್ ಅಂಧಾರೇಜ್ (೧೮.೧೫೪೫)
ಸ್ಮಶಾನಾತೇಜ್ ಭೂತೇಜ್ ಜೈಸೇಜ್ (೩.೧೧೩)
ಮಾತೇಜ್ ಹೃದಯಾ ಆಜ್‌ತು (೨.೩೧೩)

ಹೀಗಿರುವಾಗ ಚಾ, ಚೇ, ಚೀ ವಿಭಕ್ತಿ ಪ್ರತ್ಯಯಗಳ ಬಳಕೆಯನ್ನು ವಿಶ್ಲೇಷಿಸುವುದು ಅಗತ್ಯವಾಗಿದೆ.

ಚಾ ಯಾವಾಗ?

ಮುಂದಿನ ಶಬ್ದ ಪುಲ್ಲಿಂಗದ್ದಾಗಿದ್ದರೆ, ಅ, ಆ ಕ್ಕಿಂತ ಚಾದ ಪ್ರಮಾಣ ಸಾಕಷ್ಟು ಹೆಚ್ಚು. ಅದೇ ಮುಂದಿನ ಶಬ್ದ ಸಮೋರು, ಪಾಸೌನಿ, ಅಂತು, ಬಾಹಿರು, ವರೀ ಇತ್ಯಾದಿ ಅವ್ಯಯಗಳಾಗಿದ್ದರೆ ಚಾ ಬರುವುದೇ ಇಲ್ಲ. ಇಂದಿಗೂ ಆ ಪ್ರತ್ಯಯವೇ ಷಷ್ಠೀ ಭಾವ ಸಾಧಿಸುತ್ತದೆ.

ಉದಾಹರಣೆ : ವಾರಾ + ಆ + ಪಾಸೌನಿ : ಗಾಳಿ + ಅ + ಇಂದ

ವಾರೇಯಾ ಪಾಸೌನಿ, ಗಾಳಿಯಿಂದ

ಚೇಜ್ ಯಾವಾಗ?

ಮುಂದಿನ ಶಬ್ದ ನಪುಂಸಕಲಿಂಗದ್ದಾಗಿದ್ದರೆ ಜ್ಞಾನೇಶ್ವರೀಯಲ್ಲಿ ಕೆಲವೊಂದು ಸಲ ಚೇಜ್ ಬಂದಿದೆ. ಅದೇ ಮುಂದಿನ ಶಬ್ದಕ್ಕೆ ವಿಭಕ್ತಿ ಪ್ರತ್ಯಯಗಳು (ಪ್ರಥಮಾ ಬಿಟ್ಟು) ಹತ್ತಿದ್ದರೆ, ಹಿಂದಿನ ಶಬ್ದಕ್ಕೆ ಚೇಜ್ ಹತ್ತುವುದೇ ನಿಯಮ, ಇಲ್ಲದಿದ್ದರೆ ಬಹುಶಃ ತೇಜ್. ಉದಾ : ನಾಹಿಜ್ ಜೇಯಾಚಾಜ್ ಅಂತಷ್ಕರಣೀ (೨.೨೪೨) ಇಲ್ಲಿ ಅಂತಷ್ಕರಣೀ ಶಬ್ದ ನಪುಂಸಕಲಿಂಗದಿದ್ದು ಸಪ್ತಮೀ ವಿಭಕ್ತಿಯಲ್ಲಿದೆ, ಅದಕ್ಕೆ ಹಿಂದಿನ ಶಬ್ದ ಜೇ + ಆ + ಚೇಜ್ ಆಗಿ ಸಪ್ತಮಿ ವಿಭಕ್ತಿಯ ಆಜ್ ಪ್ರತ್ಯಯವನ್ನು ಹೊಂದಿದೆ.

ಚೀ ಪ್ರತ್ಯಯ ಯಾವಾಗ?

ಮುಂದಿನ ಶಬ್ದ ಸ್ತ್ರೀಲಿಂಗಿಯಾಗಿದ್ದರೆ ಹಿಂದಿನ ಶಬ್ದದ ಷಷ್ಠೀ ಪ್ರತ್ಯಯ ಚೀ. ಇದೇ ನಿಯಮ.

ತಿಷ್ಯಶ್ಚಿಷ್ಯ ಸೂತ್ರಕ್ಕನುಸಾರವಾಗಿ ಕನ್ನಡದ 'ಅದು - ಆ' ಮರಾಠಿಯಲ್ಲಿ 'ತೇಜ್' ಆಗಿ 'ತೇಜ್'ದಿಂದ 'ಚೇಜ್' ಆಯಿತೆಂದು ಹೇಳಿದೆಯಷ್ಟೇ? ಹಾಗಾದರೆ ಪುಲ್ಲಿಂಗದ ಚಾ, ಸ್ತ್ರೀಲಿಂಗದ ಚೀ ಪ್ರತ್ಯಯಗಳು ಹೇಗೆ ಬಂದವು? ಮುಂದಿನ ಶಬ್ದದ ಲಿಂಗ ವಿಭಕ್ತಿಗಳು ಹಿಂದಿನ ಶಬ್ದದ ಪ್ರತ್ಯಯದ ಮೇಲೆ ಪರಿಣಾಮ ಬೀರುವ ಕಾರಣವೇನು? ಇದು ಸಂಬಂಧವಾಚಕವಾದುದರಿಂದ ವಿಶೇಷಣ ವಿಶೇಷ್ಯ ಭಾವ ಬಂದಿತೆಂದು ಇಂದಿನ ವಿದ್ವಾಂಸರು ಹೇಳುವುದನ್ನು ಒಪ್ಪಬಹುದಾದರೂ ಈ ನಿಯಮ ಸಂಸ್ಕೃತ-ಪ್ರಾಕೃತ ಭಾಷೆಗಳಲ್ಲೇಕೇ ಇಲ್ಲ?

ಇವೆಲ್ಲ ಪ್ರಶ್ನೆಗಳಿಗೆ ಸಮಾಧಾನಕರ ಪರಿಹಾರವನ್ನು ಇಲ್ಲಿ ಮುಂಡಿಸುವ ಸಾಹಸ ಮಾಡುತ್ತಿದ್ದೇನೆ. ಇದು ಪಂಡಿತಮಾನ್ಯವಾದಲ್ಲಿ ಅರ್ವಾಚೀನ ಭಾರತೀಯ ಆರ್ಯಭಾಷೆಗಳಲ್ಲಿ ಷಷ್ಠೀ ವಿಭಕ್ತಿ ಪ್ರಯೋಗಗಳಲ್ಲಿ ಕಂಡು ಬರುವ ವಿಶೇಷಣ ವಿಶೇಷ್ಯ ಭಾವದ ಮೂಲ ಹಳಗನ್ನಡದಲ್ಲೇ ಎಂಬುದು ಸ್ಪಷ್ಟವಾಗುತ್ತದೆ. ಅದಕ್ಕಾಗಿ ಹಿಂದಿನ ತಲೆಮಾರಿನ ಹಳಗನ್ನಡ ವಾಚಸ್ಪತಿಗಳ, ಇಂದಿನ ವೈಯಾಕರಣಿಗಳ ಕ್ಷಮೆ ಕೋರುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ.

ಷಷ್ಠಿಯ ಅ ಕಾರವು 'ಅದು' ಎಂಬ ದರ್ಶಕ ಸರ್ವನಾಮದ ಮೂಲ ರೂಪವಾಗಿದೆಯೆಂದು ಹೇಳಿ ಕೇಶಿರಾಜನು ಮರದದು ಪಣ್ (ಶಬ್ದಮಣಿದರ್ಪಣ ಸೂತ್ರ ೧೦೩) ಎಂದು ಉದಾಹರಿಸಿದ ಸಂದರ್ಭ ಹಿಂದೆ ಬಂದಿದೆ.

ಹಳಗನ್ನಡದಲ್ಲಿ ಬರುವ 'ಅ' ದರ್ಶಕ ಸರ್ವನಾಮವು (ಅ ಎಂಬುದು ಸ್ವತಂತ್ರ ದರ್ಶಕ ಸರ್ವನಾಮವಲ್ಲವೆಂದು ರೆ. ಕಿಟೆಲ್ ಹೇಳಿದ್ದಾರೆ) 'ಅದು' ಸರ್ವನಾಮದ ಸಂಕ್ಷಿಪ್ತ ರೂಪವೆಂಬುದನ್ನು, ಇದೇ ಕನ್ನಡದಲ್ಲಿ ಷಷ್ಠಿಯ ಪ್ರತ್ಯಯವಾಯಿತೆಂದುದನ್ನು ಅಲ್ಲಗಳೆಯುವಂತಿಲ್ಲ. ಆದರೆ ಈ 'ಅ' 'ಅದು' ಸರ್ವನಾಮದ್ದಷ್ಟೇ ಅಲ್ಲ, 'ಅವನು' 'ಅವಳು' 'ಅವರು' ಈ ಎಲ್ಲ ಸರ್ವನಾಮಗಳ ಸಂಕ್ಷಿಪ್ತ ರೂಪವಾಗಿದೆ. ಅಥವಾ ಪ್ರ.ಗೋ. ಕುಲಕರಣಿಯವರು ಹೇಳುವ ಹಾಗೆ ಮೂಲ ರೂಪವೂ ಆಗಿದೆ. ಕೇಶಿರಾಜನು ಕೊಡುವ ಉದಾಹರಣೆ ಮರ + ಅದು ಪಣ್ ಸರಿ. ಆದರೆ ದೊರೆ + ಅದು ಮಗಳ್, ಅಥವಾ ಊರ್ + ಅದು ಅರಸನ್ ಎಂಬುದನ್ನು ನಾವು ಒಪ್ಪಿಕೊಳ್ಳಬಹುದೇ? ದೊರೆಯ ಮಗಳ್, ಊರ ಅರಸನ್ ಎನ್ನುವಲ್ಲಿ ದೊರೆ + ಅವಳ್ ಮಗಳ್, ಊರ್ + ಅವನ್ ಅರಸನ್ ಎನ್ನುವುದೇ ಯೋಗ್ಯವಾಗಲಿಕ್ಕಿಲ್ಲವೇ? ನೀತಿ ನಿರನ್ತರನುದಾರನಾ ನೃಪತುಂಗಂ (ಕವಿರಾಜ ಮಾರ್ಗ ೧.೧) ಎನ್ನುವಲ್ಲಿ ನೀತಿನಿರನ್ತರನ್ ಉದಾರನ್ ಅದು ನೃಪತುಂಗ ಎನ್ನಬಹುದೇ? ಈ ದೊರೆಯಱಮಗನುಂ ಮೃಷವಾದಂ (ರನ್ನನ ಗದಾಯುದ್ಧ) ಎಂದಾಗ ಇವಂ ದೊರೆಯಱಮಗನುಂ ಮೃಷವಾದಂ ಅಲ್ಲವೇ?

ನನ್ನ ಅನಿಸಿಕೆ ಇಷ್ಟೇ. ಷಷ್ಠೀ ವಿಭಕ್ತಿಯ ಪ್ರತ್ಯಯವಾದ 'ಅ' 'ಆ' ಇದು 'ಅದು' ಸರ್ವನಾಮದ ಮೂಲವಷ್ಟೇ ಅಲ್ಲ, 'ಅವನು', 'ಅವಳು', 'ಅವರು' ಇವೆಲ್ಲದರ ಮೂಲವಾಗಿದೆ.[3] ಮರಾಠಿಯಲ್ಲಿ ಅನುವಾದಿತಗೊಂಡು ಈ ಪ್ರತ್ಯಯ ಹೋದಾಗ ತೇಜ್ (= ಅದು) ಒಂದೇ ಆಗದೆ ಇನ್ನೂ ಮೂರು ರೂಪಗಳನ್ನು ಹೊಂದಿದೆ.

ಅವನು - ಅಥವಾ ಪುಲ್ಲಿಂಗ ಶಬ್ದ

ಜ್ಞಾನೇಶ್ವರಿ ಕಾಲೀನ ಶಬ್ದ 'ತೋ'.

*ತರ್ಕು ತೋಚಿ ಪರಶು (೧.೧೧) ತರ್ಕವು ಅದೇ ಪರಶು*

*ತೋ ಬೌದ್ಧಮತ ಸಂಕೇತು (೧.೧೨) ತೋ ಪದ್ಮಕರು ವರದು (೧.೧೩)*

*ತೋ ಸಿದ್ಧಹಸ್ತು (೧.೧೨) ಅಪರಾಧು ತೋ ಆಣಿಕು ಆಹೇ (೧.೭೭)*

---

3. ಶಬ್ದಮಣಿದರ್ಪಣ ಸೂತ್ರ ೧೭೧, ೧೭೪

ಅಪರಾಧವದು ಬೇರೆಯೇ ಇದೆ.

ಈ ತೋ ಶಬ್ದದ ವ್ಯುತ್ಪತ್ತಿಯನ್ನು ಯಾವ ಮರಾಠಿ ವೈಯಾಕರಣನೂ ಸಮಾಧಾನಕರವಾಗಿ ಬಿಡಿಸಿಲ್ಲ. ಸಂಸ್ಕೃತ ಪ್ರಾಕೃತಗಳಲ್ಲಿ ಮೂಲ ದೊರೆತಿಲ್ಲ. ಸಂಸ್ಕೃತ ಸಃ > ಪ್ರಾಕೃತ ಸೋ > ಮಹಾರಾಷ್ಟ್ರೀ ಸ, ಸು ಸೋ. ಉದಾಹರಣೆಗಳು.

*ಅಯಂ ಖಲು ಸಃ ರಕ್ತಾಶೋಕಪಾದಪಃ (ರತ್ನಾವಲೀ ೧.೬೦) ಅಅಂ ಖು ಸೋ ರತ್ತಾಸೋಅ ಪಾಅವೋ*
*ಯದಿ ನ ಸ ಆಯಾತಿ >ಜಇ ನ ಸು ಏವ ಇ (ಹೇಮ ಶಬ್ದಾನುಶಾಸನ ೩೭೭.೧)*
*ಸ ಪ್ರಿಯೋ ಭವತಿ >ಸ ಪಿಉ ಹೋಇ (ಅದೇ)*
*ಸ ಕೃತಾಂತಸ್ಯ ಸಾಧ್ಯಃ >ಸೋವಿ ಕೃದಂತ ಹೋ ಸಜ್ಝ (ಅದೇ ೩೭೦.೪)*

ಪ್ರಾಕೃತ ಸ ದಿಂದ ಮರಾಠಿಯಲ್ಲಿ ತ ಆದ ಶಬ್ದಗಳಿಲ್ಲ. ಹೀಗಾಗಿ ಮರಾಠಿ ಪಂಡಿತರಿಗೆ ಪ್ರಾಕೃತ ಮಹಾರಾಷ್ಟ್ರೀ ಭಾಷೆಗಳನ್ನು ಬಿಟ್ಟು ನೇರ ವೈದಿಕ ಸಂಸ್ಕೃತಕ್ಕೆ ಶರಣು ಹೋಗಬೇಕಾಯಿತು![4]

ಅತಿ ಪರಿಚಯದಿಂದಾಗಿಯೋ ಏನೋ, ಒಂದು ಸಹಜ ಸುಲಭವಾದ ವ್ಯುತ್ಪತ್ತಿಯನ್ನು ಅವರು ಕಳೆದುಕೊಂಡಿದ್ದಾರೆಂದು ಭಾವಿಸಬೇಕಾಗಿದೆ.

*ಯತ್ತದ್ಯತಸ್ತತೋ ಹೇತಾ (೩.೪೧೫)* ಎಂದು ಅಮರಸಿಂಹನು 'ಕಾರಣ' ಅರ್ಥದಲ್ಲಿಯ ನಾಲ್ಕು ಶಬ್ದಗಳನ್ನು ಹೇಳಿದ್ದಾನೆ. ಇವುಗಳಲ್ಲಿಯ 'ತತ್' ಶಬ್ದವು ಸಂಸ್ಕೃತದಲ್ಲಿ ಬಹಳ ಬಳಕೆಯಲ್ಲಿದೆ. ಇದರ ಪ್ರಾಕೃತ ರೂಪ 'ತಾ', ಮಹಾರಾಷ್ಟ್ರೀ ರೂಪ 'ತೋ'. ಉದಾಹರಣೆಗಳನ್ನು ನೋಡಬೇಕು.

*ತದವಲೋಕಯತು ಏತಾಂ >ತಾ ಅವಲೋಏದು ಏದಂ (ರತ್ನಾವಲಿ ೧.೨೬)*
*ತತ್ ಪ್ರವಿಶತು ಭವಾನ್ >ತಾ ಪವಿಸದು ಭವಂ (ರತ್ನಾವಲೀ (೧.೫೨)*
*ತದತಃ ಪರಂ ನ ಯುಕ್ತಮುಪೇಕ್ಷಿತುಮ್ >ತಾ ಅದೋ ಅವರಂ ಣ ಜುತ್ತಂ ಉವೇಕ್ಖಿದುಂ (ರತ್ನಾವಲೀ ೨.೯೫)*

ಮಹಾರಾಷ್ಟ್ರೀ ಭಾಷೆಯಲ್ಲಿಯ ಉದಾಹರಣೆಗಳು ಹೇಮಚಂದ್ರನ ಶಬ್ದಾನುಶಾಸನದಲ್ಲಿಯವು.

*ಯದ್ಯಪಿ ಪ್ರಿಯಃ ತದಪಿ ತಂ ಆನಯ >ಜಇವಿ ಪಿಉ ತೋವಿತಂ ಅಣಹಿ (೩೪೩.೨)*
*ತದಪಿ ತೇನ ಅಗ್ನಿನಾ >ತೋ ತೇಂ ಅಗ್ಗಿಂ (ಅದೇ)*
*ತದ್ ಮಹಾಂತಿ ಗೃಹಾಣಿ >ತೋ ವಡ್ಡಾ ಘರ (೩೬೪.೧)*

ಈ ತತ್ > (ಪ್ರಾ) ತಾ > (ಮಹಾರಾಷ್ಟ್ರೀ) ತೋ ಅವ್ಯಯವೂ ಕೂಡ ಮರಾಠಿಯಲ್ಲಿ ತೋ ಆಗಿ ಬಂದಿದೆ. ಜ್ಞಾನೇಶ್ವರೀಯಲ್ಲಿಯ ಈ ಉದಾಹರಣೆಗಳು :

---

4. ಮರಾಠೀ ಭಾಷಾ ಉದ್ಗಮ ವ ವಿಕಾಸ - ಕೃ. ಪಾಂ. ಕುಲಕರ್ಣಿ ಪು. ೨೩೮

*ತೈಸಾ ಮಿಾ ಅನುಗೃಹೀತು ಸಾಧೂಂಚಾ ನಿರೋಪಿತು*
*ತೋ ಆಮಲಾ ಅಳಂಕರಿತು ಭಲೇ ತೈಸಾ (೧.೮೨)*

ಹಾಗೆ (ನಿಮ್ಮಿಂದ) ಅನುಗೃಹೀತನಾದ ನಾನು ಸಾಧುಗಳ
ನಿರೋಪ ಹೇಳಿದೆ. ಕಾರಣ, ನೀವು ಇಷ್ಟ ಬಂದ ಹಾಗೆ
(ನನ್ನನ್ನು) ಅಲಂಕರಿಸಬಹುದು.

*ಮಾರ್ಗೀಜ್ ಚಿ ಚಾಲತಾಜ್ ಮಧಾಜ್ ಸಿಂಹ ದೀಸೆ ಅವಚಿತಾ*
*ತೋ ಚುಕೇ ತಜ್‌ವರಿ ಚುಕವಿತಾಜ್ ವಾಜ್‌ಚಿಜೇ ಕೀಜ್ (೧.೨೩೮)*

ದಾರಿಯಲ್ಲಿ ಹೋಗುವಾಗ ಮುಂದೆ ಅಕಸ್ಮಾತ್ತಾಗಿ ಸಿಂಹವು
ಕಂಡಿತು. ಕಾರಣ, ತಪ್ಪಿಸುವ ತನಕ ತಪ್ಪಿಸಿ
ಉಳಿದುಕೊಳ್ಳಬೇಕಲ್ಲ?

*ತೋ ಹಾ ಅಕರಾವಾ ಅಧ್ಯಾಓ (೧೧.೧೩)*

ಅಂತೆಯೇ, ಈ ಹನ್ನೊಂದನೆಯ ಅಧ್ಯಾಯವು.
ಇನ್ನೂ ಉದಾಹರಣೆಗಳಿಗಾಗಿ ೬.೧೩; ೧೩.೬೬೯; ೧೩.೮೦೨;
೧೭.೩೫೪ ನೋಡಬಹುದು.

ಸಂಸ್ಕೃತದ ಯತ್-ತತ್ ಈ ಅವ್ಯಯಗಳ ಜೋಡಿಗಾಗಿ ಹಾಗೂ ಯಃ - ಸಃ ಈ (ಸಂಬಂಧೀ - ಅನುಬಂಧೀ) ಸರ್ವನಾಮಗಳ ಜೋಡಿಗಾಗಿ ಮರಾಠಿಯಲ್ಲಿ ಜೋ-ತೋ ಇದೊಂದೇ ಜೋಡಿ ಸಿದ್ಧವಾಗಿದೆ.

ಸಂಸ್ಕೃತ ಸಃ > ಪ್ರಾಕೃತ ಸೋ > ಮಹಾರಾಷ್ಟ್ರೀ ಸ, ಸು, ಸೋ

ಸಂಸ್ಕೃತ ತತ್ > ಪ್ರಾಕೃತ ತಾ > ಮಹಾರಾಷ್ಟ್ರೀ ತೋ

ಹೀಗೆ ರೂಪಗಳು ಸಿದ್ಧವಾಗಿ, ಒಂದು ಇನ್ನೊಂದರ ಅರ್ಥವನ್ನು ತೆಗೆದುಕೊಳ್ಳುತ್ತ ಮರಾಠಿಯಲ್ಲಿ ತೋ (ಅವನು, ಪುಲ್ಲಿಂಗ ಶಬ್ದದ ಸರ್ವನಾಮ) ಬಂದಿದೆ.

ಇಷ್ಟೊಂದು ಸುದೀರ್ಘವಾಗಿ 'ತೋ' ಸರ್ವನಾಮದ ಮೂಲ ಕಾರಣ ಷಷ್ಠೀ ವಿಭಕ್ತಿಯ 'ಚಾ' (ಪುಲ್ಲಿಂಗ ಏಕವಚನ)ದ ವ್ಯುತ್ಪತ್ತಿಯ ಶೋಧ. ಈ ಬೆಳವಣಿಗೆಯಲ್ಲಿ 'ತಾ' ಗುರುತಿಸಿದ ಬಳಿಕ 'ತಾ' ದಿಂದ 'ಚಾ' ಆದದ್ದು ಪ್ರತ್ಯೇಕವಾಗಿ ವಿವರಿಸಬೇಕಿಲ್ಲ.

ಚೀ ಯಾವಾಗ?

ಮುಂದಿನ ಶಬ್ದವು ಸ್ತ್ರೀಲಿಂಗಿಯಾಗಿದ್ದರೆ ಹಿಂದಿನ ಶಬ್ದಕ್ಕೆ ಹತ್ತುವ ಷಷ್ಠೀ ಪ್ರತ್ಯಯವು ಚೀ ಒಂದೇ. ಉದಾಹರಣೆಗಳು.

*ಏಕೀ ದೇಹಾಚೀ ಡಿರೀ ತುಟೇ (೧೫.೧೩೧)*

ಒಂದು ದೇಹದ ಕುಡಿ ಮುರಿದರೆ

*ಸತ್ವಾಚೀ ಸೂಟೇ ಸತ್ರಾಣ ವಾಹುಟಳೀ (೧೫.೧೮೨)*

ಸತ್ವದ ಬಿರುಗಾಳಿಯು ಜೋರಾಗಿ ಬೀಸುವುದು

ಅವನು (ಅಥವಾ ಪುಲ್ಲಿಂಗದ ಶಬ್ದದ ಸರ್ವನಾಮದ) ಅರ್ಥದಲ್ಲಿ ತಾ ಶಬ್ದವು ಸಿದ್ಧವಾದ ಬಳಿಕ ಸಂಸ್ಕೃತದಲ್ಲಿಯಂತೆ ಈ ಪ್ರತ್ಯಯವು ಹತ್ತಿ ಅವಳು (ಅಥವಾ ಸ್ತ್ರೀಲಿಂಗದ ಶಬ್ದದ ಸರ್ವನಾಮದ) ಅರ್ಥದಲ್ಲಿ ತೀ ಶಬ್ದವು ವ್ಯುತ್ಪತ್ತಿಯಾಯಿತು. ಜ್ಞಾನೇಶ್ವರೀಕಾಲೀನ ಮರಾಠೀಯಲ್ಲಿ ಈ ಶಬ್ದವು ಪ್ರಥಮಾ ವಿಭಕ್ತಿಯಲ್ಲಿ ಕಣ್‌ಗೋಚರವಾಗದಿದ್ದರೂ, ಅನ್ಯ ವಿಭಕ್ತಿಗಳಲ್ಲಿ ಕಾಣಸಿಗುತ್ತದೆ.

*ತಿಯೇಜ್ ಮಾಯೇಚಿಯಾ ಪರೀ (೧೧.೫೪೯) - ಆ ಮಾಯೆಯಂತೆ*
*ತಿಯೇ ಕಾಂತು ಮೊನಲೇಯಾ ನ ಠ್ಠಾವೇಜ್ (೧೧.೫೬೭)*
ಅವಳಿಗೆ ಗಂಡನಿಗೆ ಬೆಟ್ಟಿಯಾಗದೇ ಇರಲಾಗುವುದಿಲ್ಲ.

ಈ ತೀ ಶಬ್ದ ಚೀ ಯಾಗಿ ಷಷ್ಠೀ ವಿಭಕ್ತಿಯ ಪ್ರತ್ಯಯವಾಗಿದೆಯೆಂಬುದು ಸ್ಪಷ್ಟ.

ಲಿಂಗ ವಚನ ವಿಭಕ್ತಿಗಳುಳ್ಳ, ಸಂಬಂಧ ದರ್ಶಕ ವಿಶೇಷಣದಂತೆ ಉಪಯೋಗವಾಗುವ ಪ್ರತ್ಯಯವು ಇನ್ನಾವ ಭಾಷೆಯಲ್ಲೂ ಇಲ್ಲ. ಮರಾಠಿಯಲ್ಲಿ ಕೂಡ ಶಬ್ದಯೋಗಿ ಅವ್ಯಯಕ್ಕೆ ವಿಭಕ್ತಿ ಪ್ರತ್ಯಯ ಹತ್ತುವುದಿಲ್ಲ ಎಂದು ಜೂಲ್ ಬ್ಲೋಕ್ ಹೇಳುತ್ತಾರೆ.[5] ಈ ಚ ಕ್ಕೆ ಷಷ್ಠಿಯ ಸ್ವಾರ್ಥೀ ಅರ್ಥ ಇಲ್ಲ. ಷಷ್ಠಿಯ ರೂಪಕ್ಕೆ ಜೋಡಿಸಿದ ಅದಕ್ಕೆ ಎರವಲು ಬಲ ದೊರಕಿದಂತೆ ಭಾಸವಾಗುತ್ತದೆ[6] ಎಂದು ರಾಜವಾಡೆ ಹೇಳುತ್ತಾರೆ. ಇವರು ಹೇಳುವುದರ ಅರ್ಥ ಸ್ಪಷ್ಟವಾಗಬೇಕಾದರೆ ತುಳಪುಳೆಯವರು ಕೊಡುವ ಉದಾಹರಣೆಗಳನ್ನೇ ನೋಡಬೇಕು.

*ತೃತೀಯಾ: ತೇಯಾ ಶುಕಾಚೇನಿ ಅಂಗಭಾರೇಜ್ ನಳಿಕಾಭಿಜ್‌ಪಿನಲಿ (೬.೨೬)*
ಆ ಗಿಳಿಯ ಮೈತೂಕದಿಂದ ಕೊಳವೆ ತಿರುಗಿತು.
*ಚತುರ್ಥೀ: ಜೇಯಾಚಿಯಾ ಇಂದ್ರಿಯಾಚಿಯಾಜ್ ಘರಾ ನಾಹಿಜ್*
*ವಿಷಯಾಂಚಿಯೂ ಏರಝಾರಾ (೬.೬೨)* ಯಾರ ಇಂದ್ರಿಯಗಳ ಮನೆಯಲ್ಲಿ
ವಿಷಯಗಳ ಹೋಗುಬರುವಿಕೆ (ಒಡನಾಟ) ಇಲ್ಲವೋ
*ಸಪ್ತಮಿ: ಪರಿ ಕ್ಷೋಭು ಮನೀಜ್ ನೇಣಜೇ ದ್ರೋಣಾಚಿಯೇ (೨.೩೯)*
ಆದರೆ ದ್ರೋಣನ ಮನಸ್ಸಿನಲ್ಲಿ ಕ್ಷೋಭ ಅರಿಯಲಾಸದು

ಈ ಮೂರು ಉದಾಹರಣೆಗಳಲ್ಲಿ ಶುಕ, ಇಂದ್ರಿಯ, ವಿಷಯ, ದ್ರೋಣ ಈ ಶಬ್ದಗಳಿಗೆ ಮೊದಲು ಷಷ್ಠಿಯ ವಿಭಕ್ತಿ ಪ್ರತ್ಯಯಗಳು ಹತ್ತಿ ಬಳಿಕ ತೃತೀಯಾ (ನಿ) ಷಷ್ಠಿ (ಆ) ಸಪ್ತಮಿ (ಏ)ಗಳು ಹತ್ತಿವೆ. ಕನ್ನಡವನ್ನೋದದ ಈ ಮೂರೂ ಪಂಡಿತರ ಗುದುಮುರುಗೆ ಇಷ್ಟೇ!

---

5. La Formation de la Langue Marathe 202
6. ಜ್ಞಾನೇಶ್ವರೀತೀಲ ಮರಾಠೀ ಭಾಷೇಚೇ ವಾಕರಣ -೧೪

ಪ್ರಥಮಾ, ದ್ವಿತೀಯೆ, ಚತುರ್ಥಿ, ಷಷ್ಠಿ ವಿಭಕ್ತಿಗಳು ಮೊದಲನೆಯ ವಿಭಾಗದಲ್ಲಿ ಸೇರುತ್ತವೆ. ಇವು ಸರ್ವನಾಮ ಮೂಲಗಳಿಂದ ಉತ್ಪನ್ನವಾದುವು. ಷಷ್ಠೀ ವಿಭಕ್ತಿಯ ಮುಂದೆ ಸೇರ್ಪಡೆಯಾಗುವ ತೃತೀಯೆ, ಪಂಚಮಿ, ಸಪ್ತಮಿ ವಿಭಕ್ತಿಗಳು ಎರಡನೆಯ ವಿಭಾಗಕ್ಕೆ ಸೇರುತ್ತವೆ. ಎಂದು ಪ್ರ.ಗೋ. ಕುಲಕರಣಿಯವರು ಕನ್ನಡದ ಇದೇ ವ್ಯಾಕರಣವೈಶಿಷ್ಟ್ಯವನ್ನು ಸುಲಭವಾಗಿ ತಿಳಿಹೇಳಿದ್ದಾರೆ.[7] ಇದಕ್ಕೆ ಹಳಗನ್ನಡದಲ್ಲಿಯ ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದಾಗಿದೆ.

ವಿದ್ಯಾಬಲದಿಂ ಕಾದದೆ ನಿಜಭುಜಬಲದಿಂ ಪಾಂಡವರೊಳರಸ ಕಾದಲ್ ಬಗೆದಯ್ (ಗದಾಯುದ್ಧ)

ಇಲ್ಲಿ ತೃತೀಯಾ ವಿಭಕ್ತಿಯಲ್ಲಿ ಬರುವ ಬಲದಿಂ ಶಬ್ದಗಳು ಬಲ + ಷಷ್ಠಿಯ ಅ + ತೃತೀಯೆಯ ಇಂ ಹೀಗೆ ಸಿದ್ಧವಾಗಿವೆ. ಗದಾಯುದ್ಧದಲ್ಲಿಯ ಇನ್ನೂ ಕೆಲವು ಉದಾಹರಣೆಗಳು.

*ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನ ಕಳಶ ಸಂಭವನಿಂ ತೀ*
*ರದ ಕಜ್ಜಮಿನಜನಿಂ ತೀರದ ಕಜ್ಜಂ ದ್ರೋಣಪುತ್ರ ನಿಂ ತೀರ್ವುದೇ*
*ಎಂಬುದುಮಾ ಸಮಯದೊಳ್ ವಿದ್ಯಾಧರ ಮಹತ್ತರಂ (ಪಂಪರಾಮಾಯಣ)*

ಇಲ್ಲಿ ಸಮಯ + ಷಷ್ಠಿಯ ಅ + ಸಪ್ತಮಿಯ ಒಳ್ = ಸಮಯದೊಳ್ ಪಂಪರಾಮಾಯಣದಲ್ಲಿಯ ಇನ್ನೂ ಉದಾಹರಣೆಗಳು.

*ಕಲ್ಯಾಣತತ್ಪರರೀ ಮಂಗಳಲಗ್ನದೊಳ್, ದೂರದೊಳಂಜದೀಕ್ಷಿಸುವ ಕಣ್ಗಲಿಗಳ್*

ಇನ್ನು ತುಳಪುಳೆಯವರ ಚತುರ್ಥಿಯ ಉದಾಹರಣೆಯ ಬಗ್ಗೆ ಹೇಳಬೇಕೆಂದರೆ ಅದು ಚತುರ್ಥಿಯ ಉದಾಹರಣೆಯೇ ಅಲ್ಲ. ಅದು ಷಷ್ಠಿಯ ಉದಾಹರಣೆ. ಇದು ವಿಚಿತ್ರವೆನಿಸಬಹುದು. ಷಷ್ಠಿಯ ಎರಡೆರಡು ಪ್ರತ್ಯಯಗಳು ಹತ್ತುವ ಕಾರಣವೇನು?

ಮುಂದಿನ ಶಬ್ದವು ಪುಲ್ಲಿಂಗದ ಏಕವಚನ ಪ್ರಥಮಾದಲ್ಲಿದ್ದರೆ ಚಾ ಒಂದೇ ಪ್ರತ್ಯಯ ಹತ್ತುತ್ತದೆ. ಆ ಶಬ್ದವು ಬಹುವಚನದ್ದಾಗಿದ್ದರೆ ಚೇ (ಚೇಜ್ ಅಲ್ಲ!) ಪ್ರತ್ಯಯವಾಗುತ್ತದೆ.

ಆದರೆ ಆ ಶಬ್ದವು ಪ್ರಥಮಾದಲ್ಲಿರದೆ ಅನ್ಯ ವಿಭಕ್ತಿಗಳಲ್ಲಿದ್ದರೆ ಅದರ ಹಿಂದಿನ ಷಷ್ಠೀ ಪ್ರತ್ಯಯ ಚೇ + ಅ ಆಗುತ್ತದೆ.

ಇದೇ ರೀತಿಯಾಗಿ ಮುಂದಿನ ಶಬ್ದ ಸ್ತ್ರೀಲಿಂಗ ಏಕವಚನದಲ್ಲಿದ್ದರೆ ಚೀ, ಬಹುವಚನದಲ್ಲಿದ್ದರೆ ಚೀ + ಅ.

ಹೀಗೆ ತೋ (ಅವನು) ತೀ (ಅವಳು) ತೇಜ್ (ಅದು) ಸರ್ವನಾಮಗಳ ಭಿನ್ನ ವಿಭಕ್ತಿ ವಚನಗಳ ರೂಪಗಳು ತ > ಚ ಆಗಿ ಮಾರ್ಪಡುತ್ತವೆ ಎಂದು ಒಂದೇ ವಾಕ್ಯದಲ್ಲಿ ಹೇಳಿ ಮುಗಿಸಬಹುದು.

---

7. ಕನ್ನಡ ಭಾಷೆಯ ಚರಿತ್ರೆ ಪು. ೪೫೯

# ೧೦. ಮರಾಠಿಯಲ್ಲಿ ವಿಭಕ್ತಿಪ್ರತ್ಯಯಗಳು-೩

ಸಂಸ್ಕೃತ ಪ್ರಾಕೃತಗಳ ಪ್ರಭಾವದಿಂದಾಗಿ ಕರ್ಮಣೀಪ್ರಯೋಗ ಭಾವೇ ಪ್ರಯೋಗಗಳು ಮರಾಠಿಯಲ್ಲಿ ಸಹಜವಾಗಿ ಬೆಳೆದಿವೆ.

ಹತ್ತನೆಯ ಶತಮಾನದಲ್ಲಿಯ ಶ್ರವಣಬೆಳಗೊಳದ ಶಿಲಾಲೇಖ *ಚಾಉಂಡರಾಜೇಜ್ ಕರವಿಯಲೇಜ್* - ಚಾವುಂಡರಾಯನಿಂದ ಮಾಡಿಸಲ್ಪಟ್ಟಿತು. ಕರ್ಮಣೀ ಪ್ರಯೋಗದಲ್ಲಿದೆ. ಜ್ಞಾನೇಶ್ವರೀಯಂತಹ ಪಂಡಿತಕೃತಿಯಲ್ಲಂತೂ ಕರ್ಮಣೀ ಪ್ರಯೋಗಗಳು ಓವಿಓವಿಗೆ ಬರುತ್ತವೆ.

*ತಾನ್ಹೈಲೇಯಾಜ್ ತೋಯ ಸೇವಿಜೇ (೬.೩)*

ನೀರಡಿಸಿದವನಿಂದ ನೀರು ಸೇವಿಸಲ್ಪಟ್ಟಿತು

*ತೇಸೇಜ್ ದೇಖಿಲೇಜ್ ವೀರವಿಲಾಸೇಜ್ (೧೧.೬೫೩)*

ಅವನಿಂದ ವೀರವಿಲಾಸಗಳು ನೋಡಲ್ಪಟ್ಟವು.

*ಸಂಜಯೇಜ್ ಮಾಥಾ ತೂಕಿಲಾ (೯.೫೧೮)*

ಸಂಜಯನಿಂದ ತಲೆ ತೂಗಲ್ಪಟ್ಟಿತು.

*ಮಗ ಅರ್ಜುನೇಜ್ ಹ್ಮಣಿತಲೇಜ್ (೮.೧)*

ಬಳಿಕ ಅರ್ಜುನನಿಂದ ಹೇಳಲ್ಪಟ್ಟಿತು.

ಇವೆಲ್ಲ ವಾಕ್ಯಗಳು ಭೂತಕಾಲದವಾಗಿವೆ. ಎರಡನೆಯದಾಗಿ ಸಕರ್ಮಕವಾಗಿವೆ. ಕ್ರಿಯಾಪದಗಳು ಪ್ರಥಮಾ ವಿಭಕ್ತಿಯಲ್ಲಿಯ ಲಿಂಗವಚನಗಳನ್ನನುಸರಿಸುತ್ತವೆ. ಕರ್ಮಪದ ಸ್ಪಷ್ಟವಾಗಿರದಿದ್ದಾಗ ಅವು ಪ್ರಥಮಪುರುಷ ಏಕವಚನದವಾಗಿರುತ್ತವೆ. ಕರ್ತೃ ತೃತೀಯೆಯಲ್ಲಿ. ಕರ್ಮಣೀ ಪ್ರಯೋಗಗಳಲ್ಲದೆ ಕರಣ ಅರ್ಥದಲ್ಲಿ ಮರಾಠಿಯಲ್ಲಿ ತೃತೀಯಾ ವಿಭಕ್ತಿ ಬಳಕೆಯಲ್ಲಿದೆ. ಆರ್. ವ್ಹಿ. ಜಹಾಗೀರದಾರರು ಕೊಟ್ಟ ಜ್ಞಾನೇಶ್ವರಿಯಲ್ಲಿಯ ಕೆಳಗಿನ ಉದಾಹರಣೆಗಳನ್ನು ನೋಡಬಹುದು.

*ತೂಝೇನಿ ನಾವೇಜ್ ಅಪೇಸಿಜ್ ದಿಶಾ ಲಂಘೀ (೨.೮)*

ನಿನ್ನ ಹೆಸರಿನಿಂದ, ಅಪಯಶದಿಂದ ದಿಕ್ಕು ದಾಟಲಾಗುತ್ತದೆ.

(ಅರ್ಥ : ಅಪಯಶವು ದಿಕ್ಕು ಪಾಲಾಗುತ್ತದೆ.)

*ತೂಝೇನಿ ಪಾಡೇಜ್ ದೀಸೇಜ್ ತ್ರೈಲೋಕ್ಯಹೀ ಥೋಕಡೇ (೨.೧೧)*

ನಿನ್ನಯೋಗ್ಯತೆಯಿಂದ ತ್ರೈಲೋಕ್ಯವೂ ಕಿರಿದು ಕಾಣುತ್ತದೆ.

*ಐಸೇಯಾಜ್‌ತೇಜ್ ಕೈಸೇನಿ ಮಾರುಜ್ (೧.೨೨೧)*

ಇಂತಹರನ್ನು ಹೇಗಿಂದ ಕೊಲ್ಲಲಿ?

*ಮಿ ಸರ್ವಥಾ ನ ಜೂಝೇ ಏಥೇ ಭರವಸೇನಿ (೨.೮೨)*

ನಾನಿಲ್ಲಿ ಸರ್ವಥಾ ಭರವಸೆಯಿಂದ ಕಾದಲಾರೆ.

ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ತೃತೀಯಾ ವಿಭಕ್ತಿಯ ಪ್ರತ್ಯಯಗಳು ಇಂತೆಂದು ವ್ಯಾಕರಣಕಾರರು ಹೇಳುತ್ತಾರೆ.

ಏಕವಚನ : ಏಜ್, ಏ, ಇ, ಆಜ್
ಬಹುವಚನ : ಆ, ಆಜ್, ಏ, ಇಜ್

ಏಜ್ ಪ್ರತ್ಯಯ ಸಂಸ್ಕೃತದ ಏನ ದಿಂದ, ಇಜ್ ಪ್ರತ್ಯಯ ಸಂಸ್ಕೃತದ ಏಭಿಃ ದಿಂದ ಸಾಧಿಸಲಾಗಿದೆಯೆಂದು ಬ್ಲೋಕ್, ರಾಜವಾಡೆ ಮೊದಲಾದವರು ಅಭಿಪ್ರಾಯ ಪಟ್ಟಿದ್ದಾರೆ. ಉಳಿದ ಪ್ರತ್ಯಯಗಳ ಬಗ್ಗೆ ತುಳಪುಳೆ ಹೇಳುವುದು, ಅವು ಪರಂಪರಾಗತವಾಗಿರದೆ ಯಾದವ ಕಾಲೀನ ಮರಾಠಿಯು ಅವುಗಳನ್ನು ಸ್ವತಂತ್ರವಾಗಿ ಸಿದ್ಧಗೊಳಿಸಿತು.[1] ಮಾತೇ ಮುಗಿಯಿತು!

ರಾಜವಾಡೆಯವರಂತೂ ಅವುಗಳನ್ನು ಉಲ್ಲೇಖಿಸುವುದೂ ಇಲ್ಲ. ಅವು ಅವರಿಗೆ ಅನಾನುಕೂಲಕರವೆನಿಸಿರಲೂ ಸಾಕು.

ನಾವೀಗ ಏಜ್ ಪ್ರತ್ಯಯಾಂತ ತೇಣೇಜ್ ಶಬ್ದವನ್ನು ನೋಡುವಾ. 'ಅವನು' ಅರ್ಥದಲ್ಲಿ ಪ್ರಥಮ ಪುರುಷ (ಪುಲ್ಲಿಂಗವಂತೂ ಸರಿಯೇ) ಏಕವಚನದ ರೂಪ ತೋ. ಆದರ ಸಾಮಾನ್ಯರೂಪ (ಮಿಕ್ಕ ವಿಭಕ್ತಿ ಪ್ರತ್ಯಯ ಹತ್ತುವ ಮೊದಲಿನದು. Oblique) ತೇ.

ತೇ + ಏಜ್ ದಿಂದ ತೇಣೇಜ್ ಹೇಗಾಗುತ್ತದೆ?

ಇಲ್ಲಿ ಬರುವ ಕನ್ನಡದ ಇನಾಗಮವನ್ನು ಆರ್.ವ್ಹಿ. ಜಹಾಗೀರದಾರರು ಸರಿಯಾಗಿಯೇ ಗುರುತಿಸಿದ್ದಾರೆ. ಶಬ್ದಾನುಶಾಸನದ ೨೬೨ ನೆಯ ಸೂತ್ರ ಹಾಗೂ ಶಬ್ದಮಣಿದರ್ಪಣದ ೧೧೮ನೆಯ ಸೂತ್ರದಂತೆ ಉ, ಋ, ಎ, ಓ ಮತ್ತು ಔಕಾರಗಳಲ್ಲಿ ಅಂತ್ಯಗೊಳ್ಳುವ ಏಕವಚನದ ಪದಗಳಿಗೆ ತೃತೀಯಾದಿ ವಿಭಕ್ತಿಗಳಲ್ಲಿ ಇನಾಗಮವಾಗುತ್ತದೆ.

ಉದಾಹರಣೆಗಳು : ತಳಿರ್ವಾಪಿನಿಂದೆ, ಪೂವಿನ, ಪಿತೃವಿನ, ಋಾವಿನ, ಗ್ಲೌವಿನ, ನಿನ್ನಿನ, ನಾಳಿನ ಇತ್ಯಾದಿ.

ಇದೇ ರೀತಿಯಾಗಿ ತೇ + ಇನ್ = ತೇಣೇಜ್ ರೂಪ ಸಿದ್ಧವಾಗಿದೆ. ಇದೇ ರೀತಿಯಾಗಿ ಜೋ + ಇನ್ = ಜೇಣೆಜ್ (ಸ್ವರ ಲೋಪಸಂಧಿ)

(ಮಾನಸೋಲ್ಲಾಸದಲ್ಲಿಯ ಜೇಣೇಜ್ ರಸಾತಲಉಣು ಮತ್ಸ್ಯರೂಪೇ)

'ಈ' (ಕನ್ನಡದ್ದೇ ಶಬ್ದ, ಇವನು ಅರ್ಥದಲ್ಲಿ) ದಿಂದ ಷಷ್ಠೀಯ ರೂಪ ಇಯಾಚೇ, ಏಯಾಚೇ, ಮುಂದೆ ತೃತೀಯೆಯ ಇನ್ ಸೇರಿ ಏಯಾಚೇನ.

*(ಏಯಾಚೇನ ಅಂಗವಾತೇ- ಇವನ ಮೈಗಾಳಿಯಿಂದ ಜ್ಞಾ. ೧೩.೬೪)*

ಅವೃಷ್ಟಿ ಶಬ್ದದ ಷಷ್ಠಿಯ ರೂಪ ಅವೃಷ್ಟಿಚೇ. ಅದಕ್ಕೆ ತೃತೀಯೆಯ ಇನ್‌ಸೇರಿ ಅವೃಷ್ಟಿಚೇನಿ (ಅವೃಷ್ಟಿಚೇನಿ ಉಪದ್ರವೇ ಅವರ್ಷಣದ ತೊಂದರೆಯಿಂದ ೧೩.೨೨೧)

1. ಯಾದವಕಾಲೀನ ಮರಾಠೀ ಭಾಷಾ ಪು. ೨೨೮

ಜೀವ ಶಬ್ದದ ಷಷ್ಠಿಯ ರೂಪ ಜೀವಾಚೇ ಅದಕ್ಕೆ ತೃತೀಯೆಯ ಇನ್ ಸೇರಿ ಜೀವಾಚೇನಿ (ಜೀವಾಚೇನಿ ನಾಜ್‌ವೇ - ಜೀವದ ಹೆಸರಿನಿಂದ ೧೩.೨೫೮)

ಮೇಲಿನ ಎಲ್ಲ ಉದಾಹರಣೆಗಳಲ್ಲಿ ಮೊದಲು ಷಷ್ಠಿಯ ಪ್ರತ್ಯಯ ಹತ್ತಿ ಬಳಿಕವೇ ತೃತೀಯೆಯ ಪ್ರತ್ಯಯ ಆರೋಪಿತವಾದುದನ್ನು ಗಮನಿಸಬಹುದು. ಇದು ಕನ್ನಡದ ವ್ಯವಚ್ಛೇದಕ ಲಕ್ಷಣಗಳಲ್ಲೊಂದು. ಇವೇ ರೀತಿಯಾಗಿ ಜ್ಞಾನೇಶ್ವರಿಯಲ್ಲಿ ಆತ್ಮಾಚೇನಿ, ತೃಣಾಜ್‌ಚೇನಿ ಅಪಾನಾಚೇನಿ ಮೊದಲಾಗಿ ಉದಾಹರಣೆಗಳು ದೊರೆಯುತ್ತವೆ.

ಅಪವಾದಾತ್ಮಕವಾಗಿ ಮೊದಲು ಷಷ್ಠಿಯ ಪ್ರತ್ಯಯ ಹತ್ತದೆಯೇ ನೇರವಾಗಿ ತೃತೀಯೆಯ ಇನಾಗಮವಾದ ಉದಾಹರಣೆಗಳೂ ಕಡಿಮೆಯಿಲ್ಲ. ಆರಿಸಾದಿಂದ ಆರಿಸೇನಿ, ಉನ್ಹಾಳಾದಿಂದ ಉನ್ಹಾಳೇನಿ, ಜಾಣತಾದಿಂದ ಜಾಣತೇನಿ, ಜಾಣತೇನ, ಮಹಾತ್ಮಾದಿಂದ ಮಹಾತ್ಮೇನಿ, ಮೂಕದಿಂದ ಮುಕೇನಿ, ಚಾಂದಣೆಯಿಂದ ಚಾಂದಣೇನಿ, ಸಾಜ್‌ಕಡೆಯಿಂದ ಸಾಜ್‌ಕಡೇನಿ ಎಂದೆಲ್ಲ ರೂಪಗಳು ಸಿದ್ಧವಾಗಿವೆ.

ಇನ್ನು ಸಂಸ್ಕೃತದ ಏನ ದಿಂದ ಏಜ್ ಆದರೂ ಸಾಧಿತವಾಗಿಯೇ ಎಂಬುದನ್ನು ನೋಡಬೇಕು. ಮೊದಲನೆಯದಾಗಿ ಸಂಸ್ಕೃತದ ಯಾವ ವಿಭಕ್ತಿ ಪ್ರತ್ಯಯವೂ ನೇರವಾಗಿ ಮರಾಠಿಯಲ್ಲಿ ಬಂದಿರುವುದಾಗಿ ಯಾವ ಮರಾಠಿ ವೈಯಾಕರಣಿಯೂ ಹೇಳಿಲ್ಲ. ದಕ್ಷಿಣ ಅಪಭ್ರಂಶ ಭಾಷೆಯಲ್ಲಿ ಏಜ್ ಮತ್ತು ಏಣ ಪ್ರತ್ಯಯಗಳು ಬಳಕೆಯಾಗಿದ್ದರೂ ಏಜ್‌ದಿಂದ ಇಜ್ ಪ್ರತ್ಯಯದತ್ತ ಜಸಹರಚರಿಉ ಕೃತಿಯಲ್ಲಿ ಒಲವು ಕಾಣುತ್ತದೆಯೆಂದೂ ಕರಕಂಡ ಚರಿತದಲ್ಲಿ ಇದು ಪ್ರಬಲವಾಗಿದೆಯೆಂದೂ ತಗಾರೆ ಹೇಳುತ್ತಾರೆ.[2] ಇದಕ್ಕೆ ಎರಡು ಆಕ್ಷೇಪಗಳನ್ನು ಎತ್ತಬಹುದಾಗಿದೆ.

ಕ್ರಿ.ಶ. ಸುಮಾರು ೯೮೩ ರಲ್ಲಿ ಬರೆಯಲಾಗಿದೆ ಎನ್ನಲಾದ ಶ್ರೀ ಚಾವುಣ್ಡರಾಜೇಜ್ ಕರವಿಯಲೇಜ್ ಈ ಶ್ರವಣಬೆಳಗೊಳದ ಮರಾಠಿ ಶಿಲಾಲೇಖ ಹಾಗೂ ಜಸಹರಚರಿಉ, ಕರಕಂಡು ಚರಿತ ಈ ಅಪಭ್ರಂಶ ಕೃತಿಗಳು ಸಮಕಾಲೀನ. ಹೀಗಿರುವಾಗ ಅಪಭ್ರಂಶ ಭಾಷೆಯ ಏಜ್ ಪ್ರತ್ಯಯ ಮರಾಠಿಗೆ ಬಂತೆಂದು ಹೇಳುವದು ಎಷ್ಟರಮಟ್ಟಿಗೆ ಸಮಂಜಸ?

ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡದ ಪುಷ್ಪದಂತನು ಕ್ರಿ.ಶ. ೯೬೫ ದಿಂದ ೯೭೨ ರ ವರೆಗೆ ಅಪಭ್ರಂಶ ಭಾಷೆಯಲ್ಲಿ ಎರಡು ಕೃತಿಗಳನ್ನು ರಚಿಸಿದನಷ್ಟೇ. ಪಂಪನ ಗುರುವೆನಿಸಿದ ಜಿನಸೇನಾಚಾರ್ಯ, ಅಸಗ ಮುಂತಾದ ಕವಿಗಳು ಸಂಸ್ಕೃತದಲ್ಲಿ ಕಾವ್ಯ ರಚಿಸಿದರು. ಇವೆಲ್ಲ ಪಂಡಿತ ರಚನೆಗಳು. ಆದುದರಿಂದ ಆ ಕಾಲದಲ್ಲಿ ಮಹಾರಾಷ್ಟ್ರೀ ಭಾಷೆಯು ಮಳಖೇಡದ ಪರಿಸರದಲ್ಲಿ ಜನಪದ ಭಾಷೆಯಾಗಿತ್ತೆಂದೂ ಅದರಿಂದ ಮರಾಠಿ ಹುಟ್ಟಿತು, ಪ್ರಭಾವಿತವಾಯಿತೆಂದು ಭಾವಿಸುವುದು ಯಾವ ಸೀಮೆಯ ಜಾಣತನ?

2. Historical Grammar of Apabhramsha P-118

ಮರಾಠಿಯಲ್ಲಿ ಅವ್ಯಯಗಳ ನೆರವಿನಿಂದ ಸಾಧಿಸಲಾದ ತೃತೀಯಾ ಭಾವವನ್ನು ಪರೀಕ್ಷಿಸೋಣ.

**ಕರವೀ**

*ತೇವಿಜ್ ಚಿ ಕಾನಾಕರವಿ ಹ್ಮಣವೀ ಬಾಪು ಮಾಝಾ (೪.೨೧೮)*
ಆಗಲೇ ಕಿವಿಗಳಿಂದ (ಕಿವಿಗಳ ಕೈಯಿಂದ) "ನಮ್ಮಪ್ಪ" ಎನ್ನಿಸಿಕೊಳ್ಳುತ್ತದೆ.

*ಸರ್ವೇಂದ್ರಿಯೇಜ್ ಪೋಸವೀಲ ಶ್ರವಣಾಕರವೀಜ್ (೧೮.೧೭೨೬)*
ಕಿವಿಗಳಿಂದ (ಕಿವಿಗಳ ಕೈಯಿಂದ) ಎಲ್ಲ ಇಂದ್ರಿಯಗಳನ್ನು ಪೋಷಿಸುವುದು.

ಇದರ ವ್ಯುತ್ಪತ್ತಿಯನ್ನು ತುಳಪುಳೆಯವರು ಕೃ-ಕರೋತಿ ಈ ಸಂಸ್ಕೃತ ಧಾತುವಿನ ಪ್ರಯೋಜಕದಲ್ಲಿ ಕಾಣಲೆತ್ನಿಸಿದ್ದಾರೆ. ಇಲ್ಲಿ 'ಮಾಡುವ' 'ಮಾಡಿಸುವ' ಯಾವ ಕ್ರಿಯೆ ಅಂತರ್ಭೂತವಾಗಿದೆಯೋ ತಿಳಿಯಲಿಲ್ಲ. ವರ್ಹಾಡಪಾಂಡೆಯವರು ತಮ್ಮ ನಾಗಪುರೀ ಬೋಲೀ ಗ್ರಂಥದಲ್ಲಿ 'ಕೈಯಿಂದ' ಅರ್ಥದಲ್ಲಿ 'ಹಾತವರೀ' ಎಂಬ ಅವ್ಯಯ ಇರುವುದೆಂದೂ ಕರ (ಕೈ) = ಹಾತ ಈ ಶಬ್ದದಿಂದ 'ಕರವೀ' ಸಿದ್ಧವಾಗಿರಬಹುದೆಂದೂ ಭಾವಿಸಿದ್ದಾರೆ. ಇದೇ ಹೆಚ್ಚು ಸಮರ್ಪಕವಾಗಿದೆ. ಇದರ ಸಮರ್ಥನೆಗಾಗಿ ಜ್ಞಾನೇಶ್ವರಿಯಲ್ಲಿಯ ಇನ್ನೊಂದು ಸಂದರ್ಭ ವೀಕ್ಷಿಸಬಹುದು.

*ಆಹ್ಮಿಜ್ ಜೈಸೇಜ್ ಹೇಜ್ ಜಿಯಾ ರೀತೀ ಉಗಾಣಿಲೇಜ್ ಕಾನಾಚಾಜ್ ಹಾತೀಜ್ (೧೮-೧೪೩೧)* ನಾವು ಹೇಗೆ, ಯಾವ ರೀತಿಯಿಂದ (ಇದನ್ನು ನಿನ್ನ) ಕಿವಿಯ ಕೈಯಲ್ಲಿ ಕೊಟ್ಟೆವೋ – (ಇದು ದಾಂಡೇಕರರು ಕೊಟ್ಟ ಅರ್ಥ. ಉಗಾಣಣೇ ಈ ಧಾತು ಕನ್ನಡದ ಉಗ್ಗಡಿಸುವಿನಿಂದ ಮರಾಠಿಗೆ ಹೋದುದಾಗಿದೆ. ಕುಲಮನೆ ಮುನ್ನ - ಮುಗ್ಗಡಿಪಿರೇಂಗಳ (ಪಂಪಭಾರತ ೧೦-೨೧) ಇದು ಉದಾಹರಣೆ. ಕಿವಿಯ ಕೈಯಲ್ಲಿ (ಕಿವಿಯಲ್ಲಿ) ಸಾರಿಸಾರಿ ಹೇಳಿದೆವೋ ಎಂದು ಅರ್ಥೈಸುವುದು ಹೆಚ್ಚು ಸಮಂಜಸವಾದೀತು.) ಹಳಗನ್ನಡದಲ್ಲಿ ತೃತೀಯಾ ಭಾವಕ್ಕಾಗಿ ಕೈಯಿಂದ ಪ್ರಯೋಗ ದೊರೆಯದಿದ್ದರೂ ಭೀಮಕವಿಯ ಬಸವಪುರಾಣದಲ್ಲಿ (ಕ್ರಿ.ಶ. ೧೩೬೯) ಸುತಿವೆತ್ತ *ಬಸವ ಚರಿತ್ರವಂ ಭಕ್ತೋತ್ತಮರ ಕೈಯಿಂದ ಕೇಳಿದ ಮಾಳ್ಕೆಯಿಂದ (೬೧.೭೬)* ಎಂಬುದಾಗಿ ಸಂದರ್ಭ ದೊರೆಯುತ್ತದೆ. ಕೆಯ್ ಶಬ್ದದ ಹತ್ತಾರು ಅರ್ಥಗಳ ನೂರಾರು ಪ್ರಯೋಗಗಳು ಜ್ಞಾನೇಶ್ವರಿ (ಕ್ರಿ.ಶ. ೧೨೯೦) ಪೂರ್ವದ ಕನ್ನಡ ರಚನೆಗಳಲ್ಲಿ ದೊರೆತುದರಿಂದ ಈ 'ಕೈಯಿಂದ' ಪ್ರಯೋಗಕೂಡ ಕನ್ನಡದಿಂದಲೇ ಮರಾಠಿಗೆ ಹೋಗಿದೆಯೆಂದು ಧಾರಾಳವಾಗಿ ಹೇಳಬಹುದು.

**ಪರಿ, ಪೇಕ್ಷಿ**

ಇದೊಂದು ರಸವತ್ತಾದ, ಅಷ್ಟೇ ಜಟಿಲವಾದ ಶಬ್ದಸಮೂಹವಾಗಿದೆ. ತೃತೀಯಾ ಭಾವವನ್ನಲ್ಲದೆ ಇತರ ವೈಖರಿಗಳನ್ನು ಒಂದೆಡೆ ಪರಾಮರ್ಶಿಸುವದು ಅಂತೆಯೇ ಯುಕ್ತವಾದೀತು. ಇಲ್ಲಿ ಹಳಗನ್ನಡದ ಪರೆ, ಪರೆಗಂ, ಮೇಗು, ಸಂಸ್ಕೃತದ ಉಪರಿ ಹಾಗೂ ಮೇರ ಇವಿಷ್ಟು ಶಬ್ದಗಳು ಅಡಕವಾಗಿವೆ.

ಮೊತ್ತ ಮೊದಲು ಆರ್.ವ್ಹಿ. ಜಹಾಗೀರದಾರರು ವಿವೇಚಿಸಿದ ವಿಷಯಗಳನ್ನು ತಿಳಿದುಕೊಳ್ಳುವದು ಉಚಿತವಾದೀತು.

ಜ್ಞಾನೇಶ್ವರೀಯಲ್ಲಿ 'ವರಿ' ಶಬ್ದ ಮೂರು ಸಂದರ್ಭಗಳಲ್ಲಿ ಬಳಸಲಾಗಿದೆ. ಮೊದಲನೆಯದಾಗಿ 'ಮೇಗೆ' ಅರ್ಥದಲ್ಲಿ ('ಕೆಳಗೆ' ಗೆ ವಿರುದ್ಧವಾಗಿ)

*ಟಿಟಿಭುಜ್ ಚಾಂಚುವೇರ್ಥಿಜ್ ಮಾಪಸೂಯೇ ಸಾಗರೀಜ್ (೧.೬೮)*

ಟೀಂವಕ್ಕಿ ಚುಂಚಿನ ಮೇಲೆ (ನೀರೆತ್ತಿ) ಸಮುದ್ರವನ್ನು ಅಳೆದಂತೆ–

ನಾನು ಕೊಟ್ಟ ಈ ಉದಾಹರಣೆ ರಾಜವಾಡೆ ಪ್ರತಿಯಲ್ಲಿಯದು, ದಾಂಡೇಕರ ಪ್ರತಿಯಲ್ಲಿ *ಚಾಂಚುವರೀ* ಎಂದು ಪಾಠಭೇದವಿದೆ. ಅರ್ಥದ ದೃಷ್ಟಿಯಿಂದಲೂ ಅದೇ ಸುಯೋಗ್ಯ. ಈ ವರಿ ಶಬ್ದ ಸಂಸ್ಕೃತದ ಉಪರಿಯಿಂದ ಸಿದ್ಧವಾಯಿತೆಂದು ಬ್ಲೋಕ್ ಹೇಳುತ್ತಾರೆ. 'ಉಪ' ಕ್ಕೆ 'ವ' ಆದೇಶವಾದ ಶಬ್ದಗಳು ವರಿ ಬಂದು ಬಿಟ್ಟರೆ ವಹಾಣ (ಉಪಾನಹದಿಂದ) ಒಂದೇ. ಪ್ರಾಕೃತ ಶಬ್ದಸಿದ್ಧಿಯಲ್ಲಿ ಸಂಸ್ಕೃತದ 'ಉಪ' ಹಾಗೆಯೇ ಉಳಿದುದನ್ನು ನೋಡುತ್ತೇವೆ. ಉಪಹಸಿತ > ಉಪಹಸಿದ, ಉಪಾಯ > ಉವಾವೋ, ಉಪನಯ > ಉವಣೀ ಉಪಸರ್ಪಾಮಿ > ಉಪಸಪ್ಪಾಮಿ. ಅಂತೆಯೇ ಬಹುಶಃ ತುಳಪುಳೆಯವರು ಈ ವ್ಯುತ್ಪತ್ತಿಯ ಬಗ್ಗೆ ಸಂಶಯ ತೋರಿದ್ದಾರೆ.[3]

ಎರಡನೆಯದಾಗಿ ಸಮಯ ಅರ್ಥದಲ್ಲಿ 'ವರಿ' ವೇರ್ಥಿ' ಶಬ್ದಬಳಸಲಾಗಿದೆ.

*ಹಾ ಠಾವೋವೇರ್ಥಿಜ್ ಪುಡುತೀ ಪುಡುತೀಜ್ (೧೧.೩೮೧)*

ಇಲ್ಲಿಯವರೆಗೆ ಪುನಃ ಪುನಃ

ಇದು ಜಹಾಗೀರದಾರರು ಕೊಟ್ಟ ಉದಾಹರಣೆ. ರಾಜವಾಡೇ ಪ್ರತಿಯಲ್ಲಿಯದು. ದಾಂಡೇಕರ ಪ್ರತಿಯಲ್ಲಿ (ಓವಿ ಸಂಖ್ಯೆ ೧೧-೩೮೬) ಹಾ ಠಾಯು-ವರೀ ಎಂದು ಪಾಠಭೇದವಿದೆ. ಜಹಾಗೀರದಾರರು upto this place ಎಂದು ಅನುವಾದಿಸಿದ್ದು ಸರಿಯಲ್ಲ. upto this time ಎಂದು ಇರಬೇಕಾಗಿತ್ತು. ಇಲ್ಲಿ - ಈ ಉದಾಹರಣೆಯಲ್ಲಿ ಠಾವ = ಸ್ಥಾನ = ಠಾಯ ಎಂದು ಪ್ರಯೋಗವಿದ್ದರೂ ಕನ್ನಡದ 'ಇಲ್ಲಿಯವರೆಗಿನಂತೆ' 'ಈ ಸಮಯುದ ವರೆಗೆ' ಎಂದೇ ಅರ್ಥ ಅಭಿಪ್ರೇತವಿದೆ! *ಎನ್ನೆವರಂ ಸಿರಿ ತಮಗೆ ಉಣ್ಬು, ಅನ್ನೆವರಂ ಸೇವ್ಯರ್ ಅಲ್ತೆ ಖಲರುಂ (ಶಬ್ದಮಣಿದರ್ಪಣ ಸೂ. ೨೫೯)* ಇದು ಬೇರೆ ಸಂದರ್ಭದಲ್ಲಿ ಜಹಾಗೀರದಾರರೇ ಕೊಟ್ಟ ಉದಾಹರಣೆ. ಎನ್ನೆ=ಎಲ್ಲಿ, ಅನ್ನೆ=ಅಲ್ಲಿ ಹೀಗೆ ಅರ್ಥಗಳು ಬಹಳ ಮೊದಲು (ಜ್ಞಾನೇಶ್ವರಿಗಿಂತ) ಹುಟ್ಟಿರಲು ಸಾಕು. ಕನ್ನಡದ 'ವರೆ' 'ವರಿ' ಯಾಗಿ ಮರಾಠಿಗೆ ಹೋಯಿತೆಂಬುದಂತೂ ನಿರ್ವಿವಾದ. ಈ ಬಗ್ಗೆ ಇನ್ನೂ ಕೆಲವು ಉದಾಹರಣೆಗಳು.

*ಇಯಾ ವೇರ್ಥಿಜ್ ಜೇಜ್ ಜಿಆವೇಜ್ (೧.೨೬೪)*

ಇಲ್ಲಿಯವರೆಗೆ ಜೀವಿಸುವದಕ್ಕಿಂತ

3. ಯಾದವಕಾಲೀನ ಮರಾಠೀ ಭಾಷಾ ಪು. ೨೪೯

*ಜಜ್‌ವವೇರಿ ಆರ್ಜುನಾ ತೋ ಬೋಧು ಭೇಟೇ ಮನಾ (೩.೧೪೮)*

ಯಾವ ಸಮಯದವರೆಗೆ, ಅರ್ಜುನಾ, ಆ ಬೋಧವು ಮನಸ್ಸಿನಲ್ಲಿ ಹೋಗುವುದೋ-

*ಕರ್ಮಿಜ್ ಹಾ ಠಾವ್ರೋವೇರ್ಗಿಜ್ (೧೮.೬೭)* ಕರ್ಮದಲ್ಲಿ ಇಲ್ಲಿಯವರೆಗೆ (ಇನ್ನೆಗಂ)

*ಹಾ ಠಾಓವರ್ಧಿ ತೇಯಾ ನಾಜ್‌ವಾಚೇಜ್ ಭಯ ಹರೀ (೧೩.೬೭೫)*

ಇಲ್ಲಿಯವರೆಗೆ (ಇನ್ನೆಗಂ) ಆ ನಾಮದ ಭಯವನ್ನು ಪರಿಹರಿಸುತ್ತಾನೆ.

*ಹಾ ಠಾಓವೇರೀಜ್ ಸುವರ್ಮಾ ಕ್ರಮಯೋಗೀ ಆಹೇ ಮಹಿಮಾ*

*ಹ್ಮಣೌನಿ ವೇಳೋವೇಳಾಜ್ ತುಹ್ಮಾಜ್ ಸಾಂಘೋ ತೇ ಆಹ್ಮೀಜ್ (೧೮-೧೨೧೭)*

ಕ್ರಮಯೋಗದ ಮಹಿಮೆ ಎಷ್ಟೆಂಬುದನ್ನು ಇಲ್ಲಿಯವರೆಗೆ (ಇನ್ನೆಗಂ) ನಾವು ನಿಮಗೆ ಹೊತ್ತು ಹೊತ್ತಿಗೆ ಹೇಳಿದ್ದೇವೆ.

ಇವಿಷ್ಟು ಉದಾಹರಣೆಗಳನ್ನು ಕೊಟ್ಟು ಕನ್ನಡದ 'ವರೆ' ಯಿಂದ ಮರಾಠಿ 'ವರಿ' 'ವೇರ್ಧೀಜ್' ಆಯಿತೆಂದು ಹೇಳಿ ವಿಷಯ ಮುಗಿಸಬಹುದಿತ್ತು. 'ಇಲ್ಲಿಯವರೆಗೆ (ಇನ್ನೆಗಂ)' 'ಠಾಯವೇರ್ಧಿ' ಆಯಿತೆಂದೂ ಹೇಳಬಹುದಿತ್ತು. ಆದರೆ ಇದು ಇಷ್ಟಕ್ಕೆ ಮುಗಿಯುವುದಿಲ್ಲ. ಮೇಲಿನ ಪರಿಚ್ಛೇದದಲ್ಲಿ ವರಿ=ಮೇಗೆ ಎಂದು ಹೇಳಿದೆಯಷ್ಟೇ? ಮರಾಠಿಯಲ್ಲಿ 'ವೇರೀಜ್' 'ವರಿ' ಕಾಲ್ಯಾರ್ಥದಲ್ಲಿ ಬಳಸಲಾದಂತೆ ಕನ್ನಡದಲ್ಲಿ ಮೇಗೆ ಮೇಲೆ ಕೂಡ ಕಾಲ್ಯಾರ್ಥದಲ್ಲಿ (ಪಶ್ಚಾತ್ ಎಂಬರ್ಥದಲ್ಲಿ) ಪ್ರಯುಕ್ತವಾಗಿದೆ. ಇಂದಿಗೂ ಅಭಿಹಿತವಾಗಿದೆ. ಆದರೆ ಹಳಗನ್ನಡ ಅಥವಾ ನಡುಗನ್ನಡ ಕೃತಿಗಳಲ್ಲಿ (ಮೇಗಣ ದಿನದಲ್ಲಿ - ಪರೇದ್ಯವಿ : ಅಲ್ಲಿನ್ದ ಮೇಲಣ ದಿನದಲ್ಲಿ ಪರಶ್ವಃ ಎನಿಸುಗು ಹೀಗೆ ರೆ. ಕಿಟೆಲ್‌ರೇನೋ ಉದಾಹರಣೆ ಕೊಟ್ಟಿದ್ದಾರೆ.) ಪಶ್ಚಾತ್, ಬಳಿಕ, ತದನಂತರ ಅರ್ಥದಲ್ಲಿ ಮೇಗೆ, ಮೇಲೆ ಶಬ್ದ ಬಳಸಿದ್ದು ನನಗೆ ಕಂಡು ಬಂದಿಲ್ಲ. ಹೊಸಗನ್ನಡದಲ್ಲಿ, ಆಡು ಮಾತಿನಲ್ಲಿ ಮಾತ್ರ ಸಾಕಷ್ಟು ಬಳಕೆಯಲ್ಲಿದೆ. ಇದು ಸಂಸ್ಕೃತದ 'ಉಪರಿ'ಯಿಂದ ಬಂತೇ, ಅಥವಾ ಮರಾಠಿ 'ವರಿ' ಯಿಂದ ಮರಳಿ ಬಂತೇ ಎಂಬುದನ್ನು ಪರ್ಯಾಲೋಚಿಸಬೇಕಾಗಿದೆ. ಒಂದು ವಿಷಯ ಮಾತ್ರ ಇನ್ನೊಮ್ಮೆ ಸ್ಪಷ್ಟಪಡಿಸಬೇಕು. ಕಾಲ್ಯಾರ್ಥದಲ್ಲಿ ಸಂಸ್ಕೃತದ ಉಪರಿಯಿಂದ ಮರಾಠಿಗೆ ವರಿ ಹೋಗಿಲ್ಲ. ಹಾಗೆ ಹೋಗಿದ್ದರೆ ಠಾಯವರಿ (=ಇಲ್ಲಿಯವರೆಗೆ) ಪ್ರಯೋಗವಾಗುತ್ತಿರಲಿಲ್ಲ. ಇನ್ನು ಮೂರನೆಯದಾಗಿ ಕ್ಷೇತ್ರ, ವ್ಯಾಪ್ತಿ ಅರ್ಥದಲ್ಲಿ ವರಿ, ವೇರ್ಧೀಜ್. ಜ್ಞಾನೇಶ್ವರಿಯಲ್ಲಿಯ ಈ ಉದಾಹರಣೆಗಳನ್ನು ನೋಡಬೇಕು.

*ಕಿಂಬಹುನಾ ಸುಜೇ ಸ್ವರ್ಗುವೇರೀಜ್ (೧೪.೧೫೫)*

ಇದಕ್ಕೂ ಹೆಚ್ಚೇನು, (ಅವನಿಗೆ) ಸ್ವರ್ಗದವರೆಗೂ ಕಾಣುತ್ತದೆ.

*ತೃಣಾಂತೀಚಾ ಪಾಂಗೋರಾ ವೇರ್ಧೀಜ್ (೧೫.೪೪೫)*

(ಹುಲ್ಲುಕಡ್ಡಿಯ ತುದಿಯಂತಹದರ ವರೆಗೆ - ಸಾಮ್ಯ ಅರ್ಥದಲ್ಲಿಯ 'ಪಾಂಗು' ಶಬ್ದ ತಿಳಿಯದೆ, ಪೀನಂ ಪದೆಯದೆ ಪಾಂಗಜೆದು ದೋಷಮಂ ಪಿಂಗಿಸಿ ಕವಿರಾಜಮಾರ್ಗ ೧-೪೪-ದಾಂಡೇಕರರು ಆ ಶಬ್ದವನ್ನು ಬಿಟ್ಟು ಹುಲ್ಲು ಕಡ್ಡಿಯ ತುದಿಯವರೆಗೆ ಎಂದು ಅರ್ಥವಿಸಿದ್ದಾರೆ.!)

*ಸಮುದ್ರವಳ ಉಸಳತ ಆಕಾಶವೇರ್ಹೀಜ್ (೧.೧೫೫)*

ಆಕಾಶದವರೆಗೆ ಸಮುದ್ರದ ನೀರು ಉಕ್ಕುತ್ತ-

*ತೈಸೀ ಹೃದಯಕಮಳವೇರ್ಹೀಜ್ ದಿಸೇ ಸೋನೇಯಾಚೀ ದೃಸೀ ಸರೀ (೬.೨೮೬)*

ಹೃದಯಕಮಲದವರೆಗೆ ಬಂಗಾರದ ಸರಿಗೆಯಂತೆ ಕಾಣುತ್ತದೆ.

*ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ (ಕವಿರಾಜಮಾರ್ಗ)*

ಕ್ಷೇತ್ರ ವ್ಯಾಪ್ತಿಯನ್ನು ಸೂಚಿಸುವ 'ವರಂ' ಶಬ್ದ ಹಳಗನ್ನಡದಿಂದ ಮರಾಠಿಗೆ ಹೋಗಿದೆಯೆನ್ನುವುದಕ್ಕೆ ಬೇರೆ ಉದಾಹರಣೆ ಬೇಕಿಲ್ಲ.

ಮೇಲ್ಕಾಣಿಸಿದ ಮೂರು ಅರ್ಥಗಳಲ್ಲಲ್ಲದೆ ವರಿ ಶಬ್ದ ಮರಾಠಿಯಲ್ಲಿ ಹೀಗೂ ಪ್ರಯುಕ್ತವಾಗಿದೆ.

*ಏವಂ ಮಾಝೀ ಪ್ರಾಪ್ತಿವೇರ್ಹೀ (೧೮-೧೩೭೩)*

ಹೀಗೆ ನನ್ನ ಪ್ರಾಪ್ತಿಯವರೆಗೆ (ನಾನು ಪ್ರಾಪ್ತನಾಗುವ ವರೆಗೆ)

*ಅರ್ಜುನಾ ಹಾ ಠಾವೋವರ್ಹಿಜ್ ಮೀ ತೇಯಾಜ್‌ತೇಜ್ ಸುವೇಜ್ ಜಿವಾರೀಜ್*
*ಜೋ ಗೀತಾರ್ಥಾಚೇಜ್ ಕರೀ ವರಗುಣೇಜ್ ಸಂತಾಜ್ (೧೮.೧೫೧೩)*

ಗೀತಾರ್ಥವನ್ನು ಯಾರು ಸಜ್ಜನರಿಗೆ ಉಣಬಡಿಸುತ್ತಾರೋ, ಅರ್ಜುನಾ, ಆದರಿಂದ ನಾನು ಅವನನ್ನು (ನನ್ನ) ಜೀವಾಳದಲ್ಲಿರಿಸುತ್ತೇನೆ.

*ತೋ ನಿರ್ಮತ್ಸರು ಕಾಇ ಮ್ಹಣವೇ ಬೋಲವರೀ (೪.೧೧೨)*

ಅವನಿಗೆ ಮತ್ಸರವಿಲ್ಲವೆಂದು ಮಾತಿನಿಂದ ಹೇಳುವುದೇ?

ಹೀಗೆ 'ವರಿ' ಶಬ್ದವು ತೃತೀಯಾ ಭಾವವನ್ನು ಸ್ವತಂತ್ರವಾಗಿ ಸಾಧಿಸಿದೆ. ಇಲ್ಲಿ ಇನ್ನೊಂದು ವಿಷಯವನ್ನು ಹೇಳುವದು ಅವಶ್ಯವಾಗಿದೆ. ಮರಾಠಿಯಲ್ಲಿ, ಅದೂ ಜ್ಞಾನೇಶ್ವರೀಯ ವಿವಿಧ ಪಾಠಗಳಲ್ಲಿ 'ವರೀ', 'ವೇರ್ಹೀ' ಶಬ್ದಗಳು ಪಲ್ಲಟವಾಗಿ, ಅದೇ ಅರ್ಥದಲ್ಲಿ ಎನ್ನುವ ಹಾಗೆ ಬಳಸಲಾಗಿವೆ. ಹಳಗನ್ನಡದ 'ವರೆ', 'ವರೆಗಂ' ಮರಾಠಿಯಲ್ಲಿ 'ವರಿ' ಯಾಯಿತೆಂದು ಹೇಳಬಹುದು. ಆದರೆ 'ವೇರ್ಹಿ' ಯಾವ ಬಗೆಯೇನು?

ಸಂಸ್ಕೃತದಲ್ಲಿ ಮರ್ಯಾದೆ, ಅನ್ತ್ಯ (ಶಬ್ದಮಣಿದರ್ಪಣ ಸೂತ್ರ ೨೯೬) ಅರ್ಥದಲ್ಲಿ ಮರ್ಯೆ ಎಂಬ ಶಬ್ದವಿದೆ. ಅದರ ಕನ್ನಡ ತದ್ಭವ 'ಮೇರೆ' (ಕಿಟೆಲ್). ಈ ಶಬ್ದಕ್ಕೆ ಕ್ಷೇತ್ರ, ಕಾಲಗಳೆರಡರ ಸೀಮೆಯೆಂದೂ ಅರ್ಥವಿದೆ. ಇವು ಉದಾಹರಣೆಗಳು.

*ತನ್ನಮ್ಮ ಮೇರೆಯುಂ ದಾಣ್ಟುವುದಂ (ಪಂಪಭಾರತ ೧.೮೪)*
*ನವೆತನ್ದಂ ಮೇರೆತಪ್ಪಿ ಕವಿವ ಅಮ್ಬುಧರವೊಲ್ (ಶಬ್ದಮಣಿದರ್ಪಣ ಸೂತ್ರ ೧೭೮)*

ಪ್ರೊ. ಮರಿಯಪ್ಪಭಟ್ಟರು ಮರ್ಯೆ > ಮೇರೆ ತದ್ಭವವಿರಲಿಕ್ಕಿಲ್ಲವೆಂದು ಭಾವಿಸಿದ್ದಾರೆ. ಮರಾಠಿಯಲ್ಲಿ ಮೇರ ಶಬ್ದ ಕ್ಷೇತ್ರಸೀಮೆ ಅರ್ಥದಲ್ಲಿ ಬಳಸಲಾಗಿವೆ.

*ಜೇ ನಾದಾಚೀ ಪೈಲ ಮೇರ ಪರಬ್ರಹ್ಮ ಜೇಜ್ (೧೩.೧೦೬೮)*
ಯಾವುದು ನಾದದ ಆಚೆಯ ಸಿಮೆಯೋ, ಯಾವುದು ಪರಬ್ರಹ್ಮವೋ–
*ಭೋಗಾಚಿಯೇ ಆಇಲೀಕಡೇ ಮೇರೇ (೯-೫೧)*
ಭೋಗದ ಈಚೆಯಕಡೆಯ ಸೀಮೆ

ಮರಾಠಿಯ ಯಾವ ಕೋಶಕಾರರೂ ಮರ್ಯೆ=ಮೇರೆ ಎಂದು ಭಾವಿಸಿಲ್ಲ. ಜ್ಞಾನೇಶ್ವರೀಯ ಪ್ರಕಾಂಡ ಅಭ್ಯಾಸಕರಾದ ರಾಜವಾಡೇ, ದಾಂಡೇಕರ, ಮುಂತಾದವರೂ ಈ ವ್ಯುತ್ಪತ್ತಿ ಹೇಳುವುದಿಲ್ಲ. ಹೀಗಾಗಿ ಮರಿಯಪ್ಪ ಭಟ್ಟರವರ ಅಭಿಪ್ರಾಯದಂತೆ ಮೇರೆ ಇದು ಸ್ವತಂತ್ರ ದೇಸೀ ಕನ್ನಡ ಶಬ್ದವೆಂದೂ, ಅದೇ ಅರ್ಥದಲ್ಲಿ ಅದೇ ರೂಪದಲ್ಲಿ ಅಲ್ಲದೆ 'ವೇರ್ಹಿ'ಯಾಗಿ ಮರಾಠಿಗೆ ಹೋಗಿದೆಯೆಂದೂ ನಿದಾನ ಮಾಡುವುದು ಸಯುಕ್ತಿಕವಾದೀತು.

**ವಾಜ್‌ಚೌನಿ**

ಪಳಗನ್ನಡದಲ್ಲಿ ಬಿಡು, ತ್ಯಜಿಸು, ಹೊಜತಾಗು ಎನ್ನುವ ಅರ್ಥದಲ್ಲಿ ಉಟಿ ಧಾತುವಿದೆ. ಅದರ ಪ್ರಯೋಗ ಹೀಗೆ -

*ಒನ್ದೆಡೆಯೊಳೊರ್ವಂ ಪಟಿಕೆಯ್ದುನಲ್ಲಳನುಟಿಯಲಾರದೆ (ಪಂಪಭಾರತ ೪.೯೧ವ)*
*ಉಟಿಮುದಂ ಮಾಣಿಸಲಾನೆ ಸಾಲ್ವೆಂ (ಪಂಪಭಾರತ ೫.೨೦ ವ)*
*ಜಾಕಪ್ವೆಗುಟಿದ ಪೆಣ್ದಿರ್ ದೊರೆಯೇ (ಪಂಪಭಾರತ ೧-೪೦)*

'ಉಟಿ' ಧಾತುವಿನಿಂದ 'ಉಟಿದು' (ಹೊಜತು) ಅವ್ಯಯ ತೃತೀಯಾ ಭಾವವನ್ನು ಸೂಚಿಸುತ್ತದೆ.

'ಉಟಿ' ಧಾತುವಿನ ಮರಾಠಿ ಅನುವಾದಿತ ರೂಪ 'ವಾಜ್‌ಚಣೇ'. ಮರಾಠಿ ಪಂಡಿತರು ಸಂಸ್ಕೃತ 'ವಂಚ್' ಧಾತುವಿನಿಂದ ಇದನ್ನು ಸಾಧಿಸುತ್ತಾರೆ.

'ಉಟಿದು' ಅವ್ಯಯದ ಅನುವಾದಿತ ರೂಪ 'ವಾಜ್‌ಚೌನಿ', 'ವಾಜ್‌ಚೂನಿ', ಈ ಶಬ್ದವು ಮರಾಠಿಯಲ್ಲಿ ತೃತೀಯಾ ಭಾವವನ್ನು ಸಾಧಿಸುತ್ತದೆ. ಉದಾಹರಣೆಗಳು.

*ವಾಜ್‌ಚೂನಿ ಕರ್ಮಾರಂಭ ಉಚಿತ (೩.೪೫)*
ಯೋಗ್ಯವಾದ ಕರ್ಮದ ಆರಂಭವನ್ನುಳಿದು-
*ಹೇಜ್ ವಾಜ್‌ಚೂನಿ ಕೇವಿ ನಿಂದಿಜೇ (೨.೩೩)* ಇದನ್ನುಳಿದು ಹೇಗೆ ನಿಂದಿಸುವುದು
*ತೈಸಾ ಈಶ್ವರು ವಾಜ್‌ಚೂನಿ ಕಾಹೀಜ್ ಜಿಯೇ ಆಣಿಕ ಲಾಣಿ ನಾಹಿಜ್ (೨.೨೪೨)*
ಹಾಗೆ ಈಶ್ವರನನ್ನುಳಿದು ಯಾರಿಗೆ ಇನ್ನಾವ ಆಸರೆಯೂ ಇಲ್ಲವೋ-

ಈ ಊನಿ ಅಥವಾ ಔನಿ ಪ್ರತ್ಯಯ ಎಲ್ಲಿಂದ ಬಂದಿರಬಹುದೆಂಬುದನ್ನು ಅಭ್ಯಸಿಸುವುದು ಇಲ್ಲಿ ಅವಶ್ಯಕವಾಗಿದೆ.

ಪಳಗನ್ನಡದಲ್ಲಿ ಕೃನ್ನಾಮ ಸಾಧಿಸುವುದಕ್ಕಾಗಿ 'ಅ' ಪ್ರತ್ಯಯ ಯೋಜಿಸಲಾಗಿದೆ. ಉತ, ತರ (ಸೂ. ೨೪೬) ಪ್ರಯೋಗಿಸ (ಸೂ. ೩.೨೫) ಎಂಬುದಾಗಿ ಕೇಶಿರಾಜನು ಉದಾಹರಣೆಗಳನ್ನು ಕೊಡುತ್ತಾನೆ. ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ, ಇಂತಹ ಕೃನ್ನಾಮಗಳನ್ನು ಸಾಧಿಸಲು 'ಓಜ್' ಹಾಗೂ 'ಊಜ್' ಪ್ರತ್ಯಯ ಬಳಸಲಾಗಿದೆ. ಉದಾಹರಣೆಗಳು.

*ಕಾಇ ಘಾತು ಯೇಥ ಚಿಂತುಜ್ ಯೇಇಲ (೨-೪೪)*

ಆವ ಘಾತವನ್ನು ಇಲ್ಲಿ ಚಿಂತಿಸಬಹುದು?

*ಶಿಷ್ಯಾತೇಜ್ ಗುರು ಸರ್ವಥಾ ನೈಯೇ ಅಪ್ಪೇರುಜ್ (೨.೬೦)*

ಗುರುವು ಶಿಷ್ಯನನ್ನು ಸರ್ವಥಾ ತಿರಸ್ಕರಿಸಬಾರದು.

*ಐಸೀ ಭ್ರಾಂತಿ ಝುನೇಜ್ ಚಿತ್ತಾ ಯೇಯೋಜ್ ದೇಜ್‌ಸೀ (೨.೯೯)*

ಇಂತು ಭ್ರಮೆಯನ್ನು ಮನಸ್ಸಿನಲ್ಲಿ ಬರ ಗೊಡುವೆ

*ಸದ್ಬುದ್ಧಿ ಹೇ ಥೇಜ್‌ಕುಟೀ ಮ್ಹಣೋಜ್ ನಯೇ (೨.೨೩೮)*

ಒಳ್ಳೆಯ ಬುದ್ಧಿಯನ್ನು ಕಿರಿದು ಎನ್ನಬಾರದು.

ಹೀಗೆ 'ಓಜ್' 'ಊಜ್' ಪ್ರತ್ಯಯ ಹತ್ತಿ ಸಿದ್ಧವಾದ ಭಾವವಾಚಕ ನಾಮಗಳಿಗೆ ತೃತೀಯೆಯ ಪ್ರತ್ಯಯವಾದ ಇಂ (ಮರಾಠಿಯಲ್ಲಿ ನಿ) ಹತ್ತಿದಾಗ ಆಗುವ ರೂಪಗಳೇ 'ಲಾಗೌನಿ', 'ಹೋಟೌನಿ', ಮ್ಹಣೌನಿ' ಇತ್ಯಾದಿ. ಹೀಗೆಯೇ 'ವಾಜ್‌ಚ' (ಉಳಿ) ಧಾತುವಿನಿಂದಾದ ರೂಪ 'ವಾಜ್‌ಚೌನಿ' (ಉಳಿದು)

ಇಲ್ಲಿ ಒಂದೆರಡು ನಿರಸ್ತಗಳನ್ನು ಸ್ಪಷ್ಟಪಡಿಸಬೇಕಾಗಿದೆ. 'ಅ' ಪ್ರತ್ಯಯವು ಹತ್ತಿ ಕೃನ್ನಾಮ (ತುಮಂತ, Infinitive) ಗಳು ಸಿದ್ಧವಾದ ಬಳಿಕ ತೃತೀಯೆಯ ಇಂ ಪ್ರತ್ಯಯ ತಗುಲಿ ಹಳಗನ್ನಡದಲ್ಲಿ *ನೆಗಟ್ಟಿಂ ಬಟೆಕ್ಕೆ (ಚಂದ್ರಪ್ರಭಪುರಾಣ ೯.೧೩೦) ಕಟಿದಿಂ ಬಟೆಯಂ (ಪಂಪರಾಮಾಯಣ ೧.೬೭ ವ) ಪೋದಿಂ ಬಟೆಯಂ (ಅದೇ ೧೫.೧೦೮) ಆಯ್ದಿಂ ಬಟೆಯಂ (ಅದೇ ೧೬.೮ ವ) ತನು ಸೋಂಕಿಂ ಮೆಯ್ಗೆ ರೋಮಾಂಚಮನೊದವಿಸಿ* (ಅದೇ) ಎಂದೆಲ್ಲ ಪ್ರಯೋಗಗಳು ದೊರೆಯುತ್ತವೆ-ಯಷ್ಟೇ? ಇವುಗಳನ್ನು ಹೀಗೆ ಗುರುತಿಸಿದೆ ಇವುಗಳಲ್ಲಿಯ 'ಇಂ' ಪ್ರತ್ಯಯಕ್ಕೆ 'ಇನ್ನು' ಎಂದು ರೆ. ಕಿಟೆಲ್ಲರು ಅರ್ಥವಿಸಲು ಯತ್ನಿಸಿದ್ದಾರೆ. ವೈಯಾಕರಣಿಗಳು ಇದನ್ನು ಪರಿಶೀಲಿಸಬೇಕು.

'ವಾಜ್‌ಚೌನಿ' ಅವ್ಯಯ ತೃತೀಯಾಭಾವ ಸಾಧಿಸುವುದೆಂದು ಒಪ್ಪಿದ ತುಳಪುಳೆಯವರು[4] 'ಊನಿ' 'ಔನಿ' ಇವು ಪಂಚಮಿಭಾವದ (ಪ್ರತ್ಯಯಗಳಲ್ಲ) ಅವ್ಯಯ-ಗಳೆಂದು ಭಾವಿಸುತ್ತಾರೆ. ಇವು 'ಹೋಊನಿ', 'ಹೋಔನಿ' ಈ ಶಬ್ದಯೋಗೀ ಅವ್ಯಯ ಗಳಿಂದ ಸಾಧಿತ ರೂಪಗಳೆಂದೂ ಅವರು ಹೇಳುತ್ತಾರೆ. 'ಊನಿ' 'ಔನಿ'ಗಳ ಉಗಮ-ವನ್ನು ರಾಜವಾಡೆಯವರು (ಎಂದಿನಂತೆಯೇ!) ಪ್ರಾಕೃತದ 'ಹಿಂತೋ' 'ಸುಂತೋ' ದವರೆಗೆ ತಲುಪಿಸಿದ್ದಾರೆ. ಆ ಬಗ್ಗೆ ಚರ್ಚೆ ಬೇಕಿಲ್ಲ. ಆದರೆ 'ಹೋ' (=ಆಗು) ಶಬ್ದದಿಂದ ಹೋಊನಿ', ಹೋಔನಿ ಹೇಗಾಯಿತು ಎಂಬುದನ್ನು ತುಳಪುಳೆ ಹೇಳಿಲ್ಲ.

---

4. ಯಾದವಕಾಲೀನ ಮರಾಠೀ ಭಾಷಾ ಪು. ೨೪೯

'ಮ್ಹಣ' (=ಅನ್ನು, ಹೇಳು) ದಿಂದ 'ಮ್ಹಣೋಜ್', 'ಸಾಂಗ' (=ಹೇಳು) ದಿಂದ 'ಸಾಂಗೋಜ್' ಮೊದಲಾಗಿ ಕೃನ್ನಾಮಗಳಾದಂತೆ 'ಹೋ' (=ಆಗು) ದಿಂದ 'ಹೋಓಜ್' ಕೃನ್ನಾಮವಾಗಿದೆ. (ಹೋಓಜ್ + ನ ಯೇ ಆಗ ಬಾರದು ಅರ್ಥದಲ್ಲಿ ಹೋಓನಯೇ; ಹೋಓಜ್+ಯೇ ಆಗಬಹುದು ಅರ್ಥದಲ್ಲಿ. ಹೋಓಜ್‌ಯೇ = ಹೋ ಆವೇ = ಹ್ವಾವೇ ಇವು ಉದಾಹರಣೆಗಳು) ಈ 'ಹೋಓಜ್' ಕೃನ್ನಾಮಕ್ಕೆ ತೃತೀಯಾವಾಚಕ ಇನಾಗಮದಿಂದ 'ಹೋಊನಿ' 'ಹೋಔನಿ' ರೂಪ ಸಿದ್ಧವಾಗಿದೆ. 'ಊನಿ' 'ಔನಿ' ಅವ್ಯಯಗಳು ನಾಮಪದಗಳಿಗೆ ತಗುಲಿ ಪಂಚಮೀಭಾವದ್ದಷ್ಟೇ ಅಲ್ಲ, ತೃತೀಯಾ ಭಾವದ ರೂಪಗಳೂ ಸಾಧಿತವಾಗಿವೆ. ಇಲ್ಲಿ ನನಗೆ ನೆನಪಾಗುವ ಸ್ವಾರಸ್ಯಕರ ವಿಷಯವೆಂದರೆ ಉತ್ತರ ಕರ್ನಾಟಕದ ಇಂದಿನ ಆಡುಮಾತಿನಲ್ಲಿಯ ಸಾಮ್ಯ. 'ಹೋ' (=ಆಗು) ದಿಂದ ಹೋಜ್‌ಊನಿ' ಆಯಿತಷ್ಟೇ? ಇಂದಿನ ಆಡಮಾತಿನಲ್ಲಿಯ ಈ ಪ್ರಯೋಗಗಳನ್ನು ಪರಾಮರ್ಶಿಸಬೇಕು. 'ಅಂಜಿ ಓಡಿ ಹೋದ. ಅಂವಾ ಎಲ್ಲಿ ಮಣ್ಣಾಗಿಂದ ಬರ್‍ತಾನ?' (ಮಣ್ಣಿನಿಂದ) 'ಆವಾಗಿನಿಂದ ಕರೀಲಿಕ್ಕೆ ಹತ್ತೀನಿ' (ಆಗಿನಿಂದ) 'ಮಳೀ ಆತಂತ ಮುಗಲಾಗಿಂದ ಕಾಳು ಉದರೂದಿಲ್ಲ' (ಮುಗಿಲಿನಿಂದ) (ಇವುಗಳಲ್ಲಿ 'ಆಗ' ಇದು ಸಪ್ತಮಿಯ ವಿಭಕ್ತಿ ಸಾಧಕವೂ ಆಗಿರಬಹುದಾಗಿದೆ!) ಆಗಿಂ' ರೂಪಹತ್ತಿ ತೃತೀಯಾ ಭಾವವನ್ನೋ ಪಂಚಮಿ ಭಾವವನ್ನೋ ಸಾಧಿಸಿದ ಹಳಗನ್ನಡ ಪದಗಳು ನನಗೆ ದೊರೆತಿಲ್ಲ.

**ಸಕಟ**

ಜತೆಗೆ, ಒಡನೆ ಎಂಬರ್ಥದಲ್ಲಿ ಬಳಸಲಾಗುವ ಈ ಅವ್ಯಯಕ್ಕೆ ಸಮಾಧಾನಕರ ಮೂಲ ದೊರೆತಿಲ್ಲ. ಸಂಸ್ಕೃತದ ಸಹ+ಕೃತದಿಂದ ಬಂದಿರಬಹುದೆಂದು ತುಳುಪುಳೆ ಶಂಕಿಸಿದ್ದಾರೆ. ಜ್ಞಾನೇಶ್ವರೀಯಲ್ಲಿಯ ಒಂದು ಪ್ರಯೋಗ ಇಂತಿದೆ.

*ತೇಥ ಗಗನಾಸಕಟ ಆಟೇ ಸಮರಸಿಜ್ ತಿಯೇ (೬-೩೦೬)*

ಅಲ್ಲಿ ಆಕಾಶದೊಡನೆ ಸಮರಸವಾಗಿ ಅದು (ಕುಂಡಲಿನಿಯು)
ಲಯಗೊಳ್ಳುತ್ತದೆ. (ಆಟೇ = ಆಟ್ಟಿಸುತ್ತದೆ)

ದೇಹಾಸಕಟ (ಉದ್ಧವಗೀತಾ ೩೬೮) ನಖಾಜ್‌ಸಕಟ (ಶಿಶುಪಾಲವಧ ೮೨೨) ಹೀಗೆ ಎರಡು ಪ್ರಯೋಗಗಳನ್ನು ತುಳಪುಳೆ ಉದಾಹರಿಸಿದ್ದಾರೆ.

ಸರಿ, ಸಮಾನ ಅರ್ಥದಲ್ಲಿ ಸರಿಗಟ್ಟು ಎಂಬ ಕನ್ನಡ ಶಬ್ದವಿದೆ. ಇದಕ್ಕೆ ಹಳಗನ್ನಡದಲ್ಲಿ ನನಗೆ ಪ್ರಯೋಗ ದೊರೆಯದಿದ್ದರೂ ಆಡುಮಾತಿನಲ್ಲಿಯ ಬಳಕೆ ಬಹಳ ಹಿಂದಿನದಿರಬಹುದಾಗಿದೆ. 'ಸರಿಕಟ' ಈ ಶಬ್ದದ ಪ್ರಯೋಗ ಜ್ಞಾನೇಶ್ವರಿಯಲ್ಲೂ ಬಂದಿದೆ. ಅದಕ್ಕೆ ಬೇರೆ ಮೂಲವೂ ಇಲ್ಲ.

*ತೈಸೇಜ್ ಕೃತ್ಯಾಕೃತೇಜ್ ಸರಕಟಿತ ಆಪುಪರ ನ ವಿಚಾರಿತ (೧೮-೬೨೩)*

ಹಾಗೆ ಕೃತ್ಯ ಅಕೃತ್ಯಗಳನ್ನು ಸಮವಾಗಿಸುತ್ತ, ತನ್ನ ಪರ ಹೀಗೆ
ಯೋಚಿಸದೆಯೆ

ಹೀಗೆ ಸರಿ, ಸಮಾನ ಅರ್ಥದಲ್ಲಿಯ 'ಸರಿಕಟ' ಅರ್ಥಾಂತರಗೊಂಡು ಜತೆಗೆ, ಒಡನೆ ಎಂದು ಅರ್ಥವ ಪಡೆದು (ಇಂತಹ ಅನೇಕ ಉದಾಹರಣೆಗಳಿವೆ) ಸಕಟವಾಗಿ

ಮರಾಠಿಯಲ್ಲಿ ಹೋಗಿರಬಹುದಾಗಿದೆ. ಉಗತೀ ಲೇಣೇ, ಸಖೇ ಸೋಯರೇ, ಸಡಾ ಸಂಮಾರ್ಜನ, ಸೇಲೇಮೋಂಥೀ, ಹಾವಭಾವ, ಚುಕೀಭೂಲೀ, ಜೀವಪ್ರಾಣ, ಶಿಥಪಾಟ, ನಾಕತೋಂಡ, ಕಿಡಿಯಾಮುಂಗಿಯಾ, ಗೋರಾಗೋಮಟಾ ಹೀಗೆ ಮರಾಠಿಯಲ್ಲಿ ಬರುವ 'ಪರಸ್ಪರ ಸಂಬದ್ಧ ಜೋಡು ಶಬ್ದ' ಗಳಲ್ಲಿ ಸರಸಕಟ (ಸರಿ+ಸಕಟ) ಶಬ್ದವೂ ಒಂದಾಗಿದೆ.

**ಸರಿಸ**

'ಜತೆಗೆ' 'ಸಮಾನ' ಅರ್ಥದ ಈ ಅವ್ಯಯವನ್ನು ಸಂಸ್ಕೃತ 'ಸದೃಶ' ಶಬ್ದದಿಂದ ವ್ಯುತ್ಪಾದಿಸಲು ಪ್ರಯತ್ನಗಳಾಗಿವೆ. ಶ > ಸ, ಋ > ಇ ಹೀಗೆ ಉಚ್ಚಾರದ ಬೆಳವಣಿಗೆ ಗುರುತಿಸಿದರೂ 'ದ' ಅಕ್ಷರದ ಉಚ್ಚಾರ ಲೋಪಗೊಳ್ಳುವ ಕಾರಣ ತಿಳಿಯಲಿಲ್ಲ. 'ಸರಿಸ' ಶಬ್ದ ಕನ್ನಡದಲ್ಲೇ ಇದೆ. ಉದಾ:

*ಸರಿಸವ ಮೇಲೆ ಓಡಿಯಹೋದವರೆ ಚದುರಂಗದ ಮೇಲೆ ಮಸಿಯ ಕೋಜಿವ ಕೂಡಲಸಂಗಮದೇವ (ಬಸವೇಶ್ವರ ವಚನಗಳು ೭೨೪)*

*ಮಾರ್ಗಿಜ್ ಅಂಧಾಸರಿಸಾ ಪುಢಾಜ್ ದೇಖಣಾ ಹೀಜ್ ಚಾಲೇ ಜೈಸಾ (೩.೧೫೫)*

ದಾರಿಯಲ್ಲಿ ಕುರುಡನ ಜತೆಗೆ ಕಣ್ಣಿದ್ದವನೂ ಹಾಗೆಯೇ ನಡೆಯುವಂತೆ -

*ಘನಗರ್ಜಿತಾ ಸರಿಸಾ (೧೮-೪೮೧)* ಮೋಡಗಳ ಗರ್ಜನೆಯೊಡನೆ
*ಕಾನಾ ವಚನಾಚಿಯೇ ಭೇಟೀಸರಿಸಾ (೧೮-೯೮೫)* ಮಾತು ಹಾಗೂ ಕಿವಿಗಳ ಬೆಟ್ಟಿಯೊಡನೆ. *ಯಾ ಸಂತವಾಕ್ಯಾಸರಿಸೇಜ್* ಈ ಸಜ್ಜನರ ವಾಕ್ಯದೊಡನೆ
*ಸೂರ್ಯೋದಯಾ ಸರಸೀ (೧೫.೨೬೦)* ಸೂರ್ಯೋದಯದೊಡನೆ

ಸಂಸ್ಕೃತದ 'ಸದೃಶ'ದಲ್ಲಿ 'ಒಡನೆ' 'ಜತೆಗೆ' ಈ ಅರ್ಥಚ್ಛಾಯೆಯಿಲ್ಲವೆಂದು ಬೇರೆ ಹೇಳಬೇಕಿಲ್ಲ.

**ಸವೇಜ್, ಸಹ, ಸಹಿತ**

ಸಂಸ್ಕೃತ 'ಸಮಮ್' ದಿಂದ ಮರಾಠಿಯಲ್ಲಿ 'ಸವೇಜ್' ಶಬ್ದ ಸಿದ್ಧವಾಗಿದೆ ಎಂದು ಮರಾಠಿ ವೈಯಾಕರಣಿಗಳು ಭಾವಿಸಿದ್ದಾರೆ. ಇದು ಸರಿಯೂ ಹೌದು. (ಸಮ+ಈ=ಜತೆಗೆ ಹೋಗು) ಸಹ, ಸಹಿತ ಇವಂತೂ ಮೂಲ ಸಂಸ್ಕೃತ ಅವ್ಯಯಗಳೇ. ಸಂಸ್ಕೃತ ವ್ಯಾಕರಣದ ನಿಯಮಗಳಂತೆ ಇವು ತೃತೀಯಾ ವಿಭಕ್ತಿಯೊಡನೆ ಹೋಗಬೇಕು. (ನಂತರ ಷಷ್ಠಿಯೊಡನೆ ಬಳಕೆಯೂ ಆಗಿದೆ) ಆದರೆ ದ್ವಿತೀಯೆಯೊಡನೆ ಈ ಅವ್ಯಯಗಳನ್ನು ಬಳಸುವ ಕಾರಣವೇನು? ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳನ್ನು ನೋಡಬೇಕು.

*ತೈಜ್ ನಿತ್ಯಯಾಗಸಹಿತೇಜ್ ಸೃಜಿಲಿಜ್ ಭೂತೇಜ್ ಸಮಸ್ತೇಜ್ (೩.೮೬)*

ನಿತ್ಯ ಯಜ್ಞಗಳೊಂದಿಗೆ ಸಮಸ್ತ ಜೀವಜಂತುಗಳನ್ನು ಸೃಜಿಸಿ

*ತೇಷ್ವಳಿಜ್ ವಿಶ್ವಸ್ವಪ್ನೇಜ್ ಸಹಿತೇಜ್ ಕೋಣ ಅನ್ಯಥಾಮತಿ ನಿದೇಲೇಜ್ (೧೬.೧೧)*
ಆಗ ವಿಶ್ವದ (ಆಭಾಸ ಸದೃಶ) ವಾದ ಕನಸನ್ನು ಒಳಗೊಂಡು
ವಿಪರೀತ ಜ್ಞಾನದ ನಿದ್ರೆಯನ್ನು-

ಇದೇ ರೀತಿಯಾಗಿ 'ಸಮ' ಅವ್ಯಯವು ಚತುರ್ಥಿ (ಅಥವಾ ಷಷ್ಠಿ) ವಿಭಕ್ತಿಯೊಡನೆ ಯುಕ್ತವಾಗಬೇಕು. ಹಾಗೆ ಅದು ಪ್ರಯುಕ್ತವೂ ಆಗಿದೆ. ಉದಾಹರಣೆಗಳನ್ನು ನೋಡಬೇಕು. ಆದರೆ ತುಳಪುಳೆಯವರು ಸಮ > ಸವ ಇದರ ತೃತೀಯಾ ವಿಭಕ್ತಿಯ ಏಕವಚನದ ರೂಪ ಸವೇಜ್ ಎಂದು ಭಾವಿಸುತ್ತಾರೆ. ಇದು ಸರಿಯಲ್ಲ.

*ತೇಯಾ ಚಿ ತುಳಿಗಾಸವೇಜ್ (೧.೧೨೬)* ಅದರ ಪ್ರತಿಧ್ವನಿಯೊಡನೆ
*ಜೋ ದೃಷ್ಟಿಸವೇಜ್ ಚಿ ವಿಷ ಫೇಡೀ (೨.೭೨)* ದೃಷ್ಟಿಯೊಡನೆಯೇ ಯಾರು ವಿಷ ಕಳೆಯುತ್ತಾರೋ
(ದೃಷ್ಟಿಸಿದೊಡನೆಯೇ ಎಂಬರ್ಥವೇ ವಿನಾ, ದೃಷ್ಟಿಯಿಂದ
ಮಾತ್ರ ಎಂಬರ್ಥವಲ್ಲ!)
*ಕೃಷ್ಣಮೂರ್ತಿಚೀ ಸವೇ (೧೨.೨೨)* ಕೃಷ್ಣನ ಮೂರ್ತಿಯೊಡನೆಯೆ

'ಸಹಿತ' ಅವ್ಯಯ ಜ್ಞಾನೇಶ್ವರೀಯಲ್ಲಿ ದ್ವಿತಿಯಾ ವಿಭಕ್ತಿಯೊಡನೆ ಪ್ರಯುಕ್ತವಾದ ಬಗ್ಗೆ ಜಹಾಗೀರದಾರರು ಕೊಡುವ ಕಾರಣ ಇದು.

*ಪಡೆಮೊಡೆ ಕಮ್ಪಂ ಬಣ್ಣಂ ಪಡೆಯವು ಬಣ್ಣಮನೆ ಪಡೆದುವಪ್ಪಡೆ ಕಮ್ಪಂ ಪಡೆಯವುಳಿದಲರ್ಗಳ್ ಎರಡುಮನೊಡೆ ಬೆಳೆದೀ ಚಂಪಕಕ್ಕೆ ಪೂಗಳ್ ದೊರೆಯೆ (ಆದಿಪುರಾಣ ೩.೩೩)*

ಇಲ್ಲಿ ಬರುವ ಎರಡುಮಂ+ಒಡೆಯಲ್ಲಿ ಒಡೆ (=ಒಡನೆ) ದ್ವಿತೀಯೆಯೊಂದಿಗೆ ಬಂದಿದೆ. ಈ ಭಾವವೇ ಮರಾಠಿಯಲ್ಲಿ 'ಸಹಿತ' ವಾಗಿ ದ್ವಿತೀಯೆಯಲ್ಲಿ ಬಳಸಲಾಗಿರಬಹುದು ಎಂದು ಅವರ ಅಭಿಪ್ರಾಯವಾಗಿದೆ.

## ಚತುರ್ಥಿ

ಅಂವಾ ಮುಣಗಲಿಕ್ಕೆ ಹತ್ಯಾನ. ಅವರು ಹೋಗಲಿಕ್ಕೆ ಹತ್ಯಾರ.
ಆಕಿ ಗಿಡದ ಮ್ಯಾಲಿಂದ ಇಳೀಲಿಕ್ಕೆ ಹತ್ಯಾಳ.

'ತೊಡಗು' ಅರ್ಥದಲ್ಲಿಯ 'ಹತ್ತು' ಧಾತುವಿನ ಪ್ರಯೋಗ ಉತ್ತರ-ಕರ್ನಾಟಕದ ಜನಪದ ಭಾಷೆಯ ಒಂದು ವೈಶಿಷ್ಟ್ಯ. 'ಹತ್ತು' ಎಂದರೆ 'ಏರು' ಅರ್ಥ ಇಲ್ಲಿಲ್ಲ. ಇದರ ಮೂಲ ಬಹಳ ಹಳೆಯದು. ಹಳಗನ್ನಡದ ಈ ಪ್ರಯೋಗಗಳನ್ನು ಪರಾಮರ್ಶಿಸಬೇಕು.

*ಆದಱಂ ತತ್ಸೇವನೆಯಿಂ ಕಿಡಿಸಲ್ಕೆ ಪತ್ತಿದರ್ ಸಂಸೃತಿಯಂ (ಕವಿರಾಜಮಾರ್ಗ ೧.೯೧)*
*ಎಂಬುದುಂ ಜಾಬಾಲಿ ಮಹಾಮುನಿಗಳ್ ಪೇಟಲ್ ತಗುಳ್ದರದೆಂತೆನೆ (ಕರ್ನಾಟಕ ಕಾದಂಬರಿ ೧.೨೪೧ ವ)*
*ಎಂದು ವೈಶಂಪಾಯನಾಭಿದಾನ ಶುಕಂ ಪೇಟಲ್ತಗುಳ್ದುದೆಂತೆನೆ (ಅದೇ ೧*.೭೯ವ)

*ಜಯಂ ಬೆಸಗೊಳೆ ಗಂಗಾದೇವಿ ಪೇಟಲ್ ತಗುಳ್ದಳ್ (ಚಾವುಂಡರಾಯ ಪುರಾಣ ೮೨-೫)*
*ಪಾಟ ಪೋಲ್ತೆ ಪತಿ ತೋಡು ಸಂಗತಂ ಸಾಟಿ ಪಾಸಟಿಯೆಸಲ್ಕೆ ಪತ್ತುಗುಂ (ಕರ್ಣಾಟಕ ನಿಘಂಟು ೧೪)*
*ಲೋಗರ ಪಸುಗಳಂ ಕೊಳಲ್ ತಗುಳ್ದೊನ್ (ವಡ್ಡಾರಾಧನೆ, ಪು. ೨೨ ಸಾ. ೧೪)*
*ನಂದ ಬಂದೋಡಾತಂಗೆ ಕುಡಲ್ ತಗುಳ್ದೊಡೆ ತಮ್ಮನ ಹೆಂಡತಿಯುಂ ( ಅದೇ ೨೧-೧೪)*
*ಕೆಮ್ಮಗಿರ್ದುಪೆಱಪೆಱವನೆ ನುಡಿಯಲ್ ತಗುಳ್ದೊಡೆ (ಅದೇ ೪೬-೧೫)*
*ಎಂದರಸನಂ ಕಂಡು ಮೋಱೆಯಟೆದು ನೆಗಟಲ್‌ತಗುಳ್ದೊಡಾಪೊಟಲ್ದೆ (೧೮೯-೧)*

ಈ 'ಪತ್ತು' (ಹತ್ತು) ಧಾತು ಅನುವಾದಿತಗೊಂಡು 'ಲಾಗ್' ಆಗಿ ಮರಾಠಿಯಲ್ಲಿ ಹೋಗಿದೆ. ಲಗತಿ (ಸಂ) > ಲಗ್ಗಈ (ಪ್ರಾ) > ಲಾಗಣೇ ಹೀಗೆ ಇದರ ವ್ಯುತ್ಪತ್ತಿ ಹೇಳುತ್ತಾರೆ. ಶಾಬ್ದಿಕ ಬೆಳವಣಿಗೆಯೇನೋ ಸರಿಯೇ. ಆದರೆ ಅರ್ಥದ ದೃಷ್ಟಿಯಿಂದ ಸಂಸ್ಕೃತದಲ್ಲಿಯಾಗಲೀ ಪ್ರಾಕೃತದಲ್ಲಿಯಾಗಲೀ 'ಲಗ' ಮರಾಠಿ 'ಲಾಗ' ದಂತೆ ಬಳಕೆಯಾಗಿಲ್ಲ. ಅಭ್ಯಾಸಕರು ಹಿಂದೀ ಹಾಗೂ ಗುಜರಾತೀ ಭಾಷೆಗಳಲ್ಲಿಯ 'ಲಗ' 'ಲಾಗ' ಧಾತುವಿನ ಪ್ರಯೋಗಗಳೊಡನೆ ಹೋಲಿಸಬಹುದು.

ಸಹಾಯಕ ಕ್ರಿಯಾಪದವಾಗಿಯಲ್ಲದೆ 'ಲಾಗ' ಸ್ವತಂತ್ರ ಕ್ರಿಯಾಪದವಾಗಿಯೂ ಪ್ರಯುಕ್ತವಾಗಿದೆ. 'ಲಾಗ' ಕ್ಕೆ ಮರಾಠಿಯಲ್ಲಿ ಅರ್ಥಗಳು ಅನೇಕಾನೇಕ. ಅವುಗಳಲ್ಲಿ 'ಆಗು' ಕೂಡ ಒಂದು. ಈ ಪ್ರಯೋಗಗಳನ್ನು ನೋಡಬೇಕು.

*ಆಕೀ ಏನಾಗಬೇಕು ನಿನಗೆ? ತೀ ತುಲಾ ಕೋಣ ಲಾಗತೇ?*
*ಆಕಿ ನನಗೆ ಧೂರಿಂದ ಅತ್ತಿ ಆಗಬೇಕು.* ತೀ ಮಲಾ ಲಾಂಬಚೀ ಆತ್ಯಾ ಲಾಗತೇ.
*ಈ ಗಿಡಕ್ಕ ಮಾವಿನಕಾಯಿ ಎಷ್ಟು ಆಗ್ಯಾವ.*
ಯಾ ಝಾಡಾಲಾ ಕೈರ್‍ಯಾ ಕಿತೀ ಲಾಗಲ್ಯಾಹೇತ!
*ನನಗ ಹಸಿವಿ ಆಗಿತ್ತು, ನೀರಡಿಕೀನೂ ಆಗಿತ್ತು.-*
ಮಲಾ ಭೂಕ ಲಾಗಲೀ ಹೋತೀ, ತಹಾನಹೀ ಲಾಗಲೀ ಹೋತೀ.

ಇದು ಜನಪದ ಕನ್ನಡ ಹಾಗೂ ಹೊಸಮರಾಠಿಯ ಹೋಲಿಕೆಯಾಯಿತು. ಈ 'ಲಾಗ' ಧಾತುವಿನ ರೂಪಗಳು ಜ್ಞಾನೇಶ್ವರಿಕಾಲೀನ ಮರಾಠಿಯಲ್ಲಿ ಚತುರ್ಥೀ ಭಾವವನ್ನು ಸಾಧಿಸುತ್ತಿದ್ದುದನ್ನು ನಾವು ಕಾಣುತ್ತೇವೆ. ಉದಾಹರಣೆಗಳು:

*ಮಗ ಚಂದ್ರು ಚೇಂಡುವಾಲಾಗಿ ಮಾಗಾವಾ (೧೧-೫೬೧)* ಬಳಿಕ ಚಂಡಿಗಾಗಿ ಚಂದ್ರನನ್ನು ಬೇಡಬೇಕು.
*ಅಮೃತ ಲೇಸಾಲಾಗಿ ಸಾಯಾಸ (೧೧-೫೬೨)* ತುಸು ಅಮೃತಕ್ಕಾಗಿ ಪರಿಶ್ರಮ
*ಐಸೇಯಾಲಾಗಿ ಸರ್ಜಿಜ್ ಪ್ರಕಾರಿಚಿ (೧೫-೫೩೫)* ಇದಕ್ಕಾಗಿ ಎಲ್ಲ ಪದ್ಧತಿಗಳಿಂದ
*ತೇಯಾಲಾಗಿ ರೂಪಾ ಯೇಣೇಜ್ (೧೨-೧೮೯)*
ಅವನಿಗಾಗಿ (ಸಗುಣ) ರೂಪ ಧರಿಸುವುದು.



*ತರಿ ತುಜಲಾಗಿ ಸವರ್ಮ (೧೨-೨೯)* ಆದ್ದರಿಂದ ನಿನಗಾಗಿ ಧರ್ಮದೊಂದಿಗೆ

ಇಲ್ಲಿ ಬರುವ 'ಲಾಗಿ' ರೂಪವನ್ನು ವಿಶ್ಲೇಷಿಸಿದರೆ ಇದು 'ಲಾಗ' ಧಾತುವಿನ ಧಾತುಸಾಧಿತ (ತುಮಂತ) ವೆಂಬುದು ಸ್ಪಷ್ಟವಾಗುವುದು. 'ಲಾಗ' ಧಾತುವಿನ ಅರ್ಥ 'ಆಗು' ಎಂದು ಹೇಳಿದೆಯಷ್ಟೇ? ಇದೇ ಅರ್ಥದ ಒಂದು ಹಳಗನ್ನಡ ಧಾತು 'ಅಲ್' ದ ಬಳಕೆ ಲಕ್ಷಣೀಯವಾಗಿದೆ. ಎನಲ್ ತಕ್ಕಂ, ತಿನಲ್ ಕೊಣ್ಡಂ, ಕೊಲಲ್ ಬಗೆದಂ ಮೊದಲಾದ ಉದಾಹರಣೆಗಳು (ಶಬ್ದಮಣಿದರ್ಪಣ ಸೂತ್ರ ೮೬) ತುಮಂತಕ್ಕಾಗಿ ಬಳಸಿದ ಅಲ್ ಧಾತುಗತ ಪ್ರತ್ಯಯವನ್ನು ಸ್ಪಷ್ಟಪಡಿಸುತ್ತವೆ. ಇದಕ್ಕೆ 'ಕೆ' ಪ್ರತ್ಯಯ ಸೇರಿ ಚತುರ್ಥೀ ಭಾವವನ್ನು ಸಾಧಿಸುವುದೆಂದು ಹೇಳಿದ ಕೇಶಿರಾಜನು (ಸೂತ್ರ ೨೪೬) ನುಡಿಯಲ್ಕೆ ಬನ್ದಂ, ಪೇಟಿಲ್ಕೆ ಕೇಳ್ದಂ ಮೊದಲಾಗಿ ಉದಾಹರಣೆಗಳನ್ನು ಕೊಡುತ್ತಾನೆ. ಕನ್ನಡದ 'ಕೆ' ಚತುರ್ಥಿ ಪ್ರತ್ಯಯದ ಮೂಲ 'ಕು' ಎಂದೂ ಅದರ ವ್ಯುತ್ಪತ್ತಿ ಸ್ಪಷ್ಟವಾಗಿಲ್ಲವೆಂದೂ ಕಾಲ್ಡವೆಲ್ ಹೇಳುತ್ತಾರೆ. ಆದಕ್ಕಾಗಿ ತಮಿಳಿನಲ್ಲಿಯ ದಿಕ್ ವಾಚಕ್ ಶಬ್ದಗಳನ್ನು ಅವರು ಮೂಲವಾಗಿ ಎಣಿಸಿದ್ದಾರೆ.[5] ಪ್ರ.ಗೋ. ಕುಲಕರಣಿಯವರು ಇನ್ನೂ ಮುಂದೆ ಹೋಗಿ ಹಳಗನ್ನಡದ 'ಕುಂ' 'ಗುಂ' ಪ್ರತ್ಯಯಗಳೊಡನೆ ಸಂಬಂಧ ಜೋಡಿಸಲು ಹೆಣಗಿದ್ದಾರೆ.[6]

ಇವರೆಲ್ಲರೂ 'ಕೆ' (ಅಥವಾ 'ಕು') ಇದನ್ನಷ್ಟೇ ಪ್ರತ್ಯಯವೆಂದು ಎಣಿಸಿದ್ದರಿಂದ ಈ ತಾರ್ಕಿಕ ಗೊಂದಲವಾಗಿದೆಯೆಂದು ವಿನಯಪೂರ್ವಕವಾಗಿ ಹೇಳಬೇಕಾಗಿದೆ. ಚತುರ್ಥಿಯ ಮೂಲ ಪ್ರತ್ಯಯ 'ಕೆ' 'ಅಲ್ಲ', 'ಗೆ' (ಅಗೆ=ಆಗೆ). 'ಆಗು' (ಅಲ್) ಧಾತುವಿನ ತುಮಂತ (ಕೃನ್ನಾಮ) 'ಆಗೆ'. ಇದರ ಸಂಕ್ಷಿಪ್ತರೂಪವೇ 'ಗೆ'. ತಮಿಳಿನಲ್ಲಿ ಗ=ಕ ಆಗುವುದು ವಿಶೇಷವಲ್ಲ. ಎನಕು, ನಿನಕು, ಪೋಕು ಇವೆಲ್ಲ ಉದಾಹರಣೆಗಳನ್ನು ಗಮನಿಸಬೇಕು.

ನನ್ನ ಅಭಿಪ್ರಾಯಕ್ಕೆ ಆಧಾರವೊಂದೇ. 'ಆಗೆ' ಅರ್ಥದಲ್ಲಿಯ ಮರಾಠಿ 'ಲಾಗಿ'.

ಈ ಆಧಾರವನ್ನು ಬಲಪಡಿಸುವ ಒಂದೆರಡು ವಿಷಯಗಳನ್ನಿಲ್ಲಿ ವಿವೇಚಿಸುವದು ಅಗತ್ಯವೆನಿಸುತ್ತದೆ. ಚತುರ್ಥೀ ವಿಭಕ್ತಿಯ ಪ್ರತ್ಯಯಗಳಿಂದ ಇಗೆ (ಆಗೆ), ಅಕ್ಕೆ, ಕ್ಕೆ, ಕೆ, ಗಳಿಗೆ ದ್ವಿರುಕ್ತಿಕರವಾಗಿ ಮತ್ತೆ 'ಆಗಿ' ಪ್ರತ್ಯಯ ಹತ್ತುತ್ತದೆ. ಆವನಿಗಾಗಿ, ದೇಶಕ್ಕಾಗಿ, ಹೊಟ್ಟೆಗಾಗಿ ಇವು ಹೊಸಗನ್ನಡದ ಉದಾಹರಣೆಗಳಾದರೆ ನಡುಗನ್ನಡದಲ್ಲಿ ನಿನಗಾಗಿ (ಬಸವಪುರಾಣ ೨೬-೫೫) ತನ್ದೆಯ ಮಾತಿಗಾಗಿ (ಜೈಮಿನಿ ಭಾರತ ೩೧-೩೪) ಹೀಗೆ ಉದಾಹರಣೆಗಳು ದೊರೆಯುತ್ತವೆ. ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಎಂಬುದಾಗಿ ದಾಸ ಸಾಹಿತ್ಯದಲ್ಲಿ ಇದಕ್ಕೆ ಉದಾಹರಣೆ ಇದೆ. ಹೀಗೆ ದ್ವಿರುಕ್ತಿಕರ 'ಆಗಿ' ಕನ್ನಡದಲ್ಲಿ ಇಷ್ಟೊಂದು ವರ್ಷ ನಡೆದುಕೊಂಡು ಬಂದರೆ ಮರಾಠಿಯಲ್ಲಿಯ 'ಲಾಗಿ' ಮಾತ್ರ ತನ್ನಲ್ಲಿ ಇಲ್ಲದ 'ಆಗಿ' ಯನ್ನು ಸುಮಾರು

---

5. Comarative Grammar of Dravidian Languages P. 283
6. ಕನ್ನಡ ಭಾಷೆಯ ಚರಿತ್ರೆ ಪು. ೪೬೩

ಹದಿನಾರನೆಯ ಶತಮಾನದಲ್ಲಿ ಬಿಟ್ಟುಕೊಟ್ಟಿತು. ಚತುರ್ಥಿಯ ಪ್ರತ್ಯಯವಾಗಿ (ಲಾಗಿ ಅವ್ಯಯಕ್ಕೆ ಬದಲು) 'ಲಾ' ಅಷ್ಟೇ ಉಳಿಯಿತು. (ವಾಮನ ಪಂಡಿತನ ಶಕೆ ೧೫೫೦-೧೬೧೦ ವಾಮನ ಚರಿತ್ರದಲ್ಲಿ 'ಮಲಾ' = 'ನನಗೆ' ಶಬ್ದದ ಪ್ರಯೋಗಗಳು ದೊರೆಯುತ್ತವೆ.) ಇಂದಿಗೂ 'ಲಾ' ಇದು ಚತುರ್ಥಿ ವಿಭಕ್ತಿಯ ಏಕವಚನದ ಮಹತ್ವದ ಪ್ರತ್ಯಯವಾಗಿದೆ.

ಕನ್ನಡದಿಂದ ಮರಾಠಿಗೆ ಅನುವಾದಿತವಾಗಿ ಹೋದ 'ತೇಜ್' ಶಬ್ದ ಪ್ರತ್ಯಯವಾಗಿ ಚತುರ್ಥಿಭಾವವನ್ನು ಸಾಧಿಸುವುದನ್ನು ಈ ಮೊದಲು ನೋಡಿದೆವಷ್ಟೇ? ಜ್ಞಾನೇಶ್ವರ ಪೂರ್ವಕಾಲದ ಶಿಲಾಲೇಖಗಳಿಂದ ಮೊದಲಗೊಂಡು ಇಂದಿನವರೆಗೂ ಉಳಿದ ಚತುರ್ಥಿಯ ಇನ್ನೊಂದು ಪ್ರತ್ಯಯ 'ಸೀ'.

*ಅಂಬಾದೆವೀಚೆಆ ಕೀರ್ತನಾಸಿ (ಸಾಜ್‌ವರಗಾಂವ ಲೇಖ ಕ್ರಿ.ಶ. ೧೧೬೪)*

ಅಂಬಾದೇವಿಯ ಕೀರ್ತನಕ್ಕಾಗಿ.

*ತ್ಯಾಸೀ ಭೇಟೇ ಶ್ರೀಹರಿ (ಮುಕುಂದರಾಜನ ವಿವೇಕಸಿಂಧು ಕ್ರಿ.ಶ. ೧೧೮೮)*

ಅವನಿಗೆ ಶ್ರೀ ಹರಿಯು ಭೆಟ್ಟಿಯಾಗುವನು.

*ತೇಯಾಜ್‌ಸಿ ಭೇದು ಕೈಜ್‌ಚಾ (ಜ್ಞಾನೇಶ್ವರೀ ೫-೮೫)*

ಅವುಗಳಿಗೆ ಭೇದವೆಲ್ಲಿಯದು?

*ಘ್ರಾಣಾಸಿ ಭಾವೋ ಜಾಯೇ ಪರಿಮಳಾಚಾ (೬-೧೬)*

ಪರಿಮಳದ ಭಾವವು ಮೂಗಿಗೆ ಹೋಗುವದು.

ಈ 'ಸೀ' ಪ್ರತ್ಯಯದ ಮೂಲ ಮರಾಠಿ ಪಂಡಿತರಲ್ಲಿ ಸಾಕಷ್ಟು ಗೊಂದಲವೆಬ್ಬಿಸಿದೆ. ತುಳಪುಳೆಯವರು ಪ್ರಾಕೃತ ಅಪಭ್ರಂಶ ಭಾಷೆಗಳನ್ನು ಬಿಟ್ಟು ನೇರ ಸಂಸ್ಕೃತದ 'ಸಿಕ್ಥ' ದ ಆಸರೆಗೆ ಹೋಗಿದ್ದಾರೆ. ಅಲ್ಲೂ ಸಂಶಯವೆನಿಸಿದ್ದರಿಂದ ಲ್ಯಾಟಿನ್ Semen ವರೆಗೆ ಮುಟ್ಟಿದ್ದಾರೆ. ಇದು ಹಳಗನ್ನಡದ 'ಕೆ' ಪ್ರತ್ಯಯಕ್ಕಾಗಿ 'ಕು' ಮೂಲವೆಂದು ಕಾಲ್ಡವೆಲ್‌ರು ತಮಿಳು ದಿಗ್ವಾಚಕ ಶಬ್ದಗಳಿಗೆ ಶರಣುಹೋದಂತಾಗಿದೆ.

ಕನ್ನಡದ 'ಗೆ' ಪ್ರತ್ಯಯವು 'ಆಗೆ' 'ಅಗೆ' ಯ ಸಂಕ್ಷಿಪ್ತರೂಪವಿದ್ದಂತೆ, 'ಸೀ' ಪ್ರತ್ಯಯವು 'ಅಸೀ' ಶಬ್ದದ ಸಂಕ್ಷೇಪವಾಗಿದೆಯೆಂದು ನನ್ನ ಭಾವನೆಯಾಗಿದೆ. 'ಅಸ' ಧಾತುವಿನ (ಅರ್ಥ, ಇರು) ಧಾತುಸಾಧಿತ (ಕೃನ್ನಾಮ, (ತುಮಂತ) 'ಲಾಗ' ದಿಂದ 'ಲಾಗೀ' ಆದಂತೆ, 'ಅಸೀ', ಇದನ್ನೇ ಬೇರೆ ಶಬ್ದಗಳಲ್ಲಿ ಹೇಳುವುದಾದರೆ ಹಳಗನ್ನಡದ 'ಅಗೆ' ಮತ್ತು ಮರಾಠಿಯ 'ಅಸೀ'ಗಳು ಸಮಾನಾರ್ಥದ ಸಮರೂಪ ಶಬ್ದಗಳು. 'ಅ' ಕಳೆದುಕೊಂಡು 'ಗೆ' ಕನ್ನಡದ ಪ್ರತ್ಯಯವಾಯಿತು. 'ಸೀ' ಮರಾಠಿ ಪ್ರತ್ಯಯವಾಯಿತು.

ಮರಾಠಿಯಲ್ಲಿ ಚತುರ್ಥೀ ಭಾವಕಾರಕ ಮೂರನೆಯ ಅವ್ಯಯ 'ಸಾಠೀ'. ಅದಕ್ಕೆ ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳಿವು.

*ನಕ್ಷತ್ರಾಚೇಯಾ ಆಭಾಸಾಸಾಠಿಜ್ (೯.೧೪೫)*

ನಕ್ಷತ್ರದ ಆಭಾಸಕ್ಕಾಗಿ (ನಕ್ಷತ್ರವೆಂದು ಭಾವಿಸಿದ್ದಕ್ಕಾಗಿ)

*ಚಂದ್ರಾಸಾರಿಜ್ ಜಳೀಚೀ ಪ್ರತಿಮಾ ಧರಿಲೀ (೯.೧೪೯)*
ಚಂದ್ರನಿಗಾಗಿ ನೀರಿನಲ್ಲಿಯ ಪ್ರತಿಬಿಂಬವನ್ನು ಹಿಡಿದಂತೆ.

ಈ 'ಸಾರೀ' ಅವ್ಯಯವು ಹಳಗನ್ನಡದ 'ಸಾಟಿ' (ಪಾಟಿ, ಸಮವೆಂಬ ಅರ್ಥದಲ್ಲಿ) ಎಂಬುದನ್ನು ಬೇರೆಡೆ ತೋರಿಸಿದ್ದೇನೆ. ಆ ಬಗ್ಗೆ ಇಲ್ಲೂ ಒಂದು ಉದಾಹರಣೆ ಕೊಡಬಹುದು.

*ವಸಿಷ್ಠೇಜ್ ಮಾನಿಲೀ ಕೀ ಭಾಂಡೇ ಭಾನುಸೀಜ್ ಷಾರೀ (೧೮-೧೭೧೦)*
ವಸಿಷ್ಠರು ಇರಿಸಿದ ಪಾತ್ರೆ ಸೂರ್ಯನಿಗೆ ಸಾಟಿಯಾಯಿತು.

ಕನ್ನಡದ 'ಸಾಟಿ' ಮರಾಠಿಗೆ ಹೋದರೂ ಅದಕ್ಕೆ ಬಂದ ಚತುರ್ಥಿ ಭಾವದ ಕಾರಣವೇನೆಂಬುದರ ಜಿಜ್ಞಾಸೆ ಸಹಜವಾದದ್ದು.

ಇದಕ್ಕಾಗಿ ಉತ್ತರಕರ್ನಾಟಕ ಜನಪದ ಭಾಷೆಯಲ್ಲಿಯ ಕೆಲ ಶಬ್ದಗಳನ್ನು ಅವೂ ಹಳಗನ್ನಡಕ್ಕೆ ತೀರ ಸನಿಹವಾದುವನ್ನು - ಗುರುತಿಸಬೇಕಾಗುತ್ತದೆ. ಗ್ರಂಥ ಸಹಾಯವಿಲ್ಲದ್ದರಿಂದ ಕಿಟೆಲ್ಲರು ಅವುಗಳ ವೈಶಿಷ್ಟ್ಯವನ್ನು ಗುರುತಿಸಲಿಲ್ಲವೆಂಬುದೂ ಅಷ್ಟೇ ಸತ್ಯ. ಅವೆಂದರೆ - 'ಆಸು', 'ಈಸು', 'ಏಸು' ಹಾಗೂ 'ಓಸು' (ವಿಶೇಷಣ ಸಾಧಿಸುವುದಕ್ಕಾಗಿ 'ತು' (ಟು, ಟಿ?) ಪ್ರತ್ಯಯ ಹತ್ತಿ-ಶಬ್ದಮಣಿದರ್ಪಣ, ಸೂತ್ರ ೮೭-ಅಷ್ಟು, ಇಷ್ಟು, ಎಷ್ಟು ಮತ್ತು ಒಷ್ಟು ಶಬ್ದಗಳಾದ ವಿಷಯ ಇಲ್ಲಿ ಅಪ್ರಸ್ತುತ.) ಇವುಗಳಲ್ಲಿ ಈಗ ಗಮನ ಸೆಳೆದ ಶಬ್ದ 'ಓಸು'. ಇದರಿಂದಲೇ ಹುಟ್ಟಿದ ಚತುರ್ಥಿ ಭಾವ ಸಾಧಿಸುವ ಅವ್ಯಯ ಓಸು + ಅಗೆ = ಓಸುಗೆ, -ಓಸುಗ.

*ಭಕ್ತಿಗೋಸುಗ (ಬಸವ ಪುರಾಣ ೪೩.೫೪) ಕರದ ಇಷ್ಟಲಿಂಗದ ಹದನನ್ ಆಱುಪಲ್ ಓಸುಗ (ಚನ್ನಬಸವ ಪುರಾಣ ೫೭.೮೮)*

ಇವು ನಡುಗನ್ನಡದ ಉದಾಹರಣೆಗಳಾದರೂ ಹಳಗನ್ನಡದಲ್ಲೂ ಉದಾಹರಣೆಗಳಾಗಿ ದೊರೆಯಬಹುದಾಗಿವೆ. ಪ್ರಶ್ನೆ ಅದಲ್ಲ. ಈ 'ಓಸು' ಶಬ್ದದ ಅರ್ಥವೇನಿರಬಹುದು?

ಆಸು, ಈಸು, ಏಸು, ಓಸು ಗಳ ಸಾಂತ್ಯಕ್ಕೆ ಟಕಾರದ ಆದೇಶವಾದ ಶಬ್ದಗಳೂ ರೂಢಿಯಲ್ಲಿವೆ. - ಆಟು, ಈಟು, ಏಟು, ಹಾಗೂ ಓಟು.

ಹೀಗೆ ಓಸು=ಓಟು ದಿಂದ 'ಹೋಡ' ಶಬ್ದವಾಗಿ (ಇದರಿಂದ ಮರಾಠಿಯಲ್ಲಿ ಸಿದ್ಧವಾದ ಜೇಪ್ಹಡಾ, ತೇಪ್ಹಡಾ, ಕೇಪ್ಹಡಾ ಶಬ್ದಗಳ ವಿವೇಚನೆ ಬೇರೆಡೆಗೆ ಬಂದಿದೆ) ಬಳಕೆಯಾಗಿದೆ. ಈ 'ಹೋಡ' ದ ಅರ್ಥ 'ಸಾಮ್ಯ' 'ಸಾಟಿ'. ಹೀಗೆ 'ಓಸು' ಶಬ್ದದ ಅರ್ಥ 'ಸಾಮ್ಯ' ವೆಂದಾಗಿ ಮರಾಠಿಯಲ್ಲಿ 'ಸಾರೀ'ಯಾಯಿತು. 'ಓಸುಗ' ರೂಪಾಂತರಗೊಂಡು ಮರಾಠಿಯಲ್ಲಿ ಚತುರ್ಥೀ ಭಾವದ ಇನ್ನೊಂದು ಅವ್ಯಯವಾಯಿತು.

'ಓಸು' (ಸಮನಾಗಿರು) ಧಾತುವಿಗೂ 'ಸಲ್ಲು' ಧಾತುವಿನ ಒಂದು ಅರ್ಥಭೇದಕ್ಕೂ ಸಾಕಷ್ಟು ಸರಿಕತೆ ಕಾಣಬರುತ್ತದೆ. ಈ ಉದಾಹರಣೆಗಳನ್ನು

ಪರಿಶೀಲಿಸಬೇಕು. *ಜೇನತುಪ್ಪಕ್ಕೆ ಸಕ್ಕರೆ ಸಲ್ವುದು (ಶಬ್ದಮಣಿದರ್ಪಣ ಸೂತ್ರ ೧೫೯) ಸನ್ನವೀರನೊಳು ಭಯವುಣ್ಟೆ? (ಸರ್ವಜ್ಞನ ಪದಗಳು)*

'ಸಲ್' ಧಾತುವಿನಿಂದ ಸಿದ್ಧವಾದ ಭಾವವಾಚಕ ನಾಮ 'ಸಲುವು'. ಯೋಗ್ಯತೆ, ಸಾಮ್ಯ ಮುಂತಾದ ಅರ್ಥಗಳಲ್ಲಿ. ಈ 'ಸಲುವು'ಗೆ ಚತುರ್ಥಿಯ ಮೂಲ ಪ್ರತ್ಯಯ 'ಗೆ' (ಅಗೆ) ಹತ್ತಿ 'ಸಲುವಾಗೆ' 'ಸಲುವಾಗಿ' ಎನ್ನುವ ರೂಪ ಸಿದ್ಧವಾಯಿತು. (ಅಥವಾ ಸಲುವು ಆಗುವ ರೀತಿಯಲ್ಲಿ ಎಂದೂ ಇದನ್ನು ಅರ್ಥೈಸಬಹುದು) ಹೀಗೆ 'ಓಸುಗ' ಹಾಗೂ 'ಸಲುವಾಗಿ' ಇವರೆಡೂ ಸಮಾನಾರ್ಥದ ಶಬ್ದಪ್ರಯೋಗಗಳು. ಅರ್ಥವೂ 'ಸಮನಾಗಿ' 'ಸಾಟಿಯಾಗಿ' 'ಸಾರೀ' ಎಂದೇ.

ಕನ್ನಡ ಮರಾಠಿಗಳಲ್ಲಿಯ ಈ ಮೂರೂ ಶಬ್ದಗಳ ಪ್ರಯೋಗ ನೋಡಿದಬಳಿಕ 'ಸಾಟಿಯಾಗಿ' 'ಸಾಟಿಗೆ' ಅರ್ಥದ ಇನ್ನೂ ಕೆಲ ಅವ್ಯಯಗಳ ಚತುರ್ಥೀ ಭಾವವನ್ನು ಸಾಧಿಸುವುದಕ್ಕಾಗಿ ಹಳಗನ್ನಡದಲ್ಲಿ ಬಳಸಲಾಗುತ್ತಿದ್ದವೇನೋ, ಎನ್ನುವ ಬಲವಾದ ಸಂದೇಹ ಉಂಟಾಗುತ್ತದೆ.

ಇವುಗಳಲ್ಲಿ ಮೊದಲನೆಯದು 'ವರೆ'. ಇದಕ್ಕೆ ಚತುರ್ಥಿಯ 'ಗೆ' ಪ್ರತ್ಯಯ ಹತ್ತಿ ಆದ ರೂಪ ವರೆಗಂ. *ತೋಯಧಿ ಧರಣಿ ಧರಾಧರಸ್ಥಿತಿವರೆಗಂ (ಕವಿರಾಜಮಾರ್ಗ ೩-೨೦೭)* ಇಂತಹವೆಷ್ಟೋ ಉದಾಹರಣೆಗಳು.ಈ 'ವರೆ' ಶಬ್ದದ ಮೂಲವೆಲ್ಲಿರಬಹುದು ಎಂದು ಯೋಚಿಸಿದಾಗ ನೆನಪಾಗುವುದು 'ಒರೆ'. 'ಸದೃಶ' ಅರ್ಥದ 'ಒರೆ' ಶಬ್ದದ ಈ ರೂಪ ನೋಡಬೇಕು.

*ಸಾರಥಿಯಪ್ಪೊಡಪ್ಪುದು ಶಿಖಣ್ಡಿಯೆ ನಿನ್ನೊರೆಗುಣ್ಟೆ ಗಣ್ಡರಾರ್ (ಪಂಪಭಾರತ ೮-೯೭)*
*ಒರೆಗಂ ದೊರೆಗಂ (ಪಂಪಭಾರತ ೨.೨೬೮)*
*ಕುನ್ದಗನ್ದಿಯ ವದನರುಚಿಗೆ ಒರೆವೊನ್ದಿದ ಅನ್ದಮ್ ಎನಿಪ್ಪುದು ಎಳೆವೆಜಿ (ಬಸವಪುರಾಣ ೪-೨೮)*

ಈ 'ಒರೆ'ಯಿಂದ 'ವರೆ' ಬಂದಿರಬಹುದೆಂದು ನನ್ನ ಅನಿಸಿಕೆ.

ಇಂತಹದೇ ಇನ್ನೊಂದು ಅವ್ಯಯ 'ಅನ್ನ'. ಇದರ ಒಂದು ಅರ್ಥ ಅನ್ತಹ. *ಸಿಡಿಲನ್ನಂ ಸಿಂಗದನ್ನಂ ಪುರಹರನ ಉರಿಗಣ್ಣನ್ನನ್ ಈ ನಾರಸಿಂಹಂ*

ಇದು ಕೇಶೀರಾಜನೇ ಕೊಡುವ ಉದಾಹರಣೆಯಲ್ಲಿಯದು (ಸೂತ್ರ ೧೬೧). ಇದು ಚತುರ್ಥೀ ಭಾವವನ್ನು ಸಾಧಿಸಿದ ಉದಾಹರಣೆಗಳೂ ಇವೆ.

*ಉದ್ಧವಿರ್ದನ್ ನೆಗೆವನ್ನಂ ಪೊಯ್ಯಲ್ ಎಸ್ದು ಅವ್ವಳಿವುದು (ಶಬ್ದಮಣಿದರ್ಪಣ ಸೂತ್ರ ೧೫೭)*
*ಆ ಧನುರ್ದಣ್ಡಟಂಕೃತಮ್ ಉದ್ದಾ ಮಯಮಾಟ್ಟಹಾಸರವಮ್ ಎಮ್ಬನಂ (ಪಂಪ ರಾಮಾಯಣ ೧೩, ೭೭)*

ಅನ್ನ ಅವ್ಯಯಕ್ಕೆ ಚತುರ್ಥಿ ಪ್ರತ್ಯಯವಾದ 'ಗೆ' ಹತ್ತಿ ಅನ್ನೆಗಂ, 'ವರೆ'

'ವರೆಗಂ' ಅವ್ಯಯದೊಡನೆ 'ಅನ್ನವರೆಗಂ' ರೂಪಗಳೂ ಆಗಿವೆ.

ಇಷ್ಟೆಲ್ಲ ಚತುರ್ಥಿಕಾರಕ ರೂಪಗಳನ್ನು ವಿವೇಚಿಸಿದ ಬಳಿಕ ನೆನಪಾಗುವ ಇನ್ನೊಂದು ಮರಾಠಿ ಶಬ್ದ 'ಪೋಟೀಜ್'. ಹಳಗನ್ನಡ ಕಾಲದಿಂದಲೂ ಮರಾಠಿಯಲ್ಲಿ ಇದ್ದಿರಬಹುದಾದ ಆದರೆ ಗ್ರಂಥಗಳಲ್ಲಿ ದೊರೆಯದ ಶಬ್ದವಿದು. 'ಸಾರೀಜ್' ಅರ್ಥದಲ್ಲಿಯೇ ಚತುರ್ಥೀಭಾವ ಸಾಧಿಸುವುದಕ್ಕಾಗಿ ಮರ್ಯಾದಿತ ಸಂದರ್ಭಗಳಲ್ಲಿ ಇಂದು ಬಳಸಲಾಗುತ್ತದೆ. ಹಳಗನ್ನಡದ 'ಪೊಟ್ಟೆ' (ಹೊಟ್ಟೆ) ಮರಾಠಿಯಲ್ಲಿ 'ಪೋಟ' ಆಗಿ ಹೋಗಿದೆಯಷ್ಟೇ? ಈ 'ಪೋಟ'ದ ಸಪ್ತಮಿಾ ರೂಪವೆಂದು ನಾನೂ ಇಲ್ಲಿಯವರೆಗೆ ಭಾವಿಸಿದ್ದೆ. ಆದರೆ ಚತುರ್ಥಿಗೆ ಇಷ್ಟೊಂದು ಹಳಗನ್ನಡ ಮರಾಠಿ ಶಬ್ದಗಳು ಸದೃಶ, ಸಮಭಾವವನ್ನು ಸೂಚಿಸುತ್ತಿದ್ದರೆ, 'ಪೋಟಿಜ್'ಯಾದರೂ ಅಪವಾದವೇಕೆ? ಹೋಲು ಅರ್ಥದಲ್ಲಿಯ 'ಹೋಡ' ಶಬ್ದ ಜ್ಞಾನೇಶ್ವರಿಯಲ್ಲಿಯೇ ದೊರಕುತ್ತಿರುವಾಗ ಈ 'ಪೋಟಿಜ್' ಗಾಗಿ ದೂರ ಹೋಗಬೇಕಿಲ್ಲ.

ಸಾಮ್ಯ, ಹೋಲಿಕೆ ಸೂಚಿಸುವ ನಾಲ್ಕು ಕನ್ನಡ ಅವ್ಯಯಗಳು - ಓಸುಗ, ಸಲುವಾಗಿ, ವರೆ, ಅನ್ನ - ಅಲ್ಲದೆ ನಾಲ್ಕು ಮರಾಠಿ ಅವ್ಯಯಗಳು ಸಾಠೀ, ಪೋಟೀ, ಸರಿಸೇ, ಸವೇ (ಸಮೇ) - ಚತುರ್ಥೀ ಭಾವವನ್ನು ಸಾಧಿಸುತ್ತಿದ್ದರೆ ಇದು ಕೇವಲ ಆಕಸ್ಮಿಕವೆಂದು ಭಾವಿಸಬಹುದೇ? ಅಥವಾ ಕನ್ನಡದಲ್ಲಿಯ 'ಗೆ' ಈ ಮೂಲ ಪ್ರತ್ಯಯವು 'ಆಗು' ಧಾತುವಿನಿಂದ ಸಿದ್ಧವಾಗದೇ 'ಅಹ' ಧಾತುವಿನಿಂದ ಸಿದ್ಧವಾಗಿ ಅಹಗೆ, ಅಹಂಗೆ ರೂಪಗಳಾಗಿ (ಹಾಗೆ, ಹಾಂಗೆ) ಅದರ ಸಂಕ್ಷಿಪ್ತರೂಪವೆಂದು ಭಾವಿಸುವುದು ಹೆಚ್ಚು ಸಮರ್ಪಕವಲ್ಲವೇ? ಮರಾಠಿಯಲ್ಲಿ ಚತುರ್ಥಿಯಲ್ಲೂ ಬಳಸಲಾದ ಹಳಗನ್ನಡದ ಪ್ರತ್ಯಯ - 'ಅ' 'ಆ' ದ ಮೂಲ 'ಅದು' ಸರ್ವನಾಮವೆಂದು ಒಪ್ಪಿಕೊಂಡರೆ ಈ 'ಅದು' 'ಅಹ' ಧಾತುವಿನಿಂದ ಸಾಧಿಸಲಾದದ್ದು 'ಅಹದು' (ಆದದ್ದು ಅರ್ಥದಲ್ಲಿ) ಎಂದು ಹೇಳುವುದು ಸಮಂಜಸವಾಗಲಿಕ್ಕಿಲ್ಲವೇ?[7]

7. ಈ ವಿವೇಚನೆಯ ನಂತರ ನನಗೆ ದೊರೆತ ಲೀಳಾಚರಿತ್ರದಲ್ಲಿಯ ಶಬ್ದ 'ವಾಸ'. ಇದರರ್ಥ 'ಕಡೆಗೆ' 'ಬದಿಗೆ' ಎಂದಾಗುತ್ತದೆ. ಈ ಶಬ್ದ 'ಓಸ' ದಿಂದ ಬಂದಿರಬಹುದಾಗಿದೆ. ಅದನ್ನು ಕುರಿತು ಬೇರೆಡೆ ಚರ್ಚಿಸಿದ್ದೇನೆ.

# ೧೧. ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿಯ ಕೆಲವು ಹಳಗನ್ನಡ ಶಬ್ದ ಪ್ರಯೋಗಗಳು :

**ಅಟಾಟ, ಅಟ್ಟಟ್ಟ, ದೂತತ್ವ, ದೂತ**

ದೂತ ಅರ್ಥದಲ್ಲಿಯ ಅಟ್ಟಟ್ಟ ಶಬ್ದದ ಹಳಗನ್ನಡ ಪ್ರಯೋಗಗಳು ಇಂತಿವೆ.

*ಇನ್ನಳಿಪಿಂದವಟ್ಟುವಟ್ಟಟ್ಟಿಗಳಂ ಬಿಸುಟ್ಟುದು (ಪಂಪ ಭಾರತ ೯-೮೯)*
*ವಿಭೀಷಣನಲ್ಲಿಗೆ ನಂಮನಣ್ಣನಟ್ಟಟ್ಟಯುಮಾತನಟ್ಟಿದೊಡೆ*
*(ಪಂಪ ರಾಮಾಯಣ ೧೧-೨೩)*

ದೂತತ್ವ ಅರ್ಥದಲ್ಲಿ ಹೀಗೆ-

*ಅಟವಿಕರ ಅಟ್ಟಟ್ಟಿಯೊಳಂ ಮಸುಳಿಸೆ (ಪಂಪಭಾರತ ೭.೨೭ ವ)*
*ಪಾಗುಡಕ್ಕಂ ಪಳಬದ್ದಕ್ಕಂ ಅಟ್ಟಟ್ಟಿಗಂ ಮಂಗಳವಸವನಂಗೊಂಡು*
*(ಅದೇ ೯-೯೫ ವ)*

ಜ್ಞಾನೇಶ್ವರೀಯಲ್ಲಿ ಬರುವ ಏಕಮಾತ್ರ ಪ್ರಯೋಗ ಹೀಗೆ-

*ಪ್ರಥಮದಶೇಚಿಯೇ ಅಟಾಟೇಮಾಝಿ ಕಂಸಾ ಐಸೀಜ್ ಅಚಾಟೇಜ್*
*ಮಹಾದೇಂಥೀಜ್ ಅವಚಟೇಜ್ ಲೀಲಾ ಚಿ ನಾಶಿಲೀಜ್ (೧೦.೨೭೮)*

ಮೊದಲದೆಸೆಯ (ಅಂದರೆ ಬಾಲ್ಯದ) ದೂತತನದಲ್ಲಿ (ಆರಂಭದಲ್ಲಿ) ಕಂಸನಂತಹ ಅಸಾಧ್ಯನಾದ ಮಹಾಪ್ರಚಂಡನನ್ನು ಸಹಜವಾಗಿ ತಡಮಾಡದೆಯೆ ನಾಶಮಾಡಿದೆ.

'ಅಟಾಟೇ' ಶಬ್ದದ ಅರ್ಥ ತಿಳಿಯದೆಯೋ ಏನೋ, ರಾಜವಾಡೆಯವರ ಪ್ರತಿಯನ್ನುಳಿದು ಮಿಕ್ಕ ಪ್ರತಿಕಾರರೆಲ್ಲ 'ಅಟಾಟೇ' ಗೆ ಬದಲಾಗಿ 'ಪಹಾಟೇ' ಶಬ್ದ ಬಳಸಿದ್ದಾರೆ. (ಪಹಾಟ = ಪ್ರಭಾತ)

ಇಲ್ಲಿ ಬರುವ 'ಅವಚಟೇ' ಶಬ್ದ ಜ್ಞಾನೇಶ್ವರೀಪೂರ್ವದ ಸೋಮನಾಥ ಚರಿತೆ (ರಾಘವಾಂಕ) ಯಲ್ಲಿ 'ಅನಿರೀಕ್ಷಿತವಾಗಿರುವುದು' ಅರ್ಥದಲ್ಲಿ ಹೀಗೆ ಬಳಸಲಾಗಿದೆ.

*ಕೋಡಿನ ಕೊನೆಯಲಿ ಡವರಿಸಿತು ಕುಸುಬಿತ್ತು*
*ಕೆಡಹಿತ್ತು ಕೆಲಬಲಕ್ಕುವಚಟದೊಳಾದಿ ಗೊಂಡುಱುಬಿತ್ತು (೫.೩೬)*
*ಅವಚಟೇಜ್ ಕಾಮರಾಮಾಜಿ ಸಾಜ್‌ಪಡೇ ಹೀರಾ* (೧೦.೭೬) ಅನಿರೀಕ್ಷಿತವಾಗಿ ಕರ್ಪೂರದಲ್ಲಿ ವಜ್ರ ದೊರೆತ ಹಾಗೆ ಎಂದೂ ಜ್ಞಾನೇಶ್ವರೀಯಲ್ಲಿ ಪ್ರಯೋಗವಿದೆ.

**ಅಡದರಣೇಜ್, ಅದರಣೇ, ಅದಿರ್ ಕಂಪಿಸು, ನಡುಗು;**
**ಅಡದರ (ನಾ) ಅಡ್ಡತರ ಭಯ, ಭೀತಿ**

ಅದಿರ್ ಕಂಪನೇ (ಶಬ್ದಮಣಿದರ್ಪಣ ಧಾ) ಹಳಗನ್ನಡ ಶಬ್ದ ಅದಿರಪ

ಚಿತ್ತಮಳ್ಕದ ಮನಂ ಬಗೆಗೊಳ್ಳದ ಮೋಹಂ ಎಂಬುದಾಗಿ ಪಂಪಭಾರತದಲ್ಲಿ (೭.೭೯) ಪ್ರಯುಕ್ತವಾಗಿದೆ. ಈ ಧಾತು 'ಅಡದರ', 'ಆದರ' ಆಗಿ ಅದೇ ಅರ್ಥದಲ್ಲಿ ಮರಾಠಿಗೆ ಹೋಗಿದೆ. ಇವು ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು.

*ಪೃಥಿವೀತಳ ಉಲಂಡೋಜ್ ಪಾಂತ ಆಕಾಶ ಅಸೇ ಆಡವರತ (೧.೧೫೭)*

ಭೂಮಿಯ ಕಿತ್ತುಬರಲು ನೋಡುತ್ತಿತ್ತು. ಆಕಾಶವು ನಡುಗುತ್ತಿತ್ತು.

*ಮಾಥಾ ಆದರೀ ಸಿರೋಜ್ ಬಾಗೀಬಳ (೧೩-೭೫೫)*

ಮಸ್ತಕವು ಆದರುವುದು. ಶಿರಸ್ಸು (ಇಲ್ಲಿ ಗೋಣು) ಬಹಳ ಬಾಗುವುದು.

ಇವಲ್ಲದೆ 'ಅಡದರ' ಶಬ್ದವೂ 'ಭೀತಿ' ಅರ್ಥದಲ್ಲಿ ಜ್ಞಾನೇಶ್ವರಿಯಲ್ಲಿ ಯೋಜಿಸಲಾಗಿದೆ. ಇದಕ್ಕೆ ಮೂಲವಾದ 'ಅಡ್ಡತರ' ಶಬ್ದದ ಬಳಕೆ ಹಳಗನ್ನಡದಲ್ಲಿ ನನಗೆ ದೊರೆತಿಲ್ಲ. ನಡುಗನ್ನಡದಲ್ಲಿ, ರಾಜಶೇಖರ ವಿಳಾಸದಲ್ಲಿ ಮಾತ್ರ ಪ್ರಯೋಗವಿದೆ. ಅಲ್ಲಾಗಲೀ ಉತ್ತರ ಕರ್ನಾಟಕದ ಆಡುಮಾತಿನಲ್ಲಾಗಲೀ 'ಅಡಚಣೆ', 'ತೊಂದರೆ' ಎಂಬ ಸ್ಥೂಲವಾದ ಅರ್ಥವಿದೆ.

*ಜೇಯಾಚಾ ಅಡದರು ಸದಾ ವಾಹೇ ಕೃತಾಂತು ಮನೀಜ್ (೧.೧೦೭)*

ಯಾರ ಬಗ್ಗೆ ಯಮನು (ಕೂಡ) ಸದಾ ಮನಸ್ಸಿನಲ್ಲಿ ಭೀತಿಗೊಳ್ಳುತ್ತಾನೆಯೋ

*ಜೈಸಾ ಅಮೃತಾಚಾ ನಿರ್ಝರು ಪ್ರಸವೇ ಜೇಯಾಚಾ ಜಠರು ತೇಯಾ ಕ್ಷುಧೆ ತೃಷೇಚಾ ಅಡವರು ಕಹಿಜ್ ಚಿ ನಾಹಿಜ್ (೨.೩೩೬)*

ಯಾರ ಹೊಟ್ಟೆಯಲ್ಲಿ ಅಮೃತದ ಸೆಲೆಯು ಹುಟ್ಟುತ್ತದೆಯೋ, ಅವನಿಗೆ ಹಸಿವೆ ನೀರಡಿಕೆಗಳ ಬಾಧೆ ಎಂದಿಗೂ ಇರುವುದಿಲ್ಲ, ಅದರಂತೆ–

**ಅಥಂಚ, ಅಡ್ಡಂಚು**

'ಅಡ್ಡಂಚು' ಶಬ್ದದ ಪ್ರಯೋಗ ನಮಗೆ ಹಳಗನ್ನಡದಲ್ಲಾಗಲೀ, ನಡುಗನ್ನಡದಲ್ಲಾಗಲೀ ದೊರೆಯುವುದಿಲ್ಲ. ಇಂತಹದೇ ಒಂದು ಶಬ್ದ 'ಗಡಿಗಂಚು' ಶಬ್ದಮಾತ್ರ ಉತ್ತರ ಕರ್ನಾಟಕದ ಆಡುಮಾತಿನಲ್ಲಿ ಬಳಕೆಯಲ್ಲಿದೆ. ಇದು ಗಡಿಗೆಗಳನ್ನು ಸಾಲಾಗಿಯೂ, ಒಂದರಮೇಲೊಂದು ಸಾಲುಗಳಲ್ಲಿಯೂ ಇಡುವುದಕ್ಕೆ ಬಳಸಲಾಗುವ ಹಲಗೆಗಳ ಒಂದು ಮರದ ಉಪಕರಣ. ಇದು ಮರಾಠಿಯಲ್ಲಿ ಹೋಗಿ 'ಗಡಗಂಜ' ಆಗಿ 'ಆಸ್ತಿಪಾಸ್ತಿ ಬಾಹುಲ್ಯ'ದ ಅರ್ಥದಲ್ಲಿ ಇಂದು ಬಳಸಲಾಗುತ್ತದೆ. ಇದರ ಭ್ರಷ್ಟರೂಪ 'ಘಡವಂಚಿ'. ಮಲಗುವ ಮಂಚದ ಆಕಾರದ ದಪ್ಪ ಹಲಗೆ, ಕಾಲುಗಳ ಮರದ ಈ ಸಾಧನವನ್ನು ಹಳ್ಳಿಗಳಲ್ಲಿ ಧಾನ್ಯದ ಚೀಲಗಳನ್ನು ಪೇರಿಸುವುದಕ್ಕೆ ಬಳಸುತ್ತಾರೆ. ಇದು ಕೂಡ ಅದೇ ಅರ್ಥದಲ್ಲಿ ಅದೇ ಪ್ರಯೋಜನಕ್ಕಾಗಿ ಮರಾಠಿಯಲ್ಲಿ ಬಳಸಲಾಗುತ್ತದೆ.

ಇದನ್ನು ನೋಡಲಾಗಿ 'ಅಡ್ಡಂಚು', ಅಡ್ಡ ಹಲಗೆಯ, ತುಸು ಎತ್ತರದಲ್ಲಿ ಕೂಡ್ರಬಹುದಾದ ಒಂದು ಮರದ ಪೀಠೋಪಕರಣವೆನ್ನಬೇಕು. ಮಿಕ್ಕವರು ನೆಲದ

ಮೇಲೆ ಕುಳಿತರೆ, 'ಅಡ್ಡಂಚಿ'ನ ಮೇಲೆ ಕೂಡ್ರುವವ, ದೊಡ್ಡವ ಮಹತ್ವದ ವ್ಯಕ್ತಿ. ಹೀಗೆ ಸುತ್ತುಬಳಸಿ 'ಅಡ್ಡಂಚ' ಶಬ್ದಕ್ಕೆ ಮಹತ್ವದ ಎಂದು ಅರ್ಥ ಬಂದಿರಬಹುದಾಗಿದೆ. ಜ್ಞಾನೇಶ್ವರಿಯಲ್ಲಿಯ ಇದೊಂದು ಪ್ರಯೋಗ.

*ಐಸೇಜ್ ನಾಮಮಾತ್ರೇಜ್ ಜೇಣೇಜ್ ಧಾತ್ರೇಯಾ ಅಢಂಚ ಕರಣೇಜ್*
*ತೇಯಾಚೇ ರೂಪ ಆಯಿಕ ಹ್ಮಣೇ ಶ್ರೀಕಾಂತು ತೋ (೧೭-೩೩೮)*

> ಹೀಗೆ ನಾಮಬಲದಿಂದ ಮಾತ್ರ ಯಾವುದು ಬ್ರಹ್ಮನನ್ನು ಮಹತ್ವದವನನ್ನಾಗಿ ಮಾಡಿತೋ ಅದರ ರೂಪವನ್ನು ಕೇಳು ಎಂದು ಆ ಶ್ರೀಕಾಂತ (ಕೃಷ್ಣನು) ಹೇಳಿದನು.

ಗುಣಾಢ್ಯ, ಧನಾಢ್ಯ ಶಬ್ದಗಳಲ್ಲಿ ಬರುವ 'ಆಢ್ಯ' ದಿಂದ 'ಆಢ್ಯತೆ' ಭಾವನಾಮವಾಗಿದೆಯಷ್ಟೇ? ಈ 'ಆಢ್ಯತೆ'ಯಿಂದ 'ಅಢಂಚ' ಏಕೆ ವ್ಯುತ್ಪನ್ನವಾಗಿರಬಾರದು, ಎಂದೆನಿಸುವುದು ಸಹಜ. ಮರಾಠಿ ಪಂಡಿತರು ಸಹ ಈ ಸಿದ್ಧತೆಯನ್ನು ಕೊಟ್ಟು ವಿಷಯ ಮುಗಿಸಿದ್ದಾರೆ.[1] ಮೊದಲನೆಯದಾಗಿ ಅವರದೇ ಶಬ್ದಸಿದ್ಧಿ ನಿಯಮದಂತೆ ಶಬ್ದದ ಮೊದಲಿನ ಆ ಮರಾಠಿಯಲ್ಲಿ ಅ ಆಗುವುದಿಲ್ಲ. ಅಂತ್ಯದ ತ, ಚ ಆಗುವುದಿಲ್ಲ. (ನಾನು ಅದನ್ನು ಒಪ್ಪಿಲ್ಲ, ಆ ಮಾತು ಬೇರೆ). ಢ್ಯ, ಢ ಆದುದಕ್ಕೆ ಅವರು ಕೊಡುವ ಉದಾಹರಣೆ ಇದೊಂದೇ!

ಇದೂ ಅಲ್ಲದೆ, ಜ್ಞಾನೇಶ್ವರಿಯಲ್ಲಿಯದೇ 'ಅಢಂಚ' ಶಬ್ದದ ಇನ್ನೊಂದು ಬಳಕೆಯನ್ನು ಪರಾಮರ್ಶಿಸಬೇಕು.

*ಐಸೇಜ್ ಅಢಂಚೇಜ್ ಆಜ್ತು ಚ ರಚೇ ಬಾಹಿರೀಲ ಮಾಘೌತೇಜ್*
*ನ ವಚೇ ಹ್ಮಣೌನಿ ರಾಹಾಣೇ ಆಧಿಜ್ ಏ ದೀಠಿಚೇಜ್ ತೇಥ ಚ ಹೋಯೇ (೬.೨೧೫)*

ಹಠಯೋಗದ ಒಂದು ಮುದ್ರೆಯನ್ನು ವಿವರಿಸುವ ಓವಿ ಇದು.

> ಹೀಗೆ ದೃಷ್ಟಿಯು ತನ್ನ ಅಡ್ಡಂಚಿಯ (ಆಸನದ) ಒಳಗೇ ಉಳಿಯುತ್ತದೆ. ಹೊರಗೆ (ನಾಸಾಗ್ರದಲ್ಲಿ) ಇದ್ದರೆ ಅದು ಒಳಗೆ ಹೋಗುವುದಿಲ್ಲ. ಅಂದರೆ ದೃಷ್ಟಿಯು ಎಲ್ಲಿ ಇರುತ್ತದೆಯೋ ಅಲ್ಲೇ ಉಳಿಯುತ್ತದೆ.

ಇಲ್ಲಿ ದೃಷ್ಟಿಗೆ 'ಆಢ್ಯತೆ' ಎಲ್ಲಿಂದ ಬಂತು?

ಮಹಾಗ್ರಾವಮನುಜಿವಡಿಸಿ *ಕಟ್ಟಿ ಕೊರಲೊಳ್ (ಪಂಪಭಾರತ ೨.೩೨)* ಹೀಗೆ ಅಡಸು ಶಬ್ದದ ಪ್ರಯೋಗ ಹಳಗನ್ನಡದಲ್ಲಿ ಕಾಣಸಿಗುತ್ತದೆ. ಈ ಶಬ್ದ ಅಡಂಚ ರೂಪ ಹೊಂದಿ ಜ್ಞಾನೇಶ್ವರೀಯಲ್ಲಿ ಬಳಸಿರಬಹುದಾಗಿದೆ.

---

1. ಯಾದವ ಕಾಲೀನ ಮರಾಠಿ ಭಾಷಾ ಪುಸ್ತಕ ಪು. ೧೮೪

**-ಅಣೇ-ಅಣಾಕ, -ಅಣೆ, -ಅಣಗೆ**

ಹಳಗನ್ನಡದಲ್ಲಿ -ಅಣೆ ಭಾವನಾಮ ಸಾಧಿಸುವ ಪ್ರತ್ಯಯವಾಗಿದೆ. ಇದಕ್ಕೆ ಉದಾಹರಣೆಗಳು ಇಂತು;

*ಕಳಕಂಠಿಯ ಬಗ್ಗಣೆಯೆವುವೆಂಬ (ರನ್ನನ ಅಜಿತ ತೀರ್ಥಂಕರ ಪುರಾಣ ೬.೨೬)*
*ಆಗಳಾ ಬಲಿ ಕೀಲಣೆವೆತ್ತು ಪುಯ್ಯಲ್ಚೆ (ನೇಮಿನಾಥ ಪುರಾಣಂ ೫.೯ವ)*
*ಹರಿಹರ ಹಿರಣ್ಯಗರ್ಭರಸುರುವಣೆಯಿಂ ಗೆಲ್ದ ಕಾಮನಂ*
*(ಪಂಪರಾಮಾಯಣ ೧.೨೭)*
*ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚುವಣೆಗೆಯಂಕರಾಜಿರ್*
*(ಪಂಪಭಾರತ ೧೨-೭೬ ವ)*

ಜ್ಞಾನೇಶ್ವರಿಯಲ್ಲಿಯ ಕೆಲವು ಪ್ರಯೋಗಗಳನ್ನು ಪರಿಶೀಲಿಸಬೇಕು.

*ಹೇ ಮಹಾಭೂತಾಂಚೀ ಘಡೀ ಆಟಣೀ ದೇಖಾಜ್ (೬-೨೯೦)*

ಇದು (ಪಂಚ) ಮಹಾಭೂತಗಳ ನಾಶವೆಂಬುದನ್ನು ಕಾಣು.

ಹಳಗನ್ನಡದ ಅಜ್ ಧಾತುವಿನಿಂದಾದ ಅಟ್ಟಿಸುವುದು ಶಬ್ದದ ಮರಾಠಿ ರೂಪ ಆಟಣೀ.

*ನ ಕರಿತು ಘೇಣೇಜ್ ನಿಗಾಲಾ ತೋ (೧೬-೧೬೩)*

(ಅದನ್ನು) ತೆಗೆದುಕೊಳ್ಳುವುದನ್ನು ಮಾಡದೆಯೆ ಅವನು (ವಸಂತನು) ಹೊರಟನು.

*ಹೇಜ್ ಶವ ಹೋಊನಿ ಜೀಣೇಜ್ ಉಪಜೋ ಉಪಜೋ ಮರಣೇಜ್ (೧೬.೧೭೮)*

ಇದು (ಶರೀರವು) ಶವವಾಗಿ ಜೀವಿಸುವುದು, ಹುಟ್ಟಿಹುಟ್ಟಿ ಸಾಯುವುದು.

*ಕ್ಷತ್ರಿಯಾ ಪಳೌನಿ ಜೀಣೇಜ್ (೧೬.೧೬೬)* ಕ್ಷತ್ರಿಯನು ಓಡಿಹೋಗಿ ಜೀವಿಸುವದು.

ಹೀಗೆ ಆಟ, ಘೇ, ಜೀ, ಮರ ಧಾತುಗಳಿಗೆ -ಅಣೀ - ಅಣೇ' ಪ್ರತ್ಯಯ ಹತ್ತಿ ಭಾವನಾಮಗಳಾಗಿವೆ.

ಈ ಅಣೇ 'ಅಣೀ' ಪ್ರತ್ಯಯ ಹಳಗನ್ನಡದಿಂದ ಮರಾಠಿಗೆ ಸೇರಿದವೇ ಅಥವಾ ಸಂಸ್ಕೃತದ 'ನಮ್' ದಿಂದ (ಉದಾಹರಣೆಗೆ ಗ್ರಹಣಂ, ಜೀವನಂ, ಮರಣಂ) ಹೋದುವೇ ಎಂಬುದು ಚಿಂತನೀಯವಾಗಿದೆ. ಹಿಂದಿಯಲ್ಲಿಯ ಆನಾ, ಜಾನಾ, ಕರನಾ ಇವುಗಳನ್ನಾಗಲೀ ಗುಜರಾಥಿಯಲ್ಲಿಯ ಆವಾನು, ಜಾವಾನು, ಕರವಾನು ರೂಪಗಳನ್ನಾಗಲೀ ಹೋಲಿಸಿದರೆ, ಮರಾಠಿಯಲ್ಲಿಯ 'ಅಣೀ' ಪ್ರತ್ಯಯವು ಮೊದಲ ನೋಟಕ್ಕೆ ಸಂಸ್ಕೃತಜನ್ಯವೆಂದು ಎನಿಸಬಹುದಾಗಿದೆ. ಆದರೆ ಇದು ಕನ್ನಡದಿಂದಲೇ ಹೋದುದೆನ್ನುವುದಕ್ಕೆ ನಾನು ಕೊಡಬಹುದಾದ ಬಲವಾದ ಕಾರಣಗಳಿವು.

'ಅಣೆ' ಪ್ರತ್ಯಯ ಹತ್ತಿ ಸಿದ್ಧವಾದ ಭಾವನಾಮಗಳಿಗೆ ಮುಂದೆ - 'ಇಗೆ' ಪ್ರತ್ಯಯ ತಗುಲಿ ತದ್ಧಿತಗಳಾಗುವುದು ಕನ್ನಡದಲ್ಲಿ ಸಾಮಾನ್ಯ. ಉದಾಹರಣೆಗೆ

ಉರವಣಿಯಿಂದ ಉರವಣಿಗೆ; ಮೆಚ್ಚುದಿಂದ ಮೆಚ್ಚುವಣಿಗೆ; ಮೆಚಿಯಿಂದ ಮೆಚಿವಣಿಗೆ; ಬರೆಯಿಂದ ಬರೆವಣಿಗೆ (ಇವುಗಳಲ್ಲಿ ಭಾವನಾಮಗಳಾಗಿರಬಹುದಾದ ಮೆಚ್ಚುವಣೆ, ಮೆಚಿವಣೆ, ಬರೆವಣಿಗಳು ಲೋಪ ಹೊಂದಿರುವುದನ್ನು ಅವಶ್ಯವಾಗಿ ಗಮನಿಸಬೇಕು). ಇದೇ ಮರಾಠಿಯಲ್ಲಿ 'ಅಣಿಗೆ' ಗೆ ಬದಲಾಗಿ 'ಅಣೂಕ' ಆಗಿದೆ. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳು.

*ಮನಾಚಿಯಾ ಆರಾಣುಕಾ (೨-೮೦) ಮನಸ್ಸಿನ ಅಪೇಕ್ಷೆ*

ಪಳಗನ್ನಡದ ಧಾತು 'ಆರಯ್' ದಿಂದಾದ 'ಆರಾಣುಕ' ರೂಪ ಲಕ್ಷಣೀಯವಾಗಿದೆ.

*ಉಸಂತಿತಾಜ್ ರಾತಿದಿವಸೇಜ್ ನಾರಾಣುಕ ಜೇಜ್ (೧೬.೯೧)*

ಹಗಲುರಾತ್ರಿ ಆಚರಿಸುವಾಗ ಯಾವ ಅಪೇಕ್ಷೆಯೂ ಇಲ್ಲದವನು.

ನ+ಆರಾಣುಕ = ನಾರಾಣುಕದ ಪ್ರಯೋಗ ಇಲ್ಲಿದೆ.

*ಕಮಲಕಂದಾ ಆಣಿ ದರ್ದುರೀಜ್ ನಾಂದಣೂಕ ತರಿ ಯೇಕಾಚಿ ಘರೀಜ್ (೯-೫೭)*

ಕಮಲದ ಕಂದ ಹಾಗೂ ಕಪ್ಪೆ (ಇವುಗಳದು) ಒಂದೇ ಮನೆಯಲ್ಲಿ ಸಹವಾಸ.

ಈ 'ಉಕ' ತದ್ಧಿತ ಪ್ರತ್ಯಯಕ್ಕೆ ಸಂಸ್ಕೃತದಲ್ಲಾಗಲೀ, ಇತರ ಅರ್ವಾಚೀನ ಭಾರತೀಯ ಆರ್ಯ ಭಾಷೆಗಳಲ್ಲಾಗಲೀ ಯಾವ ಆಧಾರವೂ ಇಲ್ಲ, ಪ್ರಯೋಜನವೂ ಇಲ್ಲ.

ಬೆಳದಿಂಗಳು ಅರ್ಥದಲ್ಲಿ ಜ್ಞಾನೇಶ್ವರಿಯಲ್ಲಿ ಬಳಸಲಾದ ಅತೀ ಹತ್ತಿರದ ಶಬ್ದಗಳು 'ಚಾಂದವಣ' ಹಾಗೂ 'ಚಾಂದಿಣೀ'

*ಸರ್ವಾಜ್ ಕಳಿಜ್ ಸಂಡಿಲೇಜ್ ಜೈಸೇಜ್ ಚಾಂದವಣ ಉರಲೇ ಅಜ್‌ವಸೇ (೧೫-೪೬೬)*

ಎಲ್ಲ ಕಲೆಗಳನ್ನು ತ್ಯಜಿಸಿದ ಬಳಿಕ ಉಳಿದದ್ದು ಅಮಾವಾಸ್ಯೆಯ ಬೆಳದಿಂಗಳು.

*ಆಗಿ ಆಣಿ ಚಾಂದಿಣೀಜ್ ಸರಿಸೇಚಿ ಮಾನೀ (೪.೧೯೮)*

ಬೆಂಕಿ ಹಾಗೂ ಬೆಳದಿಂಗಳನ್ನು ಸರಿಸಮಾನವೆಂದೇ ಭಾವಿಸುತ್ತಾನೆ.

ಹೀಗಿದ್ದ ಪಕ್ಷದಲ್ಲಿ ಭಾವನಾಮಕಾರಕ ಪ್ರತ್ಯಯ - 'ವಣ' 'ಅಣೀ' ಆಗಿರಬಹುದೇ? ಇಂತಹವೇ ಇನ್ನೆರಡು ಉದಾಹರಣೆಗಳು.

*ಅಗ್ರವಣಾದಿಂದ ಅಗ್ರವಣ (೧೫.೧೫೭)*
*ಗಾಭೇವಣಾದಿಂದ ಗಾಭೇವನ (೧೦.೬೯)*

ಈ ಮುನ್ನವೇ ಚರ್ಚಿಸಿದಂತೆ ಕನ್ನಡದ '-ತನ' ದ ಅರ್ಥದಲ್ಲಿ ಮರಾಠಿ '-ಪಣ' ಪ್ರತ್ಯಯವು ಭಾವವಾಚಕ ನಾಮಗಳನ್ನು ಸಾಧಿಸುವುದಷ್ಟೇ? ಪಣ > ವಣ > ಅಣ ಈ ಬೆಳವಣಿಗೆಯಾಗಲೀ ಕನ್ನಡದ ತನಕ > ಅನಕ ಇಂತಹ ಬೆಳವಣಿಗೆಯಾಗಲೀ ಆಕಸ್ಮಿಕವಾಗಿರಲಾರವು.

ಕನ್ನಡದ 'ತನ' ಪ್ರತ್ಯಯವು 'ತ್ತಣ' ವಾಗಿ ಪುಷ್ಪದಂತನ ಅಪಭ್ರಂಶ ಭಾಷೆಯ ಕೃತಿಗಳಲ್ಲಿ ಬಳಿಸಲಾದುದನ್ನೂ ಹಿಂದೆ ವಿವರಿಸಿದ್ದೇನೆ. ಅವನ 'ಜಸಹರ ಚರಿಉ' ದಲ್ಲಿಯ ಒಂದು ವೈಶಿಷ್ಟ್ಯಪೂರ್ಣ ಶಬ್ದ 'ಕೊಡ್ಡಾವಣ'.

*ಆಕೆ ನಾಂ ಕೊಡಗೂಸೆನಪ್ಪೆನದು ಕಾರಣದಿಂ ಎಂಮ ತಾಯಲ್ಲಿಗೆ ಪೋಗಿ- (ಪಂಪರಾಮಾಯಣ ೮-೬೧ವ)* ಇಂತಹ ಸಂದರ್ಭಗಳಲ್ಲಿ ಬರುವ 'ಕೊಡ' ಈ ಹಳಗನ್ನಡ ಶಬ್ದದ ಅರ್ಥ 'ಎಳೆವಯಸ್ಸಿನ', 'ಎಳೆಯ'. ಇದು ಅಪಭ್ರಂಶದಲ್ಲೂ ಮರಾಠಿಯಲ್ಲೂ 'ಕೋಡ್ಡ' 'ಕೋಡ' ಆಗಿ 'ಲಲ್ಲೆ, ಮುದ್ದು' ಅರ್ಥದಲ್ಲಿ ಹೋಗಿದೆ. ಜಸಹರಚರಿಉದಲ್ಲಿ ವೃದ್ಧತನವು ವುಡ್ಡತ್ತಣ, ರೋಗಿತನವು ರೋಯತ್ತಣ ಅಚಲತನವು ಅಚಲತ್ತಣವಾಗಿವೆ. ಆದರೆ ಕೊಡತನವು ಮಾತ್ರ ಕೋಡ್ಡಾವಣವಾಗಿದೆ. ಅಂದರೆ ಇಲ್ಲೂ '-ತನ'ವು '-ಅಣ' ವಾಗಿದೆ.

**ಆದಳಪಣ, ಅತ್ತಳಗ, ವ್ಯಾಕುಲತೆ**

ಜ್ಞಾನೇಶ್ವರಿಯಲ್ಲಿ ಒಮ್ಮೆಯೇ ಬರುವ 'ಆದಳಪಣ'ದ (ಅದಕ್ಕೆ ವ್ಯಾಖ್ಯಾನಕಾರರು ಅಸಮರ್ಥತೆಯೆಂದು ಅರ್ಥ ಹಚ್ಚಿದ್ದಾರೆ) ಮೂಲ 'ಆದಳ' ವೆಂಬುದು ಸ್ಪಷ್ಟ. ಹಳಗನ್ನಡದಲ್ಲಿ ಇದ್ದಿರಬಹುದಾದ 'ಅತ್ತಳ' ಶಬ್ದದ ರೂಪಕ್ಕೆ, ಅರ್ಥಕ್ಕೆ ತೀರ ಹತ್ತಿರವಾದುದು. ಹತ್ತಿರವಷ್ಟೇ ಏಕೆ, ವ್ಯಾಕುಲವೆಂದು ಅರ್ಥ ಹಚ್ಚಿದರೆ ನೇರ ಎರವಲು ಎಂದೇ ಹೇಳಬಹುದು. (ಪಂಪಭಾರತದಲ್ಲಿ ಬರುವ ನಾಲ್ಕು ಸಂದರ್ಭಗಳಲ್ಲಿ ಅತ್ತಳಗಕ್ಕೆ ನಾಲ್ಕು ಅರ್ಥಗಳನ್ನು ಹಚ್ಚಬೇಕಾಗಿದೆ[2]!) 'ಅತ್ತಳ' ವಿಶೇಷಣದಿಂದ ಸಿದ್ಧವಾದ ಭಾವನಾಮ 'ಅತ್ತಳಗ'. ಆದಿಪುರಾಣದಲ್ಲಿಯ ಈ ಪ್ರಯೋಗ ಗಮನಿಸಬೇಕು.

*ಒದವಿದ ಬೇಟದತ್ತಳಗದೊಳ್ (೮.೧೦)*

ಇನ್ನು ಜ್ಞಾನೇಶ್ವರಿಯಲ್ಲಿಯ ಈ ಪ್ರಯೋಗ

*ಹ್ಮಣೌನಿ ಏಕ ಚಿ ಸಂಚಲೇಜ್ ಆಹ್ಮಿಜ್ ಚತುರ್ಧಾ ಕೇಲೇಜ್*
*ಜೇಜ್ ಆದಳಪಣ ದೇಖಿಲೇಜ್ ತೂಝಿಯೇ ಪ್ರಜ್ಞೇ (೧೩.೯೪೪)*

> ಅಂತೆಯೇ, ಏಕೈಕವಾದ (ಪರಬ್ರಹ್ಮನನ್ನು) ನಾವು ನಾಲ್ಕು ಭಾಗಗಳಲ್ಲಿ ಮಾಡಿದೆವು. ಆದಕ್ಕೆ ಕಾರಣವೆಂದರೆ ನಿನ್ನ ಪ್ರಜ್ಞೆಯಲ್ಲಿ ಕಂಡ ವ್ಯಾಕುಲತೆ.

---

2. ಪಂಪ ಭಾರತ ದೀಪಿಕೆ ಪು. ೧೬೨, ೧೭೩, ೨೪೭, ೪೧೦, ಡಿ.ಎಲ್. ನರಸಿಂಹಾಚಾರ್

**-ಆರ, -ಅರ, -ಆರು, ಆಗು**

‘ಆಗು’ ಅರ್ಥದಲ್ಲಿಯ, ಪೂರ್ವಹಳಗನ್ನಡದಲ್ಲಿ ಇರಬಹುದಾದ ‘ಅರು’ ‘ಆರು’ ಧಾತುವಿನಿಂದ ‘ಅಲ್ಲಿ’, ‘ಅತ್ತ’, ‘ಅದು’ ರೂಪಗಳು ಹುಟ್ಟಿರಬಹುದೆಂದು ಬೇರೆಡೆ ಚರ್ಚಿಸಿದ್ದೇನೆ. ಈ ಧಾತುವಿನಿಂದಾದ ‘ಆರ’ ರೂಪವೊಂದೇ (ಮಾಡಲಾರ, ಬಿಡಲಾರ, ಇತ್ಯಾದಿ ಉದಾಹರಣೆಗಳಲ್ಲಿ ಸಲ್ಲುವಂತೆ) ಗುರುತಿಸಲಾಗಿದೆ. ಆದರೂ ತೊಡರ್, ಕೊನರ್, ತಳಿರ್, ಚಿಗುರ್ ಇತ್ಯಾದಿ ಧಾತುಗಳಲ್ಲಿಯ ‘ಆಗು’ ಅರ್ಥದಲ್ಲಿಯ ‘ಅರ್’ (ರ್) ಪ್ರತ್ಯಯ ಅಷ್ಟೇನೂ ಅಸ್ಪಷ್ಟವಾಗಿಲ್ಲ. ಅದು ಆರು, ಅರು ಧಾತುವಿನ ರೂಪಭೇದವೇ.

ಈ ‘ಆರ್ (ಅರ್) ಪ್ರತ್ಯಯ ಮರಾಠಿಯಲ್ಲಿ, ಜ್ಞಾನೇಶ್ವರೀಯಲ್ಲೂ ಲೀಳಾ ಚರಿತ್ರ ಮೊದಲಾದ ಮಹಾನುಭಾವ ವಾಙ್ಮಯದಲ್ಲೂ ಕಾಣಿಸಿಕೊಂಡಿದೆ. ಅದರ ಕೆಲವು ರೂಪಗಳು ಹೀಗಿವೆ.

**ಆದರಿಲೇ**

‘ಆರಂಭಿಸು’, ‘ಮೊದಲು ಮಾಡು’ ಎನ್ನುವ ಅರ್ಥದಲ್ಲಿಯ ಈ ಶಬ್ದದ ಸಿದ್ಧಿ ‘ಆದಿ+ಅರು’ ಇಂತು. ಶಬ್ದಶಃ ಅರ್ಥ ಮೊದಲ್+ಆಗು ಎಂದಾಗಬೇಕಿತ್ತು. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳು.

*ಮಗ ಸರೋಷ ಬೋಲೋಂ ಆದರಿಲೇಂ (೨.೮೮)*

ಬಳಿಕ ರೋಷದಿಂದ ಹೇಳಲಾರಂಭಿಸಿದನು.

*ತಿಯೇಂ ವಾಕ್ಯೇಂ ಹೃಷಿಕೇಶೇಂ ಬೋಲೋಂ ಆದರಿಲಿಂ (೨-೯೦)*

ಆ ವಾಕ್ಯ (ಮಾತು) ಗಳನ್ನು ಹೃಷಿಕೇಶನು ಹೇಳಲಾರಂಭಿಸಿದನು.

*ಪರಿ ಆದರಿಲೇಂ ಕರ್ಮ ದೈವೇಂ ಪರ್ಥೀಂ ಸಮಾಪ್ತಿತೇ ನ ಪವೇ (೨.೨೬೮)*

ಆದರೆ ಆರಂಭಿಸಿದ ಕರ್ಮವು ದೈವವಶಾತ್ ಕೊನೆಗಾಣದಿದ್ದರೆ

ಲೀಳಾಚರಿತ್ರದಲ್ಲಿಯ ಉದಾಹರಣೆಗಳು :

*ಗಾಂವೀ ಏಕೀ ಸಂನ್ಯಾಸೀ ದೋಘೀಂ ಉಧಾಣೇಂ ಕರೂ ಆದರೀಲೀ*

ಒಂದೂರಿನಲ್ಲಿ ಸನ್ಯಾಸಿಗಳಿಬ್ಬರು ವಾದವಿವಾದ ಮಾಡಲಾರಂಬಿಸಿದರು. (ಏಕಾಕ ೫೧)

*ಆವಾರಾ ಘೇಊನಿ ಗೇಲೀ : ಪೂಜಾ ಕರೂಂ ಆದರೀಲೀ (ಏಕಾಕ ೬೦)*

ಆವಾರಕ್ಕೆ ಕೊಂಡೊಯ್ದಳು : ಪೂಜೆ ಮಾಡಲು ಆರಂಭಿಸಿದಳು.

**ಪುಢಾರ**

‘ಪುಢೇ + ಆರು (ಅರು) (‘ಮುಂದೆ + ಆಗು’) ಶಬ್ದದ ಪ್ರಯೋಗಗಳು ಹೀಗೆ. ಜ್ಞಾನೇಶ್ವರಿಯಲ್ಲಿ.

*ಹರಿ ಬೋಲಿಲೈಲ ತೇ ಪುಢಾರೀ ಕಥಾ ಆಹೇ (೫-೧೬೮)*

ಶ್ರೀಕೃಷ್ಣನು ಹೇಳುವನು - ಆ ಕತೆ ಮುಂದೆ ಆಗುವದು (ಮುಂದಿನ ಅಧ್ಯಾಯದಲ್ಲಿ)

*ಹಿಂಸಾ ವಿಷಯ ಪುಢಾರಿಜ್ (೧೫-೧೭೧)* ಹಿಂಸೆ ವಿಷಯೋಪಭೋಗಗಳು ಮಹತ್ತ್ವದವು.

*ಹೇಜ್ ಪುಢಾರಲಾಸಿ ತೇಜ್ ದೇಇಜ್ ಲಾಹಾಣೇಜ್ ಮಾರ್ಘೀಜ್ (೧೮.೨೯೭)*

ಇದನ್ನು ಮುಂದೆ ಮಾಡಿದ್ದನ್ನು ನನ್ನ ಲಾಭಕ್ಕಾಗಿ ಕೊಡು.

*ತೇ ಸವಿಸ್ತರ ಪುಢಾರೀ ಕಥಾ (೧.೨೭೩ ಪಾಠಭೇದ)*

ಮುಂದೆ ಆಗುವ ಆ ಸವಿಸ್ತಾರ ಕತೆಯನ್ನು–

**ಮಾಝಾರ**

ಮಾಝಿ + ಆರ (ಮಧ್ಯದಲ್ಲಿ + ಆಗು) ಶಬ್ದದ ಪ್ರಯೋಗಗಳು

*ಜೇಜ್ ತುಆಜ್ ಏಥ ಆದರಿಲೇಜ್ ಮಾಝಾರಿ ಚ (೨.೯೧)*

ನೀನು ಆವುದನ್ನು ಇಲ್ಲಿ ನಡುವೆಯೇ ಆರಂಭಿಸಿದೆಯೋ - (ಮಧ್ಯದಲ್ಲಿ ಆಗಿಯೇ)

*ಆಶೇಷಾಜ್ ಹಿಜ್ ರುದ್ರಗಣಾಜ್ ಮಾಝಾರಿ (೧೦.೨೦೪)*

ಸಮಸ್ತ ರುದ್ರಗಳ ಮಧ್ಯದಲ್ಲೆ ಇರುವ–

*ಥಡಿಯೇ ಮಾಝಾರೀ ಸರಿಸಾ (೧೧.೬೭೯)*

ದಡದಲ್ಲೂ ನಡುವಿನಲ್ಲೂ ಸರಿಸಮಾನನು.

**ಅವಸರ ಆವಸರ ಸಮಯ, ಅವಸರ, ಗಡಿಬಿಡಿ**

'ಸಮಯ' 'ಪ್ರಸಂಗ' ಅರ್ಥದಲ್ಲಿಯ 'ಅವಸರ' ಶಬ್ದ ಮೂಲತಃ ಸಂಸ್ಕೃತದ್ದು. ಆದರೆ ಜ್ಞಾನೇಶ್ವರೀ ಕಾಲದ ಮರಾಠಿಯಲ್ಲಾಗಲೀ ಅಥವಾ ತದನಂತರವಾಗಲೀ ಅದು ಆ ಅರ್ಥದಲ್ಲಿ ಬಳಕೆಯಲ್ಲಿರಲಿಲ್ಲವೆಂದೇ ಹೇಳಬಹುದು. ಜ್ಞಾನೇಶ್ವರಿಯಲ್ಲಿ ಒಮ್ಮೆ ಮಾತ್ರ ಪ್ರಯುಕ್ತವಾದ 'ಅವಸರ' (ಅದೂ 'ಅವಸ್ವರ' ರೂಪದಲ್ಲಿ ೬.೧೫೨) ಲೀಳಾಚರಿತ್ರದಲ್ಲಿ ಮಾತ್ರ 'ಅವಸ್ವರ', 'ಅವಸರು' ಮೊದಲಾದ ರೂಪಗಳಲ್ಲೂ ಸಾಕಷ್ಟು ಕಾಣಿಸಿಕೊಂಡಿದೆ. ಆದರೆ ಸ್ವತಂತ್ರವಾಗಿ ಅಪರೂಪ. 'ಪೂಜಾವಸ್ವರ' 'ಪೂಜಾವಸರ' ಹೀಗೆ ಸಮಸ್ತರೂಪದಲ್ಲಿ ಹೆಚ್ಚು.

ಈ ಸಂದರ್ಭದಲ್ಲಿ ಒಂದು ಶಬ್ದ ವಿಚಾರ. 'ಸಮಯ'ದ ಅರ್ಥದಲ್ಲಿ 'ಪೊಟ್ತು', 'ಪೊತ್ತು', 'ಹೊತ್ತು' ಶಬ್ದಗಳು ಹಳಗನ್ನಡದಿಂದಲೂ ಬಳಕೆಯಲ್ಲಿವೆಯಷ್ಟೇ? *ಇಂತೀ ಮಾಟ್ಕೆಯೊಳೆನಿಸು ಪೊಟ್ತು ನುಡಿವುತ್ತಿರಿಂ (ಕವಿರಾಜಮಾರ್ಗ ೩.೧೩೩)* ಇದು ಹಳಗನ್ನಡ ಪ್ರಯೋಗದ ಉದಾಹರಣೆ. ಆದರೆ ಗ್ರಂಥಸ್ಥವಾಗಿರದ ಒಂದು ಅರ್ಥ 'ತಡ' ವೆಂಬುದು. 'ತಡವಾಯಿತು' ಎನ್ನುವುದಕ್ಕೆ 'ಹೊತ್ತಾಯಿತು' ಎಂದು ಈಗಲೂ ಅನ್ನುತ್ತೇವೆ.

ಈ 'ತಡ' ಅರ್ಥ ಮರಾಠಿಯಲ್ಲಿ 'ಅವಸರ'ಕ್ಕೂ ಬಂದಿದೆ. ಆದರೆ 'ಅವಸರ'ದ ರೂಪದಲ್ಲಲ್ಲ. ಅವಸರ > ಉಸರ > ಉಶೀರ ಹೀಗೆ ಸಿದ್ಧವಾದ

'ಉಸೀರ' ರೂಪದಲ್ಲಿ. ಹೊತ್ತು = ಅವಸರ ಮತ್ತು ಹೊತ್ತು = ತಡ ಇವನ್ನರಿಯದ ತುಳಮುಳಿಯುವರು 'ಉಸೀರ' ಶಬ್ದದ ವ್ಯುತ್ಪತ್ತಿಯನ್ನೇ ಕೈ ಬಿಟ್ಟಿದ್ದಾರೆ! ಲೀಳಾಚರಿತ್ರದಲ್ಲಿಯ ಪ್ರಯೋಗ ನೋಡಿರಿ.

*ಚೌ ಘರಾಜ್‌ಸಿ ಭಿಕ್ಷೇಸಿ ಗೇಲಿವಿ; ತಜ್‌ವ ಉಸೀರು ಜಾಲಾ (ಪೂ. ೧೯೬)*

ನಾಲ್ಕು ಮನೆಗೆ ಬಿಕ್ಷೆಗೆ ಹೋಗಿದ್ದೆ. ಆಗ (ಅದಕ್ಕೆ) ತಡವಾಯಿತು.

ಇನ್ನೊಂದು ಮೋಜು. 'ಹೊತ್ತು' ಶಬ್ದಕ್ಕೆ ನಾವು 'ತಡ' ವೆಂದು ಅರ್ಥ ಹಚ್ಚುವುದಾದರೆ 'ಅವಸರ'ಕ್ಕೆ 'ಗಡಿಬಿಡಿ' ಎಂದೇಕೆ ಅರ್ಥೈಸಬೇಕು? (ಈ 'ಅವಸರ'ವು ಸಂಸ್ಕೃತ ಮೂಲವಲ್ಲವೆಂದು ಕಿಟೆಲ್ ಹೇಳುತ್ತಾರೆ. ಇದು ಅರ್ಥದ ಬೆಳವಣಿಗೆ ಇರಬಹುದೇ ವಿನಾ ಸ್ವತಂತ್ರ ದೇಸೀ ಶಬ್ದವಿರಲಾರದು) ಈ 'ಅವಸರ' ಶಬ್ದವೂ ಲೀಳಾ ಚರಿತ್ರದಲ್ಲಿ ಕಂಡುಬರುತ್ತದೆ.

*'ಬಟಿಕಾ: ಬಾಇಸೇಜ್ ಮ್ಹಣತೇಜ್ ಅಸತಿ: ತೇ ಕಾ ಕೀಜೇನಾ:'*
*'ನಾ ಜೀ: ಗಾವೀಜ್ ಅವಸರೀ ಕರೀತಿ' (ಪೂರ್ವಾರ್ಧ ೧೧)*

'ಮಗುವೇ: ನಾಗೂಬಾಯಿ ಹೇಳುತ್ತಾಳೆ: ಅದನ್ನೇಕೆ (ಹಾಗೇಕೆ) ಮಾಡುವುದಿಲ್ಲ?'
'ಇಲ್ಲ ಸ್ವಾಮಿ: ಊರಿನಲ್ಲಿ ಅವಸರ (ಗಡಿಬಿಡಿ) ಮಾಡುತ್ತಾರೆ.'

**ಅಸಕಾ-ಅಸುಕರಂ ಸಮಸ್ತ-ಸರ್ವ.**

ಇದೊಂದು ವೈಶಿಷ್ಟ್ಯಪೂರ್ಣವಾದ ಶಬ್ದವಾಗಿದೆ.

*ಆ ಸೋಮವಂಶಜರ್ ಪಲರ್ ಅಸುಕರಂ ಬೆರಸು ನೆಗಟ್ಟಿ ಜಸದಿಂ ಜಗಮಂ ಬಾಸಣಿಸಿ (ಪಂಪ ಭಾರತ ೧-೬೨)* ಈ ಸಂದರ್ಭದಲ್ಲಿ ಡಿ.ಎಲ್. ನರಸಿಂಹಾಚಾರ್ಯರು 'ಅಸುಕರಂ'ಗೆ 'ತೀವ್ರತ್ವ'ವೆಂದು ಅರ್ಥ ಹೇಳಿದ್ದಾರೆ. 'ಅತಿಶಯ'ವೆಂಬರ್ಥವನ್ನು ಪಂಪಭಾರತ ನಿಘಂಟು ಕೊಡುತ್ತದೆ. ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿ ಮಾತ್ರ 'ಅಷ್ಟೂ' 'ಎಲ್ಲವೂ' ಎಂಬರ್ಥದಲ್ಲಿ 'ಅಸಕೀ' ಶಬ್ದವನ್ನು ಬಳಸಲಾಗುತ್ತದೆ. ಒಂದು ಬಟ್ಟು ಮುಂದೆ ಮಾಡಿದರೆ ಅಸಕೀ ಕೈ ನುಂಗೋವ್ಹಕಿ ಅಂವಾ ಹೀಗೆ ಅವರ ಪ್ರಚಲಿತ ಪ್ರಯೋಗ. ಮರಾಠಿ ಗ್ರಾಂಥಿಕ ಸಾಹಿತ್ಯದಲ್ಲಾಗಲೀ (ಜ್ಞಾನೇಶ್ವರಿಯನ್ನುಳಿದು) ಆಡುಮಾತಿನಲ್ಲಾಗಲೀ ಈ ಶಬ್ದದ ಪ್ರಯೋಗ ದೊರೆಯುವುದಿಲ್ಲ. ಇದರಿಂದಾಗಿ ಈ ಶಬ್ದ ಮರಾಠಿಯಿಂದ ಕನ್ನಡಕ್ಕೆ ಬಂದಿರಬಹುದೆಂದೂ ಹೇಳಲಾಗುವುದಿಲ್ಲ. ಕನ್ನಡದಿಂದ ಜ್ಞಾನೇಶ್ವರೀಗೆ ಹೋಗಿರಬಹುದಾದ ಸಾಧ್ಯತೆಯೇ ಹೆಚ್ಚು.

*ತೋ ತೂಜ್ ಪರಬ್ರಹ್ಮ ಚ ಅಸಕೇಜ್ (೧೦-೯೭ ಪಾಠಭೇದ)* ಆ ನೀನು ಸಂಪೂರ್ಣ ಪರಬ್ರಹ್ಮ.
*ಏಕಾ ಕಣಾಲಾಗಿ ಉಂವಿರು ಅಸಿಕಾ ಉಸವೇ ಡೋಂಗರು (೧೮-೬೦೪)*

ಒಂದು ಕಾಳಿಗಾಗಿ ಇಲಿಯು ಇಡೀ ಗುಡ್ಡವನ್ನೇ ತೋಡಿದಂತೆ-

*ಏಯಾ ಶರೀರಾಚೇನಿ ಮಿಷೇಂ ಕರ್ಮಚಿ ಲಾಗಲೇಂ ಆಸಿಕೇಂ (೧೮-೨೨೪)*

ಈ ಶರೀರದ (ಪೋಷಣೆಯ) ನಿಮಿತ್ತವಾಗಿ ಕರ್ಮವೇ ಇಡಿಯಾಗಿ ಆವರಿಸಿಕೊಂಡಂತೆ.

*ತೈಸೇ ಕರ್ಮದ್ವೇಷೇಂ ಆಸಿಕೇಂ ಕರ್ಮಚಿ ಸಾಂಡೀ (೧೮-೧೭೬)*

ಹಾಗೆ ಕರ್ಮದ್ವೇಷದಿಂದ ಸಮಸ್ತ ಕರ್ಮವನ್ನೂ ಬಿಟ್ಟು ಕೊಡುತ್ತಾನೆ.

ಕೊನೆಯ ಉದಾಹರಣೆಯಲ್ಲಿಯ 'ಆಸಿಕೇಂ' ಶಬ್ದಕ್ಕೆ 'ಆಶೇಷೇಂ' (ಆಶೇಷ) ಎಂಬ ಪಾಠಭೇದವಿದೆ. ಆದರೆ ಅಶೇಷ = ಆಸಿಕೆ ಎಂದು ಹೇಳಲಾಗುವುದಿಲ್ಲ. 'ಪ್ರತಿಕಾರರು ಕ್ಷ ಬರೆಯುವ ಬದಲು ಖ ಬರೆಯುವ ಪರಿಪಾಠವಿಟ್ಟುಕೊಂಡಿದ್ದರು'' ಎಂದಷ್ಟೇ ತುಳಪುಳೆ ಹೇಳುತ್ತಾರೆ.[3]

**ಆಂಖಲೇಖ-ಅಂಕಿಲೆಕ್ಕ :**

ಕನ್ನಡದಲ್ಲಿ ಬರುವ ಅಂಕಿ, ಲೆಕ್ಕ ಇವೆರಡೂ ಶಬ್ದಗಳು ಸಂಸ್ಕೃತದಿಂದ ಬಂದವು. ಹಳಗನ್ನಡದಲ್ಲಿ ಕಾಣಿಸಿಕೊಳ್ಳುವುದಿಲ್ಲ. ಶಬ್ದಮಣಿದರ್ಪಣದಲ್ಲಿ ಮಾತ್ರ ಸೂತ್ರ ೩೧೨ ಹಾಗೂ ಸೂತ್ರ ೧೧೦ ರಲ್ಲಿ ಈ ತತ್ಸಮಗಳ ಉಲ್ಲೇಖ ಬರುತ್ತದೆ. ಇವೆರಡೂ ಶಬ್ದಗಳ ಪ್ರಯೋಗ ಹಳಗನ್ನಡದಲ್ಲಲ್ಲದೆ ಚೆನ್ನಬಸವೇಶ್ವರ ವಚನಗಳಲ್ಲಿ (೩೪೩, ೨೭೯, ೨೮೮) ಬರುತ್ತದೆ. ಇವರಡೂ ಶಬ್ದಗಳು ಅವೇ ಅರ್ಥಗಳಲ್ಲಿ ಕೂಡಿಯೂ, ಬೇರೆ ಬೇರೆಯಾಗಿಯೂ ಜ್ಞಾನೇಶ್ವರೀಯಲ್ಲಿ ಬಳಸಲಾಗಿವೆ. ಹಾಗಿದ್ದರೆ ಈ ಶಬ್ದಗಳು ಸಂಸ್ಕೃತದಿಂದ ಮರಾಠಿಗೇ ನೇರವಾಗಿ ಯಾಕೆ ಬಂದಿರಬಾರದು? ಅಂಕವು ಆಂಖ ಆದ ಪ್ರಯೋಗ ಜ್ಞಾನೇಶ್ವರೀಯಲ್ಲಷ್ಟೇ ಇದೆ. (ಮುಂದೆ ಅದು ಆಂಕಡಾ ಆಗಿದೆ.) ಲೆಕ್ಕ ಶಬ್ದ ಗಣಿತ ಅರ್ಥದಲ್ಲಿ ಸಂಸ್ಕೃತದಿಂದ ಕನ್ನಡಕ್ಕೆ ಬಂದಿದ್ದರೂ ಗಣನೆ, ಮಾನ್ಯತೆ, ಮಹತ್ವ ಇತ್ಯಾದಿ ಅರ್ಥಗಳಲ್ಲಿ ಅದು ಕನ್ನಡದಲ್ಲಿ ಮಾತ್ರ ಪ್ರಯುಕ್ತವಾಗಿದೆ.[4] ಇವೇ ಅರ್ಥಗಳನ್ನು ಜ್ಞಾನೇಶ್ವರೀಯ ಈ ಪ್ರಯೋಗಗಳು ಸೂಚಿಸುತ್ತವೆ.

*ಜೇಥ ಸ್ವರ್ಗಸುಖ ಲೇಖಣಿಯೇ ನಾಹೀಂ (೨.೩೭೪)* ಎಲ್ಲಿ ಸ್ವರ್ಗಸುಖವು ಲೆಕ್ಕಕ್ಕಿಲ್ಲವೋ-

*ತಿಯೇ ಸಮೃದ್ಧಿಚೇಂ ಲೇಖ ಪ್ರಕೃತೀ ಚ ಧರೀ (೭.೨೫)*

ಆ ಸಮೃದ್ಧಿಯ ಲೆಕ್ಕವನ್ನು ಪ್ರಕೃತಿಯೇ ಇಡುತ್ತಾಳೆ.

*ತೇಂ ಲೇಖೇಂ ತರೀ ಮಿಯಾಂ ತುರುಂಬಾವೇಂ ಪರಿ ಮುಖೀಂ ಚ ಘಾಲೀಂ (೯.೩೮೦)*

ಹಾಗೆ (ಅಮೃತವನ್ನು) ಲೆಕ್ಕದಿಂದ ಮುಡಿಯಬೇಕು. ಆದರೆ

---

3. (ಯಾದವ ಕಾಲೀನ ಮರಾಠಿ ಭಾಷಾ ಪು. ೧೭೮)

4. ದುಷ್ಕವಿಯುಂ ಕವಿಯೆಂಬ ಲೆಕ್ಕಮೇ (ಪಂಪಭಾರತ ೧.೧೨)

ಅದನ್ನು ಬಾಯಿಯಲ್ಲಿಯೇ ಹಾಕುತ್ತೇನೆ.

ಪತ್ರಂ ಪುಷ್ಪಂಫಲಂ...ಅಶ್ನಾಮಿ... ಎಂದು ಗೀತೆಯಲ್ಲಿ ಹೇಳಿದ್ದನ್ನು ಜ್ಞಾನೇಶ್ವರರು ಹೀಗೆ ಕೆಣಕಿದ್ದಾರೆ!

*ಮಾಝೀಯಾ ವೇಷಾಜ್ ಗಾ ಲೇಖ ನಾಹಿಜ್ (೧೦.೨೭೭)*

ನನ್ನ ವೇಷಗಳಿಗೆ ಲೆಕ್ಕವಿಲ್ಲ!

*ಕೃಷ್ಣಾ ಹ್ಮಣೌನಿ ಹಾಕಾರಿಜೇ ಯಾದವಪಣೇಜ್ ತೂತೇಜ್ ಲೇಖಿಜೇ (೧೧.೫೪೭)*

'ಕೃಷ್ಣಾ' ಎಂದು (ನಾನು) ಕರೆಯುವುದು; ಯಾದವತನದಿಂದ ನಿನ್ನನ್ನು ಎಣಿಸುವುದು (ಲೆಕ್ಕಿಸುವುದು) ಇಲ್ಲಿಯ ಕ್ರಿಯಾಪದದ ರೂಪವೂ ವೈಶಿಷ್ಟ್ಯಪೂರ್ಣ-ವಾಗಿದೆ.

*ಹೇಜ್ ಸಾಂಗಾವೇಜ್ ಅಜ್‌ಖೇಜ್ ಲೇಖೇಜ್ ನ ಲಗೇ ತುಜ (೧೩-೮೪೩)*

ಅದನ್ನು ಅಂಕ ಲೆಕ್ಕಗಳಲ್ಲಿ ನಿನಗೆ ಹೇಳಪತ್ತಬಾರದು. (ಹೇಳಬೇಕಾಗಿಲ್ಲ)

*ಸರಲೇಯಾಜ್ ಲೇಖ ಜೈಸೇಜ್ ಅಜ್‌ಖ ಹೋಜ್‌ತಿ ಏಕ (೧೩.೯೩೨)*

ಲೆಕ್ಕ ಮುಗಿದೊಡನೆ ಅಂಕಿಗಳು ಒಂದಾದಂತೆ-

ಆಗ ಬೇರೆ ಬೇರೆ ಸ್ಥಾನಗಳಲ್ಲಿ (ದಶಮ್ ಶತಮ್) ಅಂಕಿಗಳ ಚಿಹ್ನೆಗಳನ್ನಿಟ್ಟು ಲೆಕ್ಕ ಮಾಡುತ್ತಿರಬೇಕು. ಗಣಿತ ಮುಗಿದೊಡನೆ ಈ ಚಿಹ್ನೆಗಳೆಲ್ಲ ಒಂದೇ ಬುಟ್ಟಿಗೆ. (ಆಟ ಮುಗಿದೊಡನೆ ಪಗಡೆಗಳು, ಚದುರಂಗದ ಆನೆ ಒಂಟೆ, ಕುದುರೆಗಳು ಒಂದೇ ಪೆಟ್ಟಿಗೆಯನ್ನು ಸೇರುವಂತೆ)

*ತೇ ಭಲೇ ತೈಸಾ ಖೇಳು ಲೇಖಾ ಆಣೀ (೧೩.೯೮೦)*

ಆಕೆ ಬೇಕಾದ ಆಟವನ್ನು ಮಹತ್ವಕ್ಕೆ ತರುತ್ತಾಳೆ. (ಲೆಕ್ಕಕ್ಕೆ ತರುತ್ತಾಳೆ.)

*ಫೂಲಾಜ್ ಫುಲಸರಾ ಲೇಖ ಚಢೇ (೧೮.೫೬)*

ಹೂವು, ಹೂವಿನ ಸರದ ಲೆಕ್ಕವಿಡಬಹುದು.

**ಆಗವೇ (ನ ದೊಡನೆ) ಆಗದು, ಆಗುವುದಿಲ್ಲ**

ಕೊಂಕಣಿ ಮೂಲದ್ದೆಂದು ಭಾವಿಸಿದ ವಚವೇ (ಹೋಗುವುದು) ಶಬ್ದವು ನ ಕಾರದೊಡನೆ ಮಾತ್ರ ಜ್ಞಾನೇಶ್ವರಿಯಲ್ಲಿ ಬಳಸಲಾಗಿದೆಯಷ್ಟೇ? ಅದೇ ರೀತಿಯಾಗಿ ಕನ್ನಡದ ಆಗು ಶಬ್ದದ ಆಗವೇ ರೂಪ ನ ಕಾರದೊಡನೆಯಷ್ಟೇ ಕಾಣಿಸಿಕೊಳ್ಳುತ್ತದೆ. ಉದಾಹರಣೆಗಳು

*ವಿಷ ಖಾಣೇಜ್ ನಾಜ್‌ಗವೇ (೧೩.೫೧೩)* ವಿಷ ತಿನ್ನಲು ಆಗದು.

*ಜೋ ಲಾರೀ ಐಸಾ ನ ಲವೇ ಪಾಥರು ತೈಸಾ ನ ದ್ರವೇ*

*ಗುಣಿಯಾಜ್‌ಸಿ ನಾಜ್‌ಗವೇ ಫೋಡಸೇ ಜೇವಿ (೧೩.೭೨೪)*

ಅವನು ಗಂಡು ಬಿದಿರಿನಂತೆ, ಬಗ್ಗಲಾರ. ಕಲ್ಲಿನಂತೆ, ದ್ರವಿಸಲಾರ. ಗುಣಿ ಜನರನ್ನು (ಕಂಡರೆ) ಆಗುವುದಿಲ್ಲ. (ಅವರನ್ನು) ಹೊಡೆಯಿಸುತ್ತಾನೆ. ಆದರಂತೆ (ಇಲ್ಲಿ ದಾಂಡೇಕರ ಮೊದಲಾದವರಿಗೆ ಸರಿಯಾಗಿ ಅರ್ಥ ಹಚ್ಚಲು ಬಂದಿಲ್ಲ. ಘೋಡಸಾ = ಘುರಸಾ=ಚಿಣೆಗೀ ಹಾವು, ಕೊಂಕಣದಲ್ಲಿ ಮಾತ್ರ ಕಂಡುಬರುವಂತಹದು ಎಂದು ಅರ್ಥೈಸಿ, ಘುರಸಾ ಹಾವಿನ (ವಿಷವನ್ನು) ಮಾಂತ್ರಿಕನಿಗೆ (ಗುಣಿ) ಇಳಿಸಲು ಆಗದು ಎಂದು ಅನ್ವಯಿಸಿದ್ದಾರೆ. ಕನ್ನಡದ ಮೊಡೆಸು ಜ್ಞಾನೇಶ್ವರಿಯಲ್ಲಿ ಘೋಡಸೇ ಆಗಿದೆ.)

*ತೋ ಮರಣಾ ಆಣಿ ಜೀವಿತಾ ನಾಜ್‌ಗವೇ ಘುಡಾ (೧೩.೧೦೭೨)*

ಮುಂದೆ ಅವನಿಗೆ ಮರಣ ಹಾಗೂ ಜೀವನ ಆಗದು. (ಪುನರ್ಜನ್ಮವಿಲ್ಲ)

*ತತ್ವನಿಷ್ಠ ಜೈಸಾ ನಾಜ್‌ಗವೇ ಭ್ರಾಂತಿಲೇಶಾ (೩.೧೨೪)*

ತತ್ವನಿಷ್ಠನಿಗೆ ಒಂದಿಷ್ಟು ಭ್ರಾಂತಿಯೂ ಆಗದು.

*ಮಾ ಹೋಯೇ ತರಿ ನಾಜ್‌ಗವೇ ಗುಣಾ ಯೇಯಾಜ್ (೧೪.೩೨೨)*

ಬಳಿಕ ಅವನಿಗೆ (ಗುಣಾತೀತನಿಗೆ) ಗುಣಗಳು ಆಗುವುದೆಂದರೂ ಆಗವು.

*ಪರಿ ಅಧೀನು ಕಾಜ್ ನಾಜ್‌ಗವೇ ಹೇಜ್ ಚಿ ಕೈಸೇನಿ ಜಾಣಾವೇಜ್ (೧೪.೩೨೩)*

ಆದರೆ (ಗುಣಗಳಿಗೆ) ಅಧೀನನೋ, ಆಗದವನೋ ಇದನ್ನು ಹೇಗೆ ತಿಳಿಯುವುದು?

**ಅಂಗ ಮೈ, ಅಂಗ**

ಮೈಗೆ ಸಂಬಂಧಿಸಿದಂತೆ ಅನೇಕ ಪಡೆನುಡಿಗಳು ಕನ್ನಡ ಹಾಗೂ ಮರಾಠಿಗಳಲ್ಲಿ ಸಮಾನಾರ್ಥಗಳಲ್ಲಿ ರೂಢವಾಗಿವೆ. ಹಳಗನ್ನಡದಲ್ಲಿಯ ಹಾಗೂ ಜ್ಞಾನೇಶ್ವರಿಯಲ್ಲಿಯ ಪಲವು ಪ್ರಯೋಗಗಳನ್ನು ಕೆಳಗೆ ಕೊಡಲಾಗಿದೆ.

*ಅಂಗಕ್ಕೆ ಲಿಂಗಾಚಾರವಲ್ಲದೆ ಅಂಗ ಕ್ರಿಯೆಯೆಂಬುದನ್ನು ಅಂಗವಿಸರುನೋಡಾ (ಚನ್ನಬಸವೇಶ್ವರ ವಚನ ೬೦-೪೭೨)*

*ತೋ ಕರಿ ಪಾಜ್ ಜರಿ ಅಂಗವಲಾ ಸಾಂಘೈನ ತುಜ (೩.೨೭೨)*

ನಿನಗೆ ನೀಗುವಂತಿದ್ದರೆ ಆದನ್ನು ಮಾಡು. ನಿನಗೆ ಹೇಳಿಕೊಡುತ್ತೇನೆ.

*ತೇ ಆಪುಲೇನಿ ಬಳೇಜ್ ಅಂಗವಿಲೇಜ್ (೧೨.೪೫)*

ಆದನ್ನು ತಮ್ಮ ಸಾಮರ್ಥ್ಯದಿಂದ ಮೈಗೂಡಿಸಿಕೊಂಡರು.

*ತ್ಯಾಗಾತವ ಅಂಗವೇ ಶಾಂತಿಸಕಳಾ (೧೨.೧೩೮)*

ತ್ಯಾಗದಲ್ಲಿಯೇ ಸಕಲ ಶಾಂತಿ ಮೈವೆತ್ತಿರುತ್ತದೆ.

ಅಂಗ + ಹಳಗನ್ನಡ ಅದಟು (ಶೌರ್ಯ ಪರಾಕ್ರಮ ಅರ್ಥದಲ್ಲಿ. ತಳಿಗೆಯ

*ಮೇಲಸುರನವಟಿದೇನಚ್ಚರಿಯೋ-ಪಂಪಭಾರತ ೬.೬೪)* ಸೇರಿ ಅಂಗದಟ ಶಬ್ದವಾಯಿತು.

*ಸಾಧನಗಾ ಅಂಗದಟ (೧೬.೪೫)* ಸಾಧನೆಯು ಬಲಿಷ್ಠ.

ಅಂಗ + ಆಯ್ತು ಕೂಡಿ ಅಂಗಾಧಣೇ ಎಂಬ ಧಾತು ಆಗಿ ಹೀಗೆ ಪ್ರಯೋಗಿಸಲಾಗಿದೆ.

*ಜೋ ಅಂಗಾಥಿಲಾ ಆನಂದು ಸುರತೇವಿಣ (೧೫.೭೪)*

ಯಾವುದು ಕಾಮಕ್ರೀಡೆಯಿಲ್ಲದೆ ಆನಂದವನ್ನು ಕೊಡುವುದೋ-

*ತಮ್ಮ ಮೆಯ್ಮರೆವಿನಮಿರ್ವರುಂ ನಮೆದರ್ (ಪಂಪಭಾರತ ೧.೧೩೫)* ರಲ್ಲಿ ಬರುವ ಮೈಮರೆವು ಜ್ಞಾನೇಶ್ವರೀಯಲ್ಲಿ ಅದೆಷ್ಟು ಸುಂದರವಾಗಿ ಬಂದಿದೆಯೆಂಬುದನ್ನು ನೋಡಬೇಕು.

*ಕಾಜ್ ಜಳೇಜ್ ಸೀತಲೇಜ್ ಲವಣ ಅಂಗಭೂಲೇ (೧೮.೧೬)*

ನೀರಿನ ಸ್ಪರ್ಶವಾದೊಡನೆ ಉಪ್ಪು (ತನ್ನ) ಮೈಮರೆಯುವಂತೆ-

**ಆಗಳಾ-ಅಗ್ಗಳ ಶ್ರೇಷ್ಠತೆ,**
**ಆಗಳಿಕ - ಅಗ್ಗಳಿಕೆ,**
**ವೇಗಳಾ-ವೆಗ್ಗಳ, ಬಾಹುಲ್ಯ-ವೈಪುಲ್ಯ**

*ಸಮುಚ್ಚಯೋದ್ಭಾವಕ ಕ್ರಮ ವಿಚಾರವೆ ದೋಷಮಿದಗ್ಗಳಂ (ಕವಿರಾಜಮಾರ್ಗ ೧.೧೩೨) ತೋರಿದನೆಱಕದೆ ಹರಿಗಂಗೆ ರುದ್ರನಗ್ಗಳಗಣ್ಣಂ (ಪಂಪಭಾರತ ೮.೨೩) ದೆಸೆಗೆ ವಿಳಾಸಮಂ ಪಡೆಯ ಗೊಂದಣವೆಗ್ಗಳವಾಗಳ್ ಆ ನೃಪಾವಾಸದೊಳ್ (ಪಂಪರಾಮಾಯಣ ೩.೧೧೬)* ಹೀಗೆ ಅಗ್ಗಳ-ವೆಗ್ಗಳ ಶಬ್ದಗಳ ಪ್ರಯೋಗ ಪಳಗನ್ನಡದಲ್ಲಿ ಕಾಣಸಿಗುತ್ತದೆ. ಕ್ರಿ.ಶ. ೧೧೮೯ ರಲ್ಲಿ ಚಂದ್ರಪ್ರಭ ಪುರಾಣವನ್ನು ಬರೆದ ಕನ್ನಡಕವಿ ಅಗ್ಗಳನ ಬಗ್ಗೆ ಇದೊಂದು ಗಾದೆಮಾತು. *ಅಗ್ಗಳನ ಮುಂದೆ ವೆಗ್ಗಳನು ಉಂಟೆ?*

'ಅಗ್ಗಳ',-ವೆಗ್ಗಳ' ಶಬ್ದಗಳು 'ಆಗಳಾ' 'ವೇಗಳಾ' ಆಗಿ ಜ್ಞಾನೇಶ್ವರೀಯಲ್ಲಿ ಹೋದುದನ್ನು ನೋಡಬಹುದಾಗಿದೆ.

*ಐಥ ಕಳಾವಿದಪಣ ಕಳಾಜ್ ಪುಣ್ಯಾಸಿ ಪ್ರತಾಪು ಆಗಳಾ (೧.೩೭)*

ಇಲ್ಲಿ ಕಲೆಗಳಿಗೆ ಕಲಾಜ್ಞಾನವು (ಕಲಾವಿದತನ), ಪುಣ್ಯಕ್ಕೆ ಶ್ರೇಷ್ಠವಾದ ಸಾಮರ್ಥ್ಯವು. (ಒದಗಿದವು)

*ರಂಗೀಜ್ ಸುರಂಗತೇಚೀ ಆಗಳಿಕ (೧.೩೮)*

ಬಣ್ಣಗಳಲ್ಲಿ ರಂಗವಿನ್ಯಾಸಗಳ ಶ್ರೇಷ್ಠತೆ.

*ಮಾತಲೇಯಾ ಕುಂಜರಾ ಆಗಳೀ ಜಾಲೀ ಮದಿರಾ (೧೮. ೩೨೩)*

ಮದವೇರಿದ ಆನೆಗೆ ಹೆಚ್ಚಿನ ಹೆಂಡವನ್ನು ಕುಡಿಸಿದಂತೆ-

*ಕೈಸೀ ಆಗಳಿಕ ದೈವಾಂಚೀ ಜೇಜ್ ಗಂಗಾ ಜೋಡಲೀ ಅಮೃತಾಚೀ (೪.೪)*

ದೈವದ ಅಗ್ಗಳಿಕೆ ಎಂತಹದು! ಅದು ಅಮೃತದ ಗಂಗೆಯನ್ನೇ ಒದಗಿಸಿತು.

*ಭೂತೇಂ ಆಘವಿಂಚಿ ಹೋಂತಿ ಏಕಾಚಿಂ ಏಕಿಂಆಹಾತ*
*ವೈಂ ಭೂತ ಪ್ರತೀತಿ ವೇಗಳೀಕ ಅಸೇ (೧೩.೧೯೫೨)*

ಎಲ್ಲವೂ ಭೂತಜಾತಗಳು. ಒಂದರದು ಒಂದೊಂದು ರೀತಿ ಇದೆ. ಆದರೆ ಭೂತಗಳ ಪ್ರಕಾರಗಳಲ್ಲಿ (ಅನುಭವಗಳಲ್ಲಿ) ಭಿನ್ನತೆ ಇದೆ.

*ಹ್ಮಣೌನಿ ತೇಂ ತೈಸೇಂ ಬೋಲಣೇಂ ನವ್ಹೇ ಸಪತಳ ಆಡ ಲಾವಣೇಂ*
*ಕೇಲೇಂ ಮೇಳೂ ಚಿ ವೇಗಳೇಪಣೇಂ ಭೊಗಾವೇಯಾ (೬.೧೧೪)*

ಆದುದರಿಂದ (ಭಗವಂತನ) ಅಂತಹ ಆ ಮಾತು ತೆಳುಪರದೆ-ಯನ್ನು ಅಡ್ಡಹಚ್ಚಿದಂತಲ್ಲ; (ಭಕ್ತರಿಗೆ) ಭೋಗಿಸುವುದಕ್ಕಾಗಿ ಭಿನ್ನರೀತಿಯಿಂದ ಮೇಳವಿಸಿದುದು.

*ಏಥ ಆಪುಲೇನಿ ಬಳೇಂ ಭೋಗಿಜೇ ಜೇ ವೇಗಳೇ*
*ಹೇಂ ವಾಂಚೌನಿ ನೀಕೇಂ ಆಗಳೇಂ ಶೂನ್ಯ ಆಹೇ (೧೬.೨೯೭)*

ಇಲ್ಲಿ ತಮ್ಮ ಸಾಮರ್ಥ್ಯದಿಂದ ಭೋಗಿಸುವುದು ಶ್ರೇಷ್ಠವಾದದ್ದು. ಇದನ್ನುಳಿದು ಬೇರೆಯೆಲ್ಲವೂ ಶೂನ್ಯವಿಹುದು.

ಇಂದು 'ಆಗಳಾ', 'ವೇಗಳಾ' ಈ ಎರಡೂ ಶಬ್ದಗಳಿಗೆ 'ಭಿನ್ನ', 'ಬೇರೆ' ಎಂಬರ್ಥಗಳಿವೆ. 'ಶ್ರೇಷ್ಠ', 'ಹೇರಳ' ಅರ್ಥ ಯಾವುದಕ್ಕೂ ಇಲ್ಲ. ಮೂಲ ಕನ್ನಡ ಶಬ್ದಗಳ ಅರ್ಥ ಹೇಗೆ ಮಾರ್ಪಡುತ್ತ ಹೋಗಿದೆಯೆಂಬುದನ್ನು ಜ್ಞಾನೇಶ್ವರಿಯಲ್ಲಿಯೇ ಕಾಣಬಹುದಾಗಿದೆ.

**ಆಟಣೇಂ ಅಟ್ಟಿಸು ಒಣಗು**

'ಅಱು ನಿರ್ದ್ರವೇ' ಎಂದು ಶಬ್ದಮಣಿದರ್ಪಣದ ಧಾತು ಪ್ರಕರಣ ಹೇಳುತ್ತದೆ, ಇದರ ಭೂತಕಾಲವಾಚಕ ಕೃದಂತ 'ಅರ್ತು'. 'ಅಱು' ಧಾತುವೂ ಅದೇ ಅರ್ಥದಲ್ಲಿ ಧಾತು ಪ್ರಕರಣದಲ್ಲಿ ಕೊಡಲಾಗಿದೆ ಎಂದು ಕಿಟೆಲ್ ಹೇಳುತ್ತಾರೆ. ಅರ್ಥವೇನೋ ಸರಿಯಾಗಿದ್ದರೂ ಕೇಶಿರಾಜ ಕೊಟ್ಟಿದ್ದು (ಕಿಟೆಲ್ ಸಂಪಾದಿತ ಆವೃತ್ತಿ ಕ್ರಮಸಂಖ್ಯೆ ೮೮೧ ಬಿ) 'ಅಱು', 'ಅಱು' ಅಲ್ಲ.

ಆದರೆ 'ನಿರ್ದ್ರವೀಕರಣ 'ಅರ್ಥದಲ್ಲಿಯ 'ಅಟ್ಟಿಸು' ಧಾತು 'ಪಚನ' ಅರ್ಥದಲ್ಲಿಯ 'ಅಡು' ಧಾತುವಿನ ಭೂತಕಾಲವಾಚಕ ಕೃದಂತವಾದ 'ಅಟ್ಟ'ದಿಂದ ಸಿದ್ಧವಾಗಿದೆಯೆಂದು ನನ್ನ ಅನಿಸಿಕೆಯಾಗಿದೆ. ಬೆಂಕಿಯಿಂದಾಗಿ (ಮಾತ್ರ) ನೀರಿನ ಅಂಶ ಕಡಿಮೆಯಾಗುವ ಪ್ರಕ್ರಿಯೆ 'ಅಡು' ಧಾತುವಿನಲ್ಲಿ ಒಳಗೊಂಡಿದೆ ಎನಿಸಬಹುದು. ಸೂರ್ಯನ ಉಷ್ಣತೆಯಿಂದ ನೀರು ಕಡಿಮೆಯಾಗುವ ಕ್ರಿಯೆ (ಉದಾಹರಣೆಗೆ : ಬೇಸಗೆಯಲ್ಲಿ ಭೂಮಿಯ ನೀರು ಅಟ್ಟಿಸಿದವು ಎನ್ನುತ್ತೇವೆ) 'ಅಡು' ಹೇಗಾದೀತು ಎನಿಸಬಹುದಾಗಿದೆ. ಆದರೆ 'ಅಱ', 'ಅಱು' ಧಾತುಗಳೂ ಇದಕ್ಕೆ ಸಮಾಧಾನಕಾರಕ ಅರ್ಥವ್ಯಾಪ್ತಿ ಕೊಡಲಾರವು. (ಉದಾಹರಣೆಗಳು ಒಲೆಯ

ಮೇಲಿಟ್ಟ ಹಾಲು ಅಟ್ಟಿಸಿದವು ಎನ್ನುತ್ತೇವೆ. ಆರಿದವು ಎನ್ನುವಂತಿಲ್ಲ). ಇದೂ ಅಲ್ಲದೆ 'ಅಟ್ಟು'ದ ಹಳಗನ್ನಡ ನಡುಗನ್ನಡ ಪ್ರಯೋಗಗಳು ನಮಗೆ ದೊರೆತಿಲ್ಲ. ಇದು 'ಅಟ' ಆಗಿ ಮರಾಠಿಯಲ್ಲಿ ಹೋದುದು ಮಾತ್ರ ಜ್ಞಾನೇಶ್ವರಿಯಿಂದ ಸ್ಪಷ್ಟವಾಗುತ್ತದೆ.

*ಹೇ ಮಹಾಭೂತಾಂಚೀ ಘುಡೀ ಅಟಣೀ ದೇಖಾಜ್ (೬.೨೯೦)*

ಇದು (ಪಂಚ) ಮಹಾಭೂತಗಳ ಮುಂದಿನ (ನಂತರದ) ಅಟ್ಟಿಸುವುದೆಂಬುದನ್ನು ಕಾಣು. (ಅವು ನಾಶವಾಗುತ್ತವೆಯೆಂದು ಭಾವಾರ್ಥ)

*ಜೇ ಅಂಕೂನಿ ನಾಣೇಜ್ ವಿಸ್ತಾರೀ ಪಾಠಿಜ್ ತೇಯಾಚೀಚಿ ಅಟಣೀ ಕರಿ (೭.೨೬)*

ಯಾವುದು ಎಣಿಸಿ ನಾಣ್ಯಗಳನ್ನು ಬೆಳೆಸುವುದೋ ಬಳಿಕ ಅವುಗಳದ್ದೇ ಅಟ್ಟಣೆ ಮಾಡುವುದೋ -

*ತೈಜ್ ಘನಜಾತ ಅಟೇ ಗಗನಿಚಾಜ್ ಗಗನೀಜ್ (೯.೧೦೧)*

ಆಗ ಆಕಾಶದಲ್ಲಿ ಹುಟ್ಟಿದ ಮೋಡಗಳು ಆಕಾಶದಲ್ಲಿಯೇ ಅಟ್ಟಿಸುತ್ತವೆ.

*ನೀರಾತೇಜ್ ಅಟೀ ತೇಜ* *(೧೩.೧೪೪)* ತೇಜವು ನೀರನ್ನು ಅಟ್ಟಿಸುತ್ತವೆ.

*ಸತೇಚೇನಿ ವಾಣಿವಣೇಜ್ ದೇಹಾಸಕಟ ಅಟಣೇಜ್ (೧೩.೫೦೫)*

ಸತ್‌ದಿಂದಾಗಿ ಗಾಣಿಗನಂತೆ ದೇಹದೊಂದಿಗೆ ಅಟ್ಟಿಸುವುದು. (ಇಂದ್ರೀಯ ನಿಗ್ರಹದ ಬಗ್ಗೆ ಇಲ್ಲಿ ಚರ್ಚೆ ಮುಂದುವರೆದಿದೆ.)

*ಅಲ್ಪೋದಕಿಚಾ ಮಾಸಾ ನಾಟೇ ಐಸಿಯಾ ಆಶಾ ನ ವಚೇ ಚಿ ಠಾಜ್ ಜೈಸಾ ಅಗಾಧ ಡೋಹಾ (೧೩.೭೩೭)*

ತುಸು ನೀರಿನಲ್ಲಿಯ ಮೀನು (ಅದು) ಅಟ್ಟಿಸಲಾರದೆಂಬ ಆಸೆಯಿಂದ ಆಳವಾದ ಮಡುವಿಗೆ ಹೋಗುವುದಿಲ್ಲ ಹಾಗೆ-

*ತರಿ ಜನ್ಮಾಚಿಯೇ ಅಟೀ ನ ಲಾಹಾಸಿ ನಿಗೋಜ್ (೧೩.೧೦೫೪)*

ಜನ್ಮವು ಅಟ್ಟಿಸಿದರೂ (ನೀನು) ಹೊರಬೀಳಲಾರೆ.

*ನಾ ತರಿ ಅಟಲೇಯಾಜ್ ಅಂಭ ನಿಜಬಿಂಬೀಜ್ ಪ್ರತಿಬಿಂಬ (೧೫-೨೪೩ ಪಾಠಭೇದ)*

ಅಥವಾ ನೀರು ಅಟ್ಟಿಸಿದ ಬಳಿಕ ಪ್ರತಿಬಿಂಬವು ನಿಜಬಿಂಬವನ್ನು (ಸೇರುವಂತೆ)

*ತೇ ಜನ್ಮತಿ ತೇ ತೈಸೇ ಲೋಕಾಜ್ ಅಟು (೧೬.೩೧೭)*

ಅದರಂತೆ ಅವರು ಜಗತ್ತನ್ನು ಅಟ್ಟಿಸುವುದಕ್ಕಾಗಿ ಹುಟ್ಟುತ್ತಾರೆ.

ಹೀಗೆ ಜ್ಞಾನೇಶ್ವರಿಯಲ್ಲಿ 'ಅಟ್‌ಣೇಜ್' ಧಾತು (ನೀರು) 'ಅಟ್ಟಿಸು' ಅರ್ಥದಲ್ಲಿ ಕೆಲವೆಡೆ ಬಳಸಲಾದರೆ, ಅಲಂಕಾರಿಕವಾಗಿ 'ನಾಶಹೊಂದು' (ನಾಶಗೊಳಿಸು) ಎಂಬರ್ಥದಲ್ಲೂ ಪ್ರಯುಕ್ತವಾದುದನ್ನು ಕಾಣಬಹುದು.

**ಅಡಳು ಅಡ್ಡಲು ಅಡಚಣೆ**

*ಅಕ್ಕಟಾ! ಕಮ್ಮನೆ ಈ ಮಿತ್ರನ ತೇಜಕ್ಕೆ ಅಡ್ಡಲಾದೆಂ (ರಾಜಶೇಖರ ವಿಳಾಸ*

೬-೪) ಇದು ಜ್ಞಾನೇಶ್ವರ ಉತ್ತರಕಾಲೀನ ಕನ್ನಡ ಗ್ರಂಥದಲ್ಲಿ ದೊರೆಯುವ 'ಅಡ್ಡಲು' ಶಬ್ದದ ಪ್ರಯೋಗ.

*ಕಾಯ ಫೇತಾಜ್ ಪಾಂಡವಾ ಆಡಳು ಅಸೇ (೧೮.೮೮೮ ಪಾ)*
(ಮನೆಯಲ್ಲಿಯ ನಿಧಿಯನ್ನು, ದೀಪವು ಕಣ್ಣಿಗೆ ತೋರಿಸುತ್ತಿರುವಾಗ) ಅರ್ಜುನನೇ, ತೆಗೆದುಕೊಳ್ಳುವದಕ್ಕೆ ಅಡಚಣೆ ಏನಿದೆ?

*ತೈಸಾ ಆತ್ಮದರ್ಶನೀಜ್ ಆಡಳು ಅಸೇ ಜೋ ಅವಿದ್ಯೇಚಾ ಮಳು (೧೮.೧೨೨೬)*
ಹಾಗೆ ಆತ್ಮದರ್ಶನದಲ್ಲಿ ಅಡಚಣೆಯಾಗಿರುವ ಅವಿದ್ಯೆಯ ಮಾಲಿನ್ಯವು.

*ಆಣಿ ತೀಜೇಜ್ ಆಡಳು ಕರಿತೇಜ್ ನಿಮಾಲೇಜ್ (೧೮.೧೩೫೫)*
ಮತ್ತು ಮೂರನೆಯದು (ಜಗತ್ ಕಲ್ಪನೆಯು) ಮಾಡುವ ಅಡಚಣೆ ನಿವಾರಿಸಿದಾಗ

*ನೋಹೇ ಜೂಝಾಚೇನಿ ಆಡಳೇಜ್ (೧೮.೧೩೭೮)*
ಯುದ್ಧವು ಅಡಚಣೆ ಅಲ್ಲ (ಭಗವದ್ಗೀತೆ ಹೇಳಲು)

*ಕೋಣ್ಹೇ ಹಿ ವಿಖೀಜ್ ಆಡಳು ನೇಘೇ ಚಿತ್ತ (೧೩.೩೫೮)*
ಯಾರ ವಿಷಯದಲ್ಲೂ (ಅವನ ಚಿತ್ತವು) ಅಡ್ಡಲು (ಆಕ್ಷೇಪ) ತಿಳಿಯುವುದಿಲ್ಲ.

**ಆಡ ಅಡ್ಡ; ಆಡವ ಅಡ್ಡಿ; ಆಡೀ, ಆಡೇಜ್ ಅಡ್ಡಿ; ಆಡಕಾರೀ ಅಡ್ಡಿ (ಅಡ್ಡಕಟ್ಟಿಗೆ); ಆಡವಂಕೀ-ಅಡ್ಡಪಂಕ್ತಿ ಅಡ್ಡಿ; ಆಡಸ-ಅಡ್ಡವಿಸು, ಮರೆಮಾಡು:**

*ಒಂದೊಂದಟಿ ಸೌಂದರ್ಯಮನೊಂದೊಂದೀಕ್ಷಿಸಲೊಪರ್ಚ್ಚಿ ನಾಸಿಕಮಡ್ಡಂ ಬಂದಂಪಮನೀಕ್ಷಿಸಿ (ಕವಿರಾಜಮಾರ್ಗ ೩.೨೪)*

ಹೀಗೆ 'ಅಡ್ಡ' ಶಬ್ದದ ಮೊದಲ ಗ್ರಾಂಥಿಕ ಪ್ರಯೋಗ ನಮಗೆ ದೊರೆಯುತ್ತದೆ. ಇದು 'ಆಡ' ಆಗಿ ಅದೇ ಅರ್ಥದಲ್ಲಿ ಮರಾಠಿಗೆ ಹೋಗಿದೆಯಲ್ಲದೆ ಅನೇಕ ನಾಮಪದ ವಿಶೇಷಣಗಳಿಗೆ ಮೂಲ ಶಬ್ದವಾಗಿದೆ. ಜ್ಞಾನೇಶ್ವರೀಯಲ್ಲಿಯ ಈ ಕೆಲವು ಪ್ರಯೋಗಗಳನ್ನು ನೋಡಬೇಕು.

*ಆಡ ಠಾಕೋಜ್ ನ ಶಕೇ ಚಿತ್ತಾ ಆಜ್ಞಾ ಜಿಯಾ (೨.೩೬೮)*
ಮನಸ್ಸಿನ ತಳಮಳವು ಇದನ್ನು ಅಡ್ಡಗಟ್ಟಲಾರದು.

*ಘೇಟಿಜ್ ಜಾಣಣೇಜ್ ಚಿ ಆಡವ ತೇಥಅಸೇ ಬಾಪಾ (೧೭.೩೮೨)*
(ದೈವವು ಕೊಟ್ಟ ಕರ್ಪೂರದ ಅಲಂಕಾರಗಳನ್ನು) ತೆಗೆದುಕೊಳ್ಳುವದನ್ನು ಅರಿಯುವುದೇ ಅಲ್ಲಿ ಅಡ್ಡಿಯಾಗುತ್ತದೆಯಪ್ಪ! (ಕೊಳ್ಳಬೇಕೇ ಅಥವಾ ಬಿಡಬೇಕೇ, ಎಂಬುದು ಭಾವಾರ್ಥ)

*ಜನ್ಮ ಸಹಸ್ರಾಂಚಿಆ ಆಡೀ (೬.೪೬೩)* ಸಾವಿರಾರು ಜನ್ಮಗಳ ಅಡ್ಡಿ (ಗಳನ್ನು ದಾಟಿ)

*ಜೇಜ್ ಇಂದ್ರಿಯಾಂಚೇಜ್ ದಾರೇಜ್ ಆಡೀ (೧೩.೧೬೯)*

ಯಾವುದು ಇಂದ್ರಿಯಗಳ ಬಾಗಿಲುಗಳನ್ನು ಅಡ್ಡಮಾಡುವುದೋ (ಮುಚ್ಚುವದೋ)

*ಗಾಂವವಾರಿಚೇಜ್ ಅಡೇಜ್ ಸೋಲಾಂಡೀ ಕವಣ (೧೩.೬೯೮)*

ಊರಬಾಗಿಲ ಅಡ್ಡಿಯನ್ನು (ಅಗಸೆಯ ಬಾಗಿಲನ್ನು) ಯಾರು ತಾನೇ ದಾಟುವುದಿಲ್ಲ?

*ನ ಪಡೇ ಅಡಕಾಠೀ ತ್ರಿಶುದ್ಧಿನಾ (೧೭.೩೨೩)*

ಅಲ್ಲಿ ತ್ರಿಕರಣಶುದ್ಧಿಯು ಅಡ್ಡಿಯಾಗದು.

*ಸ್ವರ್ಗೀಚೀ ಅಡವಂಗೀ ಉಮರೂಡುನಿ (೧೩.೧೬೨)*

ಸ್ವರ್ಗದ ಅಡ್ಡಪಂಕ್ತಿಯನ್ನು ದಾಟಿ.

*ಗ್ರಂಥ ಉತ್ಕಂಠೇ ಅಡಸೋ ಘಾಲಿಸೀ ಕಾಜ್ (೧೩.೬೩೨)*

(ನಮಗಿರುವ) ಗ್ರಂಥ ಕುತೂಹಲವನ್ನು ಅಡ್ಡವಿಸುತ್ತೀಯೇಕೆ?

**ಆಡಳಣೇಜ್ - ಎಡಹು**

*ಪೆಣದ ತಿಂತಿಣಿಯೊಳ್ ತೊಡರ್ದೆಡಪುತ್ತುಮಾಡುವ ಸುಭಟ ರಟ್ಟೆಗಳಂ (ಪಂಪಭಾರತ ೧೦.೧೧೬ವ) ಎಡಪಿದ ಕಲ್ಗೆ ತಾಗಿದ ಮರಕ್ಕೆನಿಸಂ ಮುನಿಸಂ ಮನಕ್ಕೆ ತಪ್ಪೊರ್ಡೆ ತರಲಕ್ಕುಂ (ಪಂಪರಾಮಾಯಣ ೯-೭)*

'ಎಡಹು' ಧಾತುವಿಗೆ ಮೂಲವಾದ 'ಎಡಪು' ಧಾತುವಿನ ಹಳಗನ್ನಡದ ಪ್ರಯೋಗಗಳಿವು. ಈ ಧಾತು 'ಆಡಳ' ವಾಗಿ ಮರಾಠಿಗೆ ಹೋಗಿದೆಯೆಂಬುದನ್ನು ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳಿಂದ ಮನಗಾಣಬಹುದು.

*ತರಿ ಉಜೂ ಚಿ ಆಡಳಿಜೇ ಜೇಯಾಪರೀ (೧.೨೪೬)*

(ಇದ್ದದೀಪವನ್ನು ಕಳೆದು ಕತ್ತಲೆ ಮಾಡಿದಬಳಿಕ) ಬೆಳ್ಳಾದಲ್ಲೇ ಎಡವುವ ಹಾಗೆ-

*ಜೈಸೇಜ್ ಮಾರ್ಗೇಜ್ ಜಾತಾಜ್ ಆಡಳಿಜೇ ಚಿಂತಾಮಣಿ (೨.೧೯೪)*

ದಾರಿಯಿಂದ ಹೋಗುವಾಗ ಚಿಂತಾಮಣಿ (ರತ್ನ) ಯನ್ನು ಎಡವಿದ ಹಾಗೆ-

*ಸಾಂಖ್ಯೆಜ್ ಪ್ಲವೇಜ್ ಚಿ ಕಾಇ ಬುಡಿಜೇ ಕಿಜ್ ಮಾರ್ಗೀ ಜಾತಾಜ್ ಆಡಳಿಜೇ (೨.೨೨೩)*

ಹೇಳ್ಳ, ನಾವೆಯಲ್ಲಿ (ಹೋಗುವಾಗ) ಮುಳುಗುವುದೇ ಅಥವಾ ದಾರಿಯಲ್ಲಿ ಹೋಗುವಾಗ ಎಡಹುವುದೇ?

ಇವುಗಳಲ್ಲಿಯ 'ಚಿಂತಾಮಣಿ'ಯ ದೃಷ್ಟಾಂತವನ್ನು ಮತ್ತೊಮ್ಮೆ ಪರಿಶೀಲಿಸಬೇಕು. 'ಎಡವದೇ' ಬರಿ 'ಕಾಣಿಸಿದರೆ' ಸಂತೋಷವಲ್ಲವೇ? ಚಿಂತಾಮಣಿಯನ್ನು ಎಡವು'ವ ಬದಲು 'ಚಿಂತಾಮಣಿ ಕಾಣಿಸಿದ ಹಾಗೆ'ಯೆಂದೂ ಅರ್ಥವಿಸಬಹುದು, ಅರ್ಥವಿಸಿದರು.

ಹೀಗೆ 'ಆಡಳಣೇಜ್' ಗೆ 'ಕಾಣಿಸು' ಎಂದು ಅರ್ಥಾಂತರ ಒದಗಿತು.

*ಯರ್ಥವಿಜ್ ಯೋಗಿಯಾಜ್ ನಾಡಳೇ ವೇದಾರ್ಥಾಸಿ ನಾಕಳೇ (೪.೧೨)*

ಪರಮಾತ್ಮನ ಪ್ರೀತಿಗೆ ಪಾತ್ರನಾಗುವುದನ್ನು ಕುರಿತು ಬರುವ ಈ ಸಂದರ್ಭ

ಯೋಗಿಗಳಿಗೆ ಸಹಜವಾಗಿ ಕಾಣಿಸುವುದಿಲ್ಲ (ನ+ಆಡಳೇ)
ವೇದಾರ್ಥಗಳಲ್ಲಿ ಸಿಕ್ಕುವುದಿಲ್ಲ. (ನ+ಆಕಳೇ)

ಇಂದಿನ ಮರಾಠಿಯಲ್ಲಿ 'ಆಢಳ' ಕ್ಕೆ ಕಾಣಿಸು ಎಂದರ್ಥ ಬಂದದ್ದು ಹೀಗೆ.

**ಆನೇಜ್ ಅನ್ಯ; ಆಣಿ ಮತ್ತು:**

ಎಂದಿನಿಂದಲೂ ಬಳಕೆಯಲ್ಲಿರುವ ಮರಾಠಿ 'ಆಣಿ' ಶಬ್ದ ಆದರ ಕನ್ನಡ ಪ್ರತಿಶಬ್ದವಾದ 'ಮತ್ತು' ಶಬ್ದದಷ್ಟೇ ಸ್ವಾರಸ್ಯಕರವಾಗಿದೆ. ವ್ಯುತ್ಪತ್ತಿಕಾರರು ಸಂಸ್ಕೃತ ಅನ್ಯ > ಪ್ರಾಕೃತ ಅಣ್ಣ > ಮರಾಠಿ ಆನ ಹಾಗೂ ಆಣಿ ಎಂದೇನೋ ರೂಪಸಿದ್ಧಿ ಹೇಳಿದರು. ಆದರೆ ಕನ್ನಡದಲ್ಲಿಯಂತೆ ಎರಡು ಶಬ್ದಗಳನ್ನು ಕೂಡಿಸುವ 'ಮತ್ತು ಅವ್ಯಯದಂತೆ 'ಆಣಿ' ಯ ಬಳಕೆ ಹೇಗೆ ಬಂತು, ಎಂಬುದನ್ನು ವಿವರಿಸಲಿಲ್ಲ. ಈಗ ಜ್ಞಾನೇಶ್ವರೀಯಲ್ಲಿಯ ಕೆಲವು ಪ್ರಯೋಗ ನೋಡಬೇಕು.

*ಸುವರ್ಣಾ ಹೋಉನಿ ಆನೇಜ್ (೧೫.೩೦೧)*

ಸುವರ್ಣಕ್ಕಿಂತ ಅನ್ಯವಾದ (ಬೇರೆಯಾದ)

*ಆಣಿ ಜೇ ಸದಾ ವೇಗಳೇ ತುಜಸಿಜ್ (೧೫.೨೮೫)*

ಮತ್ತು ಯಾರು ನಿನ್ನಿಂದ ಯಾವಾಗಲೂ ಬೇರೆ-ಯಾಗಿರುತ್ತಾರೋ

ಇಲ್ಲಿ 'ಅನ್ಯ ಹಾಗೂ 'ಮತ್ತು' ಅರ್ಥಗಳಿಗಾಗಿ ಒಂದೇ ಶಬ್ದಮೂಲವನ್ನು ಬಳಸುವ ಪ್ರಯೋಜನವೇನು? ಸಂಸ್ಕೃತದಲ್ಲಾಗಲೀ ಪ್ರಾಕೃತಗಳಲ್ಲಾಗಲೀ ಈ ರೀತಿ ಪ್ರಯೋಗಗಳಾಗಿಲ್ಲ. ವಾಕ್ಯದ ಆರಂಭವನ್ನೇ 'ಆಣಿ' ಯಿಂದ ಮಾಡಲಾದ ೩೩೫ ಓವಿಗಳು ಜ್ಞಾನೇಶ್ವರೀಯಲ್ಲಿ ದೊರೆಯುತ್ತವೆ. ಸಂಸ್ಕೃತದಲ್ಲಿಯ 'ಅನ್ಯತ್‌ಚ', ಕನ್ನಡದಲ್ಲಿಯ 'ಅಲ್ಲದೆಯೆ' ಯೊಡನೆ ಇದನ್ನು ಹೋಲಿಸಬಹುದು. ಸಂಸ್ಕೃತದಲ್ಲಿ ಎರಡು ಅಥವಾ ಹೆಚ್ಚು ಶಬ್ದಗಳನ್ನು 'ಚ' ದಿಂದ ಜೋಡಿಸಲಾಗುತ್ತದೆ. ಉದಾಹರಣೆಗಳು.

*ಕುಲೇನ ಕಾನ್ತ್ಯಾ ವಯಸಾ ನವೇನ ಗುಣೈಶ್ಚ ತೆಸ್ತೈರ್ವಿನಯ ಪ್ರಧಾನ್ಯೈಃ (ರಘುವಂಶ ೬.೭೯)*

*ಶಾಂತಮಿದಮಾಶ್ರಮಪದಂ ಸ್ಫುರತಿ ಚ ಬಾಹುಃ (ಶಾಕುಂತಲ ೧)*

ಇಲ್ಲಿ ಸಂಸ್ಕೃತ ವ್ಯಾಕರಣಕಾರರು 'ಚ' ಅವ್ಯಯವನ್ನು 'ಅನ್ವಾಚಯ', 'ಸಮಾಹಾರ' 'ಇತರೇತರ' ಹಾಗೂ 'ಸಮುಚ್ಚಯ' ಈ ನಾಲ್ಕು ಪ್ರಯೋಜನಗಳಿಗಾಗಿ ಬಳಸಬೇಕೆಂಬುವ ಸೂತ್ರ ಹೇಳಿದುದನ್ನು ಗಮನಿಸಬೇಕು. ರಘುವಂಶದ ಉದಾಹರಣೆ ಇತರೇತರದ್ದು. ಶಾಕುಂತಲದ ಉದಾಹರಣೆ ಅನ್ವಾಚಯ. *ಪಾಣೀಚ ಪಾದೌಚ ಪಾಣಿಪಾದಂ* ಇದು ಸಮಾಹಾರ. *ಪಚತಿಚ ಪಠತಿಚ* ಇದು ಸಮುಚ್ಚಯ.

'ಚ' ಅವ್ಯಯ ಮರಾಠಿಯಲ್ಲಿ ಬಂದಿಲ್ಲ. 'ಅನ್ಯತ್'ಗೆ 'ಚ'ದ ಅರ್ಥಗಳಿಲ್ಲ!

ತುಳಪುಳೆಯವರು ಕೂಡ 'ಆಣಿ' ಶಬ್ದದ ಬಗ್ಗೆ ಹೇಳುವಾಗ ಅದು ಎರಡು ವಾಕ್ಯಗಳನ್ನು ಜೋಡಿಸುತ್ತದೆ ಎಂದಷ್ಟೇ ಹೇಳಿ ಈ ಸಮುಚ್ಚಯವಾಚಕ ಅವ್ಯಯದ ನಾಲ್ಕು ಪ್ರಯೋಗಗಳನ್ನು ಉದಾಹರಿಸುತ್ತಾರೆ.[5]

ಕನ್ನಡದ 'ಮತ್ತು' ಅವ್ಯಯದತ್ತ ದೃಷ್ಟಿ ಬೀರಿದರೆ ಅದು ಮೂಲತಃ 'ಅನ್ಯ' ಅರ್ಥದಲ್ಲಿಯ 'ಮಱು' ಶಬ್ದದಿಂದ ಹುಟ್ಟಿದುದು ಸ್ಪಷ್ಟವಾಗಬೇಕು. 'ಮತ್ತು' ಶಬ್ದ ನಮಗೆ ಹಳಗನ್ನಡದಲ್ಲಿ ದೊರೆಯುವುದಿಲ್ಲ. 'ಅನ್ಯ' ಅರ್ಥದಲ್ಲಿಯ 'ಮಱು' ಶಬ್ದ ಮಾತ್ರ ಸಾಕಷ್ಟು ಬಳಕೆಯಲ್ಲಿತ್ತು.

*ಮಱು ಕಣಸು (ವಡ್ಡಾರಾಧನೆ ೩೦.೩೨) ಮಱುದಿವಸಂ (ಪಂಪಭಾರತ ೩.೪ ವ) ಮಱು ಭವ (ಆದಿಪುರಾಣ ೨.೯) ಮಱುಮಾತು (ಪಂಪಭಾರತ ೫.೭೫ ವ) ಮಱುವಕ್ಕ (ಅದೇ ೧೧.೧೨)* ಹೀಗೆ ಉದಾಹರಣೆಗಳು.

ಈ 'ಮಱು' ಶಬ್ದಕ್ಕೆ 'ತು' ಪ್ರತ್ಯಯ ಹತ್ತಿ 'ಮತ್ತು' ರೂಪ ಸಿದ್ಧವಾಯಿತು.

ಹೀಗೆ 'ಮಱು' ಅರ್ಥದ 'ಅನ್ಯ' ದಿಂದಾಗಿ 'ಮತ್ತು' ಅರ್ಥದ 'ಆನ' 'ಆಣಿ' ಶಬ್ದಗಳು ಸಿದ್ಧವಾದವು. ಜ್ಞಾನೇಶ್ವರಿಯಲ್ಲಿಯ ಈ ಉದಾಹರಣೆಗಳು.

*ತೇಥ ಪಾಂಡವ ಆಣಿ ಮಾಝೇ ಗೇಲೇ ಅಸತಿ ವ್ಯಾಜೇಜ್ ಜೂಝಾಚೇನಿ (೧.೮೬)*

ಅಲ್ಲಿ ಪಾಂಡವರು ಮತ್ತು ನನ್ನ (ಮಕ್ಕಳು) ಜಗಳದಿಂದಾಗಿ ಯುದ್ಧಕ್ಕಾಗಿ ಹೋಗಿ ಇದ್ದಾರೆ.

**ಆನ, ಹಾನ, ಆಣಿ, ಆನು, ಆದರೂ**

ಆಗು ಧಾತುವಿನ ಭೂತಕಾಲವಾಚಕ ಕೃದಂತ ಆನು, ಆನುಂ, ಅವುದಾನೊಂದು ಎಂದು ಕೇಶಿರಾಜನು ಉದಾಹರಿಸಿದ್ದಾನೆ. (ಸೂತ್ರ ೨೧೬) ಎತ್ತಾನುಂ ಎಲ್ಲಿಯಾನುಂ, ಏನ್ದಾನುಂ, ನೂಱಾನುಂ ಇವು ಅವನು ಬಳಸುವ ಇತರ ಉದಾಹರಣೆಗಳು. (ಸೂತ್ರ ೩೧೮)

ಆನ, ಹಾನ ಶಬ್ದಗಳ ಆದರೂ ಮತ್ತು ಮೊದಲಾದ ಅರ್ಥಗಳಲ್ಲಿ ಜ್ಞಾನೇಶ್ವರಿಯಲ್ಲಿ ಬಳಸಲಾಗಿದ್ದನ್ನು ನೋಡುತ್ತೇವೆ. ಉದಾಹರಣೆಗಳು:

*ಇಷ್ಟಮಿತ್ರ ಆಪುಲೇ ಕುಮರ ಹಾನ ದೇಖಿಲೇ (೧.೧೮೧)*

(ಅರ್ಜುನನು ತನ್ನ) ಇಷ್ಟಮಿತ್ರ ಹಾಗೂ ಕುಮಾರರನ್ನು ನೋಡಿದನು.

*ತೋಚಿ ಬ್ರಹ್ಮಾ ಆನು ನೋಹೇ. (೧೫.೩೧)*

ಅವನೇ ಬ್ರಹ್ಮನು ಮತ್ತೆ (ಮತ್ತಾನುಂ) ಅಲ್ಲ.

---

5. ಯಾದವಕಾಲೀನ ಮರಾಠೀ ಭಾಷಾ ಪುಟ ೩೧೬

ಮೇಲಿನ ಉದಾಹರಣೆಯಲ್ಲಾಗಲೀ ಕೆಳಕಾಣಿಸಿದ ಉದಾಹರಣೆಯಲ್ಲಾಗಲೀ ಸಂಸ್ಕೃತದ ಅನ್ಯ = ಹಳಗನ್ನಡ ಅನ್ನ (ಬಗೆಯಲ್ವೇಡನ್ನನಂ ಭೂಪತೀ-ಪಂಪಭಾರತ ೧೧.೮೪) ಶಬ್ದವೂ ಬಂದಿರಲು ಸಾಕು.

*ತೈಸಾ ಕ್ಷರಾಕ್ಷರಾಪಾಸೌನಿ ಆನು ಚಿ ತೋ (೧೫.೪೯೮)*

ಹಾಗೆ ಕ್ಷರ-ಅಕ್ಷರಗಳಿಂದ ಅವನು ಬೇರೆಯವನು.

*ತಜ್‌ವ ಮಾಂಡಲಾ ಆನು ಪ್ರಸ್ತಾಓ (೧೬.೬೧)*

ಆಗ ಬೇರೆ ವಿಷಯ ಪ್ರಸ್ತಾಪಿಸಿದೆ.

ಆದರೂ ಅರ್ಥದಲ್ಲಿ-

*ಕೋಣ್ಹಾಜ್ ವರ್ಮಿಜ್ ಹಾನ ಲಾಗೇ (೧೩.೨೬೪)*

ಯಾರ ವರ್ಮಕ್ಕಾದರೂ ಹತ್ತಬಹುದೇ?

*ಮಹುರೇಜ್ ಹಾನ ಕಾಜ್ ಹ್ಮಣಜೇ ವಿಷಕಂದಾತೇಜ್ (೫.೧೧೪)*

ವಿಷಕಾಂಡವನ್ನು ಮಧುರವೆಂದಾದರೂ ಹೇಳಬಹುದೇ?

*ಏಥ ಕಿರ ಸಾಹಿಜ್ ಆನ (೧೫.೩೫)*

ಇಲ್ಲಿ ನಿಜಕ್ಕೂ ಮತ್ತೆ (ಆದರೂ) ಇಲ್ಲ

*ಆಣಿ ಆಣಿಕಾಜ್ ಹಿ ಝಾಡಿಜ್ (೧೫.೧೭೯)*

ಮತ್ತು, ಮತ್ತೂ (ಇತರ ಅರ್ಥದಲ್ಲಿ) ಗಿಡಗಳಲ್ಲಿ

**ಆಣ-ಆಣೆ :**

ಕೇಶಿರಾಜನು ಹೇಳುವಂತೆ ಹಳಗನ್ನಡ 'ಆಣೆ' ಸಂಸ್ಕೃತದ 'ಆಜ್ಞಾ' ಶಬ್ದದ ತದ್ಭವವೇನೋ ಹೌದು. ಆಗ ಆದರ ಅರ್ಥ ಹುಕುಮು, ಕಮಾಂಡ್ ಎನ್ನುವ ಮಟ್ಟಿಗೆ ಸೀಮಿತವಾಗಿತ್ತು. ಉದಾಹರಣೆ ನೋಡಿರಿ.

*ಅಂತೆ ಕುಳ್ಳಿರಿರಪ್ಪೊಡಿಂ ನಿಮಗಾಣೆಯೆಂದಿರವೇಟ್ಟಿಳಾಕಾಂತನುಂ ತೊಡೆ ಸೋಂಕಿ ಕುಳ್ಳಿರೆ (ಪಂಪಭಾರತ ೧೨.೮೯)* ಅದು ಮುಂದೆ 'ಪ್ರತಿಜ್ಞೆ' ಎನ್ನುವ ಅರ್ಥದಲ್ಲಿ *ಹುಸಿಯಾದೊಡೆ ದೇವರ ಪಾದದ ಆಣೆ (ಶಬ್ದಮಣಿದರ್ಪಣ ಸೂತ್ರ ೧೦೭)* ಎಂದೂ ಉಪಯೋಗಿಸಲಾಯಿತು. 'ಮಾತು', 'ಮಾತಿಗೆ ತಪ್ಪಿದರೆ ಅನಿಷ್ಟ' ಎನ್ನುವ ಅರ್ಥದಲ್ಲಿ ಅದರ ಬಳಕೆ ನಂತರದ್ದು. ಈ ಬೆಳವಣಿಗೆ ಪೂರ್ವದ ಹಳಗನ್ನಡದಲ್ಲೇ ಆಗಿರಬಹುದಾಗಿದೆ. ಕೆಳಗಿನ ಪ್ರಯೋಗಗಳನ್ನು ಗಮನಿಸಬೇಕು.

*ಉಳ್ಳದನುಳ್ಳಂತೆ ಪೇಳೆಯಪ್ಪೊಡೆ ನಿನಗೆನ್ನಾಣೆಯೆಂದು ತನ್ನ ಮೇಗೆ ಸೂರುಳಿಸಿ ಬೆಸಗೊಂಡೊಡೆ (ವಡ್ಡಾರಾಧನೆ ೪೬.೨೪)*

*ಪೋದೊಡೆ ಧೂರ್ಜಟಿಯಾಣೆ, ಮೀರಿ ಪೋದೊಡೆ ಕಲಿಭೀಮನಾಣೆ (ಗದಾಯುದ್ಧ ೪.೪೫)*

*ನಿನ್ನಾಣೆ ನೀನಿನ್ನುಪೇಕ್ಷಿಸಿದಂದೆನ್ನಯ ಜೀವಮಂ ಬಿಡದಿರೆಂ (ಕಾದಂಬರಿ ಉ. ೬೨)*

'ಆಣೆ' ಶಬ್ದ 'ಆಣ' ಆಗಿ ಇವೇ ಅರ್ಥಗಳಲ್ಲಿ ಮರಾಠಿಗೆ ಹೋಗಿದೆ. ಅಕ್ಷಿಯ ಶಿಲಾಲೇಖದಲ್ಲಿ ಅದು ರಾಜಾಜ್ಞೆಯೆನ್ನುವ ಅರ್ಥ ಪಡೆದುದಾದರೆ ಲೀಳಾಚರಿತ್ರ ಜ್ಞಾನೇಶ್ವರೀಗಳಲ್ಲಿ 'ವಚನ' 'ಮಾತು' ಅರ್ಥವನ್ನೇ ಹೊಂದಿದೆ. ಹೀಗಾಗಿ ಮರಾಠೀ

ಪಂಡಿತರು ಸಂಸ್ಕೃತದ ಆಜ್ಞಾ > ಅಪಭ್ರಂಶ ಆಣಾ > ಮರಾಠೀ ಆಣ ಎಂದು ಸಿದ್ಧಿ ಹೇಳಿದ್ದಾರೆ. ಆದರೆ 'ಆಜ್ಞಾ' 'ಆಣಾ' ಗಳಲ್ಲಿ ಕನ್ನಡಕ್ಕೆ ವಿಶಿಷ್ಟವಾದ 'ವಚನ', 'ಮಾತು' ಅರ್ಥ ಬರುವುದಿಲ್ಲ. ಅಂತೆಯೇ ತುಳಪುಳೆಯವರು ಸಂಸ್ಕೃತ 'ವಚನ' ದಿಂದ ಮರಾಠಿಗೆ 'ಆಣ' ಬಂದಿರಬಹುದೇನೋ ಎಂದು ಶಂಕಿಸಿದ್ದಾರೆ! (ವಚನ > ವಅಣ > ಆಣ?)

ಲೀಳಾಚರಿತ್ರದಲ್ಲಿ:

ಪೂರ್ವಾಶ್ರಮದಲ್ಲಿ ಚಕ್ರಧರರು ಭಡೋಚದ ಪ್ರಧಾನಿಯ ಪುತ್ರ ಹರಿಪಾಳನ ದೇಹದಲ್ಲಿ ಪ್ರವೇಶ ಮಾಡಿದರು. ಅವನ ಗುಣಧರ್ಮ ಸ್ವೀಕರಿಸಿದರು. ಜೂಜು ಆಡಿದರು. ಸೋತರು, ಸಾಲಿಗರು ಬೆನ್ನಟ್ಟಿ, ಮನೆಯವರೆಗೆ ಬಂದಾಗಿನ ಸಂದರ್ಭ ಇದು.

*ಸರ್ವಜ್ಞೇ ಮ್ಹಣೇತಲೇ; ತುಮಚೀಜ್ ದೀಧಲೇಯಾಪಿಣ ಹೇ ಆರೋಗಣ ಕರೀ; ತರೀ ಗೋಪಾಳಣ್ಣೇ ಆನ (ಏಕಾಕ ೬)*

ಚಕ್ರಧರರೆಂದರು; ನಿಮ್ಮದು ಕೊಡದೆಯೆ ಇವನು ಊಟ ಮಾಡುವನು; ಆದರೆ ಗೋಪಾಲನ ಆಣೆ. (ಗೋಪಾಳಣ್ಣೇ ಇದು ಗುಜರಾತಿಯಲ್ಲಿಯ ಷಷ್ಠೀ ರೂಪ)

ಹೆಂಡತಿ ಕಮಳಾಇಸಾಗೆ ಸಾಲ ಮುಟ್ಟಿಸುವುದಕ್ಕೆಂದು ಆಭರಣ ಕೇಳುತ್ತಾರೆ.

*ಕಮಳಾಇಸೇಜ್ ಮ್ಹಣೇತಲೇಜ್: ಆಮ್ಹೀದೇಓಜ್ ತರಿ ಆಮ್ಹಾಇಜ್ ತೇಚಿ ಆನ (ಅದೇ)*

ಕಮಳಾಇಸಾ ಎಂದಳು : ನಾವು ಕೊಟ್ಟರೆ ನಮಗೂ ಅದೇ ಆಣೆ.

ಜ್ಞಾನೇಶ್ವರೀಯಲ್ಲಿ:

*ಚಕೋರಾಜ್ ಚಂದ್ರಾಮೃತ ಫಾವಲೇಜ್ ಏರಾಜ್ ಆಣ ವಾಉನಿ ಠಾಇ ವಾರಿಲೇಜ್ (೧೧.೯೬)*

ಚಕೋರನಿಗೆ ಚಂದ್ರನಿಂದ ಅಮೃತ ದೊರೆತಿತು. ಉಳಿದವರಿಗೆ ಆಣೆ ಹಾಕಿ ಪ್ರತಿಬಂಧಿಸಿತೇ?

*ಮನೇಜ್ ವಾಚಾ ಕಾಯೇಜ್ ಜೇಜ್ ಆಪುಲೀ ಆಣ ವಾಯೇಜ್ (೧೩.೧೨೮)*

ಯಾವುದು ಮನಸ್ಸಿಗೆ, ಮಾತಿಗೆ, ಕಾಯಕಕ್ಕೆ ತನ್ನ ಆಣೆ ಹಾಕುವುದೋ (ಅದು ಸುಖ)

ರುಕ್ಮಿಣೀಸ್ವಯಂವರದಲ್ಲಿ

*ದುಸರಾ ದಿಸೀಜ್ ದೇಖಾವಯಾ ಮುರಾರೀ ಏಕೀ ಆಣ ವಾಯಿಲೀ*

ಎರಡನೆಯ ದಿನ ಶ್ರೀಕೃಷ್ಣನನ್ನು ನೋಡಲಿಕ್ಕೆಂದು ಒಂದೇ ಆಣೆ ಹಾಕಿಕೊಂಡರು.

6. ಯಾದವಕಾಲೀನ ಮರಾಠೀ ಭಾಷಾ ಪುಟ ೩೧೬

**ಆಪೈಸಣೇಜ್, ಅಪ್ಪೈಸು, ಹೊಂದು**

*ಒಪ್ಪಿಸಿದೆಂ ಕೈಯ್ಯೆಡೆಯೆಂದಪ್ಪೈಸಿದ ನಿನ್ನ ಮಗನನೀಗಳೆ ನಿನಗೆ (ಪಂಪಭಾರತ ೯-೨೬)* ಎನ್ನುವಲ್ಲಿ ಬರುವ 'ಅಪ್ಪಯಿಸು' ಧಾತುವಿನ ಮೂಲ ಒಂದಲ್ಲ, ಎರಡು. 'ಆಲಿಂಗನೇ' ಅರ್ಥದಲ್ಲಿಯ 'ಅಪ್ಪು' ಧಾತುವಿಗೆ 'ಇಸು' ಪ್ರತ್ಯಯ ಹತ್ತಿ ಆದುದು ಒಂದು. 'ಆಗು' ಧಾತುವಿನ (ಮೂಲಧಾತು 'ಅಹ್' ಇರಬಹುದಾಗಿದೆ) ಭೂತಕಾಲವಾಚಕ ಕೃದಂತ 'ಅಪ್ಪ' ಕ್ಕೆ 'ಇಸು' ಪ್ರತ್ಯಯ ಹತ್ತಿ ಆದುದು ಇನ್ನೊಂದು. ಈ 'ಅಪ್ಪೈಸು' ಮರಾಠಿಗೆ ಹೋಗಿ 'ಆಪೈಸ' ಆಗಿ, ಅರ್ಥಭೇದ ಹೊಂದಿದ್ದನ್ನು ಹೀಗೆ ಮನಗಾಣಬಹುದಾಗಿದೆ.

*ಜೇ ಜ್ಞಾನ ನವ್ಹೇ ತೇಜ್ ಆಪೈಸೇಯಾ ಅಜ್ಞಾನ ಚಿ (೧೩.೭೫೨)*

ಯಾವುದು ಜ್ಞಾನವಲ್ಲವೋ ಅದು ಅಜ್ಞಾನವೆಂದು ತಿಳಿಯಯ್ಯ!

(ಕನ್ನಡದ 'ಅಯ್ಯ' 'ಏಯ್ಯ' ಆದುದನ್ನು ನೋಡಿದಿರಲ್ಲ!)

*ಪೈಜ್ ಸಿದ್ಧ ನಿತ್ಯ ಆಪೈಸಾ ಅನಾದಿಪಣೇಜ್ (೧೩.೧೧೦೧)*

ಅನಾದಿಕಾಲದಿಂದಲೂ (ಈ ಆತ್ಮನು) ಸಿದ್ಧನು, ನಿತ್ಯನು. (ಇದನ್ನು) ತಿಳಿ.

*ಘಟಾಚಿಯಾ ಖಾಪರಿಯಾ ಘಟಾಚಾಜ್ ಭಾಗೀಜ್ ಫೋಡಿಲೇಯಾಜ್*
*ಮಾ ಆಕಾಶ ಆಪೈಸೇಯಾ ಜಾಲೇಜ್ ಚಿ ಅಸೇ (೧೪.೩೧೪)*

(ಮಣ್ಣಿನ) ಕೊಡದ ಹಂಚನ್ನು ಕೊಡದ ಭಾಗದಲ್ಲಿ ಒಡೆದಾಗ (ಮೂಲದಲ್ಲಿ ದ್ವಿರುಕ್ತಿ ಇದೆ) ಅದು ಆಕಾಶವೇ ಇದೆ. (ಇದನ್ನು) ಅರಿಯಯ್ಯ

ಪಾಠಿಜ್ ಭೋಗಕ್ಷೀಣ ಆಪೈಸೇಜ್ ದೇಹ ಗೇಲೇಯಾಜ್ ತೇಜ್ ನ ದೀಸೇ (೧೫.೩೪೩)

ಬಳಿಕ, ಭೋಗವು ಕ್ಷಯ ಹೊಂದುವುದು. ದೇಹವು (ದೇಹದಲ್ಲಿಯ ಚೈತನ್ಯವು) ಹೋಗುವುದು. ಅದು ಕಾಣುವುದಿಲ್ಲ.

*ಆಣಿ ಜ್ಞಾನ ಹಿಜ್ ಆಪೈತೇಜ್ ಹೋಇಲ (೧೫.೩೫೯)*

ಮತ್ತು ಜ್ಞಾನವೂ ಪ್ರಾಪ್ತವಾಗುವುದು

(ಇಲ್ಲಿ ಸಂಸ್ಕೃತದ 'ಆಪ್' ಧಾತುವಿನ ಭೂತ ಕರ್ಮಣಿ ಕೃದಂತ 'ಆಪ್ತ' ಬಳಸಿರುವ ಸಾಧ್ಯತೆಯೂ ಇದೆ.)

**ಆಫಳಣೇಜ್ ಅಪ್ಪಳಿಸು**

'ಆಸ್ಫಾಲನ' ಅರ್ಥದಲ್ಲಿಯ 'ಅಪ್ಪಳಿಸು' ಈ ಹಳಗನ್ನಡ ಧಾತುವಿನ ಪಂಪಭಾರತದಲ್ಲಿಯ ಬಳಕೆ ಹೀಗೆ;

*ಕಾಳಿಂದಿಯ ಪಾವನಪ್ಪಳಿಸಿದೆಂ ಪಿಡಿದೀ ಸಿಲೆಯಲ್ಲಿ (೫-೬೮)*

ಈ ಧಾತು ಅದೇ ಅರ್ಥದಲ್ಲಿ 'ಅಫಳಣೇ'ಯಾಗಿ ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾಗಿದೆ.

*ಉದಕಾಚಿಯೇ ಭೂಮಿಕೇ ಅಫಳಿಲೇನ ಕಂದುಕೇಜ್*
*ಉಫಳೌನಿ ಮಾಘೌತೇಜ್ ನೈಯೇಚೀ ಹಾತಾ (೧೭.೨೭೯)*

ನೀರಿನ ಮೇಲ್ಭಾಗದ ಮೇಲೆ ಚೆಂಡು ಅಪ್ಪಳಿಸಿದಾಗ ಪುಟಿದು
ಹಿಂದಿರುಗಿ ಅದು ಕೈಯಲ್ಲಿ ಬರುವುದಿಲ್ಲ.

**ಆಬಣೇಜ್ ಹಬ್ಬು, ಬೆಳೆ**

ವಿಸ್ತರಿಸು ಅರ್ಥದಲ್ಲಿ ಹಳಗನ್ನಡದ 'ಪರ್ಬು' ಧಾತುವಿನಿಂದಾದ ರೂಪ ಹಬ್ಬು. ನೂರ್ವರೊಳೊರ್ವ ನಗುರ್ಬು ಪರ್ಬಿ ಪರಕಲಿಸೆ (ಪಂಪಭಾರತ ೧.೧೩೧ವ) ಪರ್ಬಿದುದು ತಮಂ (ಶಬ್ದಮಣಿದರ್ಪಣ ಸೂತ್ರ ೧೪೯) ಎಂಬುದಾಗಿ ಹಳಗನ್ನಡದಲ್ಲಿ ಉದಾಹರಣೆಗಳು ದೊರೆಯುತ್ತವೆ. ಈ ಹಬ್ಬು ಧಾತು 'ಆಬು' ಆಗಿ ಮರಾಠಿಯಲ್ಲಿ ಹೋಗಿದೆ.

*ವೋಖದಾಚೇನಿ ನಾವೇಜ್ ಅಮೃತೇಜ್ ದ್ಯೆಸಾ ನವಜ್ವರು ಆಬುಥೇ (೧೩.೭೨೧)*

ಔಷಧದ ಹೆಸರಿನಲ್ಲಿ ಅಮೃತವನ್ನು ಕೊಟ್ಟರೂ ಅದರಿಂದ
ನವಜ್ವರವು ಹಬ್ಬುತ್ತದೆ ಹಾಗೆ

(ಒಂಬತ್ತು ದಿನಗಳವರೆಗೆ ಬರುವ ತೀವ್ರ ಕಾಯಿಲೆ 'ನವಜ್ವರ' ಮರಣಾಂತ, ಆದಕ್ಕೆ ಔಷಧವಿಲ್ಲ ಎಂದು ಆಗಿನ ತಿಳಿವಳಿಕೆ)

*ಸ್ನೇಹಾಚಿಯಾ ಭರೋವರೀ ಆಬುಥಿಲಾ ದೀಪು ಫೇ ಥೋರೀ (೧೩.೧೧೪೩)*

ಎಣ್ಣೆ ತುಂಬಿದ ಬಳಿಕ ಹಬ್ಬಿದ ದೀಪವು ದೊಡ್ಡದಾಗುವಂತೆ -

*ವೈರಾಗ್ಯಾಚಾ ಓಲಾವಾ ವಿಚಾರಾಚಾ ತೋ ದಿವಾ ಆಂಬುಥಿತಾಜ್ (೧೮.೧೦೦೨)*

ವೈರಾಗ್ಯದ ಸ್ನಿಗ್ಧತೆಯಿಂದ ವಿಚಾರದ ಆ ದೀಪವು ಹಬ್ಬಿದಾಗ

ಇಲ್ಲಿ ಆಂಬುಥಿತಾಜ್ ಇದು ಅಪಪಾಠ. ಆಬುಥಿತಾಜ್ ಹೀಗೆ ಪಾಠವಿರಬೇಕು ಸಂದರ್ಭದಂತೆ ಸ್ನಿಗ್ಧತೆಯೆಂದು ಅರ್ಥವಿದ್ದರೂ ಓಲಾವಾ ಅಂದರೆ ಆರ್ದ್ರತೆ, ಹಸಿತನ. ಪೂರ್ವಹಳಗನ್ನಡದಲ್ಲಿ ಒಟ್ ಎಂದರೆ ಸಣ್ಣ ಪ್ರವಾಹವೆಂದು ಅರ್ಥವಿರಬೇಕು. ಆದರಿಂದ ಕನ್ನಡದಲ್ಲಿ ಒಟ್ಟು ಧಾತು (ಪ್ರವಾಹ ಅರ್ಥದಲ್ಲಿ) ಬಂದಿದೆ. ಪೂರ್ವ ಹಳಗನ್ನಡ 'ಒಟ್', ಹಳಗನ್ನಡದಲ್ಲಿ ಅದೇ ರೂಪದಲ್ಲಿ ಕಾಣಿಸಿಕೊಳ್ಳದಿದ್ದರೂ ಮರಾಠಿಯಲ್ಲಿ ಮಾತ್ರ ಓಹೋಳ ಆಗಿ (ಆ ಭಾಷೆಯಲ್ಲಿ ಹ್ರಸ್ವ ಎ, ಒ ಗಳಿಲ್ಲ.) ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾಗಿದೆ.

*ತೈಸೇಜ್ ತಜ್ವ ಚ ವಾಹಳಾ ಓಹಳ ಜಜ್ವ ನ ಪವತಿ ಗಂಗಾಜಳ (೯.೪೫೪)*

ಗಂಗಾಜಲವನ್ನು ಕೂಡುವ ವರೆಗೆ ಹಳ್ಳ ಪ್ರವಾಹಗಳು ಅವೇ
(ಹಳ್ಳ ಪ್ರವಾಹಗಳು)

(ಕೂಡಿದ ಬಳಿಕ ಹಳ್ಳಪ್ರವಾಹಗಳಾಗಿ ಉಳಿಯುವುದಿಲ್ಲ
ಗಂಗಾರೂಪವಾಗುತ್ತವೆ.)

ಮರಾಠಿ ಪಂಡಿತರು ಮಾತ್ರ (ಸಂ) ಓಘ > (ಅಪಭ್ರಂಶ) ಓಹ > (ಮ) ಓಹಳ ಎಂದು ಭಾವಿಸಿದ್ದಾರೆ.

**ಆಯಿ ಅಯ್, ಆಗು, ಇದು**

ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿ ಇಂದಿಗೂ ರೂಢವಾಗಿರುವ, ಹಳಗನ್ನಡದಲ್ಲಿ ಎಷ್ಟೋಂದು ಕಡೆಗೆ ಇಣಿಕಿ ಹೋದ 'ಅಯ್' ಧಾತುವನ್ನು ಕೇಶಿರಾಜನಾಗಲೀ ಮಿಕ್ಕ ಕೋಶಕಾರರಾಗಲೀ ಪರಿಗಣಿಸಿಲ್ಲ. 'ಅಯ್' (ಐ) ಧಾತುವಿನ ಪ್ರಯೋಗಗಳಿಲ್ಲದ ಜನಪದ ಭಾಷೆಯನ್ನು ನಾವು ಊಹಿಸುವದೂ ಕಷ್ಟವಾಗಿದೆ.

ಜ್ಞಾನೇಶ್ವರೀಯಲ್ಲೂ ಈ ಧಾತು ಧಾರಾಳವಾಗಿ ಪ್ರಯುಕ್ತವಾಗಿದೆ.

*ಅಂಧಾರಿಜ್ ಭವಂಡಿತಾಜ್ ಕೋಲಿತೀ ತೇ ದೀಸೇ ಜೈಸೀ ಆಇತೀ ರೇಖ ಸ್ವೆಂಭ (೧೫.೧೩೬)*

ಕತ್ತಲೆಯಲ್ಲಿ ಕೊಳ್ಳಿಯನ್ನು ತಿರುಗಿಸಿದರೆ ಅದು ಸ್ವಯಂಭೂ
ಗೆರೆ ಆದಂತೆ ಕಾಣುತ್ತದೆ.

*ಪಾಣೀ ಬುಡಲೂಜ್ ಯೇ ಮಿಾಠಾತೇಜ್ ತಜ್ವ ಮಿಾಠಚಿ ಪಾಣೀ ಆತ್ತೇ (೧೬.೭೨)*

ಉಪ್ಪನ್ನು ನೀರಲ್ಲಿ ಮುಳುಗಿಸಬಹುದು. ಆಗ ಉಪ್ಪೇ ನೀರು
(ಆಕ್ಕ) ಐತಿ

*ಕಾಜ್ ಪೇಜ್ವ ಕರುನಿ ಆಇತೇಜ್ ಪೇರುಜ್ ಜಾಇಜೇ (೧೭.೨೪೪)*

ಹಗೇವು (ನೆಲದಲ್ಲಿಯ ಧನ್ಯ ಕೋಠಾರ) ಮಾಡಲಿಕ್ಕೆ ಐತಿ
ಅಂತ ಬಿತ್ತಲಿಕ್ಕೆ ಹೋಗುವರೇ?

*ಬಾಬುಳಿ ಸಾರಾವೀ ಹಾತೇಜ್ ಪರಿ ಪಾಣೀಜ್ ಆಸೇ ಆಇತೇಜ್ (೧೫.೪೩೨)*

ಬೊಬ್ಬುಳಿ (ಗುಳ್ಳೆಗಳನ್ನು) ಕೈಯಿಂದ ಸರಿಸಬೇಕು. ಆಗ ನೀರು
ಐತೇ ಐತಿ.

*ಉದೈಜತಾಜ್ ದಿನಕರು ಪ್ರಕಾಶು ಆತೇ ಅಂಧಾರು (೧೪.೯೭೮)*

ಸೂರ್ಯನು ಉದಯಿಸಿದಾಗ ಕತ್ತಲೆ ಬೆಳಕು (ಆಕ್ಕ) ಐತಿ.

**ಆರೋಗಣೇ (ಧಾತು-ನಾಮಪದ) ಆರೋಗಿಸು, ಉಣ್ಣು ಆರೋಗಣೇ ಊಟ**

*ಮಜ್ಜನಮಂಬುಗದಾರೋಗಿಸಲ್ಲೊದಿರ್ಪಿರಪಿದೇಂ ನಾಣಳ್ಕಿದೇಂ (ಪಂಪ ಭಾರತ ೪.೬೪) ಲಿಂಗಭಕ್ತನ ವಿವಾಹದಲ್ಲಿ ಶಿವಗಣಂಗಳಿಗೆ - ಆರೋಗಣೆಯ*

ಮಾಡಿಸಿ (ಚೆನ್ನಬಸವೇಶ್ವರ ವಚನಗಳು ೧೧೩) ಹೀಗೆ ಹಳಗನ್ನಡ ನಡುಗನ್ನಡಗಳಲ್ಲಿ ಬರುವ 'ಆರೋಗಿಸು' 'ಆರೋಗಣೆ' ಶಬ್ದಗಳು ಅದೇ ಅರ್ಥಗಳಲ್ಲಿ ಅದೇ ರೂಪಗಳಲ್ಲಿ ಜ್ಞಾನೇಶ್ವರೀಯಲ್ಲೂ ಲೀಳಾಚರಿತ್ರದಲ್ಲೂ ಕಾಣಸಿಕೊಳ್ಳುತ್ತವೆ.

ಜ್ಞಾನೇಶ್ವರೀಯಲ್ಲಿ,

*ಪುರೇ ನ ಹ್ಮಣೇ ಚಿ ಧನುರ್ಧರಾ ಆರೋಗಿತಾಙ್ (೪.೧೦೬)*

(ಆತ್ಮಬೋಧವನ್ನು) ಉಣ್ಣುವಾಗ, ಅರ್ಜುನನೇ, ಅವನು ಸಾಕೆಂದು ಹೇಳುವುದೇ ಇಲ್ಲ.

*ಆಣಿ ಯೇತುಲೀ ಹೇ ಆರೋಗಣ ಕರಿತಾಙ್ ಭೂಖೇ ನಾಹಿಙ್ ಉಣೇಪಣ (೧೧.೪೨೨)*

ಮತ್ತು ಎಷ್ಟೊಂದು ಊಟಮಾಡಿದರೂ ಹಸಿವೆಗೆ ಕೊರತೆಯಿಲ್ಲ.

*ಮಗ ದೇಓ ಆರೋಗಿತಿ (೧೩.೪೨೧)* ಬಳಿಕ ದೇವರು ಉಣ್ಣುವರು.

*ಆರೋಗಿಲೀನ ರಸೇಙ್ ಶರೀರಭರೀ ಸರಿಸೇಙ್ (೧೮.೩೩೭)*

ರಸಮಯುವಾದದ್ದನ್ನು ಉಣ್ಣುವುದರಿಂದ ಶರೀರವು ಒಳ್ಳೆಯ ರಸಗಳಿಂದ ತುಂಬಿಕೊಳ್ಳುತ್ತದೆ.

*ಆಗಿ ಉಠಿಲಾ ಆರೋಗಣೇ ಜೈಸಾ ಖಾದ್ಯಾ ಖಾದ್ಯ ನೇಣೇ (೧೬.೨೪೫)*

ಅಗ್ನಿಯು ಉಣ್ಣುವುದಕ್ಕೆ ಎದ್ದರೆ ಖಾದ್ಯ-ಅಖಾದ್ಯ ಹೇಗೆ ಲೆಕ್ಕಿಸುವುದಿಲ್ಲವೋ-

ಲೀಳಾಚರಿತ್ರದಲ್ಲಿ.

*ಸರ್ವಜ್ಞೇಙ್ ಮ್ಹಣೀತಲೇಙ್; ತುಮಚೇಙ್ ದೀಧಲೇಯಾವಿಣ ಹೇಙ್ ಆರೋಗಣ ಕರೀ; ತರಿ ಗೋಪಾಳಣ್ಣೆ ಆಣ (ಏಕಾಕ ೬)*

ಚಕ್ರಧರರೆಂದರು; ನಿಮ್ಮದನ್ನು ಕೊಡದೆಯೆ ಇವನು ಉಂಡರೆ ಗೋಪಾಲನ ಆಣೆ.

*ಇ ಕಾಇ ರೇ; ಮೇಲಾ ಜಾಏ; ಮ್ಹಣೌನಿ ತೇಥಚಿ ಬೈಸತಿ; ಕಣು ಕಣು ಆರೋಗೀತೀ (ಏಕಾಕ ೨೧)*

ಇದು ಏನೋ; ಸತ್ತು ಹೋಗು; ಎಂದು ಅಲ್ಲೇ ಕುಳಿತರು; ಅಗಳು ಅಗಳು ಉಂಡರು

**ಆವಾಙ್ಕಾ, ಅವುಂಕು, ಒತ್ತು ಹಿಚಾಕು ಸಂಕೋಚಿಸು**

*ಕಣ್ತೆರಿತರ್ಪಿನೆಗಮವುಂಕಿ ಸಿಂಹನಾದದಿನಾರ್ದಂ* (ಪಂಪಭಾರತ ೮.೫೮) *ಯಮುನಾನದೀತರಂಗಮನಮುಂಕಿ ವನಲತೆಯ ಮನೆಗಳಂ ಸೋಂಕಿ* (ಅದೇ ೫.೫೩) ಎನ್ನುವಲ್ಲಿ ಬರುವ 'ಅವುಂಕು' 'ಅಮುಂಕು' ಧಾತು, ಕ್ರಿಯಾಪದವಾಗಿ ನಾಮವಾಗಿ 'ಆವಾಕಾ' ರೂಪದಲ್ಲಿ ಮರಾಠಿಗೆ ಹೋಗಿದೆ. ಅರ್ಥ ಭೇದಗಳನ್ನು ಗುರುತಿಸಬಹುದಾಗಿದೆ.

*ಮಾಯೇಪುಢಾಜ್ ಬಾಳಕಾ ರಿಗತಾಜ್ ನ ಪಡೇ ಚಿ ಆವಾಜ್‌ಕಾ (೧೩.೩೬೦)*

ತಾಯಿಯೆದುರು ಹೋಗುವಾಗ ಮಗುವಿಗೆ (ಯಾವ) ಸಂಕೋಚವೂ ಎನಿಸುವುದಿಲ್ಲ.

*ತರಿ ಜೀವೀಜ್ ಐಸೇ ಆವಾಜ್‌ಕೇ ಹ್ಮಣೇ ದಾಸ್ಯ ಕರೀನ ನಿಕೇಜ್ (೧೩.೪೦೩)*

(ಶ್ರೀಗುರುವಿನ) ದಾಸ್ಯವನ್ನು ಚೆನ್ನಾಗಿ ಮಾಡುವೆನೆಂದು (ಆವನು ತನ್ನ) ಜೀವದ ಮೇಲೆ ಒತ್ತಡ ತರುತ್ತಾನೆ.

*ರುಜ್‌ಖಾಚಾ ಆವಾಜ್‌ಕಾ ಜೈಸೀ ಕಾಜ್‌ಬೀಜ ಕಣಿಕಾ (೧೪.೯೪)*

ಬೀಜದ ಕಾಳಿನಲ್ಲಿ ವೃಕ್ಷವನ್ನು ಅಮುಕಿ ಹಾಕಿದಂತೆ

*ತೇಜ್ ಮಹಾಸಿದ್ಧಾಂ ಚಾ ಆವಾಜ್‌ಕಾ ಸಿದ್ಧಾಂತ ಕಕ್ಷಾ ಅನೇಕಾ (೧೮.೧೨೩೬ ಪಾಠಭೇದ)*

ಮಹಾಸಿದ್ಧರ ಅಳವಿನಲ್ಲಿ (ಅವರು ಅವಚಿಕೊಳ್ಳಬಹುದಾದ) ಸಿದ್ಧಾಂತಗಳು ಅನೇಕ

*ಏವಂ ಭಾರತಾಚಾ ಆವಾಜ್‌ಕಾ ಆಣೂನಿ ಅಕ್ಷರಾ ಏಕಾ (೧೮.೧೬೩೮ ಪಾಠಭೇದ)*

ಹೀಗೆ ಭಾರತದ ಸಾರವನ್ನು (ಮಹಾಭಾರತವನ್ನು ಹಿಚುಕಿ) ಒಂದು ಅಕ್ಷರದಲ್ಲಿ ತಂದು - (ಇಲ್ಲಿ 'ಅಕ್ಷರ'ಕ್ಕೆ ಬದಲಾಗಿ 'ಶ್ಲೋಕ'ವೆಂದೂ ಪಾಠಭೇದವಿದೆ. ಅದೇ ಸರಿಯಾದದ್ದು. ಜ್ಞಾನೇಶ್ವರರಿಗೆ ಅಭಿಪ್ರೇತವಿರುವ ಶ್ಲೋಕ 'ಯತ್ರ ಯೋಗೇಶ್ವರಃ' ಇತ್ಯಾದಿಯಾದದ್ದು ೧೮.೭೮ ಗೀತಾ)

**ಆಸು - ಅಚ್ಚು, ಒಂದು ನಾಣ್ಯ**

*ತುಂಬಳ ಬೀಡಿನ ಶ್ರೀ ಪಂಚಲಿಂಗ ದೇವರಂಗೆ ಭೋಗಕ್ಕಂ ಗಾಣ ೨ ಅಚ್ಚಿನ ಟೆಂಕಸಾಲೆಯಲು ದಳಕ್ಕೆ ವೀಸ (ಸೌ. ಇಂ ಇ. ೯-೧ ೨೨೮-೧೧ ಕ್ರಿ. ಶ. ೧೧೩೩)*

*ಎನುತಲ್ಲಿ ಹನ್ನೆರಡು ಸಾವಿರಚ್ಚಂಕೊಟ್ಟು ಮನವಾರೆ ಪಡಿಯ ಸಾವಿರ ಪೊನ್ಗಳಂ ಕೊಟ್ಟು (ನಂಬಿಯಣ್ಣನ ರಗಳೆ ೧೧.೮೩)*

ಹೀಗೆ ಹನ್ನೆರಡನೆಯ ಶತಮಾನದಲ್ಲಿಯ ನಾಣ್ಯ ವಿಶೇಷವಾದ 'ಅಚ್ಚು' ಶಬ್ದದ ಪ್ರಸ್ತಾಪ ಬರುತ್ತದೆ. ಈ ಶಬ್ದ ಆಸು ಆಗಿ ಲೀಳಾಚರಿತ್ರದಲ್ಲಿ ಬಳಸಲಾದುದನ್ನು ಕಾಣಬಹುದಾಗಿದೆ.

*ತೀಯಾ ಆಸೂಚೇಜ್ ಪುಜಾ ದರ್ಸನ ಕೇಲೇಜ್ (ಏಕಾಕ - ೪೧)*

ಆ ಅಚ್ಚುಗಳ ಪೂಜೆ ದರ್ಶನ ಮಾಡಿದನು (ಅರ್ಪಿಸಿದನು ಎಂದು ಭಾವಾರ್ಥ)

*ಸರ್ವಜ್ಞೇಜ್ ಮ್ಹಣೀತಲೇಜ್; ಚಿಂಚೋರಿಚೀಯಾ ಆಸೂ ಕರಾ (ಏಕಕ ೫೮)*

ಚಕ್ರಧರರೆಂದರು; ಹುಣಿಸೆ ಬೀಜದ ಅಚ್ಚು ಮಾಡಿರಿ (ಆಟದಲ್ಲಿ)

*ಆಸು ದರಿಸನಾ ಕೇಲಿ (ಪೂ ೬) ಅಚ್ಚು ದರ್ಶನ ಮಾಡಿದಳು (ಅರ್ಪಿಸಿದಳು)*
*ಟೋಪರಿಯಾಚಿಯಾ ಬಾಲೀ ದರಿಸನಾಲಾಗಿ ಆಸೂ ಬಾಂಧಲೀ (ಪೂ.೫೧)*
*ಟೊಪ್ಪರದ ಬಾಲದಲ್ಲಿ (?) ದರ್ಶನಕ್ಕಾಗಿ (ಅರ್ಪಿಸುವುದಕ್ಕಾಗಿ) ಅಚ್ಚು ಕಟ್ಟಿಕೊಂಡರು.*

ಟೊಪ್ಪಿಗೆ ಶಬ್ದ ಹಳಗನ್ನಡದಲ್ಲಿ ಬರುತ್ತದೆ (ಶಬ್ದಮಣಿದರ್ಪಣ ಸೂತ್ರ ೭೫) ಅದೇ ಅರ್ಥದ 'ಟೊಪ್ಪರ' ಶಬ್ದ ಸಮತೆಯೆಂಬ ಕಂಥೆಯ ತೊಟ್ಟು ಸುಬುದ್ಧಿಯೆಂಬ ಟೊಪ್ಪರನಿಕ್ಕಿ ವಿಷಯವೆಂಬ ಹಾವುಗೆಯ ಮೆಟ್ಟಿ (ಚೆನ್ನಬಸವೇಶ್ವರ ವಚನಗಳು ೧೧೨೧) ಈ ವಚನದಲ್ಲಿ ಕಾಣಸಿಗುತ್ತದೆ. ಇವೆರಡೂ ಕನ್ನಡ ದೇಸೀ ಶಬ್ದಗಳು. ಕೆಲವರು ಇವು ಮರಾಠೀ ಮೂಲವೆಂದು ತಿಳಿದದ್ದು ಸರಿಯಲ್ಲ. ಮರಾಠೀ ಪಂಡಿತರೇ 'ಟೋಪರೆಜ್' ಶಬ್ದ ಪ್ರಾಕೃತ ಟಸರೊಟ್ಟಂ ಶಬ್ದದಿಂದ ಸಿದ್ಧವಾಯಿತೆಂದು ಭಾವಿಸುತ್ತಾರೆ.[7] ಸಿದ್ಧಿಯೂ ಸರಿಯಲ್ಲ. ಅರ್ಥವೂ ಹೊಂದುವುದಿಲ್ಲ.

**ಆಳ, ಆಳಿ, ಆಟಿ, ಆರೋಪ, ಹೀನತೆ**

ಆಟಿ ಶಬ್ದದ ಹಳಗನ್ನಡದಲ್ಲಿಯ ಪ್ರಯೋಗಗಳು ನನಗೆ ದೊರೆಯದಿದ್ದರೂ 'ಏಕಾಗ್ರಾಹಿತ್ವ' ಎಂಬರ್ಥವಿತ್ತೆಂದು ಶಬ್ದಮಣಿದರ್ಪಣ ಹೇಳುತ್ತದೆ. ನಡುಗನ್ನಡದಲ್ಲಿ ನೀ ಮಾಡಿದ ಮಾಯೆಯ ಮಾಟವದರಾರನಾಳಗೊಳಿಸಿತ್ತು (ಚೆನ್ನಬಸವೇಶ್ವರರ ವಚನಗಳು ೩೨) ಹೀಗೆ ಪ್ರಯೋಗ ದೊರಕುತ್ತದೆ. ಜ್ಞಾನೇಶ್ವರೀಯಲ್ಲಿಯ ಈ ಬಳಕೆ ಗಮನಿಸಬೇಕು.

*ತೈಸೇಜ್ ಚ ಹಾ ಅನಾದಿ ಐಸೀ ಆಹೇ ಶಾಬ್ದೀ*
*ತೇ ಆಳು ಕೀ ನೋಹೇ ನುರೋಧಿಜ್ ಬೋಲಾತೇಜ್ ಏಯಾ (೧೫.೧೧೧)*

ಹಾಗೆ ಇದು (ಈ ಸಂಸಾರ ವೃಕ್ಷವು) ಅನಾದಿಯೆಂದು ಮಾತಿನಲ್ಲಿದೆ (ಹೇಳುತ್ತಾರೆ). ಇದು ಹೀನತೆ (ಆರೋಪ)ವಲ್ಲ. ಈ ಮಾತನ್ನು ವಿರೋಧಿಸಲೂ ಆಗದು.

ರಾಜವಾಡೆ ಅವರ ಪಾಠದಲ್ಲಿ 'ಆಳು ಕೀ' ಕೂಡಿಸಿ 'ಆಳುಕೀ' ಎಂದು ಒಂದೇ ಶಬ್ದ ಮಾಡಿದ್ದಾರೆ. ಕನ್ನಡದ 'ಅಳುಕು' ಶಬ್ದ ಮರಾಠಿಯಲ್ಲಿ ಹೋಗಿದೆ. ಅದನ್ನು ಕುರಿತು ಬೇರೆಡೆ ವಿವರಿಸಿದ್ದೇನೆ. ಆದರೆ ಇಲ್ಲಿ 'ಅಳುಕು' ಅಭಿಪ್ರೇತವಿಲ್ಲ. ಇತರ ಪಾಠಗಳಲ್ಲಿ 'ತೋ ಆಳು ನೋಹೇ ನುರೋಧೀಜ್' ಎಂದೇ ಪಾಠಭೇದವಿದೆ.

*ತರಿ ದೇವೇಜ್‌ಸಿಜ್ ಸಲಗಿ ಕೇಲೀ ಜೇ ವಿಶ್ವರೂಪಾಚೀ ಆಳೀ ಘೇತಲೀ (೧೧.೫೬೯)*

ಆದರೆ ಪರಮಾತ್ಮನೊಡನೆ ಸಲುಗೆ ಮಾಡಿದೆನು. ವಿಶ್ವರೂಪಕ್ಕಾಗಿ ಹಟ ಹಿಡಿದೆನು.

ಇಲ್ಲಿ ಕೇಶಿರಾಜನು ಹೇಳಿದ ಏಕಾಗ್ರಾಹದ ಅರ್ಥವಿದೆ.

---

7. ಯಾದವ ಕಾಲೀನ ಮರಾಠೀ ಭಾಷಾ ಪುಟ-೪೦

*ಗ್ರಂಥಾಚೇ ಹೇಜ್ ಆಳಿಯಾಡೆಜ್ ಸಿದ್ಧೀಗೇಲೇಜ್ (೧೮.೧೭೫೪)*

ಗ್ರಂಥದ ಈ ಹಟವು ಸಿದ್ಧಿಗೆ ಬಂದಿತು.

**ಆಳುಕ ಆಳುಕು, ಹೆದರಿಕೆ, ನಡುಗುವಿಕೆ**

**ಹಳು ಅಳ್ಳು, ಮೆಲ್ಲಗೆ**

ಅಳ್ಳಿಟಿ (ಅಳ್ಳು + ಇಟಿ) ಸ್ಪಂದನೇ, ಎಂದು ಕೇಶಿರಾಜನು ಧಾತುಪ್ರಕರಣದಲ್ಲಿ ಹೇಳುತ್ತಾನೆ. 'ಇಟಿ ಛೇತನೇ' ಹೊಡೆ, ತಿವಿ ಎಂಬ ಧಾತುವೂ ಇದೆ. ಹಾಗಾದರೆ 'ಅಳ್ಳು' ಶಬ್ದದ ಅರ್ಥ 'ಹಗುರಾಗಿ, ನಯವಾಗಿ' ಎಂದಂತಾಯಿತು. *ದಶರಥನ ಭಯ ಘೋಷಣೆಯೊಡನೆ ಜಯಪತಾಕೆ ನಭಮಂ ಅಳ್ಳಿಟಿಯೆ (ಪಂಪರಾಮಾಯಣ ೩-೬೦ ವ)*

ಈ 'ಅಳ್ಳು' ಮರಾಠಿಯಲ್ಲಿ 'ಹಳು'ವಾಗಿ ಹೋಗಿದೆ. *ಸಾರಥಿ ಹಳು ಹಳೆಂಬಬ್ಬರಣೆ (ಕುಮಾರ ವ್ಯಾಸ ಭಾರತ ವಿರಾಟಪರ್ವ ೮-೬)* ಯಲ್ಲಿ ಬರುವ 'ಹಳು ಹಳು' ಶಬ್ದಗಳು ಮರಾಠಿಯವೆಂದು ಪ್ರ. ಗೋ ಕುಲಕರಣಿಯವರು ಭಾವಿಸಿದ್ದು ಸರಿಯಲ್ಲವೆಂಬುದು 'ಅಳ್ಳು' ಹಳಗನ್ನಡ ಶಬ್ಬ ಪ್ರಯೋಗದಿಂದ ಸ್ಪಷ್ಟವಾಗಬೇಕು. *ಅಮರೆ ಬಿಗಿದೊಗೆದ ಮೊಲೆಗಳೇಟಿಸೊಳಳ್ಳಾಡಿ (ಪಂಪಭಾರತ ೫.೬೨ವ)* ಇದು ಹಳಗನ್ನಡದಲ್ಲಿಯ ಇನ್ನೊಂದು ಉದಾಹರಣೆ. ಇನ್ನು ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳು.

*ಅತಿ ಹಳುವಾರ ಪಣ ಚಿತ್ತಾ ಆಣೂನಿಯಾಜ್ (೧.೫೭)*

ಮನಸ್ಸಿಗೆ ಹಗುರುತನವನ್ನು ತಂದುಕೊಂಡು (ಆಸ್ಥೆಯಿಂದ, ನಾಜೂಕಾಗಿ)

*ಜೇಜ್ ಯಮನಿಯಮಿಾಜ್ ಹಳುವಾರಲೇಜ್ ಆಇತೇಜ್ ಹೋತೇಜ್ (೪.೧೩೩)*

ಯಾವುದು (ಮನಸ್ಸು) ಯಮನಿಯಮಗಳಿಂದ ಹಗುರು ಆಗಿತ್ತೋ

*ಬಾಳಕ ಹಳೂ ಹಳೂ ಯೇ ತರಿ ತೇಜ್ ನ ಪವೋಜ್ ಕಾಇ (೧೮.೧೭೦೦)*

ಮಗು ಮೆಲ್ಲ ಮೆಲ್ಲಗೆ ಬಂದರೆ ಅದು (ಇಚ್ಛಿತ ಸ್ಥಳಕ್ಕೆ) ತಲುಪದೇ?

ಅಳ್ಳು ಶಬ್ದಕ್ಕೆ 'ಕು' ಪ್ರತ್ಯಯ ಹತ್ತಿ ಸಿದ್ಧವಾದ ನಾಮ ಮತ್ತು ಧಾತು ರೂಪಗಳು 'ಅಳುಕು'. *ಎನ್ನ ಬಳ್ಕಿದಳ್ಕಿದ ಬಗೆಗಂಡಿರೇ (ಪಂಪಭಾರತ ೧೧.೫೦) ಅದಿರದ ಚಿತ್ತಂ ಅಳ್ಕದ ಮನಂ (ಅದೇ ೭.೭೯)*

ಹೀಗೆ ಹಳಗನ್ನಡದಲ್ಲಿಯ ಪ್ರಯೋಗಗಳಿವೆ. ಅದೇ ಅರ್ಥದಲ್ಲಿ ಜ್ಞಾನೇಶ್ವರೀಗೆ ಹೋದ ಬಗ್ಗೆ ಈ ಉದಾಹರಣೆಗಳು;

*ಏಸೇನಿ ಪಿಜ್ ಜರಿ ಸೇವಿಜ್ಯೆಲ ತರಿ ತೇ ಅಳುಕಿಚಿ ಅಗಾ ಉರ್‍ಯೆಲ (೬.೨೨೨)*

ಹೀಗಿದ್ದರೂ ಅದನ್ನು (ಪರಧರ್ಮವನ್ನು) ಸೇವಿಸಿದರೆ ಅಳುಕು
ಮಾತ್ರ ಉಳಿಯುವುದು

*ಇಯಾ ಬಹುವಾ ಅಳುಕಿ ಜೇ ಅಹೋಜ್ ಸಲಗಿ ಕರಿತ (೯.೭)*

ಈ (ಬಗ್ಗೆ) ಬಲು ಅಳುಕಿನಿಂದಲೇ (ನಿಮ್ಮೊಡನೆ) ಸಲುಗೆ
ಮಾಡುತ್ತಿದ್ದೇನೆ.

'ಅಳ್ಳು' ಶಬ್ದದಿಂದಾದ ಮರಾಠಿ ಧಾತು 'ಹಾಲಣೇಜ್' (ಅಲುಗಾಡು) ಅರ್ಥದಲ್ಲಿ. ಜ್ಞಾನೇಶ್ವರೀಯಲ್ಲಿಯ ಪ್ರಯೋಗವಿದು.

*ಅಭ್ರ ವಾತೇಜ್ ಹಾಲೇ (೨.೬)* ಗಾಳಿಯಿಂದ ಮೋಡ ಅಲುಗಿತು.

'ಅಳ್ಳು' ಶಬ್ದದಿಂದ 'ಸಂಚಲನ' ಅರ್ಥದಲ್ಲಿ ಅಳ್ಳಾಡು ಅಲ್ಲಾಡು ಶಬ್ದವೂ ಬಳಕೆಯಲ್ಲಿ ಬಂದಿದೆ. ಈ 'ಅಲ್ಲು' (ಅಥವಾ ಅಳ್ಳು) ಶಬ್ದದಿಂದ ಜೋಗುಳ ಅರ್ಥದಲ್ಲಿ ಹಲ್ಲರ (ತೊಟ್ಟಿಲು ತೂಗುವಾಗಿನ ಹಾಡು) ಶಬ್ದವೂ ಜ್ಞಾನೇಶ್ವರೀಯಲ್ಲಿ ಕಾಣಿಸಿಕೊಂಡಿದೆ.

*ಅನಾಹತಾಚಾ ಹಲ್ಲರು ಗಾಸೀ (೧೨.೭)* ಅನಾಹತದ ಜೋಗುಳ ಹಾಡುತ್ತೀ.

ಇಂ ಇಂ ಇನ್ನು

'ಇನ್ನು ಮುಂದೆ', 'ತತಃ' ಎನ್ನುವ ಅರ್ಥದಲ್ಲಿಯ 'ಇಂ' ಶಬ್ದದ ಪ್ರಯೋಗ ಹಳಗನ್ನಡದಲ್ಲಿ ಹೀಗಿವೆ.

*ಇಂ ಬಾರದಿರಿಂ (ಕವಿರಾಜಮಾರ್ಗ ೨.೧೪) ಇಂ ಪೆಱತಾವುದು ಸಂಸಾರ ಸಾರ ಸರ್ವಸ್ವ ಫಲಂ (ಪಂಪಭಾರತ ೧.೫೫)*

ಈ ಶಬ್ದ ಇದೇ ರೂಪದಲ್ಲಿ ಇದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲಿ ಅಲ್ಲಲ್ಲಿ ಕಾಣಸಿಕ್ಕುತ್ತದೆ. ಉದಾಹರಣೆ ನೋಡಿರಿ.

*ಹೇಜ್ ಇಂ ಸಾಂಘೋಜ್ ವಿಮಳ ಚಿತ್ತದೇ ಪಾಜ್ (೧೮.೯೨)*

ಇದನ್ನು ಇನ್ನು ಹೇಳುವುದು, ನಿರ್ಮಲ ಮನಸ್ಸು ಕೊಡು,
ಅಪ್ಪ.

*ಆಣಿ ಹಾ ಇಂ ಬೋಲೌನಿ ಭಾವಿ ತುಜ ದಾಉನಿ ಆಮ್ಹೀಜ್ ಬೀಹೋಜ್ (೧೮.೨೯೨)*

ಮತ್ತು ಈ (ಐಕ್ಯದ) ಭಾವವನ್ನು ಇನ್ನು ಮಾತಾಡಿ
ತೋರಿಸಲು ನಾವು ಹೆದರುವುದು.

*ಜರ್ಹಿಂಜ್ ಸಮಾಪ್ತಿತೇಜ್ ಪವೇ ತರ್ಹಿಂಜ್ ವಿಶೇಷೇಜ್ ತೇಥ ತೋಷಾವೇಜ್ ಹೇಜ್ ಇಂ ನಕೋ (೨.೨೬೮ ಪಾಠಭೇದ)*

(ಆರಂಭಿಸಿದ ಕರ್ಮವು ದೈವಶಾತ್) ಕೊನೆಗಂಡರೆ, ಅಲ್ಲಿ
ವಿಶೇಷವಾಗಿ ಸಂತೋಷಗೊಳ್ಳುವುದು, ಇದಿನ್ನು ಪಡೆಯಬೇಡ
(ಇಲ್ಲಿ ನ+ಕೋ ಅರ್ಥ ಸ್ಪಷ್ಟವಾಗಿದೆ)

ಮೇಲಿನ ಎರಡೂ ಉದಾಹರಣೆಗಳಲ್ಲಿ ಏಕನಾಥರು ತಿದ್ದಿದರೆನ್ನಲಾದ ಗ್ರಂಥದ ಪ್ರತಿಗಳಲ್ಲಿ 'ಇಂ' ಬದಲಾಗಿ 'ಹೀ' ಹಾಕಿದ್ದಾರೆ. ಇದರಿಂದಾಗಿ 'ಇನ್ನು' (ತತಃ) ಎನ್ನುವ ಬದಲು 'ಕೂಡ' (ಅಪಿ) ಎಂದರ್ಥ ಹೊರಡುತ್ತದೆ. ಇದು ಭಾವಕ್ಕೆ ಮಾರಕವಾಗಿದೆ.

- ಇಕ - ಇಕೆ

*ಪ್ರಕಟಂ ಚೇತನಭಾವದೊಳ್ ಇಕೆ, ತನ, ಮೆಯಕ್ಕುಂ* ಎಂಬುದಾಗಿ ಭಾವನಾಮಗಳನ್ನು ಸಾಧಿಸುವ ತದ್ಧಿತ ಪ್ರತ್ಯಯಗಳ ಬಗ್ಗೆ ಕೇಶಿರಾಜನು ಹೇಳುತ್ತಾನೆ. (ಶಬ್ದಮಣಿದರ್ಪಣ ಸೂತ್ರ ೨೨೨) ಹಳಗನ್ನಡದಲ್ಲಿಯ ಉದಾಹರಣೆಗಳಿವು.

ಆದಮಾನುಮಚಿತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ (ವಡ್ಡಾರಾಧನೆ ೬.೨೦) ಆದುದೊಂದು ಮಾನಸಿಕೆ ಮನಂಗೊಳಲ್ಕೆನಗಂ (ಆದಿಪುರಾಣ ೧೨.೩೯) ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪುರಾಣ ೬.೪೮ವ) ಬಿಡು ನೀನಂಜಿಕೆಯಂ ಕಪಿಂಜಲಕ ದೋಷ ನಿನ್ನದಲ್ತು (ಕರ್ಣಾಟಕ ಕಾದಂಬರಿ ಉತ್ತರಾರ್ಧ ೭೨.೪) ಈ 'ಇಕ' ಪ್ರತ್ಯಯವು ಅದೇ ಪ್ರಯೋಜನಕ್ಕಾಗಿ ಮರಾಠಿಯಲ್ಲಿ ಹೋಗಿದೆ. ಮರಾಠಿ ಪಂಡಿತರು ಈ ಪ್ರತ್ಯಯ ಅಪಭ್ರಂಶದ 'ಇಕ್ಕ'ದಿಂದ ಬಂದಿತು ಎಂದಿದ್ದಾರೆ. ಸಂಸ್ಕೃತದಲ್ಲಿಲ್ಲದ ಈ ಪ್ರತ್ಯಯ ಅಪಭ್ರಂಶದಲ್ಲಿ ಕೂಡ ಕನ್ನಡದಿಂದಲೇ ಹೋಗಿರಬಹುದೆಂದು ನನ್ನ ಅನಿಸಿಕೆ. ಕನ್ನಡದ 'ಉಳ್ಳ', 'ತನ' ಪ್ರತ್ಯಯಗಳೂ ಹೀಗೆಯೇ ಅಪಭ್ರಂಶಕ್ಕೆ ಹೋಗಿವೆ. ಪುಷ್ಪದಂತನ ಕೃತಿಗಳಲ್ಲಿ ನನಗೆ ಗೋಚರಿಸಿದ ಒಂದು ಪದ 'ಪಾಇಕ್ಕ' ಸಂಸ್ಕೃತ 'ಪದಾತಿ' ಅರ್ಥದಲ್ಲಿ. ಆದರೆ 'ಪಾಇಕ್ಕ' ಭಾವನಾಮವಲ್ಲವೆಂಬುದನ್ನು ಇಲ್ಲಿ ಗಮನಿಸಬೇಕು. ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳಿವು.

ಜಿಯೇ ಕೋವಳಿಕೇಚೇನಿ ಪಾಡೇಜ್ ದೀಸತಿ ನಾದಿಚೇ ತರಂಗ ಥೋಕಡೇ (೬.೧೫)

(ನನ್ನ ಮರ್‍ಹಾಟಾ ಭಾಷೆಯ) ಕೋಮಲತೆಗೆ ಹೋಲಿಸಿದರೆ
ನಾದದ ತರಂಗಗಳು ಕಿರಿಯವು ಕಾಣುತ್ತವೆ.

ದೇವಿ ಲಕ್ಷ್ಮೀ ಯೇತುಲೀ ಜವಳಿಕ (೪.೮)

(ನಾರಾಯಣನ) ದೇವಿಯಾದ ಲಕ್ಷ್ಮಿಯು ಇಷ್ಟು
ಸಮೀಪದವಳು!

*ಸೋಇರಿಕೇಚಿಯಾ ವೇವ್ಹಾರಾ ಮೂಜ್‌ಕೇಚಿ ತೋ (೧೭.೯)*

ಅವನು ಸೋದರಿಕೆಯ ವ್ಯವಹಾರವನ್ನು ತ್ಯಜಿಸುತ್ತಾನೆ.

*ಜೇ ದ್ವೇಷಾಚಿಯಾಂ ಆವರ್ತೀಂ ದಾಟಲೇ ತೇಥ ಮತ್ಸರಾಚೇ ಹಕರೇ ಪಡಲೇ*
*ಮಾಝಿ ಪ್ರಮಾದಾದಿ ತಲಪು ಅಂತ ಮಹಾಮೀನ (೬.೭೦)*

ಮಾಯಾಸಾಗರದ ವರ್ಣನೆ ಮಾಡುವ ಓವಿ ಇದು.

> ಅವುದು (ಅದು) ದ್ವೇಷಗಳ ಮಡುವುಗಳಿಂದ ದಟ್ಟೈಸಿದೆ. ಅಲ್ಲಿ ಮತ್ಸರದ ಹಕ್ಕರಿಕೆಯೂ (ಪಕ್ಷರಕ್ಷೆ) ಒದಗಿದೆ. ಅಲ್ಲಿ ಪ್ರಮಾದಾದಿ (ದೋಷಗಳಂತೆ) ಪಸರಿಸುವಂತಹ ಮಹಾಮೀನುಗಳು.

ಇಲ್ಲಿ ಸಂಸ್ಕೃತದ 'ಪಕ್ಷರಕ್ಷೆ' ತದ್ಭವ ರೂಪದಲ್ಲಿ 'ಪಕ್ಕರಿಕೆ'ಯಾಗಿ 'ಹಕರೇ' ಆದುದನ್ನು ಕಾಣಬಹುದು. ಪ > ಹ ಇದು ಕನ್ನಡದ ವೈಶಿಷ್ಟ್ಯ. ಇಲ್ಲಿ ಬರುವ ಇನ್ನೊಂದು ಕನ್ನಡ ಪ್ರಯೋಗ 'ತಲಪು ಅಂತ', ಹಳಗನ್ನಡದಲ್ಲಿಯ ಪಸರಿಸು ಅರ್ಥದಲ್ಲಿಯ ಈ ಸಂದರ್ಭ ನೋಡಬೇಕು. *ಕಣ್ಗಳ ಬೆಳ್ಪಿನ ತಳರ್ಪೆಸುತ್ತುಂ ಪೆಳ್ಪಳಿಸಿ (ಪಂಪಭಾರತ ೪.೬೯ವ)* 'ಅಂತಹ'ವೂ 'ಅಂತ'ವಾಗಿ ಬಂದಿದೆ. ಅರ್ಥ ಜಟಿಲವೆನಿಸಿದಾಗಲೂ ಪಾಠಭೇದಗಳು ಹುಟ್ಟುತ್ತವೆ. 'ಹೊಳೆ', 'ಪ್ರಜ್ವಲಿಸು' ಅರ್ಥಗಳಲ್ಲಿಯ ಹಳಗನ್ನಡದ 'ತಳಪು' ಅದೇ ರೂಪದಲ್ಲಿ ಅರ್ಥದಲ್ಲಿ ಮರಾಠಿಗೆ ಹೋಗಿದೆಯಷ್ಟೇ? 'ತಳಪು' ಅವರಿಗೆ ಅರಿಯದು. ಹೀಗಾಗಿ ತಲಪು ಅಂತ ವನ್ನು 'ತಳಪತ' (ಹೊಳೆಯುವ) ಮಾಡಿದರು! ಇಷ್ಟು ಸಾಲದೆಂಬಂತೆ (ಪ್ರಮಾದಗಳು 'ಹೊಳೆ'ಯುವುದು ಹೇಗೆ?) ಪ್ರಮಾದಾದಿಯನ್ನು ಪ್ರಮದಾದಿ (= ಯುವತಿಯರು) ಯನ್ನಾಗಿ ಪರಿವರ್ತಿಸಿದರು.

**ಈ, ಇಜ್, ಇಯೇ, ಹೇ ಇದು ಈ**

ಹಳಗನ್ನಡದಲ್ಲಿ ನಿಕಟತ್ವ ಸೂಚಿಸುವ ಸರ್ವನಾಮಗಳು ಇದು ಹಾಗೂ ಈ. ಅವುಗಳ ಪ್ರಯೋಗ ಈ ರೀತಿಯಾಗಿದೆ.

*ಇದು ನಿಚ್ಚಂ ಪೊಸತರ್ಣವಂಬೊಲ್ (ಆದಿಪುರಾಣ ೧.೨೭)*
*ವಿಚಿತ್ರಮೀ ಸಂಸಾರಂ (ಪಂಪ ರಾಮಾಯಣ ೧೫.೬೮)*
*ನರಭೋಗಮೆಂಬೀ ಪನಿಪುಲ್ಲಂ (ಆದಿಪುರಾಣ ೯-೫೭)*
*ಕುಡುವ ಈ ಗುಣಂ ಒಪ್ಪುವವೊಳೊಪ್ಪವು (ಶಾಂತಿ ಪುರಾಣ ೮.೧೫೫)*
*ಜೀವಕ್ಕೆ ಈ ತನುವಿರೆ (ಅಜಿತಪುರಾಣ ೨.೫೨)*
*ನಲ್ಲರಿರ್ವರೀ ಒಡಲೊಳಗಿರ್ಪಜೀವಂ (ಪಂಪಭಾರತ ೪.೧೦೪)*
*ಈ ಮಾನವ ಸುಖದ ನಿಮಿತ್ತದಿಂ (ಶಾಂತಿ ಪುರಾಣ ೧೧.೯೧)*

ಹೀಗೆ ಕನ್ನಡದಲ್ಲಿ ಬಳಸಲಾಗುವ ಈ ಶಬ್ದವು ನೇರವಾಗಿ ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಹೋದದ್ದು ಸ್ಪಷ್ಟವಾಗಿದೆ. ಆದರೆ ರಾಜವಾಡೆಯವರು ಅ, ಇ ಮತ್ತು ಏ ಎಂದು ಅದರ ಭೇದ ಕಲ್ಪಿಸಿ ಸಂಸ್ಕೃತದ ಇದಂ ಹಾಗೂ ಏತತ್‌ದಿಂದ ಉತ್ಪತ್ತಿ ಸಾಧಿಸಲು ಹವಣಿಸಿದ್ದಾರೆ. ಮಾಸ್ಟರ್ ಅವರು ಅಪಭ್ರಂಶದ ಏಹಉ - ಏವಿ,

ಏಹಾ,ಏಯಾ-ಏಆಜ್ - ಏಆಇಜ್‌ಗಳಿಂದ ಮರಾಠಿಯಲ್ಲಿಯ ರೂಪಗಳನ್ನು ಗುರುತಿಸಲೆತ್ನಿಸಿದ್ದಾರೆ. ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗಗಳನ್ನು ಗಮನಿಸಬೇಕು.

*ಇಜ್ ಬೋಲಿಜ್ ಚಿ ಪ್ರಾಣು ಸಾಂಡಿಜೇ (೨.೫೩)*

ಈ ಮಾತಿನಿಂದಲೇ (ನಾವು) ಜೀವ ಕಳೆಯಬೇಕು.

*ಪ್ರಸ್ತುತ ಆತಾಜ್ ಗುಣೇಜ್ ಇಹೀಜ್ (೯.೪೧)*

ಈ ಗುಣಗಳಿಂದ ಯುಕ್ತನಾದಂತಹ

*ವಿಷಇಜ್ ತ್ರಾಸಿತಾಜ್ ಬಹು ಇಜ್ ಪರೀಜ್ (೧೩.೭೦೭)*

ಈ ಪರಿಯ ವಿಷಯಗಳಿಂದ ಬಹು ಮಟ್ಟಿಗೆ ಕಷ್ಟ ಅನುಭವಿಸಿದ್ದರೂ

*ತೈಸಾ ಚಿ ಹಾ ಇಜ್ ಡೋಳಾಜ್ ದೇಖಾವಾ ಪೈಜ್ (೧೩.೧೧೨೦)*

ಹಾಗೆಯೇ ಇದನ್ನು ಈ ಕಣ್ಣುಗಳಿಂದ ನೋಡಬೇಕು.

*ಈ ಪಾಜ್‌ಸೂಚೀ ಢೇಜ್‌ಪುಳೀ ವಿರೇ ಚಿ ನಾಜ್ (೧೫.೩೭೯)*

ಈ ಮಣ್ಣಿನ ಹೆಂಟೆಯು ಕರಗುವುದೇ ಇಲ್ಲ.

*ದೋಹೀಜ್ ಇಜ್‌ಹುನು ಆಣಿಕು ಮಾಗಿಲಾಜ್ ಜೋ (೧೫.೪೯೫)*

ಈ ಎರಡುಗಳಿಂದಲೂ (ಭಿನ್ನನಾದ) ಮತ್ತೊಬ್ಬನು ಕೊನೆಯವನು.

*ಇಹಿಜ್ ಬೋಲಿಜ್ ನಾ ಸ್ತುತಿ ಹೋಯೇ (೧೮.೨೨)*

ಈ ಮಾತುಗಳಿಂದ ಸ್ತುತಿಯಾಗುವುದಿಲ್ಲ.

ಈ ಸಂದರ್ಭದಲ್ಲಿ ಹಲವು ಬೆಳವಣಿಗೆಗಳನ್ನು ಗುರುತಿಸುವುದು ಮಹತ್ವದ್ದಾಗಿದೆ.

1. ಇಂದಿನ ಮರಾಠಿಯಲ್ಲಿ ನಿಕಟತ್ವದರ್ಶಕ ಸರ್ವನಾಮಗಳಾದ ಹಾ (ಇವನು) ಹೀ (ಇವಳು) ಹಾಗೂ ಹೇ-ಹೇಜ್ (ಇದು) ಇವುಗಳಿಗೆ ಬೇರೆ ವ್ಯುತ್ಪತ್ತಿ ಇಲ್ಲ. ಕನ್ನಡದ ಈ ಸರ್ವನಾಮಕ್ಕೆ ಯ ವಿಕರಣದೊಂದಿಗೆ ವಿಭಕ್ತಿ ಪ್ರತ್ಯಯಗಳು ಹತ್ತಿದಾಗ ಜ್ಞಾನೇಶ್ವರೀ ಕಾಲೀನ ಮರಾಠಿಯಲ್ಲಿ ಇಯಾ, ಇಯೇ ರೂಪಗಳು ಪುಲ್ಲಿಂಗ ನಪುಂಸಕಲಿಂಗಗಳ ಚತುರ್ಥಿ, ಷಷ್ಠೀ ಹಾಗೂ ಸಪ್ತಮಿ ಅರ್ಥವನ್ನು ಕೊಡುತ್ತವೆ. ಇಯಾ > ಹಾ, ಇಯೇ > ಹೇ ಹೇಜ್ ಹೀಗೆ ರೂಪಗಳು ಸಿದ್ಧವಾಗಿವೆ. ಸ್ತ್ರೀಲಿಂಗ ವಾಚಕ ಹೀ ( ಇವಳು) ಶಬ್ದ ಜ್ಞಾನೇಶ್ವರೀ ಕಾಲದಲ್ಲಿ ಇರಲಿಲ್ಲ. ಹೇ ಸರ್ವನಾಮವನ್ನೇ ಸ್ತ್ರೀಲಿಂಗ ರೂಪಕ್ಕೂ ಬಳಸಲಾಗುತ್ತಿತ್ತು. ಉದಾಹರಣೆಗೆ

*ಉಘಡಿಲಿ ಕಾಜ್ ಖಾಣಿ ರೂಪಾಂಚೀ ಹೇ (೬.೧೮)*

ಈ ರೂಪದ ಖನಿಗಳನ್ನು ತೆಗೆದಿವೆಯೋ ಎಂದು

*ಹೇ ಪ್ರತಿಪತ್ತಿ ಮಿಯಾಜ್ ಕೇಲೀ (೬.೨೨)*

ಈ ಪ್ರಗಲ್ಭತೆಯನ್ನು ನಾನು ಮಾಡಿದೆ (ಇಲ್ಲಿ ಕರ್ಮಣಿ ಪ್ರಯೋಗವಿದೆ)

2. ಕೂಡ, ಸಹ ಅರ್ಥದಲ್ಲಿಯ ಸಂಸ್ಕೃತದ ಅಪಿ ಶಬ್ದದಿಂದ ಮರಾಠಿಯಲ್ಲಿ ಹೀ ಶಬ್ದವು ಬಂದಿದೆ. ಸಂದ ಪಕಾರಕ್ಕೆ ಹಕಾರಂ ದೊರೆಕೊಳ್ಗುಂ ವಿಕಲ್ಪದಿಂ ಎಂದು ಕೇಶಿರಾಜನು ಹೇಳುತ್ತಾನೆ. ಇದು ಕನ್ನಡದ ವೈಶಿಷ್ಟ್ಯವೂ ಹೌದು. ಹಳಗನ್ನಡದಲ್ಲಿ ಪಕಾರವು ಹಕಾರವಾಗುವುದಕ್ಕೆ ಮರಾಠಿಯ ಪ್ರಭಾವವು ಕಾರಣವೆಂದು ರೆ. ಕಾಲ್ಡ್‌ವೆಲ್ ಹಾಗೂ ಕೆ. ವ್ಹಿ. ಸುಬ್ಬಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ. ಇದು ಸರಿಯಲ್ಲವೆನ್ನುವುದಕ್ಕೆ ಜ್ಞಾನೇಶ್ವರೀ ಕಾಲೀನ ಮರಾಠಿಯಲ್ಲೂ ಅಪಿ > ಹೀ ಬಿಟ್ಟರೆ ಬೇರೆ ಉದಾಹರಣೆಗಳಿಲ್ಲ.

3. ಜ್ಞಾನೇಶ್ವರೀಯಲ್ಲಿ ಅಪಿ ಅರ್ಥದಲ್ಲಿ ಹೀಜ಼್ ಶಬ್ದವು ಸಾಕಷ್ಟು ಸಲ ಬಂದಿದೆ. ಉದಾ:

*ಅಮೃತಾತೇಜ಼್ ಹೀಜ಼್ ಪೈಜೇಜ಼್‌ಸೀಜ಼್ ಜೇಂಕೇ (೬.೧೪)*

ಪೈಪೋಟಿಯಿಂದ ಅಮೃತವನ್ನೂ ಗೆಲ್ಲುವುದು.

ಆದರೆ ಹದಿಮೂರು ಸ್ಥಳಗಳಲ್ಲಿ ಅದೇ ಅರ್ಥದಲ್ಲಿ ಇಜ಼್ ಶಬ್ದವನ್ನು ಬಳಸಲಾಗಿದೆ. ಅಂದರೆ ಅಪಿಯಿಂದ ಹೀ ಶಬ್ದ ನೇರವಾಗಿ ಸಿದ್ಧವಾಗದೇ ಅಪಿ>ಇ>ಹೀ ಹೀಗೆ ಶಬ್ದ ಬಂದಿರಲೂ ಸಾಕು. ಕನ್ನಡದ ಈ ಶಬ್ದಕ್ಕೆ ವಿಭಕ್ತಿ ಪ್ರತ್ಯಯಗಳು ಹತ್ತಿ ಇಯಾ>ಹಾ, ಇಯೇ>ಹೇ ರೂಪಗಳು ಬಂದಂತೆ ಅಥವಾ ಸಂಸ್ಕೃತದ ಓಷ್ಠ>ಓಠವಾಗಿ ಜ್ಞಾನೇಶ್ವರಿಯಲ್ಲಿ ಹೋಟ ಬಳಸಲಾದಂತೆ (ನೋಡಿರಿ, ದೋಜ಼್ ಹೋಜ಼್‌ಟಿಜ಼್ ಏಕ ಬೋಲಣೇಜ಼್ ೧೫.೨೧ ಎರಡು ತುಟಿಗಳಿಂದ ಒಂದು ಮಾತು) ಮರಾಠಿಯಲ್ಲಿಯ ಈ ಸಂದರ್ಭದಲ್ಲಿಯ ಹ ಕಾರವು ಸಂಸ್ಕೃತ ಪಕಾರದಿಂದ ನೇರವಾಗಿ ಬಂದಿಲ್ಲವೆಂಬುದು ಸ್ಪಷ್ಟವಾಗಿದೆ.

೪. ಈ ವರೆಗೂ, ಇನ್ನೂ, ತನಕ ಅರ್ಥದಲ್ಲಿ ಇಂದಿನ ಮರಾಠಿಯಲ್ಲಿ ಅಜೂನ, ಅಜೂನಿ ಶಬ್ದಗಳನ್ನು ಬಳಸಲಾಗುತ್ತದೆ. ಅಜ + ಹೂನ ಅಜ + ಹೂನಿ ಎಂದು ಈ ಶಬ್ದಗಳನ್ನು ವಿಗ್ರಹಿಸಬಹುದು. ಊನ, ಹೂನಗಳು (ಜ್ಞಾನೇಶ್ವರೀ ಕಾಲೀನ ಓನಿ, ಔನಿ ಪ್ರತ್ಯಯಗಳು) ತೃತೀಯಾ ವಿಭಕ್ತಿಯ ಏಕವಚನದ ಪ್ರತ್ಯಯಗಳು. ಅಂದರೆ ಅಜೂನದ ಶಬ್ದಶಃ ಅರ್ಥ ಇಂದಿನಿಂದ ಎಂದಾಗಬೇಕು. ಹಾಗಿದ್ದರೆ ಇಂದಿನವರೆಗೂ ಎಂದರ್ಥ ಬರುವ ಕಾರಣವೇನು?

ಹಳಗನ್ನಡದಲ್ಲಿ ತೃತಿಯಾ ವಿಭಕ್ತಿಯ ಭಾವವನ್ನು ಸೂಚಿಸುವುದಕ್ಕಾಗಿ ಇಂ ಪ್ರತ್ಯಯ ಬಳಸಲಾಗುತ್ತಿತ್ತು. ಮಾತಿಂ, ಕಡುಪಿಂ, ಕೊಡಲಿಯಿಂ ಬಲ್ಲವರಿಂ ಎಂದೆಲ್ಲ ಕೇಶಿರಾಜನು ಉದಾಹರಣೆ ಕೊಡುತ್ತಾನೆ. ಈ ಇಂ ಪ್ರತ್ಯಯ ಜ್ಞಾನೇಶ್ವರೀಕಾಲೀನ ಮರಾಠಿಯಲ್ಲೂ ಬಳಸಲಾಗಿದೆ. (ಓನಿ, ಔನಿಗಳ ಪ್ರಯೋಗವೂ ಇದೆ) ಇದನ್ನು ಬೇರೆಡೆ ಚರ್ಚಿಸಲಾಗಿದೆ.

ಹೀಗಾಗಿ ಜ್ಞಾನೇಶ್ವರೀಯಲ್ಲಿ ಅಪಿ ಅರ್ಥದಲ್ಲಿ ಇಜ್ ಅವ್ಯಯ ತೃತೀಯಾ ಭಾವದ ಇಂ ಪ್ರತ್ಯಯಗಳು ಒಟ್ಟಾಗಿ ಪ್ರಯೋಗಿಸಲಾಗಿವೆ. ಸಂದರ್ಭ ನೋಡಿ ಅರ್ಥೈಸಬೇಕು. ಅಷ್ಟೇ.

ಸಂಸ್ಕೃತದ ಅದ್ಯಾಪಿ (ಅದ್ಯ + ಅಪಿ) ಶಬ್ದವು ಜ್ಞಾನೇಶ್ವರೀಯಲ್ಲಿ ಅಝುಇಜ್ ಎಂದಾಗಿ ಬಳಸಲಾಗಿದೆ. ಉದಾಹರಣೆಗೆ

*ಜಿಯೇ ಮಾರ್ಗಿಚಾ ಕಾಪಡಿ ಮಹೇಶಾ ಅಝುನ್ಇಜ್ (೬.೧೫೩)*

ಇಂದಿಗೂ ಮಹೇಶ್ವರನು ಈ ಮಾರ್ಗದ ಪ್ರವಾಸಿ (ಯಾಗಿದ್ದಾನೆ)

*ತೇಜ್ ಚಿ ನಾಹಿಜ್ ಬುಝುವಲೀಜ್ ಅಝುಇಜ್ ದ್ವಂದ್ವೇಜ್ (೧೩.೧೬)*

ಇನ್ನೂವರೆಗೂ ಅವುಗಳ ವಾದ ಮುಗಿಯಲಿಲ್ಲ.

ಇದರಿಂದಾಗಿ ಅಝುಇಜ್>ಅಜಹೀ ಇಷ್ಟೇ ಆಗಬೇಕಿತ್ತು. ಆದರೆ ತೃತಿಯಾ ಭಾವದ ಇಂ ಪ್ರತ್ಯಯ, ಅದರ ಮರಾಠಿ ಸಮಾನ ಹೂನ, ಹೂನಿ ಹೀಗೆ ಅಝುಇಜ್>ಅಜೂನಿ>ಅಜೂನ ರೂಪಗಳಾದವು. ಈ ಅಜೂನ ಶಬ್ದವು ಮರಾಠಿಯಿಂದ ಅಜಹುನವಾಗಿ ಹಿಂದಿಗೆ ಹೋದದ್ದನ್ನು ನಾವು ಕಾಣಬಹುದಾಗಿದೆ. ಹಿಂದುಸ್ತಾನೀ ಪದ್ಧತಿಯ ಠುಮರಿಯ ಅನೇಕ ಚೀಜ್‌ಗಳಲ್ಲಿ ಈ ಅಜಹುನ ಶಬ್ದ (ಇನ್ನೂ ಅರ್ಥದಲ್ಲಿ) ಬಂದಿದೆ!

'ತಾನಾಗಿ ಬೆಳೆಯುವ ಯಜ್ಞಭತ್ತ' (ಸುಬ್ರಹ್ಮಣ್ಯಶಾಸ್ತ್ರಿ - ೩೦೨) 'ಅವನಾಗಿ ಬಂದನು' ಮೊದಲಾದ ಪ್ರಯೋಗಗಳಲ್ಲಿ 'ಆಗಿ' ಗೆ ವಿಶಿಷ್ಟ ಅರ್ಥವಿದೆ. ಸ್ವೇಚ್ಛೆಯಿಂದ, ಇನ್ನೊಬ್ಬರ ಪ್ರೇರಣೆಯಿಲ್ಲದೆ, ನೈಸರ್ಗಿಕವಾಗಿ ಎಂಬುದಾಗಿ ಅದನ್ನು ವಿವರಿಸಬಹುದು. ಇದು ಮರಾಠಿಗೂ ಹೋಗಿದೆ. 'ತೋ ಹೋಊನ ಆಲಾ' (ಅವನು ಆಗಿ ಬಂದನು) ಎನ್ನುವಲ್ಲಿ ಆಗಿಯ ಅನುವಾದ 'ಹೋಊನ'ದಲ್ಲಿದೆ (ಆಗು = ಹೋ) ಇದೇ ರೀತಿಯ ಇನ್ನೊಂದು ಪ್ರಯೋಗ 'ಆದೊಡಂ'. ಆರಾದೊಡಂ ಎಂತಾದೊಡಂ (ಶಬ್ದಮಣಿದರ್ಪಣ ಸೂತ್ರ ೨೫೭) ಎಂಬುದಾಗಿ ಕೇಶಿರಾಜನು ಕೊಡುವ ಉದಾಹರಣೆಗಳನ್ನು ಪರಿಶೀಲಿಸಬೇಕು. ಈ ಪ್ರಯೋಗಗಳಲ್ಲಿ 'ಆಗುವ' ಕ್ರಿಯೆ ಎಲ್ಲಿದೆ? 'ಆರು' 'ಎಂತು' ಶಬ್ದಗಳಿಗೆ, ಅವುಗಳ ಅರ್ಥಗಳಿಗೆ ಒತ್ತು ಕೊಡುವುದಕ್ಕಾಗಿ ಇದೊಂದು ಪಡೆನುಡಿ. ಇದು ಜ್ಞಾನೇಶ್ವರರ ಪೂರ್ವಕಾಲೀನ ಮರಾಠಿ ಭಾಷೆಯಲ್ಲಿ ರೂಪಾಂತರಗೊಂಡು ಹೋದುದನ್ನು ಕಾಣುತ್ತೇವೆ. ಕ್ರಿ.ಶ ೧೧೮೭ ರಲ್ಲಿಯ ಪರಳಶಾಸನದಲ್ಲಿಯ ಕೊನೆಯ ಮೂರು ಮರಾಠಿ ಸಾಲುಗಳ ಪೈಕಿ ಇವು ಮೊದಲಿನವೆರಡು.

೨೨. ಅಥ ತು ಜೋ ಕೋಣು ಹುವಿ ಏ ಶಾಸನ ಲೋ

೨೩. ಪೀ ತೇಯಾ ಶ್ರೀ ವೈದ್ಯನಾಥ ದೇವಾಚೀ ಭಾಲ ಸಕುಟುಂಬೀಆ ಪಡೆ

> ಹೀಗೆ ಯಾವನಾದರೂ ಈ ಶಾಸನವನ್ನು ಲೋಪಿಸಿದಲ್ಲಿ, ಸಕುಟುಂಬೀಯನಾದ ಅವನ ಮೇಲೆ ವೈದ್ಯನಾಥ ದೇವನ ಶೂಲ ಬೀಳುವುದು.

ಇಲ್ಲಿ 'ಆದೊಡಂ' ಶಬ್ದವು 'ಹುಪಿ'ಯಾಗಿ ಬಳಸಲಾಗಿದೆ.

**ಉಗಾ, ಉಗೇ, ಉಗ್ಳು, ಕೊದಲಿಸು, ಸುಮ್ಮನಿರು**

ಹಳಗನ್ನಡದ 'ವಚನ ವಿರೋಧ' ಅರ್ಥದಲ್ಲಿಯ 'ಉಗ್ಗು' ಧಾತು ಮರಾಠಿಯಲ್ಲಿ 'ಉಗ' ಆಗಿ (ಪು.ಸ್ತ್ರೀ.ನ.ಗಳಲ್ಲಿ ಉಗಾ, ಉಗೀ, ಉಗೇ) ಬಳಕೆಯಾದುದು, ಅದರ ಮುಂದಿನ ಬೆಳವಣಿಗೆಗಳು ಸ್ವಾರಸ್ಯಕರವಾಗಿವೆ. ಮೊದಲು ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು.

*ಜೈಸೇಜ್ ಉದಕ ಪಡಿಲೇಜ್ ತರಿ ತಳವಟು ವರಿ ಯೇ ಉಗಲೇಜ್ (೬.೨೨೩)*

ಎತ್ತರದಲ್ಲಿ ಬಿದ್ದ ನೀರು 'ಸುಮ್ಮನೆ' ಕೆಳಗೆ ಹರಿದು ಬರುವಂತೆ-

*ತಜ್‌ವ ರಜತಮ ಉಗೇ ಕಾಜ್ ಪಾಜ್ ರಾಹಾತಿ (೧೭.೬೩)*

*ಆಗ ರಜ-ತಮ (ಗುಣ)ಗಳು 'ಸುಮ್ಮನೆ', ಯಾಕಪ್ಪ ಇರುತ್ತವೆ?*

*ಹಾ ಕ್ಷೇತ್ರ ವೃತ್ತಾಂತು ಉಗೇಯಾಜ್ ಆಇಕಾಜ್ (೧೩-೪೨)*

ಈ ಕ್ಷೇತ್ರ ವೃತ್ತಾಂತವನ್ನು (ಮರು) ಮಾತಾಡದೆ ಕೇಳಿರಿ

*ಅಖಂಡ ಭಜನ ಕರೀ ಉಗಾ ನ ರಾಹೇ ಕ್ಷಣಭರೀ (೧೩.೮೨೦)*

ಅವಿರತ ಭಜನೆ ಮಾಡುತ್ತಾನೆ. ಕ್ಷಣಕೂಡ ಸುಮ್ಮನಿರುವುದಿಲ್ಲ.

*ಕುಮುದೇಜ್ ವಸರತಿ ಚಂದ್ರು ತೋ ಉಗಾ (೧೪.೩೮೩)*

ನಿಲೋತ್ಪಲಗಳು ಅರಳುತ್ತವೆ. ಚಂದ್ರನು ಮಾತ್ರ 'ತೆಪ್ಪಗೆ'!

ಹೀಗೆ 'ಉಗ' ಶಬ್ದವು ಮರಾಠಿಯಲ್ಲಿ ಹಳಗನ್ನಡದ 'ವಚನ ವಿರೋಧ' ಭಾವವನ್ನಷ್ಟೇ ಅಲ್ಲ, 'ನೈಷ್ಕರ್ಮ್ಯ' ವನ್ನು ಸೂಚಿಸುತ್ತದೆ.

'ಮಾತಿಲ್ಲದೆಯೆ' 'ತೆಪ್ಪಗೆ' ಅರ್ಥದಲ್ಲಿಯ ಹಳಗನ್ನಡದ 'ಸುಮ್ಮನೆ' ಶಬ್ದದ ವಿವಿಧ ಅರ್ಥಚ್ಛಾಯೆಗಳನ್ನು ನೆನಪಿಸಿಕೊಳ್ಳಬೇಕು (ಶಬ್ದಮಣಿದರ್ಪಣ ಸೂತ್ರ ೩೧೭) - 'ವಿನಾಕಾರಣ' 'ಸಹಜ' 'ಯಾಕೂ ಇಲ್ಲದೆ' ಪುಕ್ಕಟೆ' 'ವ್ಯರ್ಥ' ಇತ್ಯಾದಿಯಾಗಿ ಎಲ್ಲ ಅರ್ಥಗಳಲ್ಲಿ ಮರಾಠಿಯಲ್ಲಿಯ 'ಉಗ' ಶಬ್ದವು ಬಳಸಲಾಗುತ್ತದೆ.

**ಊಗಳು, ಉಗಾಳು, ಉಗುಟ್**

ಇತುವುದಮದು ವಿಲಯಾಗ್ನಿಯ ಕಿಡಿಗಳನುಗುಟುತ್ತುಮೆಯ್ದೆವರ್ಪುದುಂ (ಪಂಪಭಾರತ ೧೧.೭೭) ಇದೊಂದು 'ಉಗುಟ್' ಶಬ್ದದ ಹಳಗನ್ನಡ ಪ್ರಯೋಗ. ಅದೇ ಅರ್ಥದಲ್ಲಿ ಉಗಳು, ಉಗಾಳು, ಉಗಳು, ಉಗಳಣೇ (ಕ್ರಿ) ರೂಪಗಳಲ್ಲಿ ಈ ಶಬ್ದ ಮರಾಠಿಗೆ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು.

*ಹಡಪು ಮಿಾ ಪೋಳಗೈನ ಉಗಾಳು ಮಿಾಟ ಘೇಈನ (೧೩.೪೧೮)*

(ಎಲೆ ಅಡಕೆಯ) ಚಂಚಿಯನ್ನು ನಾನೇ ಕೊಟ್ಟೇನು. ಉಗುಳು ನಾನೇ ತೆಗೆದುಕೊಂಡೇನು.

(ಗುರುವಿನ ವೀಳ್ಯದ ಎಂಜಲವನ್ನು ಪ್ರಸಾದವನ್ನಾಗಿ ಸ್ವೀಕರಿಸುವುದು ಮಹಾನುಭಾವ ಪಂಥದ ಸಂಪ್ರದಾಯ. ಈ ಬಗ್ಗೆ ಲೀಳಾಚರಿತ್ರದಲ್ಲಿ ಹತ್ತಾರು ಸಂದರ್ಭಗಳಿವೆ.)

*ಉಧವಣೇಚೇಜ್ ತೋಂಡ ಉಗಳೀತ ಧೂಮಾಚೇ ಉಭಡ (೧೬.೨೯೨)*

ಹೊಗೆ ಕಿಂಡಿಯ ಬಾಯಿ ಹೊಗೆಯ ಪುಂಖಗಳನ್ನು ಉಗುಳುವಂತೆ.

ಇಲ್ಲಿ 'ಉಗುಳು ಹಾಗೂ 'ಉಭಡ' ಶಬ್ದಗಳ ಮೆಳ ಎಷ್ಟೊಂದು ಸಾರ್ಥಕವಾಗಿದೆ! 'ಉಬ್ಬಳ = ಉಬ್ಬಡ' ಶಬ್ದ 'ಉಬ್ಬಸ'ದ ರೋಗಿಯ ಕೆಮ್ಮನ್ನು ಸೂಚಿಸುತ್ತದೆ. (ಇನ್ನೊಂದು ಸಂದರ್ಭ ೧೩.೫೭೩ ರಲ್ಲಿ)

*ಉಗಳಿತೀ ನಿರ್ಮಳೇಜ್ ಗುಣಮಯ ಮುಕ್ತಾಫಳೇಜ್ (೧೬.೨೦೯)*

(ಗೀತಾ ಸಮುದ್ರದಲ್ಲಿಯ ಚಿಪ್ಪುಗಳು) (ಇಪ್ಪತ್ತಾರು) ಗುಣಗಳುಳ್ಳ ನಿರ್ಮಲ ಮುತ್ತುಗಳನ್ನು ಉಗುಳುತ್ತವೆ. (ಇಲ್ಲಿ 'ಉಗುಳಿಗೆ ಅಸಹ್ಯ ಪಟ್ಟುಕೊಳ್ಳಬೇಕಾಗಿಲ್ಲ. ಅದು 'ಪ್ರಸಾದ')

*ಮಗ ರಾಹೂನಿ ಉಗಳಿಲೀ ಪ್ರಭಾ ಚಂದ್ರೇಜ್ ಆಳಂಗಿಲೀ (೧೮.೧೦೦೬)*

ಬಳಿಕ ರಾಹುವು ಉಗುಳಿದ ಪ್ರಭೆಯನ್ನು (ಗ್ರಹಣಬಿಟ್ಟಾಗ) ಚಂದ್ರನು ಆಲಂಗಿಸಿಕೊಳ್ಳುವಂತೆ.

**ಉಜಗರಾ, ಉಜ್ಜುಗ**

ಸಂಸ್ಕೃತದ 'ಉದ್ಯೋಗ' ಹಳಗನ್ನಡದಲ್ಲಿ 'ಉಜ್ಜುಗ'ವಾಗಿ ತದ್ಭವವಾಗಿದೆಯಷ್ಟೇ? *ಗುಣಾರ್ಣವಂಗೆ ಕುಡುಗೆಲ್ಲಮನಿಂತಿರೆ ಕಜ್ಜದುಜ್ಜುಗಂ (ಪಂಪಭಾರತ ೫.೧೦೨)* ಹೀಗೆ ಉದಾಹರಿಸಲೂಬಹುದು. ಈ ಉಜ್ಜುಗ ಶಬ್ದಕ್ಕೆ 'ರ' ಪ್ರತ್ಯಯ ಹತ್ತಿ ಮರಾಠಿಯಲ್ಲಿ 'ಉಜಗರಾ' ಶಬ್ದ ಸಿದ್ಧವಾಗಿದೆ. ಹೀನತ್ವ, ಗೌಣತ್ವ. (ಕೆಲಸಲ ಅಕ್ಕರತೆಕೂಡ!) ತೋರಿಸುವುದಕ್ಕೆ ಮೂಲ ಶಬ್ದಗಳಿಗೆ ರ, ರಾ, ರು, ಪ್ರತ್ಯಯಗಳು ಹತ್ತುವದು ಜ್ಞಾನೇಶ್ವರೀಯಲ್ಲಿ ಸಾಮಾನ್ಯ. ಉದಾಹರಣೆಗಳಿವು.

ಪಾಹುಣಾರಿಂದ ಪಾಹುಣೇರ, ಪಾಹುಣೋರ (೧೬.೨೨) (೧೦.೧೧) (೧೧.೧೨); ಗೋ ದಿಂದ ಗೋರು (೧೩.೩೧೪)

ಹಾತಿಯಿಂದ ಹಾತಿರು (೧೩.೬೯೭);

ಪಾಖಿಯಿಂದ ಪಾಖಿರು (೧೧.೧೭೦)

ಕೀಡ ದಿಂದ ಕೀಡರು (೧೧.೫೪)

ದಾಸಿಯಿಂದ ದಾಶಿರು (೧೮.೧೩೯೪)

ಉಜಗರಾ ಶಬ್ದದ ಪ್ರಯೋಗಗಳು ಹೀಗಿವೆ.

*ದೇಹಾ ಹೋಜ್ ನೇಜ್‌ದೀ ಉಜಗರಾ ಪರಿ ಸುಖದುಃಖೇಜ್ ಭೋಗೀ (೫-೫೪)*

ದೇಹಕ್ಕೆ (ಯೋಗಿಗಳ) ಉದ್ಯೋಗವಿಲ್ಲ. ಆದರೂ ಅದು ಸುಖದುಃಖ ಉಪಭೋಗಿಸುತ್ತದೆ.

*ಉಭಳಬಾ ಉಜಗರಾ ಸೇಜೆಯಾಜ್ ಸಾಇಲೀಯಾಜ್ ಘರಾ*
*ಸಿಣವೀ ಮ್ಹಾಜ್ತಾರಾ ಬಹುತಾಜ್ತೇಜ್ ಹಾ (೧೩.೫೭೩)*

ಉಬ್ಬಸದ ಉಜ್ಜುಗದಿಂದ (ಕೆಮ್ಮಿನಿಂದ) ನೆರೆಹೊರೆಯ ಮನೆಯವರಲ್ಲಿ (ಈ) ಮುದುಕ ಬಲು ಬೇಸರವನ್ನು ತರುತ್ತಾನೆ (ಎನ್ನುವರು)

ಮರಾಠಿ ಪಂಡಿತರು 'ಉದ್ + ಜಾಗೃ' ಈ ಸಂಸ್ಕೃತ ಧಾತುವಿನಿಂದ 'ಉಜಗರಾ' ರೂಪ ಸಾಧಿಸಲು ಯತ್ನಿಸಿದ್ದಾರೆ. ಜ್ಞಾನೇಶ್ವರೀಯಲ್ಲಿಯ ಈ ಎರಡೂ ಸಂದರ್ಭಗಳಲ್ಲಿ 'ಎಚ್ಚರಿಸು' ಅರ್ಥ ಸರಿಹೊಂದುವುದಿಲ್ಲ.

**ಉಂಡೀ – ಉಂಡಿ, ಆಹಾರ, ತುತ್ತು**

ಕನ್ನಡದಲ್ಲಿ ಬಳಕೆಯಲ್ಲಿರುವ 'ಉಂಡಿ' ಶಬ್ದವನ್ನು ಕಿಟೆಲ್ಲರು ಗುರುತಿಸದಿದ್ದುದು ಒಂದು ಆಶ್ಚರ್ಯವೇ. 'ಉಂಡೆ' ಶಬ್ದ ಕೂಡ ಅವರಲ್ಲಿ ಆಕಾರ ಸದೃಶವಾಗಿದೆ, ಭೋಜನ ಪದಾರ್ಥವಾಗಿಲ್ಲ.

'ಭೋಜನ' ಅರ್ಥದಲ್ಲಿಯ 'ಉಣ್' ಈ ಹಳಗನ್ನಡ ಧಾತುವಿನಿಂದ ಸಿದ್ಧವಾದ 'ಉಂಡಿ (ಉಂಡೆ)' ಹಳಗನ್ನಡ ಗ್ರಾಂಥಿಕ ಸಾಹಿತ್ಯದಲ್ಲಿ ತೋರಿಸಿಕೊಳ್ಳದಿದ್ದರೂ, ಜ್ಞಾನೇಶ್ವರೀಯಲ್ಲಿ ಅದೇ ರೂಪದಲ್ಲಿ, ಅದೇ ಅರ್ಥದಲ್ಲಿ ಪ್ರಯುಕ್ತವಾಗಿದೆ.

*ಸಾಪಾಚಾಜ್ ತೋಂಡೀ ಪಡಿಲೀ ಜೇ ಉಂಡಿ (೧೩.೫೮೭ ಪಾಠ ಭೇದ)*

ಹಾವಿನ ಬಾಯಿಯಲ್ಲಿ ಬಿದ್ದ ಆಹಾರವು (ತ್ಯಾಜ್ಯ ಎಂದು ಭಾವಾರ್ಥ)

ರಾಜವಾಡೇ ಪ್ರತಿಯಲ್ಲಿ 'ಸಕೂಡಿ' ಎಂದು ಪದವಿದೆ, ಇದು ಬಹುಶಃ 'ಸುಕ್ಕಿನುಂಡೆ' ಇರಬಹುದಾಗಿದೆ. ರಾಜವಾಡೆ'ಯವರು ಈ ಶಬ್ದದ ಅರ್ಥಕೊಟ್ಟಿಲ್ಲ!

*ವಡವಾನಳೀಜ್ ಪ್ರಚಂಡೀಜ್ ಜೈಸಿ ಘಾಪೇ ಲೋಣಿಯಾಚೀ ಉಂಡೀ (೧೧.೪೫೨ ಪಾಠಭೇದ)*

ಪ್ರಚಂಡವಾದ ವಡವಾನಲದಲ್ಲಿ ಬೆಣ್ಣೆಯ ಉಂಡಿಯನ್ನು ಹಾಕಿದಂತೆ

ರಾಜವಾಡೇ ಪ್ರತಿಯಲ್ಲಿ ಇದು 'ಕುರೌಂಡೀ' ಎಂದು ಪಾಠವಿದೆ. ಇದರ ಇನ್ನೊಂದು ರೂಪ ' ಕುರವಂಡೀ'. ಉತ್ತರ ಕರ್ನಾಟಕದಲ್ಲಿ ಭಕ್ಕರಿಯ ಚೂರನ್ನೋ ಅನ್ನದ ತುತ್ತನ್ನೋ (ದೃಷ್ಟಿ ಹತ್ತಬಾರದೆಂದು) ನಿವಾಳಿಸಿ ಒಗೆಯುವ ರೂಢಿ ಇದೆಯಷ್ಟೇ? ಇದು ಮಹಾರಾಷ್ಟ್ರದಲ್ಲಿಯ 'ಕುರವಂಡೀ'. ಈ ಶಬ್ದದ ಸಿದ್ಧಿ 'ಕೂರ್ (= ಪ್ರೇಮ, ಮಮತೆ) + 'ಉಂಡಿ' ಹೀಗಿರಬಹುದಾಗಿದೆ.

*ಗಳು ನ ಪಾಹತಾಜ್ ಗೀಳೀ ಉಂಡೀ ಮೀನು (೧೩.೭೩೮)*

ಗಾಳವನ್ನು ನೋಡದೆಯೆ ಮೀನವು ಆಮಿಷ (ತುತ್ತು) ನುಂಗುತ್ತದೆ.

**ಉಪರಿವಿ ಉಪ್ಪರಿಗೆ**

'ಉಪಕಾರಿಕೆ' ಈ ಸಂಸ್ಕೃತ ಶಬ್ದದ ತದ್ಭವವಾದ 'ಉಪ್ಪರಿಗೆ' ಶಬ್ದ ಜ್ಞಾನೇಶ್ವರೀಕಾಲಿನ ಮರಾಠಿಯಲ್ಲಿ 'ಉಪರಿವಿ' ಆಗಿ ಹೋಗಿದೆ. ಇದರ ಬಳಕೆ ಲೀಳಾಚರಿತ್ರದಲ್ಲಿ ಮಾತ್ರ ಕಾಣುವುದರಿಂದ ಸಂಸ್ಕೃತ ಪ್ರಾಕೃತಗಳಿಂದ ಇದು ಮರಾಠಿಗೆ ಹೋಗಿರಲಾರದು. ಪ್ರಯೋಗಗಳು ಹೀಗೆ.

*ತೇ ಹೀಜ್ ಉಪರಿವಿ ವರೂನಿ ದೇಖಿಲೀಜ್; ಆಪೂಲೀಯಾ*
*ಸೀಷ್ಯಾಕರವಿ ಬೋಲವಿಲೀಜ್ (ಏಕಾಕ ೧೦)*

ಅವರು ಉಪ್ಪರಿಗೆಯ ಮೇಲಿನಿಂದ ನೋಡಿದರು; ತಮ್ಮ ಶಿಷ್ಯರ ಕೈಯಿಂದ ಕರೆಯಿಸಿದರು. (ಮೂಲ ವಾಕ್ಯ ಕರ್ಮಣಿಯಲ್ಲಿದೆ) 'ಕೈಯಿಂದ' ಪ್ರಯೋಗ ಗಮನಾರ್ಹ.

*ತೇಥ ಬೀಜೇಜ್ ಕೇಲೀಜ್ : ಉಪರಿವಿವರಿ ಬಾಜ ಸುಪವತೀ ಘಾತಲೀ;*
*ಮಾಝಿಯಿ ಘರೀಜ್ ಉಪರಿ ಆಸೇ; ತೇಥ ಬೀಡಾರ ಕರಾವೇಜ್ (ಏಕಾಕ ೧೪)*

ನನ್ನ ಮನೆಯಲ್ಲಿ ಉಪ್ಪರಿಗೆ ಇದೆಃ ಅಲ್ಲಿ ಬಿಡಾರ ಮಾಡಬೇಕು, ಅಲ್ಲಿ ಬಿಜಯಂ ಗೈಸಿದರು; ಉಪ್ಪರಿಗೆಯ ಮೇಲೆ ಪೊರಸು ಸುಪ್ಪತ್ತಿಗೆ ಹಾಕಿದರು.

**ಉಭಳೀ - ಉಮ್ಮಲು ಉಬ್ಬಸ**

'ಉಚ್ಛ್ವಾಸ ನಿಗ್ರಹ' ಅರ್ಥದಲ್ಲಿಯ 'ಉಬ್ಬಸ' ಶಬ್ದ ನೇರವಾಗಿಯೋ, ಅಥವಾ ಕನ್ನಡದಲ್ಲಿ 'ಉಮ್ಮಲು' ಆಗಿಯೇ ಮರಾಠಿಯಲ್ಲಿ 'ಉಭಳೀ'ಯಾಗಿ ಅದೇ ಅರ್ಥದಲ್ಲಿ ಹೋಗಿದೆ. ಪ್ರಯೋಗ ಹೀಗೆ.

*ಉಭಳೀಚಾ ಉಜಗರಾ ಸೇಜಿಯಾಜ್ ಸಾಇಲೇಯಾಜ್ ಘರಾ*
*ಸಿಣವೀ ಮ್ಹಾಜ್‌ತಾರಾ ಬಹುತಾಜ್‌ತೇ ಹಾ (೧೩.೫೭೩)*

ಉಬ್ಬಸದ ಉಜ್ಜುಗದಿಂದ (ಕೆಮ್ಮಿನಿಂದ) ನೆರೆಹೊರೆಯವರ ಮನೆಯಲ್ಲಿ ಈ ಮುದುಕ ಬಲು ಬೇಸರವನ್ನು ತರುತ್ತಾನೆ. (ಎನ್ನುವರು)

**ಉರಣೇಜ್ - ಉಟಿ ಉಳಿ**

ಅವಶಿಷ್ಟ ಅರ್ಥದಲ್ಲಿಯ 'ಉಟಿ' ಧಾತುವಿನ ಹಳಗನ್ನಡದಲ್ಲಿಯ ಪ್ರಯೋಗಗಳು ಹೀಗಿವೆ.

*ಉಟಿಮುದಂ ಮಾಣಸಲಾನೆ ಸಾಲ್ವೆಂ (ಪಂಪಭಾರತ ೫.೨೦ ವ)*
*ಕಟು ತಾಯ ಬಟಿಯಸುಟಿಯದ ತಟಿದಿಂದಂ (ಶಬ್ದಮಣಿದರ್ಪಣ ಸೂತ್ರ ೧೭೩)*

ಇದು 'ಉರ' ಆಗಿ ಮರಾಠಿಗೆ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಬಳಕೆ.

*ಮಗ ಕಾಇ ಉರ್ರೈಲ ಹಿತಾಲಾಗಿ (೧೩.೫೭೫)*

ಬಳಿಕ (ತನ್ನ) ಹಿತಕ್ಕಾಗಿ ಏನು ಉಳಿದೀತು?

*ಇಯಾಪರಿಜ್ ಜನ್ಮೇಚಿ ಜನ್ಮ ನಿವಾರೀ ಮರಣೇ ಚಿ ಮೃತ್ಯು ಮಾರೀ ಆಪಣಾಉರೀ (೫೫೧)*

ಈ ಪರಿಯಿಂದ (ಈ) ಜನ್ಮದಲ್ಲೇ (ಮುಂದಿನ) ಜನ್ಮಗಳನ್ನು
ನಿವಾರಿಸುವನು. (ಈ) ಮರಣದಲ್ಲೇ (ಮುಂದಿನ) ಮರಣವನ್ನು
ಕೊಲ್ಲುವನು, ತಾನು ಉಳಿಯುವನು.
(ಪುನರ್ಜನ್ಮ, ಮರಣಗಳನ್ನು ಹೊಂದದೆಯೇ ಭಗವಂತನ್ನು
ಹೊಂದುವನು ಎಂದು ಭಾವಾರ್ಥ)

*ಪಾಹೇ ಪಾಜ್ ದೇಓ ಅಥವಾ ಚಿ ಭರೇ ಮಗ ರಾತ್ರೀಚಿ ಪೋವಿ ಉರೇ*
*ಪಾಜ್‌ಚೂನು ಕಾಹಿಜ್ ತಿಸರೇಜ್ ನಾಹಿಜ್ ಜೇವಿಜ್ (೧೬.೬೫೩)*

(ಇಲ್ಲಿ 'ದೇಓ' ಇದು ಅಪಪಾಠ, ಸರಿಯಾದ ಪಾಠ 'ದಿಓ' ಎಂದಿರಬೇಕು. ದಾಂಡೇಕರರ ಪ್ರತಿಯಲ್ಲಿ 'ದಿವಸು' ಎಂದಾಗಿ ಪಾಠಭೇದವಿದೆ.)

ನೋಡಪ್ಪ, ಹಗಲು ಪೂರ್ತಿಯಾಗಿ ತುಂಬಿಕೊಂಡನಂತರ
(ಕಳೆದ ನಂತರ) ರಾತ್ರಿಯ ಪಾಲನ ಉಳಿಯುವುದು. (ಅದನ್ನು)
ಉಳಿದು ಮೂರನೆಯದಿಲ್ಲ ಅದರಂತೆ

ಇಲ್ಲಿ 'ಪಾಲನ' ಅರ್ಥದಲ್ಲಿಯ ಹಳಗನ್ನಡದ ಧಾತು 'ಓವು' ಬಳಕೆ ಗಮನಿಸಬೇಕು. ಅಥವಾ ಓವಿಯೆಂದರೆ ಕುಟ್ಟುವಾಗಿನ ಹಾಡು ಎಂದರ್ಥೈಸಿದರೆ ಹಗಲಿನ ಒನಕೆಯ ಪೆಟ್ಟು ಮುಗಿದ ನಂತರ ರಾತ್ರಿಯ ಪೆಟ್ಟು. ಮೂರನೆಯದಿಲ್ಲ ಎಂದೂ ಹೇಳಬಹುದು.

*ಜೋ ಆಕಾಶಾ ಹಿ ವರಿ ಉರತಾ (೧೫.೫೧೬)*

ಯಾವನು ಆಕಾಶವನ್ನು ಮಿಕ್ಕಿ ಉಳಿಯುವನು.

*ತೈಸಾ ಕರ್ಮಕಾರಾ ದೂಜೇಯಾ ತೋ ಕರಿತೇಪಣಾಚಾ ಆತ್ಮೇಯಾ ಆವಲ್ಹಾಓಯೇ*
*ತೋ ಗೇಲಿಯೂಜ್ ಕಾಹಿಜ್ ಉರೇ (೧೮.೪೦೯)*

ಕರ್ಮ ಮಾಡುವವನು ಇನ್ನೊಬ್ಬ; ಕರ್ತೃತ್ವದ ಆರೋಪ
ಆತ್ಮನ ಮೇಲೆ; ಅದು ಹೋದಾಗ ಉಳಿದದ್ದು

**ಉಳಿಗ, ಊಳಿಗ ಸೇವೆ**

'ವಿಲೇಖನ' ಅರ್ಥದಲ್ಲಿಯ 'ಉಟ್' ಧಾತುವಿನಿಂದಾದ ನಾಮಪದ ಉಳಿಗ, ಊಳಿಗ. ಉಟ್ ಧಾತುವಿನ ಪ್ರಯೋಗ ಪಂಪರಾಮಾಯಣದಲ್ಲಿ ಹೀಗೆ

*ನೆಲನುಳ್ತಂತೆವೊಲಾಗೆ ಕಿಳ್ತು ಬನಮಂ (೧೧.೧೨೬)*

ಉಳಿಗ, ಊಳಿಗ ಇವೆರಡೂ ಶಬ್ದಗಳು ಜ್ಞಾನೇಶ್ವರೀಯಲ್ಲಿ ಕಾಣಸಿಗುತ್ತವೆ.

ಆಠ ಪಾಹಾರಿಜ್ ಏಯಾಜ್ ಪಾಯಾಜ್ ಉಳಿಗ ಘಾಪೇ (೧೬.೨೦೧)

(ದಿವಸದ) ಎಂಟೂ ಪ್ರಹರಗಳಲ್ಲಿ ಇವನ ಕಾಲಿನಲ್ಲಿ ಸೇವೆ ಕಟ್ಟಿದೆ.

ಇಲ್ಲಿ 'ಕಾಲಿನಲ್ಲಿ' ಒಂದು ಮೋಜಿನ ಶಬ್ದ ಪ್ರಯೋಗ. ಮರಾಠಿಯಲ್ಲಿ ಕಾಲು, ಪಾದ ಅರ್ಥಗಳಲ್ಲಿ ಒಂದೇ ಶಬ್ದ 'ಪಾಯ'. 'ಗುರುವಿನ ಸಲುವಾಗಿ' ಎನ್ನುವುದಕ್ಕೆ ಗುರುವಿನ ಪಾದಗಳಲ್ಲಿ ಎಂದೇನೋ ಶ್ರದ್ಧೆಯಿಂದ ಹೇಳಬಹುದು. ಕ್ರಮೇಣ ಮೇಲಿನ ಉದಾಹರಣೆ ಮೊದಲ್ಗೊಂಡು 'ಕಾರಣ' ಅರ್ಥದಲ್ಲಿ 'ಪಾಯ' (=ಕಾಲು) ಶಬ್ದ ಮರಾಠಿಯಲ್ಲಿ ರೂಢವಾಯಿತು. ಇಂದೂ ಬಳಕೆಯಲ್ಲಿದೆ.
*ಘರಖರ್ಚಾಪಾಯಿಜ್ ಪೈಸೇ ಪಾಠವಾವೇ* - ಮನೆ ಖರ್ಚಿನ ಸಲುವಾಗಿ ಹಣ ಕಳಿಸಬೇಕು. ಇದು ಕನ್ನಡದ ಆಡು ಮಾತಿನಲ್ಲೂ ಇಳಿದು ಬಂದಿದೆ.
*ಮಗಳ ಮದಿವೀಕಾಲಾಗ ಸಾವಿರ ರೂಪಾಯಿ ಸಾಲ ಆಗಿತ್ತು* ಹೀಗೆ. ಮೇಲಿನ ಓವಿಯ ಅರ್ಥ ಇಂತು:

ಎಂಟೂ ಪ್ರಹರಗಳಲ್ಲಿ ಇವನಿಗೆ ಸೇವೆ (ಮಾಡುವುದು) ಇದ್ದದ್ದೇ

*ಪ್ರವೃತ್ತಿಚೇ ಉಳಗೀಜ್ ಲೋಕ ಚ ಆಥಿ (೧೮.೪೫೫)*

ಪ್ರವೃತ್ತಿಯ ಊಳಿಗದಲ್ಲಿ ಲೋಕವೇ 'ಐತಿ'

*ಚತುರ್ವರ್ಣಾ ಘಾತಲೀ ಸಿನಾನಿಜ್ ಉಳಿಗೇಜ್ (೧೮.೮೧೪)*

(ಈ ತ್ರಿಗುಣಗಳು) ಚತುರ್ವರ್ಣಗಳಿಗೆ (ಬ್ರಾಹ್ಮಣ ಇತ್ಯಾದಿ) ಭಿನ್ನ ಊಳಿಗಗಳನ್ನು ಕಲ್ಪಿಸಿದವು.

*ಉಳಿಗ ಮೀ ಕರೀನ ಆಂಘೋಳಿಚೇಜ್ (೧೩.೪೧೮)* ನಾನು ಜಳಕ (ಹಾಕುವ) ಸೇವೆ ಮಾಡುವೆನು.

**ಏಣಜೇ, ಏಣೇ, ಎಣಿಸು, ತಿಳಿ ಗುರುತಿಸು ಅರಿ**

*ದೋಷದೊಳಮಿನಿಸು ಗುಣಮಂ ತನ್ದಿರ್ದೆಣಿಸುವುದು ಲೇಶಮೆಮ್ಬುದು (ಕವಿರಾಜ ಮಾರ್ಗ ೩.೧೭೧) ಪಿನ್ದೆ ಎಣಿಸಿದ ವಿವಿಧ ವಿಧವ ಲಿಂಗಕ್ಕೆ ಸಪ್ತವಿಧ ವಿಭಕ್ತಿಗಳ್ (ಶಬ್ದಮಣಿದರ್ಪಣ ಸೂತ್ರ ೧೦೩)*

ಹೀಗೆ ಹಳಗನ್ನಡದಲ್ಲಿ ತಿಳಿ, ಅರಿ ಗುರುತಿಸು ಅರ್ಥದಲ್ಲಿ ಬಳಸಲಾದ ಎಣಿಸು ಧಾತು ಜ್ಞಾನೇಶ್ವರೀಕಾಲೀನ ಮರಾಠಿಯಲ್ಲೂ ಕಾಣಸಿಗುತ್ತದೆ. ಆದರೆ ನಿಷೇಧಾವ್ಯಯ ನ ದೊಂದಿಗೆ, ನೇಣಜೇ, ನೇಣೇ ಎಂದಾಗಿ.
*ಅರ್ಜುನಾ ಹೇಜ್ ನೇಣಸಿ (೨.೧೩೮)* ಅರ್ಜುನನೇ ನೀನಿದನ್ನು ಅರಿಯೆ.
*ತುಜ ಕಾಜ್ ನೇಣೋಜ್ ನ ಗಮೇ ಚಿತ್ತಾ (೨.೧೭೯)*

ನಿನಗೆ (ಇದೇಕೆ) ತಿಳಿಯುವುದಿಲ್ಲವೆಂಬುದು ನನ್ನ ಮನಸ್ಸಿಗೆ ಹೊಳೆಯದು.

*ಬೋಲಿಲಿಯೇ ಗೋಠೀ ಅವಜ್ಞಾ ನೇಣಸಿ ಕರುಜ್ (೯.೩೭)*

(ನಾನು) ಹೇಳಿದ ಸಂಗತಿಗಳ ಅವಜ್ಞೆ (ನೀನು) ಮಾಡಲು ಅರಿಯೆ.

ಈ ಸಂದರ್ಭದಲ್ಲಿ ಒಂದು ಹಳಗನ್ನಡ ಶಬ್ದದ ಬೆಳವಣಿಗೆಯನ್ನೂ ಗುರುತಿಸಬಹುದು.

ತಿಳಿದವ ಎಂಬರ್ಥದಲ್ಲಿ ಬಲ್ಲ ಎನ್ನುವ ಹಳಗನ್ನಡ ಶಬ್ದ (ಉದಾಹರಣೆಗೆ ಬಲ್ಲರ್=ಬಲ್ಲ ವಿದ್ವಾಂಸರ್ ಶಬ್ದಮಣಿದರ್ಪಣ ಸೂತ್ರ ೧೩೪) ಶಕ್ತ ಎಂಬರ್ಥದಲ್ಲಿಯೂ ಬಳಸಲಾಯಿತು. ಉದಾಹರಣೆಗೆ *ಗಂಗಾ-ನದಿಯೊಳದ್ದಡೆಮ, ಪಾಷಾಣ ಮೃದುವಾಗಬಲ್ಲದೆ? (ಚೆನ್ನಬಸವೇಶ್ವರ ವಚನ ೭೭)* ಬಲ್ಲ (= ತಿಳಿದವ, ಅರಿತವ) ಇವಕ್ಕೆ ವಿರುದ್ಧವಾದ ರೂಪ ಅರಿಯ. ಅಶಕ್ತ ಎಂಬರ್ಥದಲ್ಲಿಯೂ ಅರಿಯ ಶಬ್ದ ಹಳಗನ್ನಡದಲ್ಲಿ ಬಳಸಲಾಗಿದೆ.

*ಸುಪಾತ್ರಕ್ಕೆ ಕೊಟ್ಟ ದಾನದ ಫಲದಂತಾಗಲರಿಯದು (ಧರ್ಮಾಮೃತಂ ೭.೭೫)*
*ಬೆಜ್ಜೆಯಿಲ್ಲದ ಬೇಣೆಯಂತೆ ತೀರಲರಿಯದು (ಪಂಚತಂತ್ರ ೮೬.೨೧)*
*ಸುದೈವಮನಾರಾಧಿಸಿ ಪಡೆದ ಲಾಭಂ ಪೋಲಲರಿಯದು (ಧರ್ಮಾಮೃತಂ ೭.೭೯)*
*ಎತ್ತಲಾನುಂ ಬಡತನಮಾದೊಡಂ ಪರಾಭವಮನೆಯ್ದಲರಿಯನ್ (ಪಂಚತಂತ್ರ ೧೬.೧೬)*

ಈ ಬೆಳವಣಿಗೆ ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಸುಸ್ಪಷ್ಟವಾಗಿದೆ. ಸಂಸ್ಕೃತ ಜ್ಞಾ ದಿಂದ ಮರಾಠಿಯಲ್ಲಿ ಜಾಣಣೇಜ್ ಶಬ್ದ ಬಂದಿದೆ. ಮೂಲಅರ್ಥ ತಿಳಿ ಎಂದಿದ್ದರೂ ಅದು ಕನ್ನಡದ ಬಲ್ಲದ ಜಾಡು ಹಿಡಿದಿದೆ. ಹಳಗನ್ನಡದಲ್ಲಿ ಬಲ್ಲದ ವಿರುದ್ಧಾರ್ಥದಲ್ಲಿ ಅರಿಯ ಬಂದಂತೆ ಮರಾಠಿಯಲ್ಲೂ ಜಾಣಣೇಜ್ ನೇಣಣೇಜ್ ರೂಪಗಳು ಬಂದಿವೆ. ಈ ಉದಾಹರಣೆಗಳನ್ನು ನೋಡಬೇಕು.

*ಮಿ ಪ್ರಾಕೃತು ಕಾಇ ಸಾಂಘೋಜ್ ಜಾಣೇಜ್ (೧೧.೨೨)*
ನಾನು ಸಾಮಾನ್ಯ. ಏನು ಹೇಳ ಬಲ್ಲೆ?
*ಕಾಳೇಗೋರೇಪಣ ಧೂತಲೇಜ್ ಫಿಟೋಜ್ ನೇಣೇ (೧೮.೧೦೧)*
*ಕರಿಬಿಳಿತನವನ್ನು ತೊಳೆದು ಕಳೆಯಲರಿಯದು.*
*ಪರಿ ತೇಜ್ ಕಮಳದಳ ಚೀರೂಜ್ ನೇಣೇ (೧.೧೯೨)*
ಆದರೆ ಆದು (ಆ ಭ್ರಮರವು) ಕಮಲದಲವನ್ನು ಕತ್ತರಿಸಲರಿಯದು.
*ಸಾಂಘೈಜ್ ನೇಣೋಜ್ ಕವಣಾಚೀಜ್ ಲಕ್ಷಣೇಜ್ (೬.೧೧೨)*
ಯಾರ ಲಕ್ಷಣಗಳೆಂಬುದನ್ನು ಹೇಳಲರಿಯೆನು.
*ಲವಣ ಜೈಸೀಜ್ ಜಳಾತೇಜ್ ಸಾಂಡೂಜ್ ನೇಣೇ (೬.೩೮೭)*
ಉಪ್ಪು ನೀರನ್ನು ಬಿಡಲರಿಯದಂತೆ.
*ವಿಠ್ಠಲ ಕಾನಡೇ ಬೋಲೂಜ್ ಜಾಣೇಜ್ ತ್ಯಾಚೀ ಭಾಷಾ ಪುಂಡಲೀಕ ನೇಣೇ (ನಾಮದೇವ ಅಭಂಗ ೧೦೮೭)*
ವಿಠ್ಠಲ ಗೂಢವಾಗಿ (ಅಥವಾ ಕನ್ನಡ) ಮಾತನಾಡಬಲ್ಲ. ಅವನ ಭಾಷೆ ಪುಂಡಲೀಕ ಅರಿಯ.

**ಏಥ - ಇತ್ತ**

ನನ್ನ ಮಿತ್ರರಾದ ವ. ದಿ. ಕುಲಕರ್ಣಿಯವರು ಲೀಳಾಚರಿತ್ರದಲ್ಲಿಯ 'ಏಥ' ಈ ಪದದ ಅರ್ಥವನ್ನು ಕುರಿತು ಸುದೀರ್ಘವಾದ ಲೇಖವೊಂದನ್ನು ಬರೆದು ತಮ್ಮ 'ಲೀಳಾಚರಿತ್ರ ಏಕ ಅಭ್ಯಾಸ' ಕೃತಿಯಲ್ಲಿ ಸೇರ್ಪಡೆ ಮಾಡಿದ್ದಾರೆ. ಅದನ್ನು ಕುರಿತು ಒಂದಿಷ್ಟು ವಿವೇಚನೆ ಮಾಡಬೇಕಾಗಿದೆ.

ಕನ್ನಡದಲ್ಲಿ 'ಇಲ್ಲಿ' ಮತ್ತು 'ಇತ್ತ' ಶಬ್ದಗಳ ಅರ್ಥಗಳಲ್ಲಿ ಸೂಕ್ಷ್ಮ ಭೇದವಿದೆ.
*ನಾಲ್ಕುಕ್ಕುಮಿಲ್ಲಿ ಕೃತಿದೋಷಂಗಳ್ (ಕವಿರಾಜಮಾರ್ಗ ೧.೬೨)*

*ಆ ಸರಸ್ವತಿಯೆ ಮೂರ್ತಿಮಗಿಲ್ಲಿಯ ವಾಗ್ವಿಳಾಸಮಂ (ಆದಿಪುರಾಣ ೧.೯)*

ಇಂತಹ ಉದಾಹರಣೆಗಳನ್ನು ಗಮನಿಸಿದರೆ, 'ಇಲ್ಲಿ' ಶಬ್ದ 'ಈ ಸ್ಥಾನದಲ್ಲಿ' ಎನ್ನುವ ಅರ್ಥ ಕೊಟ್ಟುದು ಸ್ಪಷ್ಟವಾಗುತ್ತದೆ.

'ಇತ್ತ', 'ಇತ್ತಲ್' ಶಬ್ದದ ಬಳಕೆ ಹೀಗೆ

*ಅತ್ತ ಸುರೇಶ್ವರಾವಸಥಮಿತ್ತ ಮಹೀತಳಂ (ಪಂಪ ಭಾರತ ೧.೭೫)*
*ಸತ್ಯವತಿಗೆ ಮನಃ ಕನ್ಯಾಭಾವಮಂ ದಯೆಗೆಯ್ದು ಪರಾಶರ ಪೋದನಿತ್ತಲ್ (ಅದೇ ೧.೬೯ ವ)*

ಮೊದಲನೆಯ ಉದಾಹರಣೆಯನ್ನು ಗಮನಿಸಿದರೆ, ಅಲ್ಲಿ ಸುರೇಶ್ವರಾವಸಥಮಿಲ್ಲಿ ಮಹೀತಳಂ ಎಂದು ಹೇಳಿದರೆ ಯಾವ ಅರ್ಥ ವಿಪರ್ಯಾಸವೂ ಆಗದು! ಅದೇ ಎರಡನೆಯ ಉದಾಹರಣೆಯಲ್ಲಿ 'ಇತ್ತಲ್' ಶಬ್ದ 'ಈ ಬದಿಗೆ' 'ಈ ದಿಕ್ಕಿಗೆ' 'ಈ ಕಡೆಗೆ' ಅರ್ಥಕೊಡುತ್ತದೆ. ಇಲ್ಲಿ ಸ್ಥಾನಕ್ಕೆ ಮಹತ್ವವಿಲ್ಲ. ದಿಕ್ಕಿಗೆ ಮಹತ್ವವಿದೆ.

ಮರಾಠಿಯಲ್ಲಿಯ 'ಏಥ' ಶಬ್ದ ಅಪಭ್ರಂಶ ಭಾಷೆಯ 'ಏತ್ಥು' (ಸಂಸ್ಕೃತದ ಅತ್ರ) ದಿಂದ ಸಿದ್ಧವಾಯಿತೆಂದು ತುಳಪುಳೆಯವರು ಒಂದು ಸಂದರ್ಭದಲ್ಲಿ ಹೇಳಿದರೆ, ಇನ್ನೊಂದೆಡೆ ಸಂಸ್ಕೃತ 'ಅತ್ರ'ದಲ್ಲಿಯ 'ತ್ರ'ವು ಮರಾಠಿಯಲ್ಲಿ 'ಥ' ಆಯಿತೆಂದು ಹೇಳುತ್ತಾರೆ.[8] ಆದರೆ ಸಂಸ್ಕೃತದ ಆದಿಯ 'ಅ' 'ಏ' ಹೇಗಾಯಿತೆಂಬುದನ್ನು ಅವರಾಗಲೀ, ಅವರ ಆಧಾರಗ್ರಂಥಕಾರರಾದ ತಗಾರೆಯವರಾಗಲೀ ಹೇಳುವುದಿಲ್ಲ.

ನನಗನಿಸುವ ಮಟ್ಟಿಗೆ ಮರಾಠಿಯಲ್ಲಿಯ 'ಏಥ' ಶಬ್ದವು ಕನ್ನಡ 'ಇತ್ತ' ದಿಂದ ಸಿದ್ಧವಾಗಿದೆ. ಇತ್ತ>ಇಥ>ಏಥ. ಅಂದಿನ ಗ್ರಾಂಥಿಕ 'ಏಥ' ರೂಪವೂ ಇಂದಿನ ಗ್ರಾಂಥಿಕ ರೂಪ 'ಇಥ'ವೂ ಇದನ್ನು ಸ್ಪಷ್ಟಗೊಳಿಸುತ್ತವೆ..

ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ 'ಇಲ್ಲಿ' ಮತ್ತು 'ಇತ್ತ' ಇವೆರಡೂ ಭಾವಗಳಿಗಾಗಿ 'ಏಥ' ಒಂದೇ ಶಬ್ದವಿತ್ತು (ಹಳಗನ್ನಡದಲ್ಲೇ 'ಇತ್ತ' ಶಬ್ದವು 'ಇಲ್ಲಿ' ಅರ್ಥಕ್ಕಾಗಿ ಬಳಸಲಾಗುತ್ತಿತ್ತೆಂದು ಮೇಲೆ ಹೇಳಿಯೇ ಇದ್ದೇನೆ. ಬಹುಶಃ ಆ

8. ಯಾದವ ಕಾಲೀನ ಮರಾಠೀ ಭಾಷಾ ಪುಟ ೪೮ ಹಾಗೂ ಪುಟ ೧೬೦

ಕಾರಣಕ್ಕಾಗಿಯೇ ಹೊಸಗನ್ನಡದಲ್ಲಿ 'ಇತ್ತ ಕಡೆಗೆ' 'ಈ ಕಡೆಗೆ' ರೂಪ ಹುಟ್ಟಿಕೊಂಡವು. ಇದೂ ಮರಾಠಿಗೆ ಹೋಗಿ 'ಇಕಡೇ' ಆಗಿದೆ. ಆ ವಿಚಾರ ಈಗ ಪ್ರಸ್ತುತವಲ್ಲ.)

'ಇಲ್ಲಿ' ಅರ್ಥದ ಪ್ರಯೋಗಗಳು.

ಏಥ ಆಲೇ ಅಸತಿ ಆಘವೇ (೧.೧೭೧) ಇಲ್ಲಿ ಎಲ್ಲರೂ ಬಂದಿದ್ದಾರೆ.
ಏಥ ವೃಷ್ಟಿತಳ ಆಮಲೇಜ್ ಹೋಇಲ (೨.೬೫) ಇಲ್ಲಿ ವೃಷ್ಟಿಯೆಲ್ಲ ಸ್ವಚ್ಛವಾದೀತು.
ಏಥ ಮುಖಿಚಿ ದೀಸೇ ಮುಖೇಜ್ (೧೮.೧೧೧೬) ಇಲ್ಲಿ ಮುಖದಿಂದ ಮುಖವೇ ಕಾಣುವುದು.
ತುಮ್ಹಿಜ್ ಏಥ ವಿವಸ್ತ್ರಾಜ್ ಹೋಊನಿ ನೃತ್ಯಕರಾವೇ (ಲೀಳಾಚರಿತ್ರ ಉತ್ತರಾರ್ಧ)

ನೀವು ಇಲ್ಲಿ ಬೆತ್ತಲೆಯಾಗಿ ಕುಣಿಯಬೇಕು.

ಏಥ ಏಕೀ ಬ್ರಹ್ಮವಿದ್ಯಾ ಅಸೇ (ಉತ್ತರಾರ್ಧ) ಇಲ್ಲಿ ಒಂದೇ ಬ್ರಹ್ಮವಿದ್ಯೆಯಿದೆ.

'ಇತ್ತ' ಅರ್ಥದಲ್ಲಿ

ಏಥ ವಿಕರ್ಣ ವೀರು ಆಹೇ ಹಾ ಅಶ್ವತ್ಥಾಮಾ ಪೈಲು ಪಾಹೇ (೧.೧೦೭)

ಇತ್ತ ವಿಕರ್ಣ ವೀರನಿದ್ದಾನೆ. ಈ ಅಶ್ವತ್ಥಾಮ ಅತ್ತ ನೋಡುತ್ತಿದ್ದಾನೆ.

ಮರಾಃ ಮರಾಃ ತುಮ್ಹಾಪಸಿ ವರ ಸುನೇಚಾಂಗಃ ಜೇ ಏಥಚೀಯಾ ವಿಯೋಗ ಸಾಹೋ ನ ಸಕೇಚೀಃ (ಲೀಳಾಚರಿತ್ರ ಉತ್ತರಾರ್ಧ)

ಸಾಯಿರಿಃ ಸಾಯಿರಿಃ ನಿಮಗಿಂತ ನಾಯಿ ಒಳ್ಳೆಯದುಃ ಇತ್ತಣ ವಿಯೋಗ ಅದಕ್ಕೆ ಸಹಿಸದಾಯಿತು.

ಹೇ ಕಾಇ ಬಾಇಃ ಏಥೌನಿ ಹೇ ದೇಖತಾವಿಃ ಹಾ ಲೋಕು ದೇಖತಾವಿ (ಆದೇ)

ಇದೇನವ್ವ? ಇತ್ತಲಿಂದ ಇವನು ನೋಡುತ್ತಿದ್ದಾನೆ. ಈ ಜನ ನೋಡುತ್ತಿದ್ದಾರೆ.

'ಇತ್ತ' ಶಬ್ದಕ್ಕೆ ಹತ್ತುವ ಷಷ್ಠೀ ವಿಭಕ್ತಿಯ ಪ್ರತ್ಯಯವೂ ಕುತೂಹಲಕಾರಿಯಾಗಿದೆ.

'ಅತ್ತ' 'ಇತ್ತ' ಶಬ್ದಗಳ ಷಷ್ಠಿ ರೂಪಗಳು 'ಅತ್ತಣ' 'ಇತ್ತಣ' ಎಂದು ಶಬ್ದಮಂಜರಿಯಲ್ಲಿ (೧೩೪-೧೩೫) ಹೇಳಲಾಗಿದೆ.

ಅತ್ತ-ಅತ್ತಲ್, ಇತ್ತ-ಇತ್ತಲ್ ಇವು ಸಮಾನಾರ್ಥ ಶಬ್ದಗಳ ಜೋಡಿಗಳು (ಶಬ್ದಮಣಿದರ್ಪಣ ಸೂತ್ರ ೧೭೯). ಹಾಗಿದ್ದರೆ 'ಅತ್ತ' ಶಬ್ದದ ಷಷ್ಠಿಯ ರೂಪ ಅತ್ತಲ, ಇತ್ತದ ರೂಪ ಇತ್ತಲ ಹೀಗೇಕೆ ಆಗಬಾರದು?

ನನಗನಿಸುವ ಮಟ್ಟಿಗೆ 'ಅತ್ತಣ' 'ಇತ್ತಣ' ದಲ್ಲಿ ಬರುವ 'ಅಣವು' ಷಷ್ಠಿಯ ಪ್ರತ್ಯಯವಾಗಿರದೆ 'ದಿಕ್ಕು', 'ಬದಿ' ಸೂಚಿಸುವ ಪ್ರತ್ಯಯವಾಗಿದೆ. (ಉದಾಹರಣೆಃ ಕೇಶಿರಾಜನೇ ಕೊಡುವಂತೆ ಮೇಗಣ, ಕೆಳಗಣ, ಅಡಿಯಣ ಶಬ್ದಮಣಿದರ್ಪಣ ಸೂತ್ರ ೨೬೯ ಟೀಕು) ಅಣ = ಅಳ = ಅಲ ರೂಪಗಳನ್ನು ಗಮನಿಸಿದರೆ (ಮೂಡಣವು

ಮೂಡಲವೂ ಆಗಿದೆ. ಮೂಡಲ ಮನೆಯಾ ಮುತ್ತಿನ ನೀರಿನ ಎಂದು ಅಂಬಿಕಾತನಯದತ್ತರಷ್ಟೇ ಹಾಡಿಲ್ಲ, ಮೂಡಲಿರ್ದ ಪದದೊಳ್ ತಾರಾಮನೋವಲ್ಲಬಂ? ಎಂದು ಕೇಶಿರಾಜನೇ ಒಂದೆಡೆ ಉದಾಹರಿಸುತ್ತಾನೆ. ಸೂತ್ರ ೧೨೯) 'ಅತ್ತಲ್' 'ಇತ್ತಲ್' ಶಬ್ದಗಳು ಕೂಡ 'ಅತ್ತಣ' 'ಇತ್ತಣ' ಇವುಗಳ ಸಮಾಂತರ ರೂಪಗಳೆಂದೂ ಒಪ್ಪಿಕೊಳ್ಳಬೇಕಾಗುತ್ತದೆ.

ಇದರ ಉಪಸಿದ್ಧಾಂತವೆಂದರೆ 'ಇಲ್ಲಿ-ಇತ್ತ' 'ಅಲ್ಲಿ-ಅತ್ತ' ಇವು ಮೂಲತಃ ಒಂದೇ ಅರ್ಥ ಸೂಚಿಸುವ ಜೋಡಿಗಳಾಗಿರಬೇಕು 'ಸ್ಥಾಯೀ ಭಾವ'ವನ್ನು ಸೂಚಿಸುವ 'ಇರ್' 'ಇಲ್' ಧಾತುವಿನಿಂದ 'ಇಲ್ಲಿ' 'ಇತ್ತ' ರೂಪಗಳಾಗಿದ್ದರೆ 'ಆಗು' ಅರ್ಥದಲ್ಲಿಯ 'ಆರು' ಧಾತುವಿನಿಂದ (ಇದರ ಸ್ವತಂತ್ರ ಪ್ರಯೋಗಗಳು ನಮಗೆ ದೊರೆಯುವುದಿಲ್ಲ. ಆದರೆ - ಇದರಲ್ಲೇ ಆದು + ಆರ್ ಶಬ್ದಗಳು ಸೇರಿಕೊಂಡದ್ದನ್ನು ಗಮನಿಸಬಹುದು. ಅಕರಣಾತ್ಮಕ 'ಅ' ಪ್ರತ್ಯಯ ಹತ್ತಿ ಆದ ರೂಪ 'ಆರ' ಮಾತ್ರ ರೂಢಿಯಲ್ಲಿದೆ. ಉದಾಹರಣೆಗೆ ಕೊಡಲ್ ಆರ, ಮಾಡಲ್ ಆರ್, ಹೋಗಲಾರ, ಬಿಡಲಾರ ಇತ್ಯಾದಿ) 'ಅಲ್ಲಿ' ಮತ್ತು 'ಅತ್ತ' ರೂಪಗಳು ವ್ಯುತ್ಪನ್ನವಾಗಿವೆ. ಇದಕ್ಕೂ ಸ್ವಾರಸ್ಯಕರ ಸಂಗತಿಯೆಂದರೆ ಈ 'ಆರು' ಶಬ್ದ ಇದೇ ರೂಪದಲ್ಲಿ ಕ್ರಿಯಾ ವಿಶೇಷಣವಾಗಿ ಮರಾಠಿಗೆ ಹೋಗಿದೆ. ಚತುರ್ಥಿ ವಿಭಕ್ತಿಯ ಪ್ರತ್ಯಯವಾದ 'ತೇಜ್' ಹತ್ತಿದ 'ಆರುತೇಜ್' ಶಬ್ದದ ಬಳಕೆಯನ್ನು ಲೀಳಾಚರಿತ್ರೆಯಲ್ಲಿ ಹೀಗೆ ಗುರುತಿಸಬಹುದು.

*ಪರತೇಜ್ ಐಸೇಜ್ ವೃಕ್ಷಾತಳೀಜ್ ಬೀಜೇಜ್ ಕೇಲೇಜ್: ಭಾಂಡಾರೇಕಾರೀ ಆರುತೇ ಧೋತ್ರ ಫಾಳುನಿ ಆಸನ ಕೇಲೇಜ್ (ಏಕಾಕ ೨೭)*

> ಬಳಿಕ ಅಂತಹ ಗಿಡದ ಕೆಳಗೆ ಬಿಜಯಂ ಗೈಸಿದರು : ಭಾಂಡಾರೇಕಾರರು ಅಲ್ಲಿಗೆ ದೋತರ ಹರಿದು ಆಸನ ಮಾಡಿದರು.

*ತೇಯಾಚೇನಿ ರಾಉತ ಪಾಇಕೇಜ್ ಸಾವಳಾಚೇಯಾ ಬುಥಿಯಾ ಗೋಸಾವಿಯಾತೇಜ್ ಪರತೇಜ್ ಸಾರಿಲೇಜ್: ಆರಿ ಶ್ರೀಕರಚೇಜ್ ಅನ್ನ ಸಾಂಡೀಲೇಜ್ (ಏಕಾಕ ೫೩)*

> ಅವನ ಅಶ್ವಾರೋಹಿಗಳಾದ ಸೇವಕರು ಕೊಂತದ ಬುಡದಿಂದ (ತಿವಿದು) ಚಕ್ರಧರರನ್ನು ಬದಿಗೆ ಸರಿಸಿದರು; ಆಗ (ಅವರ) ಶ್ರೀಕರದಿಂದ ಅನ್ನ ಚೆಲ್ಲಿತು.

*ಬಾಈ ಪರಮೇಶ್ವರಪುರೂನಿ ವಸ್ತ್ರ ಆಣಿಲೇ ಆಸೇ; ತೆಜ್ ಆಣಾ ಆರೂತೇಜ್ (ಉತ್ತರಾರ್ಧ)*

> ತಾಯೀ, ಪರಮೇಶ್ವರಪೂರದಿಂದ ಬಟ್ಟೆ ತಂದಿದ್ದಾರೆ. ಅದನ್ನು ಇಲ್ಲಿಗೆ ತನ್ನಿರಿ.

ಕನ್ನಡದಲ್ಲಿ 'ಅಲ್ಲಿಗೆ' ಶಬ್ದವು ಕೆಲ ಸಲ 'ಆಗ'ದ ಅರ್ಥಕೊಡುತ್ತದೆ ಎಂಬುದೇನೋ ನಿಜ. ಆದರೆ 'ಅಲ್ಲಿಗೆ' ಹಾಗೂ 'ಇಲ್ಲಿಗೆ' ಇವೆರಡೂ ಶಬ್ದಗಳು

---

ಯಾದವ ಕಾಲೀನ ಮರಾಠಿ ಭಾಷಾ ಪುಟ ೪೮ ಹಾಗೂ ಪುಟ ೧೬೦

ಒಂದೇ ಅರ್ಥ ಕೊಡಲಾರವು. ಪೂರ್ವಾರ್ಧದಲ್ಲಿಯ ಇನ್ನೊಂದು ಲೀಳೆಯಲ್ಲಿ ಕೂಡ 'ಆರುತೇ' ಶಬ್ದ 'ಇಲ್ಲಿಗೆ' ಎಂದೇ ಅರ್ಥದಲ್ಲಿ ಇದೆ. ಅದು ಚಕ್ರಧರರು ಮಗು ಚಾಂಗದೇವನನ್ನು ತಮ್ಮ ಹೊದಿಕೆಯೊಳಗೆ ಕರೆಯುವಾಗಿನ ಪ್ರಸಂಗ.

'ಇಲ್ಲಿ' ಮತ್ತು 'ಇತ್ತ' ರೂಪಗಳು 'ಇರ್' ಧಾತುವಿನಿಂದಲೂ, 'ಅಲ್ಲಿ' ಮತ್ತು 'ಅತ್ತ' ಶಬ್ದಗಳು 'ಅರು' ಧಾತುವಿನಿಂದಲೂ ಸಿದ್ಧವಾಗಿರಬಹುದೆಂದು ನಾವು ಹೇಳಿದೆನಷ್ಟೇ? ಇವೇ ಮೂಲಧಾತುಗಳಿಂದ 'ಇದು' ಮತ್ತು 'ಅದು' 'ಇವನ್' ಮತ್ತು 'ಅವನ್' (ಹಾಗೂ ತದನುಷಂಗಿಕ ರೂಪಗಳು) ಸಿದ್ಧವಾಗಿರಬಹುದಾಗಿವೆ.

ಕನ್ನಡದ 'ಈ' ಮರಾಠಿಯಲ್ಲಿ ಅದೇ ರೂಪದಲ್ಲಿ ಹೋದುದನ್ನು ಅದೇ ಅರ್ಥ ಹೊಂದಿದ್ದನ್ನು ಬೇರೆಡೆ ಚರ್ಚಿಸಿದ್ದೇನೆ. ಈ ಕಾರಾಂತ ಅಥವಾ ಈ ಉಪಾಂತ್ಯ ಸ್ವರವುಳ್ಳ ಶಬ್ದಗಳಿಗೆ ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಅವು ಹ್ರಸ್ವವಾಗಿ ಇ ಕಾರಾಂತ ಅಥವಾ ಇ ಉಪಾಂತ್ಯ ಸ್ವರಗಳದ್ದಾಗುವುದು ಮರಾಠಿಯಲ್ಲಿಯ ವ್ಯಾಕರಣ ನಿಯಮ. ಉದಾಹರಣೆಗೆ, ಮಿ-ಮಿಯಾಜ್ ಪುಥೀಲ - ಪುಥಿಲಾಚಾ (೧೬.೧೫೬) ಇದೇ ನಿಯಮದಂತೆ 'ಈ' ಶಬ್ದವು ಷಷ್ಠಿ ವಿಭಕ್ತಿಯ 'ಅ' ಪ್ರತ್ಯಯದೊಂದಿಗೆ 'ಇಯಾ', 'ಇಯೀ', 'ಇಯೇ' ರೂಪಗಳನ್ನು ಹೊಂದಿದೆ. ಜ್ಞಾನೇಶ್ವರೀಯಲ್ಲಿ 'ಇಯಾ' ದಿಂದ ಆರಂಭವಾಗುವ ಓವಿಗಳ ಸಂಖ್ಯೆ ೨೦, 'ಇಯೇ'ದಿಂದಲೂ ಅಷ್ಟೇ; (ಇಯೀಗೆ ಬದಲಾಗಿ) ಇಹೀದಿಂದ ೧೩. ಜ್ಞಾನೇಶ್ವರೀಯಲ್ಲೇ 'ಇಯಾ'ವು 'ಹಾ' 'ಇಯೇ'ವು ಹೇ 'ಇಹೀ'ವು 'ಹೀ' ಆಗಿವೆ.

ಇಷ್ಟೆಲ್ಲ ದೀರ್ಘ ವಿವೇಚನೆಯ ಪ್ರಯೋಜನವಿಷ್ಟೇ. 'ಇದು (ಈ)' ಮತ್ತು 'ಇತ್ತ' ಇವು ಒಂದೇ ಮೂಲದ ಶಬ್ದಗಳೆಂಬ ಪರಿಕಲ್ಪನೆ ಮರಾಠಿಯಲ್ಲೂ ಸೂಕ್ಷ್ಮವಾಗಿ ಹೇ ಮತ್ತು ಏಥ ಶಬ್ದಗಳಲ್ಲಿ ಅಡಗಿದೆ.

ವ. ದಿ. ಕುಲಕರ್ಣಿಯವರು 'ಏಥ' ಶಬ್ದಕ್ಕೆ, ಲೀಳಾಚರಿತ್ರದ ಸಂದರ್ಭದಲ್ಲಿ 'ಪರಮೇಶ್ವರ' ಎಂಬ ಅಲಂಕಾರಿಕ ಅರ್ಥವನ್ನು ಹಚ್ಚಿದ್ದಾರೆ.

ಏಥ ಅನುಸರಾ ಅಂದರೆ ಪರಮೇಶ್ವರನನ್ನು ಅನುಸರಿಸಿರಿ
ಏಥೌನಿ ಮ್ಹಣತಲೇ ತೇಜ್ ಕೀಜೇ ಅಂದರೆ ಪರಮೇಶ್ವರನು ಹೇಳಿವಂತೆ ಮಾಡುವುದು

ಮಹಾನುಭಾವ ಪಂಥದ ಅನುಯಾಯಿಗಳು ಶ್ರದ್ಧಾನ್ವಿತರಾಗಿ ಚಕ್ರಧರರು ಪ್ರತ್ಯಕ್ಷ ಪರಮೇಶ್ವರ (ಶ್ರೀಕೃಷ್ಣನ ಅವರಾವತಾರ) ಎಂದು ಭಾವಿಸಿ ಅವರ ಮಾತುಗಳೆಲ್ಲ ದೇವವಾಕ್ಯವೆಂದು ತಿಳಿದರೆ ಯಾರಿಗೂ ಅಭ್ಯಂತರವಿರಬೇಕಿಲ್ಲ. ಆದರೆ ಭಾಷೆಯ ದೃಷ್ಟಿಯಿಂದ ಇದೊಂದು ಅನ್ಯಾಯವೆನಿಸುತ್ತದೆ.

ಚಕ್ರಧರರು ತಮ್ಮನ್ನು ಉದ್ದೇಶಿಸಿ ಹೇಳುವಾಗ ಎಂದೂ, ಎಲ್ಲೂ ನಾನು ಅಥವಾ 'ನಾವು' ಎಂದು ಹೇಳಿಕೊಂಡಿಲ್ಲ. ಏಕಾಕ, ಪೂರ್ವಾರ್ಧಗಳಲ್ಲಿ ಹೆಚ್ಚಾಗಿ 'ಇವನು' (ಹೇ) ಎಂದೇ ಬರುತ್ತದೆ. ಪೂರ್ವಾರ್ಧ ಉತ್ತರಾರ್ಧಗಳ ಪ್ರಸಂಗ

(ಲೀಳೆ)ಗಳನ್ನು ಮ್ಹಾಇಂಭಟ್ಟನು ಇತರರಿಂದ ಸಂಗ್ರಹಿಸಿದ. ಆದರೆ 'ಏಕಾಕ'ದ ಪ್ರಸಂಗಗಳು (ಚಕ್ರಧರರು ಏಕಾಕಿಯಾಗಿ ಪರ್ಯಟನ ಮಾಡಿದಾಗಿನ ಸಂಗತಿಗಳು) ಅವರು ಇನ್ನೊಬ್ಬರಿಗೆ ಸಂದರ್ಭವಶಾತ್ ಹೇಳಿದವುಗಳನ್ನು ಸಂಗ್ರಹಿಸಲಾಗಿದೆ.

ಹೀಗೆ ಕೆಲದೆಡೆ 'ಇವನು' ಎಂದು ಉಲ್ಲೇಖ ಬಂದರೆ ಇನ್ನು ಕೆಲವೆಡೆ 'ಇತ್ತಣಿಂದ' ಎಂದೂ ಹೇಳಲಾಗಿದೆ. 'ಈ-ಇತ್ತ' 'ಆ-ಅತ್ತ' ಹೀಗೆ ಸಮಾನ ಅರ್ಥಗಳ ರೂಪಗಳಿರುವಾಗ ಒಂದಕ್ಕೆ ಬದಲಾಗಿ ಇನ್ನೊಂದರ ಪ್ರಯೋಗವಾಗುವುದು ತೀರ ಸಹಜ. ಆದಕ್ಕೆ ಅಷ್ಟು ಮಹತ್ವ ಕೊಡಬೇಕಿಲ್ಲ.

**ಐಸೇಜ್, ತೈಸೇಜ್, ಕೈಸೇಜ್, ಜೈಸೇಜ್: ಇಹಗೆ, ಅಹಗೆ ಎಹಗೆ, ಹೀಗೆ, ಹಾಗೆ, ಹೇಗೆ**

*ತಿಬ್ಬವೆಹಗಪುವಹಗೆ ಮಾಡಿದಂ* ಎಂದು ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಉದಾಹರಿಸಿದ್ದಾನೆ (ಸೂತ್ರ ೧೫೫)

ರೆ. ಕಿಟೆಲ್ ಅವರು, ಆಗು ಧಾತುವಿನ ವರ್ತಮಾನಕಾಲ ವಾಚಕ ಕೃದಂತವಾದ ಅಪ್ಪದಿಂದ ಅಹವಾಗಿ ಮುಂದೆ ಅಹಗೆ ರೂಪವಾಯಿತು ಎಂದಿದ್ದಾರೆ. ಇಹಗೆ ಮಾತ್ರ ಇರ್ ಧಾತುವಿನಿಂದಾದ ಇರ್ಪ, ಇಪ್ಪ ಕೃದಂತದಿಂದ ಇಹವಾಗಿ, ಇಹಗೆ ಆಗಿರಬಹುದೆಂದು ಪರೋಕ್ಷವಾಗಿ ಸೂಚಿಸಿದ್ದಾರೆ. ಏಹಗೆಯ ಬಗ್ಗೆ ಅವರು ಹೇಳಿಲ್ಲ. ಭಾವದಲ್ಲಿ ಸಾಮ್ಯವಿರುವಾಗ ಮೇಲಿನ ಮೂರು ಶಬ್ದಗಳು ಬೇರೆ ಬೇರೆ ಧಾತುಗಳಿಂದುಂಟಾದ ಕೃದಂತಗಳಿಂದ ಸಾಧಿಸಲಾಗಿವೆಯೆನ್ನುವುದು ಸರಿಯಲ್ಲವೆಂದು ನನ್ನ ಅನಿಸಿಕೆಯಾಗಿದೆ.

ಇರ್ ಧಾತುವಿನಿಂದ ಸಿದ್ಧವಾದ ಇಪ್ಪ, ಇಹ ಕೃದಂತದಿಂದಲೇ ಈ ಮೂರು ವಿಶೇಷಣಗಳು ಆಕಾರಗೊಂಡಿರಲು ಸಾಕು.

ಈ + ಇಹಗೆ > ಈ ಹಗೆ = ಹೀಗೆ

ಆ + ಇಹಗೆ > ಆಹಗೆ = ಹಾಗೆ

ಏ + ಇಹಗೆ > ಏಹಗೆ = ಹೇಗೆ

ಹೀಗೆ ರೂಪಗಳು ವ್ಯುತ್ಪನ್ನವಾಗಿರುವುದು ಹೆಚ್ಚು ಸಮಂಜಸ.

ಈ ಹಿನ್ನೆಲೆಯಲ್ಲಿ ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಕಂಡು ಬರುವ ಸಮಾಂತರ ರೂಪಗಳಾದ ಐಸೇಜ್, ತೈಸೇಜ್, ಕೈಸೇಜ್ ಹಾಗೂ ಜೈಸೇಜ್‌ಗಳು ಅಭ್ಯಸನೀಯವಾಗಿವೆ. ಮರಾಠಿ ಸಂಶೋಧಕರು ಇವುಗಳ ಮೂಲವನ್ನು ಸಂಸ್ಕೃತದ ಈದೃಶ, ತಾದೃಶ, ಕೀದೃಶ ಹಾಗೂ ಯಾದೃಶಗಳಲ್ಲಿ ಕಾಣಲೆತ್ನಿಸಿದ್ದಾರೆ. ಆದರೆ ಯಾದೃಶ್ ಎಂದರೆ ಯಥಾ ಅಲ್ಲ, ತಾದೃಶ್ ಎಂದರೆ ತಥಾ ಅಲ್ಲ ವೆಂಬುದುನ್ನು ಮನಗಾಣಲು ದೂರ ಹೋಗಬೇಕಿಲ್ಲ. ಮೇಲಿನ ಯಾದೃಶ್ ತಾದೃಶ್ ಮೊದಲಾದವುಗಳಲ್ಲಿ ದೃಶ್‌ದ, ಕಾಣುವ ಪ್ರಕ್ರಿಯೆ ಇದೆ. ಐಸೇಜ್ ತೈಸೇಜ್‌ಗಳಲ್ಲಿ ಆ ಭಾವವಿಲ್ಲ. ಮೇಲಾಗಿ ಸಂಸ್ಕೃತದ ದೃಶ್ ಮರಾಠಿಯಲ್ಲಿ ದಿಸ (ಕಾಣು

ಅರ್ಥದಲ್ಲಿ)ವೆಂದು ಜ್ಞಾನೇಶ್ವರೀಕಾಲದಲ್ಲಿ ರೂಢವಾಗಿಯೇ ಇತ್ತು. ಟಿಸವಲ್ಲಿಯ ಟಿ ಲೋಪಗೊಳ್ಳುವ ಕಾರಣವೇನು? ಇದಕ್ಕಿಂತ ಹೆಚ್ಚು ಸಮರ್ಥಕವಾಗಿ

ಈ + ಅಸೇಜ್ > ಐಸೇಜ್

ತೇ + ಅಸೇಜ್ > ತೈಸೇಜ್

ಕಾಯ + ಅಸೇಜ್ > ಕಾಯಸೇಜ್ ಕೈಸೇಜ್

ಜೇಜ್ + ಅಸೇಜ್ > ಜೈಸೇಜ್

ಹೀಗೆ ಸಾಧಿಸಬಹುದಾಗಿದೆ. ಕನ್ನಡದ ಇರು ಧಾತುವಿನಿಂದ ಇಪ್ಪ, ಇಹ ಕೃದಂತವಾದಂತೆ, ಮರಾಠಿಯಲ್ಲಿ (ಇರು ಅರ್ಥದಲ್ಲಿಯ) ಅಸ ಧಾತುವಿನಿಂದ ಅಸೇಜ್. ಕೃದಂತ ಸೇರಿದ ರೂಪಗಳು ಜ್ಞಾನೇಶ್ವರೀಯಲ್ಲಿ ಹೇರಳವಾಗಿವೆ. ಈ ವಿಷಯವನ್ನು ಬೇರೆಡೆ ಚರ್ಚಿಸಲಾಗಿದೆ. ಐಸೇಜ್ ತೈಸೇಜ್ ಯ ಪ್ರಯೋಗಗಳು ಇಂತಿವೆ.

*ರಸಿಕತ್ವೀಜ್ ಹಿ ಪರತತ್ವ ಸ್ಪರ್ಶ ಜೈಸಾ (೧೮.೩೪೫)*

ರಸಿಕತ್ವದಲ್ಲಿ ಕೂಡ ಹೇಗೆ ಪರತತ್ವದ ಸ್ಪರ್ಶವಿರುವುದೋ (ಹಾಗೆ)

*ತೈಸೇಜ್ ಮನಾ ವಾಚೇ ದೇಹಾಚೇಜ್ (೧೮.೩೫೯)*

ಹಾಗೆ ಕಾಯಾವಾಚಾಮನಸಾ

*ಕಾಇಸೇಯಾ ತೇ ಆಸುರ ಸಂಪತ್ತಿ ಜೋಡಾವಿ ವಾಉರ (೧೬.೪೧೯)*

ಅನುಚಿತವಾದ ಆ ಆಸುರೀ ಸಂಪತ್ತಿಯನ್ನು ಹೇಗೆ (ಏಕೆ) ಸಂಪಾದಿಸಬೇಕು.

*ದಾಹಿಜ್ ಇಂದ್ರಿಯಾಂಚಾಜ್ ಗಾವಿಜ್ ನೇಣಜೆ ಐಸಾ ವ್ಯಾಪಾರು ಜೋ ನಿಫಜೆ (೫.೫೫)*

ಹತ್ತೂ ಇಂದ್ರಿಯಗಳಿಗೆ ಸುದ್ದಿ ಹತ್ತುವುದಿಲ್ಲ, ಹೀಗೆ ಕರ್ಮವು ಹುಟ್ಟಿದರೆ -

**ಐಯಾ : ಅಯ್ಯಾ**

ಆವರಯ್ಯಂ ಶರದ್ವತನಲ್ಲಿಗೆ ಬಂದು ಕಿಜಿಯಾತಂಗೆ ಚೌಲೋಪನಯನಾದಿ ಕ್ರಿಯೆಗಳಂ ಮಾಡಿ (ಪಂಪಭಾರತ ೨.೩೩ ವ) ಎನ್ನುವಲ್ಲಿ 'ಅಯ್ಯ' 'ಶಬ್ದ' ತಂದೆ' ಎಂದರ್ಥಕೊಟ್ಟರೆ, ಅಯ್ಯಂದಿರ್ ಅಯ್ಯಂಗಳ್ ಎಂಬುದಾಗಿ ಕೇಶಿರಾಜನು ಕೊಡುವ ಉದಾಹರಣೆಗಳಲ್ಲಿ (ಶಬ್ದಮಣಿದರ್ಪಣ ಸೂತ್ರ ೧೧೧) ಅದು 'ಗುರು' ಎನ್ನುವ ಅರ್ಥ ಕೊಡುತ್ತದೆ. ಇವುಗಳಿಂದಾಗಿ ಅದು ಆದರಾರ್ಥೀ ಸಂಬೋಧನೆಯೂ ಆಗಿದೆ. ಅಯ್ಯಾ, ಅಯ್ಯಾ ಎಂದು ಕರೆಯುತ್ತಲಿದ್ದೇನೆ. ಅಯ್ಯಾ, ಅಯ್ಯಾ ಎಂದೊದಲುತ್ತಲಿದ್ದೇನೆ (ಬಸವೇಶ್ವರ ವಚನಗಳು ೫೬) ಎನ್ನುವಲ್ಲಿ ಇದು ಸ್ಪಷ್ಟವೂ ಆಗಿದೆ. ಇದು ಅದೇ ರೂಪದಲ್ಲಿ (ಐಯಾ ಆಗಿ) ಅದೇ ಅರ್ಥದಲ್ಲಿ ಮರಾಠಿಯಲ್ಲಿ

ಬಳಸಲಾದುದನ್ನು ಲೀಳಾಚರಿತ್ರದಲ್ಲಿ ನೋಡಬಹುದಾಗಿದೆ.

*ತೇಜ್ ಹೀಜ್ ಆವಘೇಜ್ ಸಾಂಘಿತಲೇಜ್ ಐಯಾಃ ಐಯಾಃ ಈಶ್ವರ ಪುರುಷು ಹೋತಿಃ ದೃಷ್ಟೀ ಪೂಢಾಜ್ ವೀಖ ನ ರ್‍ಹಾಯೇ (ಪೂರ್ವಾರ್ಧ ೬೦)*

> ಅವರೆಲ್ಲರೂ ಹೇಳಿದರು 'ಅಯ್ಯಾ: ಅಯ್ಯಾ: ಈಶ್ವರ ಪುರುಷರು ಆಗಿದ್ದಾರೆ, ಅವರ ದೃಷ್ಟಿ ಎದುರು ವಿಷ ಉಳಿಯುವುದಿಲ್ಲ.

*ಐಯಾ ಲಿಂಗಾಃ ಮಾಝೀಯಾ ಘರಾ ಸೋಮನಾಥು ಆಲಾ (ಏಕಾಕ ೧೧)*

> ಅಯ್ಯಾ, ಲಿಂಗವೇ, ನನ್ನ ಮನೆಗೆ ಸೋಮನಾಥ ಬಂದಿದ್ದಾನೆ.

ಇದಲ್ಲದೆ ಪುರುಷರ ಹೆಸರುಗಳಿಗೆ ಆದರಾರ್ಥಿಯಾಗಿ 'ಅಯ್ಯ' ಪ್ರತ್ಯಯ ಹಚ್ಚಿನ ಪದ್ಧತಿ ಸುಮಾರು ೧೨ನೆಯ ಶತಮಾನದಿಂದಲೂ ನಡೆದು ಬಂದಿದೆ. ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಮೋಳಿಗೆಯ ಮಾರಯ್ಯ ಇವೆಲ್ಲ ಇದಕ್ಕೆ ಉದಾಹರಣೆಗಳು.

ಆದರ ಸೂಚಿಸುವ ಪ್ರತ್ಯಯವಾಗಿಯೂ 'ಅಯ್ಯ' ಶಬ್ದ ಮರಾಠಿಯಲ್ಲಿ ಕಾಣಿಸಿಕೊಂಡಿದೆ. ಲೀಳಾಚರಿತ್ರದಲ್ಲಿಯ ಉದಾಹರಣೆಗಳಿವು. ಜಾನೋ - ಜಾನೋಯೇಜ್ (ಪೂ. ೪೪) ಡಖಲಾ ಡಖಲೇಯಾ (ಪೂ.೮೨) (ಪೂ. ೯೬) (ಪೂ ೧೦೪) ಪರಸನಾಯಕ - ಪರಸೇಯಾ (ಪೂ. ೧೨೮) ಭೋಜಾ - ಭೋಜೆಯಾ (ಪೂ ೧೩೨ - ೧೩೬, ೧೩೭) ಸಂಗ(?) - ಸಂಗೇಯಾ (ಏ.೩೪).

**ಓಇಚಲೇಜ್, ಉಯ್(ಸಿದ) - ಮರ್ಯಾದಿತ**

'ನಿಯಾಮ' ಅರ್ಥದಲ್ಲಿಯ 'ಉಯ್' ಧಾತುವನ್ನು ಕೇಶಿರಾಜನು ಹೇಳಿ ಉಯ್ಯಂ ಉಯ್ಯಲುಂ ಎಂಬುದಾಗಿ ಉದಾಹರಣೆಗಳನ್ನು ಕೊಡುತ್ತಾನೆ. (ಶಬ್ದಮಣಿದರ್ಪಣ ಸೂತ್ರ ೮೦). ಆದರೆ ಅದಕ್ಕೆ 'ಸು' ಪ್ರತ್ಯಯ ಹತ್ತಿ ಪ್ರಯೋಜಕವಾದ ರೂಪಗಳು ಹಳಗನ್ನಡ ಸಾಹಿತ್ಯದಲ್ಲಿ ದೊರೆಯುವುದಿಲ್ಲ. 'ಉಯ್ + ಸು' ಧಾತುವಿನಿಂದ ಆದ ಕೃದಂತ 'ಉಯ್‌ಸಿದ' ಅರ್ಥದಲ್ಲಿಯ 'ಓಇಚಲೇಜ್' ರೂಪ ಮಾತ್ರ ಜ್ಞಾನೇಶ್ವರೀಯಲ್ಲಿ ದೊರೆಯುತ್ತದೆ. (ಇದರ ಮರಾಠೀ ಧಾತುವು 'ಓಇಚಣೇಜ್' ಆಗಿರಲು ಸಾಕು.)

*ಹೇಜ್ ಪಾಂಡವ ಸೈನ್ಯ ಥೋಕಡೇಜ್ ಓಇಚಲೇಜ್ ಆಪಾಡೇ ದೀಸತಸೇ (೧.೧೧೯)*

> (ಕೌರವ ಸೈನ್ಯಕ್ಕೆ ಹೋಲಿಸಲಾಗಿ) ಈ ಪಾಂಡವ ಸೈನ್ಯವು ಕಡಮೆ ಪ್ರಮಾಣದಲ್ಲಿ (ಇದ್ದಂತೆ) ತೋರುತ್ತದೆ.

**ಓಖಟೇಜ್ ಒಗ್ಗಾಟ, ಕೆಟ್ಟ, ಅನಿಷ್ಟ  ವೋಖಟೇಜ್ ಉಕ್ಕೆವ, ಠಕ್ಕು ಕುತ್ಸಿತ**

ಜೂದಿನೊಳುಕ್ಕೆವದಿಂದೆ ಗೆಲ್ದ ಸಿನ್ನವನಿತಳಂ (ಪಂಪಭಾರತ ೬.೪೩) ಸಿನ್ನ ಬಗೆಗಳ ಬಂಗಿ ಕರಂ ಉಕ್ಕೆವಂ ಆಗಿ ಮನಕೆ ತೋಱುಗುಂ (ಶಬ್ದಮಣಿದರ್ಪಣ ಸೂತ್ರ ೧೯೪) ಹೀಗೆ ಹಳಗನ್ನಡದಲ್ಲಿ ಬರುವ ಠಕ್ಕು ಅರ್ಥದ ಶಬ್ದ 'ವಕ್ರಭಾವೇ' ಅರ್ಥದಲ್ಲಿಯ 'ಉಜುಗು' ಧಾತುವಿನಿಂದ ಆಗಿರಬಹುದಾಗಿದೆ. 'ಉಜುಗು' ದಿಂದಾಗಲೀ ರೂಪಭೇದವಾದ 'ಒಗ್ಗು' ದಿಂದಾಗಲ್ಲಿ 'ಉಜುಗಾಟ' ಒಗ್ಗಾಟಗಳು ಸಿದ್ಧವಾಗಿ (ಈ ಶಬ್ದಗಳ ಪ್ರಯೋಗ ಹಳಗನ್ನಡ ಅಥವಾ ನಡುಗನ್ನಡದಲ್ಲಿ ದೊರೆತಿಲ್ಲ) ಮರಾಠಿಯಲ್ಲಿ ಅದೇ ಅರ್ಥದಲ್ಲಿ ಓ(ವೋ)ಖಟೇಜ್, ರೂಪ ವ್ಯುತ್ಪನ್ನವಾಗಿರಬಹುದಾಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು ಹೀಗಿವೆ.

*ವೋಖಟೇಜ್ ನಾ ಗೋಮಟೇಜ್ (೧೨.೧೯೪)*

ಕುತ್ಸಿತ (ಕೆಟ್ಟುದು) ಇಲ್ಲವೆ ಒಳ್ಳೆಯದು (ಇದಾವ ಭಾವನೆಯೂ ಅವನಲ್ಲಿ ಬರುವುದಿಲ್ಲ)

*ವೋಖಟೇಜ್ ಮರಣಾ ಐಸೇಜ್ (೧೬.೧೮೫)*

ಮರಣದಂತಹ ಕೆಟ್ಟ ಪ್ರಸಂಗ (ಬಂದರೂ ಸಾಧ್ವಿಯು...)

*ಹ್ಮಣೌನಿ ಆಳವಿಲಾ ತಜ್‌ವ ವೋಖಟಾ ಉಧಾಇಲಾ ಹಾ (೧೧.೪೪೬)*

ಎಂದು ಪ್ರಾರ್ಥಿಸಿದೆ. ಆಗ ಅನಿಷ್ಟ ರೂಪದಿಂದ ಇವನು (ಪರಮಾತ್ಮನು) ಪ್ರಕಟನಾದ!

*ಐಸೇ ವಿಶ್ವಾಚೀಯಾ ವೋಖಟೇಯಾ ಅಧಮ ಜೇ ಧನಂಜಯ*

*ತೇ ತೇ ಹೋಜ್‌ತಿ ಭೋಗಾವಯಾ ತಾಮಸಂ ಯೋನೀ (೧೬.೪೧೬)*

ಹೀಗೆ ವಿಶ್ವದಲ್ಲಿಯ ಕೆಟ್ಟ (ಅನಿಷ್ಟ)ದರಲ್ಲಿ ನೀಚವಾಗಿರುವ ಯಾವ ತಾಮಸಯೋನಿಗಳಿವೆಯೋ, ಧನಂಜಯನೇ, ಅವುಗಳನ್ನು ಭೋಗಿಸಬೇಕಾಗುತ್ತದೆ.

ಐಥ ಓಖಟೇಜ್ ಹೋಈಲ ಜೂಝುತಾಜ್ (೧.೨೧೯)

ಇಲ್ಲಿ ಯುದ್ಧಮಾಡುವುದು ಅನಿಷ್ಟವಾದೀತು.

*ಹಾ ವಿಚಾರಿತಾಜ್ ವಿಷೋ ಓಖಟಾ (೫.೧೨೬)*

ಯೋಚಿಸಿದರೆ ಇದು ಕೆಟ್ಟ ವಿಷವು.

**ಓಮ್ಹಾ, ಓ ಅಮ್ಹಾ, ವೋ ದೇ - ಓ ಗೊಡು**

ಸೋಮಾರಿಯ 'ಚಟುವಟಿಕೆ'ಗಳನ್ನು ಮನೋಜ್ಞವಾಗಿ ವರ್ಣಿಸುವಾಗ ಜ್ಞಾನೇಶ್ವರರು ಈ ಸಂಬೋಧನೆಯನ್ನು ಬಳಸಿದ್ದಾರೆ! ಬರಿ ಮೈಮುರಿದು-ಕೊಳ್ಳುವುದು, ಯಾವ ಕೆಲಸಕ್ಕೂ ಆಸ್ಥೆಯಿಲ್ಲದಿರುವುದು, ಆಕಳಿಕೆಗಳ ಸರಮಾಲೆಗಳ ಮುಂದಿನ ಸ್ಥಿತಿ ಇದು.

*ಉಘಡಿಯಾ ಚಿ ದೀಠೀ ದೇಖಣೇಜ್ ನಾಹಿಜ್ ಕಿರೀಟಿ*
*ನಾಳವಿತಾಜ್ ಉಠೀ ಓಮ್ಹಾ ಹ್ಮಣೌನಿ (೧೪.೧೬೦)*

ಕಣ್ಣುಗಳು ತೆರೆದಿದ್ದರೂ, ಅರಸನೇ, ಅವನು ನೋಡುವುದಿಲ್ಲ.
ಯಾರೂ ಕರೆಯದಿದ್ದರೂ 'ಓ ಅಮ್ಮಾ' ಎಂದು ಏಳುತ್ತಾನೆ.

'ಪ್ರದಾನ'ದ ಕ್ರಿಯೆ ಇಲ್ಲದಿದ್ದರೂ 'ಓ' ಎನ್ನುವುದಕ್ಕೆ 'ಓಗೊಡು' ಎನ್ನುವುದು ಕನ್ನಡ ಭಾಷೆಯ ವೈಶಿಷ್ಟ್ಯಗಳಲ್ಲೊಂದು. 'ಧ್ವನಿಗೊಡು' ಎಂದು ಬಸವಪುರಾಣದಲ್ಲಿ ಬರುವ ಪ್ರಯೋಗ (೫೦.೧೭, ೨೪.೩೫) ಮರಾಠೀಯಲ್ಲೂ, ತನ್ಮೂಲಕ ಗುಜರಾಥೀ, ಹಿಂದಿಗಳಲ್ಲೂ (ಅವಾಜ ದೇ ಆಗಿ) ಹೋದುದನ್ನು ಗಮನಿಸಬಹುದಾಗಿದೆ. 'ಓ ಗೊಡು' ಮರಾಠಿಯಲ್ಲಿ 'ಓ ದೇ' ಆಗಿ ಹೋಗಿದೆ.

*ಕಟಲೆ ಸಂಸಾರ ಸೀಣೇಜ್ ಜೇ ದೇವೋಜ್ ಏಜ್‌ತಿ ಗಾರ್‍ಹಾಣೇಜ್*
*ತೇಯಾಜ್ ವೋ ದೇ ನಾಮೇ ಜೇಣೇಜ್ ತೋ ಸಂಕೇತು ಹಾ (೧೭.೩೨೮)*

ಸಂಸಾರ ತಾಪದಿಂದ ಬಳಲಿ ಕಷ್ಟಗಳನ್ನು ಹೇಳಿಕೊಳ್ಳಲು
ಬಂದವರಿಗೆ ಓ ಗೊಡುವ ಸಂಕೇತವೇ ಈ ನಾಮವು.
ಪಾಠಭೇದದಲ್ಲಿ ಇದರ ಮೊದಲಿನ ಓವಿ ಹೀಗೆ.

*ಉಪಜಲಿಯಾ ಬಾಳಕಾಸೀ ನಾವ ನಾಹೀಜ್ ತಯಾಪಾಸೀ ತೇ ಠೇವಿಲೇನಿ ನಾಮೇಸೀ ವೋ ದೇತ ಉಠೀ (೧೭.೩೨೮ ಪಾಠಭೇದ)*

ಹುಟ್ಟಿದ ಕೂಸಿಗೆ ಹೆಸರಿರುವುದಿಲ್ಲ. (ಬಳಿಕ) ಅದಕ್ಕೆ ಇಟ್ಟ
ಹೆಸರಿನೊಡನೆ (ಕರೆದಾಗ) ಅದು ಓಗೊಟ್ಟು ಏಳುತ್ತದೆ.

ಈ 'ಓ' ಒಂದು ಸಂದರ್ಭದಲ್ಲಿ 'ಹೋಜ್' ಕೂಡ ಆಗಿದೆ.

*ತರಿ ಹಾ ಭಾವೋ ಮನಾ ಝುನೇಜ್ ಹೋಜ್ ದೇಜ್‌ಸಿ ಜನಾರ್ದನಾ*
*ಜೈಸೇಜ್ ಕರಿತಾಜ್ ಅಮೃತ ಪಾನಾ ನ ಹ್ಮಣವೇ ಪುರೇ (೧೦.೧೭೫)*

ಅದುದರಿಂದ ಈ ಭಾವನೆ (ನನ್ನ) ಮನಸ್ಸಿನಲ್ಲಿ. ಜನಾರ್ದನನೇ,
ಕೂಡಲೇ ಅದಕ್ಕೆ ಓ ಗೊಡು. ಅಮೃತಪಾನವನ್ನು
ಮಾಡುವಾಗ, ಸಾಕು, ಎನ್ನಲಾಗುವುದಿಲ್ಲ ಹಾಗೆ.

**ಓಸರಣೇಜ್ ವೋಸರಣೇಜ್ ಓಸರಿಸು, ಕಡಮೆಯಾಗು, ಹಿಂಜರಿ**

*ಸಲೆ ತಜೆಸಂದೋಸರಿಸುವುದು* ಕಾವ್ಯ *ರಚನಾ ಕ್ರಮದೊಳ್ (ಕವಿರಾಜಮಾರ್ಗ ೨.೧೯)* ಎನ್ನುವಲ್ಲಿ ಅಪಸರಣ ಅರ್ಥದ 'ಓಸರಿಸು' ಧಾತುವಿನ ಪ್ರಯೋಗವಾಗಿದೆ. 'ಓಸರಿಸು' ಧಾತು 'ವೋಸರಣೆಜ್' ಆಗಿ ಮರಾಠಿಯಲ್ಲಿ ಹೋದುದನ್ನು ಜ್ಞಾನೇಶ್ವರೀಯಲ್ಲಿಯ ಕೆಳಗಿನ ಉದಾಹರಣೆಗಳಿಂದ ಮನಗಾಣಬಹುದಾಗಿದೆ.

*ಮಾಘೌತೇಜ್ ಜೇಥೌನಿ ಓಸರೇ ಕ್ರಿಯಾಜಾತ (೪.೧೪೮)*

ಎಲ್ಲಿಂದ ಕ್ರಿಯೆಗಳು ಹಿಂದಿರುಗಿ ಕಡಿಮೆಯಾಗುತ್ತವೆ.

*ಮೇಘು ಉದಾರು ಪರಿ ಓಸರೇ ಪ್ರ್ಯಗೌನಿ ಉಪಮೇಸಿ ಮಪಕರೇ (೯.೨೦೪)*

ಮೋಡ ಉದಾರ. ಆದರೆ (ಮಳೆಕೊಟ್ಟು) ಕುಗ್ಗುವುದು.
(ಹೀಗಾಗಿ) ಉಪಮೆಗೆ ಪ್ರಯೋಜನವಿಲ್ಲ.

*ರಿತುತ್ರಯ ಆಕಾರೇಂಜ್ ಧರುನಿಯಾ ಜ್ಯೆಸೇಂಜ್ ನೇಂದಿಜೇಚಿ ಯೇಓಜ್ ವೋಸೇಂಜ್ ವೇಗಳೇಪಣೇಂಜ್ (೧೪.೨೮೯)*

ಮೂರು ಋತುಗಳನ್ನು ಪರಿಗ್ರಹಿಸಿದ ಆಕಾರವು ತನ್ನ
ವೈಶಿಷ್ಟ್ಯಕ್ಕೆ ಕುಂದು ತರದಂತೆ

ಈ 'ಓಸರಣೇಂಜ್' ಧಾತು ಕೆಲವೆಡೆ 'ಓಸಂಡಣೇಂಜ್' ಕೂಡ ಆಗಿದೆ. ಇದಕ್ಕೆ ಕಾರಣವಿಲ್ಲದಿಲ್ಲ. ಮರಾಠಿಯಲ್ಲಿ 'ಸಾರಣೇಂಜ್' 'ಸಾಂಡಣೇಂಜ್' ಇವು ಸಮಾನಾರ್ಥಕ ಶಬ್ದಗಳು. ಅರ್ಥ ತ್ಯಜಿಸು, ಬಿಡು 'ಓಸಂಡಣೇಂಜ್'ಯ ಪ್ರಯೋಗಗಳಿವು.

*ನ ಫೇಡಿತಾ ರಿಣ ಜ್ಯೆಸೇಂಜ್ ವೋಸಂಡೀ ನಾ (೧೮.೧೦೨)*

ಕಳೆಯದ (ಮುಟ್ಟಿಸದ) ಸಾಲವು ಕಡಮೆಯಾಗುವುದಿಲ್ಲ ಹಾಗೆ

*ಸಮೋರ ಆಗಿ ದೆಖೌನಿ ಜರಿ ನ ವಚಿಜೇ ಚಿ ಓಸಂಡುನಿ ತರಿ ಕ್ಷಣಾ ಏಕಾ ಕವಳುನಿ ಜಾಳೂಂಜ್ ಶಕೇ (೧.೨೪೦)*

ಇದಿರು ಬೆಂಕಿ ನೋಡಿ (ನೀನು) ಹಿಂಜರಿದು ಹೋಗದಿದ್ದರೆ
ಒಂದು ಕ್ಷಣದಲ್ಲಿ ಆವರಿಸಿ ಸುಡಲೂಬಹುದು.

*ದೇಖೈ ವಿಹಿತ ಕರ್ಮ ಜೇತುಲೇಂಜ್ ತೇಂಜ್ ಸಕಳ ಜರ್‍ಹಿಂಜ್*
*ಓಸಂಡಿಲೇಂಜ್ ತರಿ ಸ್ವಭಾವ ಕಾಇ ನಿಮಾಲೇ ಇಂದ್ರಿಯಾಂಚೇ (೩.೫೪)*

ನೋಡೈ, ವಿಹಿತ ಕರ್ಮಗಳೆಷ್ಟಿವೆಯೋ ಅವನ್ನೆಲ್ಲ ತ್ಯಜಿಸಿದರೂ (ಕಡಿಮೆ ಮಾಡಿದರೂ) ಇಂದ್ರಿಯಗಳ ಸ್ವಭಾವವು ನಷ್ಟವಾದೀತೇ?

ಅರ್ಥ ಬದಲಾದದ್ದನ್ನು ಮೇಲಣ ಓವಿಯಲ್ಲಲ್ಲದೆ ಬೇರೆಡೆಯಲ್ಲೂ ಕಾಣಬಹುದಾಗಿದೆ.

*ಜೇ ಕವ್ಹಣೇ ಏಕೇವೇಳೇ ಸರಿತಾ ಘೇಉನಿ ಯೇತಿ ಖಿಡುಳೇಂಜ್*
*ತಿಯೇಂಜ್ ಸಾಮಾವಿಜತಿ ಸಮುದ್ರೇಂಜ್ ಜಳೇಂಜ್ ಕಿಂಜ್ ವೋಸಂಡಿಜೇಂಜ್ ಸಾಂಘೆ (೧೧.೫೫೦)*

ಯಾವುದೊಂದು ಹೊತ್ತಿನಲ್ಲಿ ನದಿಯು ಕದಡು (ನೀರನ್ನು)
ತಂದರೆ ಸಮುದ್ರದ ನೀರುಗಳು ಅದನ್ನು ಸಮಾವೇಶಗೊಳಿಸು
ತ್ತವೆಯೋ ಅಥವಾ ತ್ಯಜಿಸುತ್ತವೆಯೋ (ಹಿಂಜರಿಯುತ್ತ
ವೆಯೋ), ಹೇಳೈ.

ಹೀಗೆ ವೋಸಂಡಣೇಂಜ್'ಯ ಅರ್ಥವು ' ತ್ಯಜಿಸು'ಗೆ ಹತ್ತಿರವಾಗಿದೆ. ಕೊನೆಯ ಓವಿಯಲ್ಲಿಯ ಒಂದು ವೈಶಿಷ್ಟ್ಯವನ್ನು ಇಲ್ಲಿ ಸ್ಪಷ್ಟ ಪಡಿಸುವುದು ತೀರ ಅಗತ್ಯದ್ದಾಗಿದೆ. ಉತ್ತರ ಕರ್ನಾಟಕದ ಆಡು ಮಾತಿನಲ್ಲಿ ನೀರು, ಹಾಲು, ಹಾಗೂ ಕಾಳು (ಧಾನ್ಯ) ಇವು ನಿತ್ಯ ಬಹುವಚನದಲ್ಲಿ ಬಳಸಲಾಗುತ್ತವೆ. ('ನಲ್ಲಿಯಲ್ಲಿ ನೀರು

ಬಂತು' ಎನ್ನುವುದಿಲ್ಲ. ನಲ್ಲಿಯಲ್ಲಿ ನೀರು ಬಂದವು ಎನ್ನುತ್ತೇವೆ.) ಕೊನೆಯ ಓವಿಯಲ್ಲಿಯ 'ಜಳೇಜ್' (ನೀರುಗಳು) ಎಂಬ ರೂಪವೇ ಸ್ಪಷ್ಟವಾಗಿದೆ.

**ಓಳಗೇ ಒಳಗೆ**

ಕಾಲವಂಚನೆಗೆಯ್ಯಲ್ ಬಗೆದು ಸಂಗ್ರಾಮರಂಗದೊಳಗನೆ ಮುಂದಿಟ್ಟೊಡ-ಗೊಂಡು (ಪಂಪಭಾರತ ೧೩-೫೧ವ) ಹೀಗೆ ಹಳಗನ್ನಡದಲ್ಲಿ ಬರುವ ಒಳಗೆ ಶಬ್ದವು ಅದೇ ಅರ್ಥದಲ್ಲಿ ಅದೇ ರೂಪದಲ್ಲಿ ಜ್ಞಾನೇಶ್ವರೀಯಲ್ಲಿ ಬಳಸಲಾದುದನ್ನು ಕಾಣಬಹುದು.

*ತುರಂಬಿತ ಅಸೌಸೇಜ್ ಗಗನೌಳೇಯಾಜ್ (೧೬.೩೬೧)*

ಗಗನದೊಳಗಿನ ಅ-ಸುವಾಸ (ದುರ್ವಾಸನೆ)ಗಳನ್ನು ಮೂಸುತ್ತ

ಹಳಗನ್ನಡದಲ್ಲಿ 'ತುಱಂಬು' ಶಬ್ದಕ್ಕಿರುವ 'ಮುಡಿ' (ನಾಮ ಹಾಗೂ ಧಾತು) ಅರ್ಥವನ್ನು ಮೀರಿ 'ಮೂಸು' ಎನ್ನುವ ಅರ್ಥವೂ ಇಲ್ಲಿ ಒದಗಿದೆ. ಇದು ಲಕ್ಷಣೀಯ. ಮರಾಠೀ ವ್ಯಾಖ್ಯಾನಕಾರರು 'ಅಸೌಸೇಜ್' ಮತ್ತು 'ಗಗನೌಳೇಯಾಜ್' ಇವೆರಡೂ ಶಬ್ದಗಳಿಗೆ ಸರಿಯಾದ ಅರ್ಥ ಹಚ್ಚಿಲ್ಲ. 'ಗಗನೌಳೇ' ಎಂದರೆ ಆಕಾಶದಲ್ಲಿಯ ಒಂದು ಕಾಲ್ಪನಿಕ ಹೂವು ಎಂದೂ 'ಅಸೌಸೇಜ್' (=ಅಸೋಸೇಜ್)ಗೆ ಅಪರಿಮಿತವೆಂದೂ ಅವರು ಅನ್ವಯ ಕಲ್ಪಿಸಿದ್ದಾರೆ. ಇವೆರಡೂ ಅವರಿಗೆ ವ್ಯುತ್ಪತ್ತಿಸಾಧ್ಯವಾಗಿಲ್ಲ. ಹಳಗನ್ನಡದಲ್ಲಿಯ 'ಅಸವಸ' (ಶೀಘ್ರ ಅರ್ಥದಲ್ಲಿ *ಪೋಕನಿತಜೊಳ್ ಅಸವಸದಿಂದ ಪಂಪಭಾರತ ೧೩.೧೩*) ದಿಂದ ಅಸೌಸೇಜ್ ಶಬ್ದವಾಯಿತೆಂದು ತುಳಪುಳೆ ಮೊದಲಾದವರು ಭಾವಿಸಿದರೆ, ಮೋರಾಚಾಜ್

*ಅಂಗಿಜ್ ಅಸೋಸೇಜ್ ಪಿಜ್‌ಸೇ ಅಹಾತಿ ಡೋಳಸೇಜ್ (೧೩.೮೮೩)*

ನವಿಲಿನ ಮೈಯಲ್ಲಿ ಕಣ್ಣುಗಳುಳ್ಳ ಅಸಂಖ್ಯಾತ ಗರಿಗಳಿರುತ್ತವೆ.

ಈ ಸಂದರ್ಭದಲ್ಲಿಯ ಬರುವ ಅಸಂಖ್ಯಾತ ಅರ್ಥದ ಶಬ್ದ 'ಅಸೋಸೇಜ್'ಯೂ ಮೇಲಿನ ಸಂದರ್ಭದಲ್ಲಿಯ ಅಸೌಸೇಜ್‌ಯೂ ಒಂದೇ ಎಂದು ಮಿಕ್ಕವರು ಭಾವಿಸಿದಂತಿದೆ. ನವಿಲಿನ ದೃಷ್ಟಾಂತದ ಸಂದರ್ಭದಲ್ಲಿ ಹಳಗನ್ನಡದ 'ತೆಳುವು, ನಾಜೂಕು' ಅರ್ಥದ 'ಅಸಿ' ಶಬ್ದವನ್ನು ಗಣನೆಗೆ ತೆಗೆದುಕೊಂಡರೆ ಈ ಬಿಕ್ಕಟ್ಟು ಪರಿಹಾರವಾದೀತು.

ಜ್ಞಾನೇಶ್ವರೀಯಲ್ಲಿ ಬರುವ 'ಒಳಗೆ' ಶಬ್ದದ ಇನ್ನೊಂದು ಪ್ರಯೋಗ ಇಂತು.

*ಫೇಡಿತಾಜ್ ಬಂಧನಾಚಾ ಶಾಪ ತೂ ಜಗದ್ಬಂಧು ಐಸಾಳಹೋ ಧರೂಜ್ ವೊಳಗೇ ಉವಾಪ ತೂರ‍್ಯಾ ಚ ಅಂಗೀಜ್ (೧೭.೧೦)*

(ಭವ) ಬಂಧನದ ಶಾಯವನ್ನು ಕಳೆಯುವವನು ನೀನು ಜಗತ್ತಿನ ಆಪ್ತನೆಂಬ ಹೆಸರು. ನಿನ್ನ ಮೈಯ ಒಳಗೆಯೇ (ನಿನ್ನೊಳಗೆಯೇ) ಶೋಭಿಸುತ್ತದೆ.

ಇಲ್ಲಿ ಉಪಾಡಿ ಶಬ್ದಕ್ಕೆ 'ಸುಖ', 'ಆನಂದ', 'ವಿಸ್ತಾರ' ಎಂಬರ್ಥಗಳನ್ನು ಮರಾಠೀ ಭಾಷ್ಯಕಾರರು ಕೊಟ್ಟಿದ್ದಾರೆ. ಇದು ಸಾಂದರ್ಭಿಕ ಮಾತ್ರ. (ಕನ್ನಡದ ಉಜುವು ಶಬ್ದ ಅವರಿಗೆ ಗೊತ್ತಿರಲಿಕ್ಕೂ ಇಲ್ಲ!) ಇದಕ್ಕಿಂತ ಕನ್ನಡದ 'ಒಪ್ಪು' ಶಬ್ದ ಬಳಸುವುದು ಹೆಚ್ಚು ಸಮಂಜಸವಾದೀತು.

**ಓಳಿಂಬೀ ವೋಳಂಬೀ - ಇಱುಂಪೆ, ಇಱುಪೆ, ಇಱುವೆ**

*ಸುಡುವುದರಾಗ್ನಿಯುಮೊಡಲಂ ಮಿಡುಕುಪಿನಂ ಕಡಿವ ಕಟ್ಟಿರುಮ್ಪುಗಳುಂ ಅದಾವಾಡೆಯನುರಿಸುವುದೋ (ಆದಿಪುರಾಣ ೫-೧೩)* ಈ ಉದಾಹರಣೆಯಲ್ಲಿ ಬರುವ 'ಇಱುಂಪೆ' ಶಬ್ದವು ಮರಾಠಿಯಲ್ಲಿ 'ವೋಳಂಬೀ' ಆಗಿ ಹೋಗಿದೆ. ತಮಿಳಿನಲ್ಲಿಯ 'ಎಱುಂಬ' ಮಲೆಯಾಳದಲ್ಲಿಯ 'ಉಱುಂಬು' ಶಬ್ದಗಳನ್ನು ಗಮನಿಸಿದಲ್ಲಿ ಪೂರ್ವದ ಹಳಗನ್ನಡದಲ್ಲಿ 'ವೋಳಂಬೀ'ಗೆ ಉಚ್ಚಾರದಲ್ಲಿ ಇನ್ನಷ್ಟು ಹತ್ತಿರದ ಶಬ್ದವಿರಲು ಸಾಧ್ಯ.

*ಪರಿಮಾಣುಚೇನಿ ಲಾಭೇಜ್ ಪಾತಾಳ ಲಂಘೀತಿ ಓಳಿಂಬೀ (೧೮.೭೦೭)*

(ಒಂದು) ಪರಮಾಣು ಲಾಭಕ್ಕಾಗಿ ಇಱುವೆ ಪಾತಾಳವನ್ನೂ ದಾಟುತ್ತದೆ.

*ದೈಪ್ಯೆ ವೋಳಿಂಬಾ ಇಂಗಳ ನ ಚರೇ ತೇಜಿಜ್ ತಿಮಿರ ಜೇವಿಜ್ ನ ಸಿರೇ (೮.೮೮)*

ನೊಡ್ಡೆ, ಇಱವೆಯು ಕೆಂಡವನ್ನು ತಿನ್ನುವುದಿಲ್ಲ. ಪ್ರಕಾಶದಲ್ಲಿ ಕತ್ತಲೆಯು ಸೇರುವುದಿಲ್ಲ ಹಾಗೆ

ಮರಾಠಿ ವ್ಯಾಖ್ಯಾನಕಾರರು 'ಓಳಿಂಬೀ'ಗೆ ಗೆದ್ದಲು, ಗೊಜಿಲೆ ಅರ್ಥ ಹಚ್ಚಿದ್ದಾರೆ. ಇದು ಒಂದು ದೃಷ್ಟಿಯಿಂದ ಸರಿಯೂ ಹೌದು. ಕೆಂಡವಂ ಗೆದಲ್ ಒಸ್ಟುವುದೆ? ಎನ್ನುವ ದೃಷ್ಟಾಂತ ಬಸವಪುರಾಣದಲ್ಲೂ (೧೫.೩೨) ಬಂದಿದೆ. ವ್ಯುತ್ಪತ್ತಿಯ ದೃಷ್ಟಿಯಿಂದಲೂ, ಗೆದ್ದಲು (ಇಂದಿನ ಮರಾಠಿ ಪ್ರತಿ ಶಬ್ದ 'ಓಳಂಬೀ'ದಿಂದ ಹುಟ್ಟಿದ 'ವಾಳವೀ') ಕೂಡ ಒಂದು ಬಗೆಯ ಇಱುವೆ (White ant) ಎನ್ನುವುದರಿಂದಲೂ ದೃಷ್ಟಾಂತಗಳಲ್ಲಿ ದೋಷ ಕಾಣದ್ದರಿಂದಲೂ ನಾನು 'ಓಳಿಂಬೆ'ಗೆ 'ಇಱುಂಪೆ' ಎಂದಿದ್ದೇನೆ.

**ಕಟ - ಕಟ**

'ಬಂಧನೇ' ಅರ್ಥದಲ್ಲಿಯ 'ಕಟ್ಟು' ಧಾತು ಕನ್ನಡಕ್ಕೆ ಹೊಸತಲ್ಲ. ಬಂಧನ ಬಿಟ್ಟು ಅದು ಬೇರೆ, ಬೇರೆ ಅರ್ಥಗಳನ್ನೂ ಪಡೆದಿದೆ. ಆದರೆ 'ಆಗು' 'ಇರು' ಅರ್ಥದಲ್ಲಿ ಒಂದು ಪ್ರತ್ಯಯದಂತೆ ಅದು ರೂಪಪಡೆದದ್ದನ್ನು ಕನ್ನಡದ ಕೋಶಕಾರರೇ ಗುರುತಿಸಿಲ್ಲ. ಇಷ್ಟೇ ಅಲ್ಲ. ಇಂತಹ ಕೆಲವು ಶಬ್ದಗಳು ಆಯಾ ಅರ್ಥಗಳಲ್ಲಿ ಮರಾಠಿಗೂ ಹೋಗಿವೆ. ಉದಾಹರಣೆಗೆ ಬಿಗಿ + ಕಟ್ಟು = ಬಿಕ್ಕಟ್ಟು; (ಬಿಕಟ) ಮುಗ್ಗು + ಕಟ್ಟು = ಮುಗ್ಗಟ್ಟು ; ಇರ್ + ಕಟ್ಟು = ಇಕ್ಕಟ್ಟು; ಪಿಂಬು + ಕಟ್ಟು = ಪಿಂಕಟ್ಟು, ಹಿಂಕಟ್ಟು; ಸರಿ + ಕಟ್ಟು = ಸರಿಕಟ್ಟು, ಸಗಟು;

ಒಂದು ಹೆಜ್ಜೆ ಮುಂದೆ ಹೋಗಿ ನೋಡಿದರೆ ಈ 'ಕಟ್ಟು' ಪ್ರತ್ಯಯ 'ಆಗು' 'ಇರು' ಅರ್ಥಗಳಲ್ಲಿಯೇ 'ಕಟ' ಎಂದಾಗಿ ಮರಾಠಿಯಲ್ಲಿ ಸಲೀಸಾಗಿ ಶಬ್ದಸಿದ್ಧಿ ಮಾಡಿದ್ದನ್ನೂ ನೋಡಬಹುದಾಗಿದೆ. ಮೂಲತಃ ಈ ಪ್ರತ್ಯಯ ಮರಾಠಿಯದೇ ಏನೋ, ಎನಿಸುವ ಮಟ್ಟಿಗೆ ಈ ಪ್ರತ್ಯಯದ ವ್ಯಾಪ್ತಿ. ಇದರಿಂದ ಸಿದ್ಧವಾದವುಗಳಲ್ಲಿ ಹೆಚ್ಚಾಗಿ ವಿಶೇಷಣ ರೂಪಗಳಲ್ಲಿದ್ದರೂ ತದ್ಧಿತಗಳಿಗೂ ಕೊರತೆಯಿಲ್ಲ. ಕೆಲವು ಉದಾಹರಣೆಗಳು ಚೋಖ (ಚೊಕ್ಕ) ದಿಂದ ಚೋಖಟ; ಸುಖಾ (ಶುಷ್ಕ) ದಿಂದ ಸುಕಟ; ಮುಕಾ (ಮೂಕ) ದಿಂದ ಮುಕಾಟ (ಈ ವಿಶೇಷಣ ಕ್ರಿಯಾವಿಶೇಷಣದ ರೂಪದಲ್ಲಿ ಉತ್ತರ ಕರ್ನಾಟಕದ ಜಾನಪದ ಭಾಷೆಯನ್ನು ಸೇರಿಕೊಂಡಿದೆ) ಹಲಕಾ (ಹಗುರು)ದಿಂದ ಹಲಕಟ : ಫೋಲ (ಸಿಪ್ಪೆ)ಯಿಂದ ಫೋಲಕಟಃ ಭೂಸ (ತವಡು)ದಿಂದ ಭುಸಕಟ; ದಾಂಡಗಾ (ಧಾಂಡಿಗ)ದಿಂದ ದಾಂಡಗಟ, ದಣಕಟ; ಫುಕಾ (ಊದಿದರೆ ಹಾರುವ ಜೊಳ್ಳು, ವ್ಯರ್ಥ) ದಿಂದ ಫುಕಟ (ಇದೇ 'ಪುಕ್ಕಟೆ'ಯಾಗಿ ಕನ್ನಡಕ್ಕೆ ಬಂತು!); ಖೋಲ (ಆಳ)ದಿಂದ ಖೋಲಗಟ; ಜೀರ್ಣಾವಗಂಧೇ ಅರ್ಥದಲ್ಲಿಯ ಹಳಗನ್ನಡ ಮುಗ್ಗುದಿಂದ ಮುಗಟ; ವಕ್ರ ಅರ್ಥದಲ್ಲಿಯ ವಂಕ, ವೆಂಕದಿಂದ ವೆಂಕಟ, ಇತ್ಯಾದಿ.

ತಿಖಟ ಕಾರ

*ತೈಸೇಜ್ ತಿಖಟ ಖಾಯೇ ಜೇಜ್ ಘಾಯೇಜ್ ವಿಣಲಾಗೇ (೧೭.೧೮೨)*
ಗಾಯವಾಗದೆಯೇ (ಲಿಸ ಗುಡಲು, ಲಿಸಲಿಸ ಮಾಡಲು)
ಹತ್ತುವಂತೆ ಅವನು ಕಾರ ತಿನ್ನುತ್ತಾನೆ.

ಚೋಖಟ ಚೊಕ್ಕಟ, ಸ್ವಚ್ಛ

*ಗಂಗಾ ತೈಸೀ ಚೋಖಟ (೨.೨೧೩)* ಗಂಗೆಯಂತೆ ಸ್ವಚ್ಛವಾದ (ನಿನ್ನ ಮಹಿಮೆ)

ಬಳಿಕಟ ಬಳಕಟ್ಟು, ಗಟ್ಟಿ ಬಳಿಕಟಪಣ ಬಳಕಟ್ಟುತನ ಬಳ, ಶಕ್ತಿ ಗಟ್ಟಿಗತನ

*ಐಸೇಜ್ ಬಳಿಕಟಪಣ ಆಹೇ ಇಂದ್ರಿಯಾಂಚೇಜ್ (೨.೧೩೦)*
ಇಂದ್ರಿಯಗಳ ಗಟ್ಟಿತನವು ಹೀಗೆ ಇದೆ.

ಫಳಕಟ ಹೊಟ್ಟು, ಸಿಪ್ಪೆ,

*ಉಡೇ ತೇಜ್ ಫಳಕಟ ಜಾಣೋಜ್ ಆಲೇಜ್ (೨.೧೩೦)*
(ತೂರಿದಾಗ) ಹಾರಿದ್ದು ಹೊಟ್ಟೆಂಬುದು ತಿಳಿದುಬಂತು.

ಮಳಕಟ ಹೊಲಸಾದ, ಮಾಸಿದ

'ಹೊಲಸು' ಅರ್ಥದಲ್ಲಿಯ 'ಮಳ' ಶಬ್ದವನ್ನು ಕೆಲ ಮರಾಠಿ ಪಂಡಿತರು ಸಂಸ್ಕೃತದ 'ಮಲ' ದಿಂದ ಸಾಧಿಸುತ್ತಾರೆ. ಡಾ. ಎಸ್ ಎಂ. ಕತ್ರೆಯವರಿಗೆ ಮಾತ್ರ ಸಂಸ್ಕೃತದ 'ಮೃತ್' ಶಬ್ದ ಸರಿಯೆನಿಸಿದೆ. 'ಮಣ್ಣು ಮಟಕಾಳಿ' ಈ ಉತ್ತರ ಕರ್ನಾಟಕದ ಜಾನಪದ ಭಾಷೆಯಲ್ಲಿಯ ಶಬ್ದ ಪ್ರಯೋಗ ಗಮನಿಸಿದರೆ ಮರಾಠಿ 'ಮಳ'ಕ್ಕೆ ಕನ್ನಡದ 'ಮಣ್ಣೀ' ಹತ್ತಿರದ ಶಬ್ದವಾದೀತು. ಹಳಗನ್ನಡದ 'ಮಾಸು' ಧಾತು ಕೂಡ 'ಮಣ್' ನಾಮದಿಂದಲೇ ಸಿದ್ಧವಾಗಿರಬಹುದಾಗಿದೆ.

*ಧೂನಿಯಾಜ್ ಮಳಕಟಾ ಬುದ್ಧಿಚಾ ತೇಣೇಜ್ (೧೮.೧೧೦೫)*

ಆದರಿಂದ ಬುದ್ಧಿಯು ಹೊಲಸನ್ನು ತೊಳೆದು

ರೋಕಡ ಪ್ರತ್ಯಕ್ಷ

'ಹೊನ್ನು' ಎನ್ನುವ ಅರ್ಥದಲ್ಲಿ 'ರುಕ್ಮ' ಎಂಬ ಸಂಸ್ಕೃತ ಶಬ್ದವಿದೆ. ಇದರಿಂದ ಮರಾಠಿಯಲ್ಲಿ 'ರುಕಾ' ಶಬ್ದ ಸಿದ್ಧವಾಗಿ ಹಣ, ನಾಣ್ಯ ಎಂಬರ್ಥಗಳಲ್ಲಿ ಬಳಕೆಯಲ್ಲಿ ಬಂದಿತು. ಲೀಳಾಚರಿತ್ರದಲ್ಲಿ (ಉತ್ತರಾರ್ಧ ೧೧೯) ಈ ಶಬ್ದದ ಪ್ರಯೋಗ ಕಾಣಸಿಗುತ್ತದೆ. ಇದರಿಂದಲೇ ಕನ್ನಡದಲ್ಲಿ ಹಣ ಎಂಬರ್ಥದಲ್ಲಿ 'ರೋಕಡ' ಸಾಧಿತವಾಯಿತು. ದೈನಂದಿನ ವ್ಯವಹಾರದಲ್ಲಿಯ ತತ್ಕಾಲದ ಹಣದ ವಿನಿಯೋಗದಿಂದಾಗಿ ರೋಕಡ ಶಬ್ದಕ್ಕೆ 'ಪ್ರತ್ಯಕ್ಷ' ಎಂಬ ಅಲಂಕಾರಿಕ ಅರ್ಥವೂ ಸಂದಿತು. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು;

*ಪರಿಭವ್ರ ಮಜ ರೊಕಡೇಜ್ ಆಲೇಜ್ (೧೧.೩೬೦)*

ಆದರೆ (ಅಮಹಾಮೃತ್ಯುವಿನ ಭಯವು) ನನಗೆ ಚೆನ್ನಾಗಿ ಪ್ರತ್ಯಕ್ಷವಾಯಿತು.

*ರೋಕಡೇಯಾ ಆಣಿ ಲಾಹಿಜೇ ಮೋಕ್ಷು ಫುಕಾ (೧೨.೧೭೬)*

ಹಾಗೂ ಪ್ರತ್ಯಕ್ಷವಾಗಿ ಮೋಕ್ಷವನ್ನು ಪುಕ್ಕಟೆಯಾಗಿ (ಸಾಧಿಸಿ) ಕೊಡುತ್ತಾರೆ.

ಭಾಕಡ ಬರಡು

'ಒಣಗು' ಅರ್ಥದಲ್ಲಿಯ 'ಬಜ್' ಹಳಗನ್ನಡ ಧಾತುವಿನಿಂದ ಸಾಧಿತವಾದ 'ಬಕ್ಕ' ಶಬ್ದಕ್ಕೆ 'ಕಟ' ಪ್ರತ್ಯಯ ಹತ್ತಿ ಆದ ರೂಪ ಹಳಗನ್ನಡದಲ್ಲಿ 'ಬಕ್ಕಟ'. ಮರಾಠಿಯಲ್ಲಿ 'ಭಾಕಡ'.

ಹಳಗನ್ನಡ ಪ್ರಯೋಗ : *ಅಗ್ನಿಶಿಖಾಮುಖಕ್ಕೆ ದೂರಮಪ್ಪ ಬಕ್ಕ ಬಯಲ್ವಾಣ-ದೊಳ್ಳಿಂಮ (ಪೂವರಾಮಾಯಣ ೧೧.೧೫೫ ವ)*

ಮರಾಠಿಯಲ್ಲಿ : ಚಿಖಲೀಜ್ ರುಪಲೀ ಗಾವಿ ಧಡ ಭಾಖಡ ನ ಪಾಹೇ (೧೬.೧೪೧)

ಕೆಸರಿನಲ್ಲಿ ಹೂತ ಆವು ಒಳ್ಳೆಯದೇ, ಬರಡೇ (ಅದನ್ನು) ನೋಡುವುದಿಲ್ಲ.

ಇಲ್ಲಿ ಬಂದ 'ಧಡ' ಶಬ್ದ ಸಂಸ್ಕೃತದ 'ದೃಢ'ದಿಂದ ಬಂದಿತೆಂದು ಮರಾಠಿ ಪಂಡಿತರು ಭಾವಿಸಿದ್ದಾರೆ ಆದರೆ 'ಗಟ್ಟಿ' 'ನಿಶ್ಚಿತ' ಎಂದೆಲ್ಲ ಅರ್ಥಕೊಡುವ 'ದೃಢ' ಶಬ್ದಕ್ಕೆ 'ಚೆನ್ನಾದುದು' 'ಒಳ್ಳೆಯದು' ಎಂಬರ್ಥ ಸಂಸ್ಕೃತದಲ್ಲಂತೂ ಇಲ್ಲ. ಆದುದರಿಂದ ಹಳಗನ್ನಡದ 'ದಲ್' ಶಬ್ದವೇ ಇದರ ಮೂಲವಾಗಿರಬಹುದಾಗಿದೆ.

*ಏಗಂ, ವಲಂ, ಪೆಱಂ, ದಲ್ ತಾಗುಗುಮತಿನಿಶ್ಚಯಾರ್ಥಂ (ಶಬ್ದಮಣಿದರ್ಪಣ ಸೂತ್ರ ೩೨೧)* ಎಂದು ಕೇಶಿರಾಜನು ಹೇಳಿದ್ದರೆ ಇದು ದಲ್

*ವರ್ಗ ಪ್ರಾಸಕ್ಕುದಾಹೃತಂ (ಕವಿರಾಜಮಾರ್ಗ ೨.೩೨)* ಎನ್ನುವಲ್ಲಿ 'ದಲ್'ಗೆ 'ಸರಿಯಾಗಿ' 'ಸಹಜವಾಗಿ' ಎಂಬರ್ಥವೂ ಒದಗಿದೆ.

ವೇಂಗಡ ವ್ಯಂಕಟ ಡೊಂಕು

ಸಂಸ್ಕೃತದ ವಕ್ರದಿಂದ ಹುಟ್ಟಿದ 'ವೆಂಗ' 'ವೆಂಕ' ಶಬ್ದಗಳು 'ಕಟ' ಕೂಡಿದಾಗ 'ವೇಂಗಡ' 'ವ್ಯಂಕಟ' ಆಗಿವೆ.

*ಪಾಯಾಜ್ ಪಡತಿ ವೇಂಗಡೀಜ್ ಹಾತ ಹೋಜ್‌ತಿ ಮುರುಕುಂಡೀ (೧೩.೫೬೯)*
ಹೆಜ್ಜೆಗಳು (ಪಾದಗಳು) ಸೊಟ್ಟ ಬೀಳುತ್ತವೆ. ಕೈಗಳು ಡೊಂಕಾಗುತ್ತವೆ.

ಇಲ್ಲಿ ಬಂದ ಮುರುಕುಂಡಿ ಶಬ್ದ ಹಳಗನ್ನಡದ 'ಮುರಿ' ವಕ್ರಭಾವೇ (ಉದಾ : ಪೆಱಪಿಂಗುವನಂ ಮುರಿದಡಸಿ ಪಿಡಿದು ಘಟ್ಟಿಸಿ-ಪಂಪಭಾರತ ೩.೩೦)

ಹಾಗೂ 'ಕುಳಿ' ಪ್ರತ್ಯಯ (ಒಡಕುಳಿ, ಪೇಂಕುಳಿ, ನುಱುಕುಳಿ ಶಬ್ದಮಣಿದರ್ಪಣ ಸೂತ್ರ ೨೧೪) ಸೇರಿ ಆದುದಾಗಿದೆ. ಇಂದು ಮರಾಠಿಯಲ್ಲಿ ಬಳಕೆಯಲ್ಲಿರುವ 'ಅಂಜುಗುಳಿ' ಅರ್ಥದಲ್ಲಿಯ 'ಘಾಬರಗುಂಡಿ' ಶಬ್ದವನ್ನು ಸ್ಮರಿಸಬಹುದಾಗಿದೆ.

*ಖಳಾಚೀ ವ್ಯಂಕಟೀ ಸಾಂಡೋ (೧೮.೧೭೯೪)*
ದುಷ್ಟರ ಕೊಂಕುತನವು ಅಳಿಯಲಿ.

**ಕಟಾ - ಅಕ್ಕಟ**

'ಖೇದ'ವನ್ನು ಸೂಚಿಸುವ (ಶಬ್ದಮಣಿದರ್ಪಣ ಸೂತ್ರ ೩.೨೩) 'ಅಕ್ಕಟ' ಶಬ್ದ ಹಳಗನ್ನಡದಲ್ಲಿ *ಅರಗಿನ ಮನೆಯೊಳ್ ಪಾಂಡವರುರಿದಟ್ಟೆದರಕ್ಕಟಯ್ಯೊ (ಪಂಪಭಾರತ ೩.೨)* ಇಂತಾಗಿ ರೂಪದಲ್ಲೂ *ಅಕಟಕಟ! ಆದು ಆರ ಅಣುಗನ್? ಈ ಸುಕುಮಾರಂ ಮಡಿದನ್ ಅಶ್ವಖುರ ಹತಿಯಿಂ (ರಾಜಶೇಖರ ವಿಳಾಸ ೧೩.೯೮)* ಎಂಬುದಾಗಿಯೂ ಬಳಸಿದುದನ್ನು ನಾವು ನೋಡುತ್ತೇವೆ. ಮರಾಠಿಯಲ್ಲಿ ಮಾತ್ರ ಈ ಶಬ್ದ ಜ್ಞಾನೇಶ್ವರೀಯಲ್ಲಿ ಒಂದೆಡೆ 'ಆಹಾ ಕಟಾ' ಆಗಿ, ಉಳಿದೆಡೆ 'ಕಟಾ' ರೂಪ ತಳೆದು, ಇನ್ನೊಂದು ಕಡೆ 'ಕಟಕಟಾ' ಎಂದಾಗಿದೆ. ಹಳಗನ್ನಡದ ಈ ಶಬ್ದ ನಮ್ಮಲ್ಲಿ ಇಂದು ಬಳಕೆಯಲ್ಲಿ ಉಳಿಯದಿದ್ದರೂ ಮರಾಠಿಯಲ್ಲಿ ಮಾತ್ರ 'ತೊಂದರೆ' ಅರ್ಥದಲ್ಲಿ 'ಕಟಕಟ' ಎಂದು ಜನಪದ ಭಾಷೆಯಲ್ಲೂ ಗ್ರಾಂಥಿಕ ಭಾಷೆಯಲ್ಲೂ ಉಳಿದುಕೊಂಡಿದೆ, ಇದು ವಿಶೇಷ.

*ಆಹಾ ಕಟಾ ಓಖಟೇಜ್ ಹೇಜ್ ಮೃತ್ಯು ಲೋಕಿಚೇಜ್ ಉಪರಾಟೇಜ್ (೯೫.೧೦)*
ಅಯ್ಯೋ, ಇದೆಂತಹ ಅಭದ್ರವು! ಮೃತ್ಯುಲೋಕದ ವಿಪರೀತವು!

*ಕಟಾ ರೇ ಮಿಯಾ ಚಾಟಿಲಾ ಕುಚಸ್ವೇದು (೧೩.೫೩೮)*
ಅಕಟ, ನಾನು ಮೊಲೆಯ ಮೇಲಿನ ಬೆಮರನ್ನು ನೆಕ್ಕಿದೆ!

*ಕಟಿ ರೇ ಮೂರ್ಖಿಜ್ ಕೇವಡೇಜ್ ಜೋಡಿಲೀಜ್ ಹೋಣೇಜ್ (೧೬.೪೧೮)*

ಅಯ್ಯೋ, ಮೂರ್ಖರು ಎಷ್ಟೊಂದು ಕಷ್ಟಗಳನ್ನು ಗಳಿಸಿದ್ದಾರೆ!

*ತೇಫ ಅರ್ಜುನು ಹ್ಮಣೇ ಕಟಾ ಉಭಗಲೋಜ್ ಮಾಗಿಲಾಜ್ ಸಂಕಟಾಜ್ (೧೧.೪೪೭)*

ಆಗ ಅರ್ಜುನನು ಅಂದದ್ದು - ಅಕಟಾ, ಹಿಂದಿನ ಸಂಕಟಗಳಿಂದ ವ್ಯಗ್ರನಾಗಿದ್ದೇನೆ!

*ಕಟಾಕಟಾ ಧಾತ್ರೇಯಾ ಕೈಸೇಜ್ ಜಾಲೇಜ್ ಅನುಗ್ರಹಾ ಯಾ (೧೧.೩೯೫)*

ಹಾಯ್ ಬ್ರಹ್ಮದೇವನೇ (ಭಗವಂತನ) ಅನುಗ್ರಹವು ಇದೇನಾಯಿತು!

*ತೋಹೀ ಗೀಳಿಲಾ ಆಣಿ ದ್ರೋಣು ಗ್ರಾಸಿಲಾ ಕಟಕಟಾ (೧೧.೩೯೩ ಪಾಠಭೇದ)*

(ಭೀಷ್ಮನಂತಹ ಸತ್ಯಸಂಧ) ಅವನನ್ನು ನುಂಗಿದೆ. ದ್ರೋಣನನ್ನು ಕಬಳಿಸಿದೆ, ಅಯ್ಯೋ!

**ಕಡಸಣೇಜ್ ಕಡಯಿಸು : ಕ್ರಿಯಾನಾಮ ಕಡಸಣೀ**

'ಮಥನೇ' ಅರ್ಥದಲ್ಲಿಯ 'ಕಡೆ' ಧಾತುವಿನ ಪ್ರಯೋಜಕ ರೂಪ ಕಡಯಿಸು ಕಡಯಿಸಿದಂ ಸುರರಿಂ ಅಸುರರಿಂ ಪಾಲ್ಗಡಲಂ (ಶಬ್ದಮಣಿದರ್ಪಣ ಸೂತ್ರ ೨೪೨) ಎಂಬುದಾಗಿ ಇದರ ಹಳಗನ್ನಡ ಪ್ರಯೋಗ ದೊರೆಯುತ್ತದೆ. ಅದೇ ಅರ್ಥದಲ್ಲಿ ಈ ಪ್ರಯೋಜಕ ಧಾತು ಮರಾಠಿಗೆ ಹೋಗಿದೆ. ಅದರಿಂದಾದ ಕ್ರಿಯಾನಾಮ (ವಿನವಣೇಜ್‌ದಿಂದ ವಿನವಣೀ ಕರಣೇಜ್ ದಿಂದ ಕರಣೀ, ಮಾಗಣೇಜ್‌ದಿಂದ ಮಾಗಣೀ ಆದಂತೆ) ಕಡಸಣೀ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳಿವು:

*ನ ಲಗೇ ಶ್ರೋತೇಯಾ ಕಡಸಾವೇಜ್ ಜೇ ಏಥ ಅಧಿಕಾರಿಯೇ ಸ್ವಭಾವೇವೇಜ್ (೬.೨೭)*

ಶ್ರೋತೃಗಳನ್ನಿಲ್ಲಿ ಮಥಿಸಬೇಕಾಗಿಲ್ಲ. ಅವರು ತಮ್ಮ ತಮ್ಮ(ಸ್ವ) ಭಾವಗಳಿಂದ ಅಧಿಕಾರಿಯೇ (ಆಗಿದ್ದಾರೆ).

*ಕರಿತಾಜ್ ದಧಿಕಡಸಣೀ (೨.೧೨೯)* ಮೊಸರು ಕಡೆದಾಗ

*ಇಯೇ ಯುಕ್ತಿಚೀ ಕಡಸಣೀ (೨.೩೪೮)* ಈ ಯೋಗದ ಮಂಥನ

*ಪರಿ ಮಂತ್ರಾಚೀ ಕಡಸಣೀ ಜಜ್‌ವ ನೇಣಿಜೇ ಕೋದಂಡಪಾಣೀ (೧೮.೩೭೨)*

ಆದರೆ, ಕೋದಂಡಪಾಣಿಯೇ, ಮಂತ್ರದ ಮಥಿತಾರ್ಥವನ್ನು ಎಲ್ಲಿಯವರೆಗೆ ಅರಿಯುವದಿಲ್ಲವೋ

ಇದೇ ಸಂದರ್ಭದಲ್ಲಿ, ಪ್ರಮಾಣ ಗ್ರಂಥಗಳನ್ನು ಕಾಣದ, ಉತ್ತರ ಕರ್ನಾಟಕದ ಒಂದು ಜನಪದ ಧಾತು 'ಕಡಿಸು' (ಕಡಿಯಿಸು)ವನ್ನು ಅವಲೋಕಿಸಬೇಕು. ಈ ವಿಶೇಷ ಶಬ್ದ 'ಬೆಣ್ಣೆ ಕಾಸು' ಎಂಬರ್ಥದಲ್ಲಷ್ಟೇ ಬಳಸಲಾಗುತ್ತದೆ. ಇದು ಅದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲೂ ಕಾಣಸಿಗುತ್ತದೆ.

*ಮಗ ಜ್ಞಾನಾಗ್ನಿ ಸಂಪರ್ಕೇಂಜ್ ಕಢಸಿಲೇ ವಿವೇಕೇಂಜ್ (೧.೫೨)*

ಬಳಿಕ ಜ್ಞಾನದ ಬೆಂಕಿಯೊಡನೆ ವಿವೇಕದಿಂದ ಕಾಸಿದಾಗ

ಇದರ ಮೊದಲಿನ ಓವಿಯಲ್ಲಿ ಮಥಿಲೇ ವ್ಯಾಸಬುದ್ಧೀ ನಿವಡಲೇ ನಿರವಧೀ ನವನೀತಾಹೇ

ವ್ಯಾಸರ ಬುದ್ಧಿಯು (ಶಬ್ದಬ್ರಹ್ಮಸಾಗರವನ್ನು) ಕಡೆದು ತಡವಿಲ್ಲದೆ ಈ ಬೆಣ್ಣೆ ತೆಗೆಯಿತು ಎಂದಿದೆ.

*ತೈಸೇ ಯಮನಿಯಮೀಂಜ್ ಕಢಸಲೇ ಜೇ ತಪೋಜ್ಞಾನೀಂಜ್ ಚೋಖಾಳಲೇ*

ಆದರಂತೆ ಯಾರು ಯಮನಿಯಮಗಳಲ್ಲಿ ಕಾಸಲ್ಪಟ್ಟರೋ, ತಪೋಜ್ಞಾನದಿಂದ ಚೊಕ್ಕರಾದರೋ

**ಕಣವ ಕಳವಳಾ ಪ್ರೇಮ ಮಮತೆ**

ಪಂಡಿತರು ಜ್ಞಾನೇಶ್ವರೀಯಲ್ಲಿ ಸಾಕಷ್ಟು ಸಲ ಬಳಸಲಾದ 'ಕಣವ' 'ಕಳವಳ' ಶಬ್ದಗಳ ವ್ಯುತ್ಪತ್ತಿಗಳನ್ನು ಸಂಸ್ಕೃತ - ಪ್ರಾಕೃತಭಾಷೆಗಳಲ್ಲಿ ಶೋಧಿಸಿ ಸೋತಿದ್ದಾರೆ. ಹಳಗನ್ನಡದಲ್ಲೇನಾದರೂ ಇವುಗಳ ಮೂಲ ದೊರೆಯುವುದೇನೋ ಎಂಬುದನ್ನು ಪರೀಕ್ಷಿಸಬೇಕಾಗಿದೆ.

ಈ ಅರ್ಥದ ಕನ್ನಡದ ಶಬ್ದಗಳು ಎರಡು. 'ಕನಿಕರ' ಹಾಗೂ 'ಕಳವಳ'. ಇವುಗಳಲ್ಲಿ 'ಕನಿ' ಶಬ್ದ - 'ದಯಾಭಾವ' 'ಆತ್ಮೀಯತೆ' ಅರ್ಥವುಳ್ಳದ್ದು - ಹತ್ತಿರವಾದದ್ದು. 'ಕನಿಕರ' ಶಬ್ದವು ಪೌನಃಪುನ್ಯಾರ್ಥಕ, 'ಕನಿ' 'ಕರ' ಶಬ್ದಗಳು ಒಂದೇ ಅರ್ಥದವು ಎಂದು ಕಿಟೆಲ್ಲರು ಹೇಳಿದ್ದನ್ನು ಎಲ್ಲರೂ ಒಪ್ಪಬೇಕಿಲ್ಲ.

ಆದರೆ ಮಮತೆಯನ್ನು ಸೂಚಿಸುವ 'ಕನಿ' ಮತ್ತು 'ಕಳ' ಈ ಶಬ್ದಗಳಿಗೆ ಮೂಲವಾಗಿ ಪೂರ್ವದ ಹಳಗನ್ನಡದಲ್ಲಿ 'ಕಣ್' ಅಥವಾ 'ಕಣ' ಶಬ್ದದಿಂದ 'ಕಣಸು' (ಆರೆನಿದ್ದೆ ಅರ್ಥದ ಕನ್‌ದಿಂದ 'ಕನಸು' ಆದಂತೆ) ಶಬ್ದ ಸಿದ್ಧವಾಗಿರಬಹುದು. ಕಿಟೆಲ್ಲರೇನೋ 'ಕನಸು=ಕಣಸು' ಎಂದಿದ್ದಾರೆ. ಅಂಬಿಕಾತನಯದತ್ತರ ಭಾವನೆ ಬೇರೆ. ('ಕನಸಿನೊಳಗೊಂದು ಕಣಸು') ಮಮತೆಯ 'ಕಣ್' ಶಬ್ದದಿಂದಲೇ 'ಕಣ್ + ದ' = 'ಕಂದ' ಶಬ್ದವೂ ಹುಟ್ಟಿರಲು ಸಾಕು.

ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗಗಳನ್ನು ನೋಡಬಹುದು.

*ತುಹ್ಮೀಂಜ್ ಸಾಂಘಾ ಕಿರ ಆಮಚಿಆ ಕಣವಾ (೬.೪೧೦)*

ನೀವು ನಮ್ಮ (ಮೇಲಿರುವ) ಮಮತೆಯಿಂದ ಏನೋ ಹೇಳುತ್ತೀರಿ

*ಜೇ ಹಿತಾಹಿತ ದೇಖತಿ ಹಾಣೆ ಕಣವಾ ಘೇಪತಿ (೧೩.೧೦೩೭)*

ಯಾರು ಹಿತ - ಅಹಿತಗಳನ್ನು ನೋಡುತ್ತಾರೋ ಹಾಗೂ ದಯಾಭಾವ ಹೊಂದುತ್ತಾರೋ

*ಯೇಯಾ ಕಾರಣೇಂಜ್ ಗಾ ಪಾಂಡವಾ ಆಹ್ಮೀಂಜ್ ಆಪುಲಾ ಹಾ ಠೇವಾ*

*ತುಜ ದಿದಲಾ ಕಣವಾ ಜಾಕಳಿಲೇಪಣೇಂಜ್ (೧೮.೧೩೧೮)*

ಎಲೈ ಪಾಂಡವನೇ, ಈ ಕಾರಣದಿಂದಾಗಿ ನಾವು ನಮ್ಮ
ಇದುಗಂಟನ್ನು ದಯಾಭಾವಸ್ಪರ್ಶಿತರಾಗಿ ನಿನಗೆ ಕೊಟ್ಟಿದ್ದೇವೆ.

ಇಲ್ಲಿ ಹಳಗನ್ನಡದ 'ಜಕ್ಕುಳಿಸು' 'ಜಾಕಳಿಲೇಪಣೇಜ್' ಆದದ್ದನ್ನು ಗಮನಿಸಬೇಕು.

*ಆಣಿ ಸಕಣವಪಣೇಜ್ ನಿಘಾಲಾಸಿ ಮಾಘಾತಾ ಜರಿ (೨.೨೦೬)*

ಅಲ್ಲದೆಯೆ, ದಯಾರ್ದ್ರನಾಗಿ (ನೀನು) ಹಿಂದಿರುಗಿ ಹೊರಟರೂ

*ತೈಸೇಜ್ ದುಃಖಿತಾಚೇ ಸೀಣಣೇಜ್ ಹಿರತಾಜ್ ಸಕಣವಪಣೇಜ್ (೧೬.೧೫೪)*

ಹಾಗೆ ದುಃಖಿತರ ದುಮ್ಮಾನವನ್ನು ಮಮತ್ವದಿಂದ
ನಿವಾರಿಸುವಾಗ-

ಹಳಗನ್ನಡದ 'ಹೀರ್' - ರಸಾಸ್ವಾದನೇ - ಇಲ್ಲಿ ಹಿರತಾಜ್ ಆಗಿದೆ.

*ಪರಿ ಪ್ರಥಮಾ ಶ್ರವಣಾಸವೇಜ್ ಅರ್ಜುನಾ ವಿಪಾಯೇ ಘಾವೇ*
*ಹಾ ಭಾಓ ಸಕಣವೇ ಧರುನಿ ಶ್ರೀಹರೀ (೧೮.೧೨೩೧)*

ಆದರೆ ಮೊದಲ ಸಲ ಕೇಳಿದೊಡನೆ ಅರ್ಜುನನಿಗೆ ಕ್ವಚಿತ್ತಾಗಿ
ತಿಳಿಯಬಹುದು (ಅಂದರೆ ತಿಳಿಯಲಿಕ್ಕಿಲ್ಲ) ಈ ಭಾವನೆಯನ್ನು
ಶ್ರೀ ಕೃಷ್ಣನು ಮಮತೆಯಿಂದ ತಳೆದು

*ತೈಸೇಜ್ ಪುಢಿಲಾಚೇನಿ ತಾಪೇಜ್ ಕಳವಳೈಲಿಯೇ ಕೃಪೇ*
*ದೀಧಲೇಜ್ ಹಿಜ್ ಆಪಣಪೇಜ್ ಥೋಡೇಜ್ ಚಿ ಗಮೇ (೧೬.೧೫೬)*

ಹಾಗೆಯೇ, ಮುಂದಿನವನ (ಇನ್ನೊಬ್ಬನ) ದುಃಖದಿಂದ
ದಯಾರ್ದ್ರನಾಗಿ, ಕೃಪಾಭಾವದಿಂದ ತನ್ನ ಸರ್ವಸ್ವವನ್ನು
ಕೊಟ್ಟರೂ ಕಡಮೆಯೇ ಎನಿಸುತ್ತದೆ.

ಈ ಪ್ರಸಂಗದಲ್ಲಿ ನನಗೆ ನೆನಪಾಗುವ ಒಂದು ಅಚ್ಚಗನ್ನಡ ಶಬ್ದ - 'ಕರುಳು'. 'ಕರುಳು ಬಳ್ಳಿ' ಎಂದು ಜನಪದ ಭಾಷೆಯಲ್ಲೋ 'ಹೆಂಗರುಳು' ಎಂದು ಪ್ರಮಾಣ ಸಾಹಿತ್ಯದಲ್ಲೋ ಬರುವ ಈ ಶಬ್ದ ಜಠರದ ಒಂದು ಅಂಗವಾದ ಕರುಳಿಗೆ (ಸಣ್ಣ ಕರುಳು, ದೊಡ್ಡಕರುಳು) ಯಾವ ಸಂಬಂಧವೂ ಇಲ್ಲದ್ದು. 'ಹೃದಯ'ಕ್ಕಿರುವ ಸಂವೇದನೆ 'ಕರುಳಿ'ಗೆ ಇಲ್ಲ.

ನನಗನಿಸುವ ಮಟ್ಟಿಗೆ ಮಮತ್ವ, ದಯೆ ಅರ್ಥದ ಕರುಳು ಶಬ್ದ 'ಕಣ್ = ಕರ' ದಿಂದ ಹುಟ್ಟಿರಬೇಕು. ಇಷ್ಟೇ ಅಲ್ಲ, ಈ ಅರ್ಥದ ಕರುಳು ಶಬ್ದವೇ ದ್ರಾವಿಡ ಭಾಷೆಗಳಿಂದ ಸಂಸ್ಕೃತಕ್ಕೆ ಹೋಗಿ 'ಕರುಣ' ಆಗಿರಬೇಕು.

'ಚುರ್' ಎನ್ನುವ ಕನ್ನಡದ 'ಕರುಳಾ'ಗಲೀ, 'ಹಿಂಡು'ವ ಮರಾಠಿ 'ಕರುಳಾಗಲೀ (ಆಜ್‌ತಡ್ಯಾಲಾ ಪೀಳ ಪಡಣೇಜ್) ನಂತರದ ಬೆಳವಣಿಗೆಗಳು.

ಈ ಸಂದರ್ಭದಲ್ಲಿ ಇನ್ನೂ ಒಂದು ಶಬ್ದದ ಪ್ರಯೋಗವನ್ನು ನಾವು ನೋಡಬೇಕಾಗಿದೆ. ಮರಾಠಿಯಲ್ಲಿಯ 'ಕಣವ' ಶಬ್ದಕ್ಕೆ 'ಡಾ' ಪ್ರತ್ಯಯ ಹತ್ತಿ (ಈ ಪ್ರತ್ಯಯಕ್ಕೆ 'ಅಕ್ಕರೆ' ಹಾಗೂ 'ಹೀನ' ಇವೆರಡೂ ಅರ್ಥಗಳು ಭಾರತೀಯ ಆರ್ಯ

ಭಾಷೆಗಳಲ್ಲಿ ಒದಗುತ್ತವೆ. ಉದಾಹರಣೆಗಳು ಕಾನ್ಹಾ (ಕೃಷ್ಣ)ದಿಂದ ಕಾನ್ಹಾಡಾ, ಬಾಪ ದಿಂದ ಬಾಪುಡಾ, ದೇವದಿಂದ ದೇವಡಾ ಗಧಾ ದಿಂದ ಗಧಡಾ, ಬಚ್ಚಾದಿಂದ ಬಛಡಾ, ಕನ್ನಡ ಕಸದಿಂದ ಕಚಡಾ ಇತ್ಯಾದಿ) 'ಕಾನವಡಾ' ಶಬ್ದ ಸಿದ್ಧವಾಗಿರಬಹುದಾಗಿದೆ. ಜ್ಞಾನೇಶ್ವರೀಯಲ್ಲಿಯ ಈ ಉದಾಹರಣೆ ಗಮನಿಸಿರಿ.

*ತಜ್‌ವ ವರಿಲೀ ಕಡೌನಿ ಥಾಳೇಜ್ ಚಂದ್ರಾಮೃತಾಚೇಜ್ ತಳೇಜ್*
*ಕಾನವಡೌನಿ ಮಿಳೇ ಶಕತಿಮುಖೀಜ್ (೬.೨೫೭)*

ಆಗ ಮೇಲಿನ ಬದಿಯಿಂದ ಚಂದ್ರಾಮೃತದ ಕೊಳವು ತುಳುಕಿ
ಅತೀವ ಅಕ್ಕರತೆಯಿಂದ ಕುಂಡಲಿನಿಯ ಮುಖವನ್ನು
ಸೇರುವುದು.

*ನಾಜ್ ಯೇಣೇಜ್‌ಸಿಜ್ ತೋಂಡ ವಾಜ್‌ಕುಡೇಜ್ ಕರೂನು ಠಾಕಾಲ ಕಾನವಡೇಜ್ ತರಿ ಕಾನೇಜ್ ಹಿಜ್ ಘೇಜ್‌ತಿ ಪಡೇ ತೇಜ್ ಚಿ ಲೇಖ (೧೮.೧೬೭೨)*

ಅದು ಬರದಿದ್ದರೆ, ಮೋರ್ ಸೊಟ್ಟಗೆ ಮಾಡಿ ಆಸ್ಥೆ
(ಮಮತೆ)ಯಿಂದ ಉಳಿದರೆ, ಕಿವಿಗೆ ಬಿದ್ದ (ಗೀತಾವ್ಯಾಕ್ಯವನ್ನು)
ಕಿವಿಗಳು ಅಂಗೀಕರಿಸುತ್ತವೆ. ಆದೂ ಅದೇ ಲೆಕ್ಕ.

**ಕರವಣೇಜ್ ಕರ್ + ಪು, ಕರಕಾಗು, ಒಣಗು**

'ಕರ್' ವಿಶೇಷಣಕ್ಕೆ 'ಪು' ಪ್ರತ್ಯಯ ಹತ್ತಿ ಸಿದ್ಧವಾದ ಭಾವವಾಚಕ ನಾಮ 'ಕರಪು (ಶಬ್ದಮಣಿದರ್ಪಣ ಸೂತ್ರ ೨೨೨). ಇದಕ್ಕೆ 'ಇಸು' ಪ್ರತ್ಯಯ ಹತ್ತಿ ಕನ್ನಡದಲ್ಲಿ ಧಾತುವಾಗುವಂತೆ ಮರಾಠಿಯಲ್ಲಿ 'ಣೇಜ್' ಹತ್ತುತ್ತದೆ.

'ಕರ್' ವಿಶೇಷಣಕ್ಕೆ 'ಸುಟ್ಟ ಕಪ್ಪುತನ'ವೆನ್ನುವ ಅರ್ಥವಿದ್ದಂತೆ 'ಒಣಬಿರುಸುತನ' ಎಂಬ ಅರ್ಥವೂ ಇದೆ. 'ಕರ್' ದಿಂದ 'ಕರ್‌ಪು' ಆದಂತೆ ತು ಪ್ರತ್ಯಯ ಹತ್ತಿ 'ಕರ್ತು' ಎಂಬ ನಾಮಪದವಾಗಿರಲೂ ಸಾಕು. ಇದೇ 'ಕರಡ'ವಾಗಿ 'ಒಣಹುಲ್ಲೆಂ'ಬ ಅರ್ಥ ಕೊಡುತ್ತದೆ. ಕಾಡಗಿಚ್ಚಿನ ಕೈಯಲ್ಲಿ ಕರಡವ ಕೊಯ್ಸಿದಂತಿರಬೇಕು (*ಚನ್ನಬಸವೇಶ್ವರರ ವಚನ ೩೩೦.*)

'ಕರ್' ಶಬ್ದಕ್ಕೆ ಮೂರು ಭಿನ್ನ ಅರ್ಥಗಳನ್ನು ಕೊಡುವ ಜ್ಞಾನೇಶ್ವರೀಯ ಈ ಪ್ರಯೋಗಗಳನ್ನು ನೋಡಬಹುದು.

*ನಾತರಿ ಅಧೋಕಥೀಜ್ ಠೇಲೇಜ್ ಕಾಜ್ ನಿರ್ಥಾಜ್ ಕರಪೌನಿ ಗೇಲೇಜ್ (೧೭.೧೫೫)*

ಅಥವಾ ಅರ್ಧ ಬೇಯಿಸಿ ಇಟ್ಟ ಇಲ್ಲವೆ ಪೂರ್ತಿ ಹೊತ್ತಿ
ಹೋದ (ಅಡುಗೆ)

*ಬೈಲಾಸಿ ಕಡಬಾಡೇಜ್ ಹೇ ನ ಚುಕೇಗಾ ಫುಡೇಜ್*
*ನೇಣಜೋ ಪಾಜ್ ವರ್ಥಾಡೇಜ್ ಭಲೇ ತೈಸಾಜ್ (೧೪.೨೩೮ ಪಾಠಭೇದ ಕರಬಾಡ)*

ಎಂತೆಂತಹ (ಮದುವೆಯ) ನೆಂಟರನ್ನೊಟ್ಟರೂ ಏಕ್ಕಿನ ಮುಂದೆ ಒಣಕಣಿಕೆ ತಪ್ಪಿದ್ದಲ್ಲ.

'ಬಾಡು' ಶಬ್ದಕ್ಕೆ 'ಮಾಂಸೇಚ' ಎಂದು ಕೇಶಿರಾಜನು ಹೇಳಿದ್ದರೂ ಅದು ಸರಿಯೆನಿಸುವುದಿಲ್ಲ. (ಧಾತುಪ್ರಕರಣ) 'ಶಾಕ' 'ವನಸ್ಪತಿ' ಎಂಬರ್ಥದಲ್ಲಿ ಅದು ವಡ್ಡಾರಾಧನೆಯಲ್ಲಿ ಪ್ರಯುಕ್ತವಾಗಿದೆ.

*ಬೆಣ್ಣೆಗಾಸಿದಾಮೋದ ಸುಗಂಧಪರಿಮಳಂ ಸಾರ್ವ ತುಪ್ಪಮುಂ ಪಲವುಂ ತೆಱದ ಬಾಡುಗಳುಂ (ವಡ್ಡಾರಾಧನೆ ೭೮.೧೬)*

ಪಂಪಭಾರತದಲ್ಲಿಯ ಈ ಪ್ರಯೋಗ: *ಅಗ್ಗದ ಬಾಡಂಗಳ ನಾಯ್ದು ಕೊಟ್ಟು (೨.೫೩)* 'ಬಾಡಿಸು' ಧಾತುವನ್ನು ಕಿಟೆಲ್ಲರು 'ಬಾಯ್ + ಅಡಿಸು' ಎಂದು ಒಡೆದಿದ್ದಾರೆ!

ಹೀಗೆ ಕರ (= ಒಣಗಿದ) + ಬಾಡ (ವನಸ್ಪತಿ, ಸಸ್ಯ) ಕೂಡಿ ಆದ 'ಕರಬಾಡ' ಶಬ್ದಕ್ಕೆ 'ಒಣಮೇವು ಎಂಬರ್ಥ ಒದಗಿತು. ಪಾಠಭೇದವನ್ನು ಅನುಲಕ್ಷಿಸಿದರೆ 'ಕರಬಾಡ' 'ಕಡಬಾಡ' ಆಗಿ ಇಂದಿನ ಮರಾಠಿಯಲ್ಲಿ 'ಕಡಬಾ' ಒಣ ಕಣಿಕೆ, ಒಣಗಿದ ಜೋಳದ ಕಡ್ಡಿ ಅರ್ಥದಲ್ಲಿ ಬಳಸಲಾಗುತ್ತದೆ.

*ಶ್ವಾಸೋಶ್ವಾಸಾ ಹೋಉನಿ ಬಹುವಸೇಜ್ ಕೃಚ್ಛ್ರಾದಿ ವ್ರತೇಜ್ ಖರಮುಸೇಜ್ (೧೬.೯೧)*

ಉಸಿರಾಟಕ್ಕಿಂತ ಹೆಚ್ಚು ಮಹತ್ವಕೊಟ್ಟು ರುಕ್ಷವಾದ ಕೃಚ್ಛ್ರಾದಿ ವ್ರತಗಳನ್ನು (ಆಚರಿಸುತ್ತ)

**ಕಸು ಕಸುವು ಶಕ್ತಿ**

ಪಳಗನ್ನಡ ಶಬ್ದವಾದ 'ಕಸು' ಅದೇ ರೂಪದಲ್ಲಿ ಅದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ. ಹಳಗನ್ನಡದ ಪ್ರಯೋಗ ಇಂತು:

*ಅರ್ಥಿಗರ್ಥಮಂ ಕಸಪಿನ ಲೆಕ್ಕಮೆಸ್ದು ಕುಡಲುಂ (ಪಂಪಭಾರತ ೧.೧೧೭)*

ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು ಹೀಗಿವೆ.

*ತೇಥ ಕಸು ಬಾಂಧತಿ ಅಂಗೇ ಸಾಂಡಿಲಾ ಮಡುತೀಜ್ (೬.೨೪೨)*

ಅಲ್ಲಿ (ಅಗ) ಮೊದಲು ಕಳೆದ ಶಕ್ತಿ ಅವಯವಗಳಿಗೆ ಬರುತ್ತದೆ.

*ಕಸು ಹೋಯೇ ಪಾಚಕಾ ಜಿಯಾ ಪರೀಜ್ (೧೩.೧೦೦೩)*

(ಅದರ) ಕಸುವು ಹಗ್ಗದಂತಾಗುವಂತೆ

*ಅಭ್ಯಾಸಾ ಹೀ ಲಾಗಿ ನಾಹಿ ಕಸು ತೂಝಾ ಅಂಗಿ (೧೨.೧೧೪)*

ಅಭ್ಯಾಸೇ ಅಪಿ ಅಸಮರ್ಥ: ಅಸಿ (ಗೀತಾ. ೧೨.೧೦)

**ಕಳಾಸ ಕಳಾಸ ಸಂಪೂರ್ಣ**

*ಕೂಡಲ ಚನ್ನಸಂಗನಲ್ಲಿ ಕಳಾಸ ಪ್ರಾಣಲಿಂಗದ ಬೆಳಗಿನೊಡನೆ ಬೆಳಗಿತ್ತು (ಚನ್ನಬಸವೇಶ್ವರರ ವಚನಗಳು ೯೪೮)* ಎಂಬುದಾಗಿ 'ಕಳಾಸ' ಶಬ್ದದ ಬಳಕೆ ದೊರೆಯುತ್ತದೆ. ಇದು ಜ್ಞಾನೇಶ್ವರೀಯಲ್ಲಿ ಒಮ್ಮೆ ಮಾತ್ರ ದೃಗ್ಗೋಚರವಾಗುತ್ತದೆ, ಅದೇ 'ಸಂಪೂರ್ಣ' ವೆಂಬರ್ಥದಲ್ಲಿ.

*ವಾಮಾಂಗಿಚಾ ಲಾಸ್ಯವಿಲಾಸು ಜೋ ಹಾ ಜಗದ್ರೂಪ ಆಭಾಸು*
*ತೋ ತಾಂಡವಮಿಷೇಜ್ ಕಳಾಸು ದಾವಿಸೀ ತೂಜ್ (೧೭.೮)*

ಜಗತ್ತೇ ಒಂದು ಆಭಾಸ. (ಅದೇ ನಿನ್ನ) ವಾಮಾಂಗಿಯ ನೃತ್ಯ ವಿಲಾಸ. ಅದನ್ನು ನೀನು ತಾಂಡವ ರೂಪದಲ್ಲಿ (ಕುಣಿದು) ಸಂಪೂರ್ಣವಾಗಿ ದರ್ಶಿಸುತ್ತೀ.

ಮರಾಠಿ ವ್ಯಾಖ್ಯಾನಕಾರರು ಮಾತ್ರ ಇದಕ್ಕೆ 'ನೈಪುಣ್ಯ, ಕೌಶಲ್ಯ' ಎಂದು ಅರ್ಥ ಕೊಟ್ಟಿದ್ದಾರೆ. ಕ್ರಿಯಾಪದದ ಬಳಕೆ ಇಂತಿದೆ.

*ಪರಿ ಹೇಜ್ ತರೀ ಚಿ ಘಡೇ ಜರಿ ಸಂಯಮಾಚೇಜ್ ಅಖಂಡೇ ಸುರ್ವದ್ವಾರೀಜ್ ಕವಾಡೇಜ್ ಕಳಾಸತಿ (೮.೧೧೦)*

ಆದರೆ ಇದು ಆಗಬೇಕಾದರೆ ಸಂಯಮದ ಕದಗಳು ಸರ್ವದ್ವಾರಗಳಲ್ಲಿ ಅಖಂಡವಾಗಿ ಪೂರ್ಣಗೊಳ್ಳುತ್ತವೆ. (ಮುಚ್ಚಲಾಗುತ್ತವೆ)

*ಬಾಹಿರಿ ಧಿಟೇ ಜೈಸೇ ದಾಟುಗಾ ಪತಿ ಕಳಾಸೀ (೧೩.೫೦೪)*

ಹೇಗೆ ಹೊರಗೆ ದಿಟ್ಟೆಯಾದವಳನ್ನು ಗಂಡನು ಚೆನ್ನಾಗಿ ದಟ್ಟಿಸುತ್ತಾನೋ

*ಮಗ ತೇಯಾ ಮಾನಣೇಯಾಜ್ ಸಾಠಿಜ್ ದೇಹ ಬಂದಿಸಾಳೇ ಕಿರೀಟೇ ಕರ್ಮಾಚಾಜ್ ವಜ್ರಗಾಜ್‌ರೀಜ್ ಕಾಳಾಸೇ ತೋ (೧೮.೩೮೯) (ಪಾಠಭೇದ : ಕಳಾಸೇ)*

ಬಳಿಕ, ಹಾಗೆ (ದೇಹವೇ ಆತ್ಮವೆಂದು) ತಿಳಿದುಕೊಂಡದ್ದರಿಂದ, ಎಲೆ ಅರಸನೇ, ಅವನು ದೇಹವೆಂದು ಕಾರಾಗೃಹದಲ್ಲಿ ಕರ್ಮಗಳೆಂಬ ವಜ್ರಗಂಟುಗಳಿಂದ ಸಂಪೂರ್ಣನಾಗುತ್ತಾನೆ (ಕಟ್ಟಲ್ಪಡುತ್ತಾನೆ).

**ಕಾಜ್‌ಟಣೇಜ್ ಕಟ್ಟು**

'ಕಟ್ಟು-ಬಂಧನೇ' ಎಂದು ಕೇಶಿರಾಜನು ಒಂದು ಅರ್ಥವನ್ನು ಮಾತ್ರ ಕೊಡುತ್ತಾನೆ. ಆದರೆ 'ಉಸಿರುಗಟ್ಟು' 'ಸಾಲುಗಟ್ಟು' 'ಹೆಪ್ಪುಗಟ್ಟು' 'ಕಳೆಕಟ್ಟು' 'ಬಾಯಿಕಟ್ಟು' ಹೀಗೆ ಹತ್ತು ಹಲವು ಪಡೆನುಡಿಗಳಲ್ಲಿ 'ಕಟ್ಟು' ಧಾತುವಿಗೆ ಬೇರೆ ಬೇರೆ ಅರ್ಥಗಳು ಕಟ್ಟುತ್ತವೆ.. 'ಲೇಪಿಸು' ಎಂಬ ಒಂದು ಅರ್ಥದಲ್ಲಿ ಮಾತ್ರ 'ಕಟ್ಟು' ಧಾತು 'ಕಾಜ್‌ಟ' ಆಗಿ ಜ್ಞಾನೇಶ್ವರಿಯಲ್ಲಿ ಬಳಸಿದ್ದನ್ನು ನೋಡುತ್ತೇವೆ.

*ತೈಸಿಯಾ ವದನೀಜ್ ಪ್ರಳಯ ರುಧಿರೇಜ್ ಕಾಟಲಿಯಾ ದಾಢಾ (೧೧.೩೪೦)*

ಅದರಂತೆ ಪ್ರಳಯ ರಕ್ತದಿಂದ ಮೆತ್ತಿದ ಕೋರೆದಾಢೆಗಳು ಮೋರೆಯಲ್ಲಿ (ಕಾಣುತ್ತವೆ)

*ತೇಜ್ ಆಯಿಕೇ ಅಥವಾ ಭೇಟೇ ವರಿ ಮನೀಜ್ ಕಾಹಿಜ್ ನುಮಟೇ*
*ಮೇಘರಂಗೇ ನ ಕಾಜ್‌ಟೇ ವ್ಯೋಮ ಜೈಸೇ (೧೩.೪೨೬ ಪಾಠಭೇದ)*

ಕೇಳಿದರೂ ಆಯಿತು, ಕಂಡರೂ ಆಯಿತು. ಅದಾವುದೂ ಮನಸ್ಸಿನಲ್ಲಿ ಮೂಡುವುದಿಲ್ಲ. ಮೋಡದ ಬಣ್ಣಗಳಿಂದ ಆಕಾಶವು ಲಿಪ್ತವಾಗುವುದಿಲ್ಲ ಹಾಗೆ–

**ಕಾಜ್‌ಟಾಳಾ, ಕಟ್ಟಳೆ - ತಕ್ಕಡಿಯ ಪರಡಿ**

*ಒಟ್ಟಿದಮೊನ್ನ ಬೆಟ್ಟುಗಳ ನೀವೆಡೆಗೇವುದೋ ತೂಕಮೆನ್ನಕೆಯ್ಗಟ್ಟಳೆ ಕೊಳ್ಳಿಂ (ಪಂಪಭಾರತ ೬.೩೯)* ಎಂಬುದಾಗಿ ಹೇಳುವಲ್ಲಿ ಬರುವ 'ಕಟ್ಟಳೆ' ಶಬ್ದದ ಅರ್ಥ 'ಪರಡಿ'. ಆಡುಮಾತಿನಲ್ಲಿ ಬರುವ 'ನೂರುಗಟ್ಟಲೆ' 'ಸಾವಿರಗಟ್ಟಲೆ' 'ಹೇರುಗಟ್ಟಲೆ' ಮೊದಲಾದ ಶಬ್ದಗಳಲ್ಲಿಯ 'ಕಟ್ಟಲೆ'ಯ ಆಲಂಕಾರಿಕ ಅರ್ಥ 'ತೂಕದ'. *ಹೊನ್ನ ತೂಗಿದ ತ್ರಾಸು ಕಟ್ಟಳೆ ಹೊನ್ನಿಂಗೆ ಸರಿಯಪ್ಪುದೆ?* ಎಂದು ಅಲ್ಲಮಪ್ರಭು ಕೇಳಿದ್ದಾರೆ. (ವಚನ ೧೦೮.೪೯೦) *ತ್ರಾಸಿನ ಕಟ್ಟಳೆಯನ್ನಿತು ವೆಗ್ಗಳವಾದರೆ ಈಶ್ವರ ನೋಡೆಯಿಕ್ಕದೆ ಮಾಣುವನೆ?* ಎಂದು ಬಸವೇಶ್ವರರೂ ಕೇಳಿದ್ದಾರೆ. (ವಚನ ೮೦೪)

ಜ್ಞಾನೇಶ್ವರೀ ಪೂರ್ವದ ಈ ಕನ್ನಡ ಪ್ರಯೋಗಗಳನ್ನು ನೋಡಿದ ಬಳಿಕ ಜ್ಞಾನೇಶ್ವರಿಯಲ್ಲಿಯ ಬಳಕೆ ನೋಡುವುದು ಇಷ್ಟವಾದೀತು.

*ತೇವಿ ಭೇದಬುದ್ಧಿಚಿಯೇ ತುಳೇಜ್ ಘಾಲೂನಿ ಸೂರ್ಯ ಶ್ಲೇಷಾಚೇಜ್ ಕಾಜ್‌ಟಾಳೇಜ್ ತೂಕಿಲಾಸಿ ತೇಜ್ ಅಲ್ಥೀಜ್ ಮರೇಜ್ ಕರೀಜ್ ಜೇ (೧೬.೨೮)*

ಹಾಗೆ (ಹಿಂದಿನ ಓವಿಯಲ್ಲಿ ಹೇಳಿದಂತೆ) ಭೇದಬುದ್ಧಿಯ ತಕ್ಕಡಿಯಲ್ಲಿ ಸೂರ್ಯನ ಉಪಮೆಯ ಪರಡಿಯ (ಜತೆಗೆ) ತೂಗಿಸಿಕೊಂಡಿರಿ. ಅದನ್ನಿನ್ನು ಸಾಕು ಮಾಡಿರಿ.

*ನಾ ತರಿ ಪೃಥ್ವಿಚೇನಿ ಪಾಡೇಜ್ ಕಾಜ್‌ಟಾಳೇಜ್ ಜರಿ ಜೋಡೇ*
*ತರಿ ಜ್ಞಾನಾಸಿ ಉಪಮಾ ಘಡೇ ಪಾಂಡು ಕುಮರಾ (೪.೧೭೯)*

ಪೃಥ್ವಿಗೆ ಸಮನಾದದ್ದನ್ನು (ತಕ್ಕಡಿಯ) ಪರಡಿಯಲ್ಲಿ ಹಾಕಿದರೂ, ಎಲೆ ಪಾಂಡವನೇ,ಜ್ಞಾನಕ್ಕೆ ಅದು ಸಮಾನವಾಗಲಾರದು.

*ಜೇಜ್ ನಿತ್ಯಾನಂದಾಚೇನಿ ಮಾನೇಜ್ ಉಪಮೇಚಾ ಕಾಟಾಳಾಜ್ ನ ದಿಸೇ ಸಾನೇಜ್ (೮.೨೬೨)*

ಯಾವುದು (ಸ್ವರ್ಗಸುಖವು) ನಿತ್ಯಾನಂದದ ಜತೆಗೆ ಉಪಮೆಯ ಪರಡಿಯಲ್ಲಿ (ತೂಗಿದರೆ) ಸಣ್ಣದೆಂದು ಕಾಣುವದಿಲ್ಲವೋ-

*ಶಿವೇಜ್‌ಸಿಜ್ ಕಾಜ್‌ಟಾಳಾ ಗುರುತ್ವೇ ತೂಚಿ ಆಗಳಾ (೧೭.೦೩)*

ಶಿವನೊಡನೆ ಪರಡಿಯಲ್ಲಿ ಹಾಕಿದರೆ (ಹೋಲಿಸಿದರೆ) ನೀನೇ ಗುರುತ್ವದಲ್ಲಿ ಭಿನ್ನನು. (ಶ್ರೇಷ್ಠನು)

*ಮಗ ದೇಹಾಚೇಜ್ ಬೇಳೇಜ್ ಓಲಾಂಡೂನಿ ಯೇಕೇಜ್ ವೇಳೇಜ್ ಸಮತೂಕೀಜ್ ಕಾಜ್‌ಟಾಳೇಜ್ ಮಸೀಜ್ ಜಾಲೇ (೧೪.೫೧)*

ಬಳಿಕ ಒಂದೇ ಹೊತ್ತಿನಲ್ಲಿ (ಒಮ್ಮೆಲೆ) ಶರೀರದ ಬೇಲಿಯನ್ನು ದಾಟಿ ಪರಡಿಯಲ್ಲಿ (ಹೋಗಿ) ನನಗೆ ಸರಿದೂಗುವವರಾದರು.

ಹೀಗೆ 'ಕಟ್ಟಳೆ' ಶಬ್ದವು ಮೂಲತಃ ಕನ್ನಡದ್ದಾಗಿದ್ದರೂ ಅದಕ್ಕೆ ಅರ್ಥ ಹಚ್ಚುವುದು, ಪ್ರಯೋಗಗಳ ಕೊರತೆಯಿಂದಾಗಿ, ಕಷ್ಟವಾಗಿದ್ದಿತು. ಎಲ್. ಬಸವರಾಜು ಅವರಂತಹರೂ 'ತ್ರಾಸಕಾಟಲಾ'ಕ್ಕೆ ಅರ್ಥಕೊಡಲಾಗದೆ ಪ್ರಶ್ನೆ ಚಿಹ್ನೆ ಹಾಕಿದರು. ಇದು ಒಂದು ಭಾಗ.

ಮರಾಠಿಯಲ್ಲಿ 'ಕಾಜ್‌ಟಲಾ' ಆಗಿ ಹೋದ ಶಬ್ದ 'ಕಾಜ್‌ಟಾ' ಆಗಿ ಒಂದಿಷ್ಟು ಅರ್ಥಾಂತರವನ್ನು ಹೊಂದಿ ತಾನೇ 'ತಕ್ಕಡಿ'ಯಾಗಿ, ಹಿಂದೀ ಮೊದಲ್ಗೊಂಡು ಉತ್ತರಭಾರತದ ಎಲ್ಲ ಭಾಷೆಗಳಲ್ಲಿ ಪ್ರಚಾರದಲ್ಲಿ ಬಂದಿತು. 'ತಕ್ಕಡಿ' ಅರ್ಥದಲ್ಲಿ ನಮ್ಮ ಜನರೇ 'ಕಾಟಾ' ಎಂದು ಶಬ್ದ ಬಳಸತೊಡಗಿದ್ದುದು ಎರಡನೆಯ ಭಾಗವಾಯಿತು!

**ಕಾಜ್‌ಟೀ, ಕಂಟಿ, ಬೇಲಿ**

'ಬೇಲಿ', ಮುಳ್ಳುಗಿಡ' ಅರ್ಥದಲ್ಲಿಯ 'ಕಂಟಿ' ಶಬ್ದವು 'ಕಾಜ್‌ಟೀ' ಆಗಿ ಮರಾಠಿಗೆ ಹೋಗಿದೆ.

ಜ್ಞಾನೇಶ್ವರಿಯಲ್ಲಿಯ ಪ್ರಯೋಗಗಳು

*ಸ್ವರ್ಗಸಂಸಾರಾ ಕಾಜ್‌ಟಿ ಕಾಢಿತ ಚಿ (೧೮.೬೭೯)*

ಸ್ವರ್ಗ-ಸಂಸಾರಗಳ ಬೇಲಿಯನ್ನು ಕಿತ್ತೊಗೆಯುತ್ತಲೇ–

*ಜೇ ಜಾಣಿತಲೇಯಾ ಸಾಠಿಜ್ ಸಂಸಾರಾ ಕಾಢೂನಿ ಕಾಜ್‌ಠೀ (೧೩.೮೬೩)*

ಯಾವುದನ್ನೂ ತಿಳಿದುಕೊಳ್ಳುವದಕ್ಕಾಗಿ ಸಂಸಾರದ ಬೇಲಿಯನ್ನು ಕಿತ್ತೆಸೆದು-

*ಬಾಹಿರಿ ಯಮನಿಯಮಾಚೀ ಕಾಜ್‌ಟಿ ಲಾವಿಲೀ (೬.೨೧೨)*

ಹೊರಗಡೆ ಯಮನಿಯಮಗಳ ಬೇಲಿಯನ್ನು ಹಚ್ಚಿತು.

*ವೋರಪಿಲೀಜ್ ಕಾಜ್‌ಟಿಯಾ ಕಮಳೇ ಜೈಸೀಜ್ (೧೬.೩೬೫)*

ಕಮಲಗಳನ್ನು ಕಂಟಿಗಳು ಉರುಬಣಿಸಿದಂತೆ

**ಕಾತಿ ಕತ್ತಿ, ಖಡ್ಗ**

ಆತಂಗೆ ಕತ್ತಿಯುಂ ಮಸೆದಂ (ಶಬ್ದಮಣಿದರ್ಪಣ ಸೂತ್ರ ೧೪೧) ಎನ್ನುವಲ್ಲಿ ಬರುವ 'ಕತ್ತಿ' ಶಬ್ದವು ತದ್ಭವ (ಸಂ. ಕರ್ತ್ರಿ) ಎಂದು ಕಿಟೆಲ್ಲರು ಭಾವಿಸಿದ್ದಾರೆ. ವಾಸ್ತವವಾಗಿ ಇದೊಂದು ದೇಶ್ಯ ಶಬ್ದ. ಭಾರತೀಯ ಆರ್ಯ ಭಾಷೆಗಳಲ್ಲಿ ಇದರ ರೂಪುಗಳು ಕಾಣಿಸಿಕೊಳ್ಳುವುದಿಲ್ಲ.

ಕನ್ನಡದಿಂದ ಮರಾಠಿಗೆ ಹೋದ ಈ ಶಬ್ದ ಒಮ್ಮೆ ಮಾತ್ರ ಜ್ಞಾನೇಶ್ವರೀಯಲ್ಲಿ ಕಾಣಿಸಿಕೊಳ್ಳುತ್ತದೆ.

*ಆಪುಲಿಯಾ ಪುಢಿಲಾಚೀಯಾ ಅಂಗಾ ಘಾಲೂನಿ ಕಾತಿಯಾ*
*ರಕ್ತಾ ಮಾಂಸಾ ಪ್ರಾಣಿತಿಯಾ ಭರೂಜ್ ಭರೂಜ್ ದೇತೀ (೧೭.೯೫)*

ತಮ್ಮ ಹಾಗೂ ಮುಂದಿನವರ ಮೈಗಳಲ್ಲಿ ಕತ್ತಿ ಹಾಕಿ ರಕ್ತಮಾಂಸಗಳ ಪ್ರಣೀತ (ಪಾತ್ರ) ಗಳನ್ನು ತುಂಬಿ ತುಂಬಿ ಕೊಡುತ್ತಾರೆ.

**ಕಾನಿ, ಕನಿ, ಅರೆನಿದ್ದೆ (?)**

*ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ (ಆದಿಪುರಾಣ ೭.೨೭ ರಗಳೆ)* ಎಂಬುದಾಗಿ ಬರುವ ಹಳಗನ್ನಡದ 'ಕನಸು' ಶಬ್ದವಾಗಲೀ 'ನಿದ್ರಾವಿಕಾರ' ಅರ್ಥದಲ್ಲಿಯ 'ಕನವರಿಸು' ಶಬ್ದವಾಗಲೀ ಮೂಲತಃ 'ಅರೆನಿದ್ದೆ' ಅರ್ಥದಲ್ಲಿಯ 'ಕನಿ' ಶಬ್ದದಿಂದ (ಅಥವಾ 'ಕನ') ಹುಟ್ಟಿರಬಹುದಾಗಿದೆ.

ಈ 'ಕನಿ' ಶಬ್ದ ನಮಗೆ ಹಳಗನ್ನಡದ ಅಥವಾ ನಂತರದ ಯಾವ ಕಾಲದ ರೂಪದಲ್ಲೂ ದೊರೆತಿಲ್ಲ. ಪೂರ್ವದ ಹಳಗನ್ನಡದಲ್ಲಿ ಇರಬಹುದಾಗಿದೆ. ಮರಾಠಿಯಲ್ಲಿ ಮಾತ್ರ ಅದು 'ಕಾನಿ' ರೂಪದಲ್ಲಿ ಅದೇ ಅರ್ಥದಲ್ಲಿ ದೊರೆಯುತ್ತದೆ. ಇವು ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು.

*ಪಡಿಲಿಯೇ ಧೋಂಡೀ ಕೋಣ ಕಾನೀ ಮುರಡಿ (೧೪.೧೮೧)*

(ನೆಲದ ಮೇಲೆ) ಬಿದ್ದ ದೊಡ್ಡ (ಕಲ್ಲು) ಅರೆನಿದ್ದೆಯಲ್ಲಿ ಮುದುರಿಕೊಳ್ಳುವುದೇ?

*ಕಾನವಡೌನಿ ಮಿಳೇ ಶಕತಿಮುಖೀಜ್ (೬.೨೪೭)*

ಮಗ್ಗುಲಾಗಿ ಕುಂಡಲಿನಿಯ ಬಾಯಿಯಲ್ಲಿ ಬೀಳುತ್ತದೆ.

*ನಾಜ್ ಯೇಶೇಜ್‌ಸಿಜ್ ತೋಂಡ ವಾಜ್‌ಕುಡೇಜ್ ಕರೂನು ರಾಹಾಲ ಕಾನವಡೇಜ್ (೧೮.೧೬೭೨)*

ಮೋರೆ ಸೊಟ್ಟಗೆ ಮಾಡಿ (ಭಗವದ್ಗೀತೆಯ ಕಡೆ ಬೆನ್ನು ಮಾಡಿ) ಮಗ್ಗುಲಾದರೂ–

ಹೀಗೆ 'ಕಾನ' (ಅರೆನಿದ್ದೆ)ದಿಂದ 'ಕಾನವಡ' (ಮಗ್ಗಲು, ಮಗ್ಗುಲಾಗು) ಶಬ್ದದ ಬೆಳವಣಿಗೆ. ಈಗ ಒಂದು ಮನೋಜ್ಞವಾದ ಶಬ್ದವಿಚಾರ.

ಹಳಗನ್ನಡದ 'ಕಂದ' ಶಬ್ದದಿಂದ ಮರಾಠಿಗೆ ಹೋದ ರೂಪ 'ಕಾನವಡ' 'ಕಾಲವಡ' ('ಕರು' ಅರ್ಥದಲ್ಲಿ).

ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗ ಪರಿಶೀಲಿಸಬೇಕು.

*ಅವತರಲೀ ಗಾಡುವಾಜ್ ಘಡಾಜ್ ಪೃಥ್ವಿ ಅನೊಳಖ ಜಾಲೀ ಮೂಢಾಜ್*
*ವಹ್ನಿ ಹೋಉನಿ ಠೇಲಾ ಕಾನವಡಾ ದೀಪಾಸಾಠಿ (೧೮.೫೪೦)*

ಗಡಿಗೆ ಬಿಂದಿಗೆಗಳಲ್ಲಿ ರೂಪಗೊಂಡಾಗ ಮೂಢರಿಗೆ (ಅವುಗಳಲ್ಲಿಯ) ಮಣ್ಣು ಅಪರಿಚಿತವೆನಿಸಿತು. ದೀಪಕ್ಕಾಗಿ ಬೆಂಕಿ ಕಂದವ್ವನಾಯಿತು. (ಅದನ್ನೂ ಅವರು ಗುರುತಿಸಲಿಲ್ಲ)

ಇಲ್ಲಿಯ 'ಕಾನವಡಾ' ಗೆ 'ಕಾನಡಾ'[10] ಎಂದು ಪಾಠಭೇದವೂ ಇದೆ. ಜ್ಞಾನೇಶ್ವರರ ಸಮಕಾಲೀನನಾದ ನಾಮದೇವ (ಕ್ರಿ.ಶ. ೧೨೭೦ ರಿಂದ ಕ್ರಿಶ. ೧೩೫೦) ತನ್ನ ಒಂದು ಅಭಂಗದಲ್ಲಿ ತನ್ನ ತಾಯಿ ತನ್ನ ಬಗ್ಗೆ ಪ್ರಲಪಿಸುವ ವರ್ಣನೆ ಹೀಗೆ ಕೊಟ್ಟಿದ್ದಾನೆ.

ನಿಢಳಾಸೀ ನಿಢಳ ಮಿಳವೂನಿ ತೇ ರಡೇ ಮಾಝಿಯೇ ಕಾನ್ಹಾಡೇ ಕಾಯ ಝಾಲೇಜ್ -

ಹಣೆಗೆ ಹಣೆ ಹಚ್ಚಿ ಆಕೆ ಅತ್ತಳು-ನನ್ನ ಕಂದನಿಗೆ ಏನಾಯಿತು?

ಹೀಗೆ 'ಕಾನವಡ' ಶಬ್ದಕ್ಕೆ ಎರಡು ಅರ್ಥಗಳು ಒದಗಿದಂತಾದವು. ಒಂದು 'ಮಗ್ಗಲು'. ಇನ್ನೊಂದು 'ಕರು'.

ಈ ಹಿನ್ನೆಲೆಯಲ್ಲಿ ಜ್ಞಾನೇಶ್ವರಿಯಲ್ಲಿಯ ಒಂದು ದೃಷ್ಟಾಂತದ ವಿಚಾರ :

ಹೋರಿಯೋ ಹೆಣ್ಣಕರುವೋ ಸೊಕ್ಕಲೆಂದು ಈದ ಆವಿನ ಪೂರ್ತಿ ಹಾಲನ್ನು ಕರುವಿಗೇ ಬಿಟ್ಟು ಕೊಟ್ಟಿದೆ ಎನ್ನೋಣ. ಮರುಸಲ ಆ ಆವು ಈದಾಗ ತನ್ನ ಹಾಲನ್ನೆಲ್ಲ ಕರುವಿಗೇ ಕುಡಿಸಿತೇ ವಿನಾ ಮನೆಯವರಿಗೆ ಕೆಚ್ಚಲಿನಲ್ಲಿ ಕೈಹಾಕಲು ಕೊಡುವುದಿಲ್ಲ. ಇದು ಆಕಳು ಸಾಕಿದವರ ಅನುಭವ, ಇಂದಿಗೂ.

---

10. 'ಕಾನಡಾ' ಶಬ್ದವನ್ನು ಜ್ಞಾನೇಶ್ವರೀಕಾಲಿನ ವಾಙ್ಮಯದಲ್ಲಿ ಕಂಡೊಡನೆ ನಾವು ಸಹಜವಾಗಿ, ಸುಲಭವಾಗಿ ಅದನ್ನು 'ಕನ್ನಡ'ಕ್ಕೆ ಹೊಂದಿಸಿಬಿಡುತ್ತೇವೆ. 'ಕನ್ನಡವು' 'ಕಠಿಣ' 'ಕ್ಲಿಷ್ಟ' 'ಗೂಢ' ಭಾಷೆಯಾಗಿದ್ದರಿಂದ, 'ಕಾನಡಾ' ಆ ಅರ್ಥಗಳನ್ನು ಹೊಂದಿದೆ. ಇವಲ್ಲದೆ ಕೃಷ್ಣ>ಕಾನ್ಹ>ಕಾನ್ಹುಡಾ ಈ ಬೆಳವಣಿಗೆಯನ್ನೂ ಗುರುತಿಸಬೇಕು. ಮೀರಾಬಾಯಿ ತನ್ನ ಅನೇಕ ಭಜನಗಳಲ್ಲಿ ಕೃಷ್ಣನಿಗೆ 'ಕಾನ್ಹಡಾ' ಎಂದಿದ್ದಾಳೆ.

*ನಾಠವೇಚಿ ದುಜೇ ಕಾನಡ್ಯಾವಾಚುನಿ, ಕಾನಡಾ ತೋ ಮನೀ ಧ್ಯಾನೀ ವಸೇ (ಏಕನಾಥ ಅಭಂಗ)*

ಕಾನಡಾನನ್ನುಳಿದು ಎರಡನೆಯದೇನೂ ನೆನಪಾಗಲೊಲ್ಲದು. ಆ ಕಾನಡಾ ಮನಸ್ಸಿನಲ್ಲಿ ಧ್ಯಾನದಲ್ಲಿ ವಾಸಿಸಿದ್ದಾನೆ.

ಇಲ್ಲಿಯ 'ಕಾನಡಾ' ಕನ್ನಡನಲ್ಲ, ಗೂಢನಲ್ಲ, ಕಂದನಲ್ಲ. ಏಕನಾಥನ ಚಿತ್ತವನ್ನೆಲ್ಲ ಆಕ್ರಮಿಸಿದ ಅವನು ವಿಠ್ಠಲ, ಕೃಷ್ಣಪರಮಾತ್ಮನೆನ್ನುವುದು ಹೆಚ್ಚು ಉಚಿತವಾದೀತು.

ಈ ಸಾಮಾನ್ಯ ಅನುಭವವನ್ನು ದೃಷ್ಟಾಂತರೂಪದಲ್ಲಿ ಜ್ಞಾನೇಶ್ವರರು ಹೇಳಿದ ಸಂದರ್ಭ, ಭಗವದ್ಗೀತೆಯ ೧೭ ಅಧ್ಯಾಯ ೧೮ ನೆಯ ಶ್ಲೋಕದಲ್ಲಿಯ ರಾಜಸ ತಪದ ವರ್ಣನೆ. ಸಂಪತ್ತು, ಐಶ್ವರ್ಯಗಳಿಗಾಗಿ ಶ್ರಮಬಿಟ್ಟು ಮಾಡಿದ ತಪಸ್ಸು 'ರಾಜಸ'. ಬೆಳೆದ ಹೊಲವನ್ನು ಮೇಯಿಸಿದರೆ ಒಕ್ಕಲಿಕ್ಕೆ ಏನೂ ಉಳಿಯುವುದಿಲ್ಲ. ಅದರಂತೆ ಎಲ್ಲ ಹಾಲನ್ನು ಕರು ಕುಡಿದರೆ, ಮರುಸಲ ಆವು ಈದ ಬಳಿಕವೂ ಮನೆಯವರಿಗೆ ಹಾಲು ದೊರೆಯುವುದಿಲ್ಲ. ಓವಿ ಹೀಗೆ.

*ವರಿ ಪಹುರಣೇಜ್ ಜೇ ದುಹಿಲೇಜ್ ತೇಜ್ ಗೋಯಜ್ ನದುಭೇ ವಿಯಾಲೇ*
*ಕಾ ಉಭೇಜ್ ಸೇತ ಚಾರಿಲೇಜ್ ಪೀಕಾವೇಯಾ ನುರೇ (೧೭.೨೪೭)*

ಕರು (ಎಲ್ಲ) ಹಾಲನ್ನು ಕರೆದಿದ್ದರೆ, ಆ ಆವು (ಮತ್ತೆ)
ಈದಬಳಿಕ (ಮನೆಯವರಿಗೆ) ಕರೆಯಗೊಡುವುದಿಲ್ಲ. (ಬೆಳೆದು)
ನಿಂತ ಹೊಲವನ್ನು ಮೇಯಿಸಿದರೆ ಒಕ್ಕಲಿಕ್ಕೆ ಉಳಿಯುವುದಿಲ್ಲ.

ಹೊಲವನ್ನು ಮೇಯಿಸುವುದಾಗಲೀ ಹಾಲನ್ನೆಲ್ಲ ಕರುವಿಗೇ ಬಿಡುವುದಾಗಲೀ ಎರಡೂ ಉದ್ದೇಶಪೂರ್ವಕ ಕೃತಿಗಳು. ಪರಿಣಾಮ, ಫಲಸ್ವರೂಪ. ಇದು ಸಂಹಿತೆಯ ವಿಚಾರವಾಯಿತು. ಇನ್ನು ಶಬ್ದ ವಿಚಾರ.

ಇಲ್ಲಿ 'ಪಹುರಣೇಜ್' ಶಬ್ದಕ್ಕೆ ಮರಾಠೀ ಪಂಡಿತರು ಕೀಟವಿಶೇಷವೆಂದು ವ್ಯಾಖ್ಯಾನಿಸಿದ್ದಾರೆ. ಹೀಗೆ ಕೀಟವಿಶೇಷ ಕಡಿದು ಕೆಚ್ಚಲು ಚಿರವಾಗಿ ಒಣಗುವುದು ಅವೈಜ್ಞಾನಿಕ. ಹಾಗಾಗರೆ 'ಪಹುರಣೇಜ್' ಎಂದರೆ ಏನು? ಅದು 'ಕರು' ಅರ್ಥದಲ್ಲಿ ಹೇಗೆ ಬಂತು? ಹಳಗನ್ನಡದ 'ಪವಡಿಸು' ಧಾತು 'ಪಹುಡಣೇಜ್' ಆಗಿ ಮರಾಠಿಗೆ ಹೋದದ್ದನ್ನು ಬೇರೆಡೆ ಚರ್ಚಿಸಿದ್ದೇನೆ. (ಈ ಓವಿಯ ಬಗ್ಗೆಯೂ ಅದರಲ್ಲಿ ವಿಚಾರವಿದೆ.)

ಪಹುರಣೇಜ್ < ಪಹುಡಣೇಜ್ = ಮಲಗಿದಾಗ, ಮಗ್ಗುಲಾದಾಗ;
ಮಗ್ಗುಲಾದಾಗ = ಕಾನವಡೀಜ್ = ಕರುವು.

ಹೀಗೆ 'ಪಹುರಣೇಜ್' ಎಂದರೆ ಜ್ಞಾನೇಶ್ವರರಿಗೆ 'ಕರುವು' ಅಭಿಪ್ರೇತವಿತ್ತೆಂಬುದು ಸ್ಪಷ್ಟವಾಗುತ್ತದೆ.

**ಕಾನ್ಹೀ, ಕಣ್ಣಿ ಹಗ್ಗ,**

**ಕಾಣ ಘೇಣೇಜ್ ಕಾಣಿಸಿಕೊಳ್ಳು :**

*ಉರುಳ್ ಕೋಲ್ ಕಣ್ಣಿ ಮೊದಲಾದ ಮೃಗಪಕ್ಷಿಗಳ ಬನ್ಧನೋಪಕರಣಂಗಳ್* ಎಂದು ನಚಿರಾಜೀಯ ಹೇಳುತ್ತದೆ. ಇಂದಿಗೂ ಉತ್ತರಕರ್ನಾಟಕದ ಜನಪದ ಭಾಷೆಯಲ್ಲಿ 'ಕೊರಳಹಗ್ಗ' ಎನ್ನುವ ಅರ್ಥದಲ್ಲಿ 'ಕಣ್ಣಿ' ಶಬ್ದ ರೂಢವಿದೆ. ಈ ಕನ್ನಡ ಶಬ್ದ 'ಕಾನ್ಹೀ' ಆಗಿ ಅದೇ ಅರ್ಥದಲ್ಲಿ ಜ್ಞಾನೇಶ್ವರಿಯಲ್ಲಿ ಬಳಸಲಾಗಿದೆ.

*ಐಸೇಜ್ ಸತ್ವ ಸುಖಜ್ಞಾನೀಜ್ ಜೀವಾಸಿ ಲಾಉನಿ ಕಾನ್ಹೀ*
*ಬೈಲಾಚೀ ಕರೀ ವಾನೀ ಪಾಂಗುಳಾಚೀಯಾ (೧೪.೧೫೭)*

ಹೀಗೆ ಸತ್ವಗುಣವು ಜೀವಕ್ಕೆ ಸುಖರೂಪದ ಹಾಗೂ ಜ್ಞಾನರೂಪದ ಕಣ್ಣಿಗಳನ್ನು ಹಚ್ಚಿ (ಕಟ್ಟಿ) ಕವಲೆತ್ತಿನಂತೆ ಮಾಡುವುದು (ಪಾಂಗುಳ = ಗೌಲೆತ್ತು ಆಡಿಸುವವ)

ಇದಕ್ಕಿಂತ ತೀರ ಭಿನ್ನವಾದ ಸಂದರ್ಭದಲ್ಲಿ ಕನ್ನಡದ 'ಕಾಣಿಸಿಕೊಳ್ಳು' ಶಬ್ದಪ್ರಯೋಗವು 'ಕಾಣಿ ಘೇಣೇ' ಆಗಿ ಜ್ಞಾನೇಶ್ವರಿಗೆ ಹೋಗಿದೆ. (ಘೇ = ಕೊಳ್ಳು)

*ತರಿ ಪಾಂಡುಕುಮರೇಜ್ ತೇಣೇಜ್ ದೇವಾಚೇಜ್ ಸರತೇಜ್ ಬೋಲಣೇಜ್ ಜಾಣೌನಿ ಅಂತಷ್ಕರಣೇಜ್ ಕಾಣಿ ಘೇತಲೀ (೧೮.೭೫)*

ಆಗ ಪಾಂಡುರಾಜನ ಮಗನು ಭಗವಂತನ ಮಾತು ಮುಗಿದದ್ದನ್ನು ಅಂತಃಕರಣಪೂರ್ವಕವಾಗಿ ತಿಳಿದುಕೊಂಡಂತೆ ಕಾಣಿಸಿಕೊಂಡನು.

**ಕಾಂಬೀ ಕಂಬಿ, ಕಬ್ಬಿಣಸಲಾಕೆ**

*ಬೆಂದ ಹುಣ್ಣ ಕಂಬಿಯಲ್ಲಿ ಕಿಸುವನ್ತಪ್ಪ ವೇದನೆಯಹುದೆನಗೆ (ಬಸವೇಶ್ವರ ವಚನಗಳು ೩೦೩)* ಎಂಬಲ್ಲಿ ಬರುವ ಕನ್ನಡದ 'ಕಂಬಿ' ಶಬ್ದ 'ಕಾಂಬೀ' ಆಗಿದ್ದು ಜ್ಞಾನೇಶ್ವರೀಯಲ್ಲಿ ಕಾಣಬರುತ್ತದೆ.

*ಏಆ ಜಾಲೇಆ ಮಾನಸಾ ಕಹೀಂಜ್ ಯುಗುತಿಚೀ ಕಾಂಬಿ ಲಾಗಲೀ ನಾಹಿಜ್*
*ತರಿ ನಿಶ್ಚಳ ಹೋಈ ಕಾಈ ಕೈಸೇನ ಸಾಂಘೈಜ್ (೬.೪೨೨)*

(ಮೊದಲಿನ ಓವಿಯಲ್ಲಿ ವರ್ಣಿಸಿರುವಂತೆ) ಹೀಗೆ ಆಗಿರುವಾಗ, ಮನಸ್ಸಿಗೆ ಎಂದಿಗೂ ಯೋಗದ (ಯುಕ್ತಿಯ) ಕಂಬಿ ಹತ್ತದಿದ್ದಾಗ (ಅದು) ನಿಶ್ಚಲವಾದೀತೇ? ಹೇಗೆ? ಹೇಳ್ಳೆ.

*ಪುಢಾಜ್ ಬೋಧಾಚಿಯೇ ಕಾಂಬಿವೇರ್ಹಿಜ್ ವಿವೇಕು ದೃಶ್ಯಾಚೀ ಮಾಂದೀ ಸಾರೀ (೧೮.೧೦೬೪)*

ಮುಂದೆ (ಪ್ರವೃತ್ತಿಯೆಂಬ ರಾಜಬೀದಿಯಲ್ಲಿಯ) ಭೋಧವೆಂಬ ಕಂಬಿಯವರೆಗೆ ವಿವೇಕವು ದೃಶ್ಯವೆಂಬ ಮಂದಿಯನ್ನು ಸರಿಸುತ್ತದೆ.

**ಕಾಲವಣೇಜ್ ಕಲಸು, ಮಿಶ್ರಣಮಾಡು**

'ಸಮ್ಮಿಶ್ರೇ' ಅರ್ಥದಲ್ಲಿ ಬೆರಸು ಹಾಗೂ ಕಲಸು ಇವೆರಡು ಧಾತುಗಳನ್ನು ಕೇಶಿರಾಜನು ಕೊಡುತ್ತಾನೆ. ವಸ್ತುತಃ ಇವರಡೂ ಬೆರೆ ಹಾಗೂ ಕಲೆ ಧಾತುಗಳ ಪ್ರಯೋಜಕಗಳು. ಈ ಮೂಲಧಾತುಗಳನ್ನು ಮಾತ್ರ ಅವನು ಕೊಡುವುದಿಲ್ಲ! *ಕಾಳದೊಳಗೆ ಕಾರ್ಮುಗಿಲ ಅಂಜನವ ಕಲಸಿ (ರಾಘವಾಂಕಚರಿತೆ ೧೭.೬೪) ನಿಚ್ಚಕಲಿತೂ ಬಾಲೆಯುಂ ಪಿರಿದು ತೂಗುವ ನಚ್ಚುಮಚ್ಚಿನ ದಾದಿಯರ್ (ಪ್ರಭುಲಿಂಗ ಲೀಲೆ ೩.೨೬)* ಹೀಗೆ ನಡುಗನ್ನಡದಲ್ಲಿ, ಕಲಸು ಕಲಿ ಧಾತುಗಳ ಪ್ರಯೋಗಗಳು ದೊರೆಯುತ್ತವೆ.

ಈ ಕಲಿ ಅಥವಾ ಕಲೆ ಧಾತುವಿನ ಮರಾಠಿಯಲ್ಲಿಯ ಪ್ರಯೋಜಕ 'ಕಾಲವ'. ಇದರ ಪ್ರಯೋಗಗಳು ಜ್ಞಾನೇಶ್ವರಿಯಲ್ಲಿ ಹೀಗಿವೆ.

*ಜೈಸೀಂ ಜವಳಿಕೇಚೀಂ ಸರೋವರೇಂ ಉಚಂಬಳಲಿಯಾಂ ಕಾಲವತಿ ಪರಸ್ಪರೇಂ (೧೦.೧೦೬ ಪಾಠಭೇದ)*

ಹತ್ತಿರವಿರುವ ಸರೋವರಗಳು ಉಕ್ಕೇರಿದಾಗ ಒಂದನ್ನೊಂದು ಕಲೆಯುವಂತೆ.

*ದೃಷ್ಟಾದೃಷ್ಯ ಆಘವೇಂ ಏಕವಾಟ ಕಾಲವೇ ಸಾಮರಸ್ಯೇಂ (೧೬.೯೬೦)*

ದೃಷ್ಟಾದೃಶ್ಯವೆಲ್ಲವೂ ಸಮರಸದಿಂದ ಒಂದಾಗಿ ಕಲೆಯುವಂತೆ.

ಇಲ್ಲಿ ಏಕವಾಟ ಶಬ್ದದ ಬಳಕೆಯೂ ಲಕ್ಷಣೀಯವಾಗಿದೆ. ಕನ್ನಡದ 'ಒಟ್ಟು', ಶಬ್ದ 'ವಾಟ' ಆಗಿ 'ಒಂದೊಟ್ಟು' ಎನ್ನುವಂತೆ 'ಏಕವಾಟ' ಆಗಿದೆ.

*ತೇಂ ಹೇಂ ತೂಝಿಯೇ ಚಾಡೇ ಆಜ ಜೀವಾಚೇಂ ಚ ದಳವಾಡೇಂ ಕಾಲೌನಿಯಾಂ ಏವಡೇಂ ರಚಿಲೇಂ ಧಾನ (೧೧.೬೦೨)*

ನಿನಗೋಸ್ಕರವೇ ಇಂದು ಜೀವಗಳ ಸಮುದಾಯವನ್ನು ಕಲಿಸಿ ಇಷ್ಟು (ವಿಶ್ವರೂಪದ) ಆಕಾರವನ್ನು ಮಾಡಿದೆವು.

**ಕೀಡ, ಕೀಟ, ಕಿಡಾಳ - ಕೀಟ್, ಹೀನ, ಬೆಲೆಯಿಲ್ಲದ ಬಂಗಾರ**

'ಕೀಟ್' ಶಬ್ದಕ್ಕೆ 'ಒರೆಯಿಲ್ಲದ ಭಂಗಾರಂ' ಎಂದು ಕೇಶಿರಾಜನು ಅರ್ಥ ಕೊಡುತ್ತಾನೆ. (ಶಬ್ದಮಣಿದರ್ಪಣ ಸೂತ್ರ ೩೩) ಈ ಶಬ್ದ ಇದೇ ಅರ್ಥದಲ್ಲಿ ಕೀಡ, ಕೀಟ, ಕಿಡಾಳ ಹೀಗೆ ಬೇರೆಬೇರೆ ರೂಪಗಳಲ್ಲಿ ಜ್ಞಾನೇಶ್ವರಿಯಲ್ಲಿ ಕಾಣಿಸಿಕೊಳ್ಳುತ್ತದೆ.

*ಕಾಂ ಅಗ್ನಿಮುಖೇಂ ಕೀಡಾಳ ತೋಡೂನಿಯಾ ಚೋಖಾಳ (೨.೧೨೮)*

ಬೆಂಕಿಯಲ್ಲಿ ಹಾಕಿ ಕೀಳನ್ನು ಪ್ರತ್ಯೇಕಿಸಿ (ಹೊನ್ನು) ಚೊಕ್ಕುಮಾಡಿದಂತೆ.

*ವಿಚಾರಾಚಾಂ ಅಗಿಠಾಂ ಆತ್ಮಾನಾತ್ಮ ಕೀಟಾ ಫುಟದೇಉನಿ (೧೩.೧೦೩೧)*

ವಿಚಾರದ ಅಗ್ನಿಯಲ್ಲಿ ಆತ್ಮ ಅನಾತ್ಮಗಳ ಕೀಳನ್ನು ಪುಟಗೊಟ್ಟು (ಬೇರ್ಪಡಿಸಿ)

*ಚೋಖಾಚಿಯೇ ಶುದ್ಧಿ ತೋಡಣೇಂ ಕೀಡಚಿ ಜೇವಿಂ (೧೫.೪೩೧)*

(ಬಂಗಾರದ) ಚೊಕ್ಕ ಶುದ್ಧಿಯೆಂದರೆ ಕೀಳನ್ನು ತೊಡೆಯುವುದು, ಅದರಂತೆ-

'ದೋಷ' 'ಹೀನ' ಎಂಬರ್ಥದ ಪ್ರಯೋಗಗಳು ಹೀಗಿವೆ:

*ಇಯೇ ಸಂಗ್ರಾಮಿಂ ಶಸ್ತ್ರ ನ ಧರೀಂ ಹೇ ಕೀಡಾಳ ಬಹುತೀಂ ಪರೀಂ (೧.೨೪೩)*

ಈ ಯುದ್ಧದಲ್ಲಿ ಶಸ್ತ್ರ ಹಿಡಿಯುವುದಿಲ್ಲವೆಂಬುದು ದೊಡ್ಡ ದೋಷವು. (ತಪ್ಪು)

*ಪರಿ ಕಿಡಾಳ ಹೇಜ್ ಶೋಚಿತಾಜ್ (೨.೧೭೯)*

ಇದರ ಬಗ್ಗೆ ಶೋಚಿಸುವುದು ತಪ್ಪು.

*ತೇಜೇಜ್ ಸೂರ್ಯ ತೈಸೇ ಉಜಳ ಪರಿ ತೋ ಅಸ್ತವೇ ಹೇಜ್ ಕೀಡಾಳ (೯.೨೦೩)*

(ನನ್ನ ನಾಮವು) ತೇಜದಲ್ಲಿ ಸೂರ್ಯನಂತೆ ಉಜ್ವಲವಾದದ್ದು.
ಆದರೆ ಅವನು ಅಸ್ತಮಿಸುತ್ತಾನೆ. ಇದು (ಅವನ) ದೋಷವು.
(ನಾಮವು ಅಸ್ತಮಿಸುವುದಿಲ್ಲ)

*ಸುಧಾಸತ್ವಾ ಆಡ ಆಹೇ ರಜತಮಾಚೇ ಕವಾಡ ತ್ರಿಭುವನೀಜ್ ತೇ ಕೀಡಹ್ಮಣಾವೇನಾ (೧೭.೩೧೦)*

ಶುದ್ಧಸತ್ವಕ್ಕೆ ಅಡ್ಡವಾಗಿ ರಜ ತಮಸ್ಸುಗಳ ಬಾಗಿಲು (ಇದೆ).
ಮೂರೂ ಲೋಕಗಳಲ್ಲಿ ಇದಕ್ಕೆ ದೋಷವೆನ್ನಬೇಕು.

**ಕುಚುಂಬಣೇಜ್ ಕುತ್ತವಿಸು, ಸಂಕಟಪಡು**

'ಸಂಕಟಪಡು' ಅರ್ಥದಲ್ಲಿಯ 'ಕುಚಂಬ' ಧಾತು ಒಂದು ಆಹ್ವಾನಾತ್ಮಕ ಶಬ್ದ. ಇದರ ಪ್ರಯೋಗ ಜ್ಞಾನೇಶ್ವರೀಯಲ್ಲಿ ಒಮ್ಮೆ ಮಾತ್ರ.

*ಕಮಳಾವರಿ ಭವರ ಪಾಯೇ ಠೇವಿತಿ ಹಳುವಾರ*
*ಕುಚುಂಬೈಲ ಕೇಸರ ಇಯಾ ಶಂಕಾ (೧೩.೨೪೭)*

ಕಮಲದ ಮೇಲೆ ಭ್ರಮರ ನಾಜೂಕಾಗಿ ಕಾಲು ಇಡುತ್ತದೆ.
ಕೇಸರವು ಸಂಕಟಪಟ್ಟಿತೇನೋ ಎಂದು ಸಂದೇಹ (ಅದಕ್ಕೆ)!

ಈ ಧಾತುವಿಗೆ ಸಂಸ್ಕೃತ-ಪ್ರಾಕೃತಗಳಲ್ಲಿ ಆಧಾರಗಳಿಲ್ಲ. ಹೀಗಾಗಿ ಇದು ಹಳಗನ್ನಡದಿಂದಲೇ ಹೋಗಿರಬಹುದೆಂದು ಭಾವಿಸುವುದು ಅನಿವಾರ್ಯವಾಗುತ್ತದೆ.

ಅರ್ಥದ ದೃಷ್ಟಿಯಿಂದಲೂ, ರೂಪದ ದೃಷ್ಟಿಯಿಂದಲೂ ಸನಿಹದ ಶಬ್ದ 'ಗುದುಮುರಿಸು'. ಕಿಟೆಲ್‌ರು ಈ ಶಬ್ದವನ್ನೇ ಉಲ್ಲೇಖಿಸಿಲ್ಲ. ಸಾಹಿತ್ಯಪರಿಷತ್ತಿನವರು ಇದನ್ನು 'ಗುದ್ದುಮರಿಸು' ಎಂಬುದಾಗಿ ಕೆಡಿಸಿದ್ದಾರೆ. ಉತ್ತರಕರ್ನಾಟಕದ ಆಡು ಮಾತಿನಲ್ಲಿಯ 'ಗುದುಮುರಿಸು' ಶಬ್ದದ ಸ್ಥೂಲ ಅರ್ಥ 'ಸಂಕಟಪಡು' ಎಂದಿದೆ. ಅಷ್ಟೇ ಅಲ್ಲ, 'ಉಸಿರು ಕಟ್ಟಿದಂತಾಗು' ಎನ್ನುವ ಸೂಕ್ಷ್ಮಭಾವವೂ ಇದೆ. *ಕಂಬಳೀ ಮುಸುಕು ಹಾಕಿದರ ಗುದುಮುರಿಗಿ ಆಕ್ಕೈತಿ* ಹೀಗೆ ಉದಾಹರಣೆ ಹೇಳಬಹುದು. 'ಕುತ್ತುಸಿರು' ಎಂಬ ಶಬ್ದ ಪ್ರಯೋಗವೂ ರೂಢಿಯಲ್ಲಿದೆ. ಇವೆರಡಕ್ಕೂ ಮೂಲವಾದ ಶಬ್ದ 'ಕುತ್ತ' ಎಂದಿರಬೇಕು. 'ತೊಂದರೆ' 'ಕಷ್ಟ' ಎಂದು ಮಾತ್ರ ಸ್ಥೂಲವಾದ ಅರ್ಥವುಳ್ಳ ಪ್ರಯೋಗಗಳು.

*ಏಕೆ ನವಗೀಕೆಯ ಕುತ್ತಮೆನುತ್ತೆ ಚಿತ್ತದೊಳ್ (ವರ್ಧಮಾನ ಪುರಾಣ ೧೫.೫೪)*
*ಬಟ್ಟೆವೋಪ ಕುತ್ತಂಗುಳಿಯಂತೆ ಸೇದೆಗೆಟ್ಟು (ಧರ್ಮಾಮೃತಂ ೧೩.೬೯)* ಆದರೆ 'ಕುತ್ತಂ ಬರಿಸು' 'ಗುದಮರಿಸು' ಎನ್ನುವ ಅರ್ಥ ಇಲ್ಲಿ ಸ್ಪಷ್ಟವಾಗಿಲ್ಲ.

'ಚುಚ್ಚು' 'ಶಿವಿ' ಅರ್ಥದ ಕುತ್ತು ಧಾತು (ನೋಡಿರಿ ಕೊಂತಂಗಳಿಂದಂ

ಇಟ್ಟಿಗಳಿಂದಂ ಕರುಳ್ಗಳಂ ಸೋರೆ ಕುತ್ತುವುದುಂ -ವಡ್ಡಾರಾಧನೆ ೬.೨೯) ಮುಂದಿನ ಕಾಲದ 'ಗುದ್ದು' ಧಾತುವಿಗೆ ಮೂಲವೆನ್ನಬಹುದು. ಆದರೆ 'ಕುತ್ತಿಗೆ' 'ಗೋಣು' ಅರ್ಥದ 'ಕುತ್ತು' 'ಗುತ್ತು', 'ಗೊಂತು'. ಈ ತೆಲುಗು ಶಬ್ದಗಳನ್ನು ಪರಾಮರ್ಶಿಸಿದಾಗ, 'ಉಸಿರು ಕಟ್ಟು'ವ 'ಕುತ್ತ'ಕ್ಕೂ 'ಕುತ್ತಿಗೆ'ಗೂ 'ಗೋಣಿಗೂ' ಇರುವ ಸಂಬಂಧ ಸ್ಪಷ್ಟವಾಗುವುದು. ಇದೇ ಸಂದರ್ಭದಲ್ಲಿ ಗೋಣುಮುರಿ ಶಬ್ದದ ಪ್ರಯೋಗವೂ ಗಮನಾರ್ಹ. ಕನ್ನಡದಲ್ಲಿ 'ತುಂಡುಮಾಡು' ಅರ್ಥದ (ಖಂಡನೆ) 'ಮುಱಿ' ಧಾತು, 'ವಕ್ರಭಾವೇ' (ಮುರಿಗೆ ಹಾಕು) ಅರ್ಥದ ಮುರಿ ಧಾತು ಇವು ಭಿನ್ನವೆಂದು ಕೇಶಿರಾಜನೇ ಹೇಳುತ್ತಾನೆ. 'ಕುತ್ತ'ದಿಂದ 'ಗುದು' ವ್ಯುತ್ಪನ್ನವಾದುದರಿಂದ ಉಸಿರು ಕಟ್ಟುವ ಹಾಗೆ 'ಮುರಿ' ಎನ್ನುವ ಅರ್ಥದಲ್ಲಿ 'ಗುದುಮುರಿ' ಶಬ್ದ (ಅಥವಾ 'ಗೋಣುಮುರಿ' ಅರ್ಥದಲ್ಲೇ 'ಗುದುಮುರಿ') ರೂಪಗೊಂಡಿರಬಹುದಾಗಿದೆ.

ಶಬ್ದಮಣಿದರ್ಪಣದಲ್ಲಿ ಬರುವ 'ಕುತ್ತಡಿ ಸಿಲ್ಕುತಿರ್ಕೆ' ಸೂತ್ರ ೧೬೪ ರ ಕೆಳಗಿನ ಪ್ರಯೋಗವೂ ಅಭ್ಯಸನೀಯ.

ಹೀಗೆ 'ಕುತ್ತ' ಶಬ್ದದ ಪ್ರಪಂಚ. ಈ 'ಕುತ್ತ'ದಿಂದಲೇ ಮರಾಠಿಯಲ್ಲಿ 'ಕುಟುಂಬ' ಶಬ್ದ ಹೋಗಿರಲು ಸಾಕು. (ಕುತ್ತಮು, ಕುತಮು)

**ಕುರವಾಳ ಕೂರ್+ಆಳ್ ಪ್ರೀತಿಮಾಡು; ಕುರವಂಡೀ ಆರತಿ, ನಿವಾಳಿ; ಕಾಕುಳತೀ ಕಕ್ಕುಲತೆ, ಪ್ರೇಮ, ಕರುಣೆ;**

ಇಲ್ಲಿ ಬರುವ ಮೂಲ ಹಳಗನ್ನಡ ಶಬ್ದ 'ಪ್ರೇಮ' 'ಸ್ನೇಹ' ಅರ್ಥದ 'ಕೂರ್'. *ಚಿರಂ ದೇವಿ ಸರಸ್ವತಿ ಹಂಸೀಭಾವದ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್* ಎಂಬುದಾಗಿ ಕವಿರಾಜಮಾರ್ಗದಲ್ಲಿ (೧.೩) ಪ್ರಸ್ತಾಪ ಬರುತ್ತದೆ.

'ಕೂರ್' ಶಬ್ದ ಬಾಹುಲ್ಯಕ್ಕಾಗಿ ಎರಡು ಸಲ ಬಳಸಿದಾಗ ಆದ ಶಬ್ದವೇ ಕೂರ್+ಕೂರ್ > ಕುಕ್ಕೂರ್ > ಕುಕ್ಕೂಲ. ಮರಾಠಿಯಲ್ಲಿ ಇಂದಿಗೂ, ಪ್ರಮಾಣ ಸಾಹಿತ್ಯದಲ್ಲಿ ಕೂಡ 'ಕುಕ್ಕುಲ' (=ಮುದ್ದುಮುದ್ದಾದ) ಶಬ್ದ ಬಳಕೆಯಲ್ಲಿದೆ.

ಜ್ಞಾನೇಶ್ವರಿಯಲ್ಲಿಯ ಈ ಶಬ್ದಗಳ ಬಳಕೆ ಇಂತು:

*ಯಾಲಾಗಿ ಆಂಗ ನ ಕುರವಾಳೀ ನಖಾಂಚೀಜ್ ಗುಂಡಾಳೀಜ್ ಬೋಟಾಂವರಿ (೧೩.೨೬೫)*

(ರೋಮಾವಲಿಗಳು, ಕದಡುವವೆಂಬ ಭಾವನೆ) ಆದರಿಂದಾಗಿ (ಅವನು) ತನ್ನ ಮೈಮೇಲೆ ಕೈಯಾಡಿಸುವುದಿಲ್ಲ. (ಹಿಂಸೆಯಾಗ-ಬಾರದೆಂದು ಕತ್ತರಿಸದೆ ಬಿಟ್ಟ) ಉಗುರುಗಳು ಬೆರಳಮೇಲೆ ಸುತ್ತು ಬೆಳೆಯುತ್ತವೆ.

*ಪಾಹೂನಿ ತೋ ಸ್ಪರ್ಶ ಮಲಯಾನೀಳು ಖರಮುಸು ಏಣೇಜ್ ಮಾನೇಜ್ ಪಸು ಕುರವಾಳಣೇಜ್ (೧೩.೨೮೯)*

ಆ ಸ್ಪರ್ಶವನ್ನು ನೋಡಿದರೆ ಮಲಯಪರ್ವತದ ಸುಳಿಗಾಳಿಯೂ

ಬಿರುಸೆನಿಸಬೇಕು. ಹಾಗೆ ಅವನು ಪಶುಗಳನ್ನು ಮುದ್ದಿನಿಂದ ತಡವುವುದು.

*ಸಾಂಡೌನಿ ಆಶಾಜ್‌ಸೀಜ್ ಕುರವಂಡೀ ಅಹಂಭಾವಾಚೀ (೪.೧೦೭)*

ಆಸೆಯನ್ನು ತ್ಯಜಿಸಿ ಅಹಂಕಾರವನ್ನು ನಿವಾಳಿಸಿ

*ಜೇಹೀಜ್ ಆತ್ಮಬೋಧಾಚಿಯಾ ಆವಡೀ ಕೇಲೀ ಸ್ವರ್ಗಸಂಸಾರಾಚೀ ಕುರವಂಡೀ (೬.೨೮)*

ಯಾರು ಆತ್ಮಬೋಧಕ್ಕೆ ಮಾರುಹೋಗಿ ಸ್ವರ್ಗ-ಸಂಸಾರಗಳನ್ನು ನಿವಾಳಿಸಿದರೋ-

*ಇಯಾ ಕಾಕುಳತೀ ಜನಾರ್ದನೇಜ್ (೬.೧೧೯)*

ಶ್ರೀಕೃಷ್ಣನು ಹೀಗೆ ಮಮತೆಯಿಂದ

*ಮಗ ತೇ ಕಾಕುಳತೀ ಸ್ಯೆರಾ ಧಾವೇ (೨.೩೬)*

ಬಳಿಕ ಅವನು ದೀನನಾಗಿ ಅಡ್ಡಾದಿಡ್ಡಿ ಓಡುವಂತೆ

*ಯಾಚೀ ಕಾಕುಳತಿ ಕೋಣ್ಹಾಜ್ ಆಹೇ (೧೧.೩೬೨)*

ಇದರ (ಈ ಶರೀರದ) ಮಮತ್ವ ಯಾರಿಗಿದೆ?

*ಇಯಾ ಕಾಕುಳತೀ ವಾಹಾಣೇ ಘೇ ಮಾಘೌತಿ (೧೩.೭೫೨)*

ಹೀಗೆ ಮಮತೆಯಿಂದ ಅವನು ಹಿಮ್ಮೆಟ್ಟುತ್ತಾನೆ.

**ಕುರ್ಢೇ–ಕುಡೇ, ಕುಡು, ಕೊಂಕು**

ಕುಡು ಪ್ರದಾನೇ ವಕ್ರೇಚ ಎಂಬುದಾಗಿ ಶಬ್ದಮಣಿದರ್ಪಣದಲ್ಲಿ ಬರುವ, 'ಕೊಂಕು' ಅರ್ಥದ ಕುಡು ಶಬ್ದ ಸಮಸ್ತಪದಗಳಲ್ಲಿಯೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಕುಡುಗೋಲು (*ಶಬ್ದಮಣಿದರ್ಪಣ ಸೂತ್ರ ೧೯೫*) ಕುಡುಗರುಳೆಮ್ಬ ತಮ್ಪೆಲ್ಲರ (*ಆದಿಪುರಾಣ ೧೨.೪೯*) ಕುಡುದಾಡೆ, ಕುಡುದಡಿ, ಕುಡುಮಿಂಚು, ಕುಡುವೆರೆ (*ಶಬ್ದಮಣಿದರ್ಪಣ ಅದೇ*)

ತಪ್ಪು, ಸುಳ್ಳು, ತಗಲು, ಕೊಂಕು ಅರ್ಥಗಳಲ್ಲಿ 'ಕುಡು' ಶಬ್ದವು ಮರಾಠಿಯಲ್ಲಿ .ಕಾಣಿಸಿಕೊಳ್ಳುತ್ತದೆ. ಇವು ಉದಾಹರಣೆಗಳು.

*ತೇ ನೋಹೇ ಸ್ನೇಹ ಕುರ್ಢೇಜ್ ಕೀಜ್ (೧೮.೯೨೩)*

ಆ (ತಾಯಿಯ) ಸ್ನೇಹವು ಕೊಂಕಾದುದಲ್ಲ. (ತಗಲು, ಸುಳ್ಳು ಅಲ್ಲ)

*ಪರಿ ಏಕ ಚಿ ಕೂಡ ಕರೀತಿ ಜೇಜ್ ಸ್ವರ್ಗಕಾಮು ಮನೀಜ್ ಧರಿತಿ (೨.೨೫೦)*

ಮನಸ್ಸಿನಲ್ಲಿ ಸ್ವರ್ಗದ ಆಸೆ ಹಿಡಿಯುತ್ತಾರೆ. ಅದೇ ಒಂದು ತಪ್ಪು ಮಾಡುತ್ತಾರೆ.

*ಹೇ ನೇಣಿಜೇ ಪರಿ ಕುಡೇಜ್ ಕೇಲೆಜ್ ಅರ್ಜುನಾ ತುವಾಜ್ (೨.೨೬)*

ನಿನಗೆ ಇದು ಅರಿಯದು. ಆದರೆ, ಅರ್ಜುನಾ ನೀನು ತಪ್ಪು ಮಾಡಿದೆ.

*ಜೈಸೇಜ್ ರಾಜ್ ಕುಡೇಜ್ ನಾಣೇಜ್ ಖರೇಯಾಚೇನಿ ಸಾರಿಖೇಪಣೇಜ್ (೪.೭೫)*

ತಗಲು ನಾಣ್ಯವು ಸತ್ಯನಾಣ್ಯದಂತೆಯೇ ಇದ್ದಂತೆ-

*ನ ಸರೇ ಥೋರ ಮೋಲಾ ಕುಡಾ. (೧೩.೪೭೦)*

ಬಹಳ ಬೆಲೆ ಕೊಟ್ಟು ಸುಳ್ಳು ನಡೆಯುವುದಿಲ್ಲ.

*ಜೈಸೇಜ್ ಭಾಸಳಲೇಜ್ ಖರೇಜ್ ಕುಡೇಜ್ (೯.೪೩)*

ಸತ್ಯ ಅಸತ್ಯಗಳು (ಒಂದರಲ್ಲೊಂದು) ಕೂಡಿ ಹೋದಂತೆ-

ಹೀಗೆ 'ಕೊಂಕು' 'ಅಸತ್ಯಗಳು' ಹಳಗನ್ನಡದಿಂದ ಮರಾಠಿಗೆ ಹೋಗಿವೆಯೆನ್ನಬಹುದು. ಆದರೆ 'ಸತ್ಯ' (ಖರೇ) ಇನ್ನೂ ಗೂಢವಾಗಿಯೇ ಇದೆ!

**ಕುವಾಡೇಜ್- ಕವ್ವರೆ, ಸಂಭ್ರಮ, ಗೊಂದಲಮಯ**

*ಸರಿಗೆಯಂ ಕಾಲೊಳ್ ಕಟೀಸೂತ್ರಮಂ ಕೊರಲೊಳ್ ಆಗಳಾಗಳೆ ತೊಡರ್ಚುತ್ತುಂ ಜನಂ ಕೂಡೆ ಕವ್ವರೆ ಗೊಂಡೆಯ್ತರೆ ನೋಡಲೆಂದು ಪರಿವಳ್ ಚಕ್ರೇಶ ಸೌಂದರ್ಯಮಂ (ಆದಿಪುರಾಣ ೧೧.೨೨)*

ಹೀಗೆ ಹಳಗನ್ನಡದಲ್ಲಿ ಬಳಸಿದ 'ಕವ್ವರೆ' ಶಬ್ದವು 'ಕುವಾಡೇಜ್' ಆಗಿ ಜ್ಞಾನೇಶ್ವರಿಯಲ್ಲಿ ಬಂದುದು ಈ ಸಂದರ್ಭದಲ್ಲಿ.

*ಹೇಜ್ ಅರ್ಜುನಾ ಸಕಳ ಕುವಾಡೇಜ್ ಜೇಜ್ ಅನುಷ್ಠಿತಾಜ್ ಅತಿಸಾಜ್‌ಕಡೇಜ್*
*ಪರಿ ಜಿತೇಂದ್ರಿಯಾಜ್‌ಸಿ ಚಿ ಫಡೇ ಯೋಗ್ಯತಾವಸೇಜ್ (೪.೧೪೧)*

ಅರ್ಜುನನೇ, ಇದೆಲ್ಲವೂ (ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ, ವಾಗ್ಯಜ್ಞ, ಜ್ಞಾನಯಜ್ಞ) ಗೊಂದಲಮಯವಾದದ್ದು. ಇದರ ಅನುಷ್ಠಾನವೂ ಅತಿ ಸಂಕಟಮಯವಾದದ್ದು. ಜಿತೇಂದ್ರಿಯರಿಗೇ ಅವರ ಯೋಗ್ಯತೆಯಂತೆ ಇದು ಸಾಧ್ಯವಾಗುವುದು.

*ಜೇಜ್ ಮನಾ ಕಳಿತಾಜ್ ಕುವಾಡೇಜ್ (೫.೬೭)*

ಯಾವುದನ್ನು ತಿಳಿದುಕೊಳ್ಳಬೇಕಾದರೆ ಮನಸ್ಸಿನಲ್ಲಿ ಗೊಂದಲವಾಗುವುದೋ-

**ಕುಸರಿ-ಕುಸುರಿ ಕೌಶಲ್ಯ, ನಾಜೂಕ್ಯ**

ಅಲ್ಲದಿಲ್ಲಿ ದಲ್ ಕುಸುರಿಯ ಮಾತುಗಾಣೆಸೆನೆ ಕೇಳ್ದು ಮುರಾಂತಕಂ ಎಂದು 'ಕುಸುರಿ' ಶಬ್ದದ ಹಳಗನ್ನಡ ಪ್ರಯೋಗ ಪಂಪಭಾರತದಲ್ಲಿ (೫.೭೨) ದೊರೆಯುತ್ತದೆ. ಇದೇ ಶಬ್ದ 'ಕುಸುರೀ' ಆಗಿ ಜ್ಞಾನೇಶ್ವರಿಯಲ್ಲಿ ಕೆಲವೆಡೆ ಬಳಸಲಾಗಿದೆ.

*ನಿಪುಣಪಣೇಜ್ ಪಾಜ್‌ತಾಜ್ ಕುಸರಿ ದೀಸತಿ ಉಚಿತಪದೇ*
*ಮಾಝಾರಿ ರತ್ನೇಜ್ ಭಲೀಜ್ (೧.೮)*

ನೈಪುಣ್ಯದಿಂದ ನೋಡಿದರೆ ಕುಸರಿ ಕಾಣುತ್ತದೆ. ಉಚಿತ ಪದಗಳಲ್ಲಿ ಒಳ್ಳೊಳ್ಳೆಯ ರತ್ನಗಳೂ (ಕಾಣುತ್ತವೆ)

ಇಲ್ಲಿ 'ಕುಸರಿ'ಗೆ 'ಕೌಶಲ್ಯ'ವೆನ್ನುವುದಕ್ಕಿಂತ ನಾಗವರ್ಮನು ತನ್ನ ಕಾವ್ಯಾವಲೋಕನದಲ್ಲಿ ಹೇಳಿದ 'ಪೇಳಿಕೆ' ಅರ್ಥ ಹೆಚ್ಚು ಸಮಂಜಸವೆನಿಸುತ್ತದೆ. ಕೆಳಗಿನ ಓವಿಯನ್ನು ಅದೇ ಅರ್ಥದಲ್ಲಿ ನೋಡಬಹುದು.

*ಇಯಾ ಏಕೀಪರೀ ರೂಪಕಾಚಿಯಾ ಕುಸರಿ*
*ಸಾರಿತಸೇ ಪಾರೀ ಸಂಸಾರಾಚೀ (೧೫.೪೨)*

ಇದೊಂದೇ ಪರಿಯ (ಊರ್ಧ್ವಮೂಲ, ಅಧಃಶಾಖ) ರೂಪಕದ
ಕುಸರಿಯಿಂದ ಸಂಸಾರದ ಓರೆತನವನ್ನು ದೂರಗೊಳಿಸುತ್ತದೆ.

*ಆಪುಲಿಯಾ ಪರೀ ಶಾಸ್ತ್ರ ಅನುಷ್ಠಿತಿ ಕುಸರೀ*

ತಮ್ಮ ಪರಿಯಿಂದ (ತಮಗೆ ತಿಳಿದಂತೆ, ತಮಗೆ ಸಾಧ್ಯವಿದ್ದಂತೆ)
ಶಾಸ್ತ್ರವನ್ನು ಕೌಶಲದಿಂದ ಅನುಷ್ಠಾನಗೊಳಿಸುತ್ತಾರೆ.
(ಆಚರಿಸುತ್ತಾರೆ ಎಂಬರ್ಥ)

*ಘಡಿಲೇ ಪಾರ್ಥವೈಕುಂಠಸಂವಾದ ಕುಸರೀ (೧೮.೩೭)*

ಅರ್ಜುನ ಶ್ರೀಕೃಷ್ಣರ ಸಂವಾದ ಕೌಶಲ್ಯವು ಘಟಿಸಿತು.

**ಕೂಟ ಕುಟ್ಟಿದುದು, ಪುಡಿ**

'ತಾಡನೇ' ಅರ್ಥದಲ್ಲಿಯ 'ಕುಟ್ಟು' ಧಾತುವಿನಿಂದ ಸಿದ್ಧವಾದ 'ಕೂಟ' ಕ್ರಿಯಾನಾಮವು -ಕನ್ನಡದಲ್ಲಿಲ್ಲದಿದ್ದರೂ-ಜ್ಞಾನೇಶ್ವರಿಯಲ್ಲಿ ಬಳಕೆಯಾದುದನ್ನು ನೋಡಬಹುದು.

*ತಿಯೇಜ್ ರತ್ನೇಜ್ ದಾಜ್‌ತಾಜ್‌ಚಾ ವ್ಯಾಡೀಜ್ ಕೂಟ ಲಾಗಲೇಜ್ ಜೀಭೇ ಬೂಡಿ (೧೧.೪೧೧)*

(ಮುಕುಟಗಳಲ್ಲಿಯ) ಆ ರತ್ನಗಳು ಹಲ್ಲುಗಳ ಸಂದಿಗಳಲ್ಲಿ,
ಅವುಗಳ ಪುಡಿ ನಾಲಗೆಯ ಕೆಳಗೆ ಹತ್ತಿದೆ!

*ನೇಣಸಿ ಸತ್ಯಾಚಾ ಭೋಕಸಾ ಕಾಢಿಲಾ ಮಗ ಅಕೃತ ತಣಕುಟಾ ಭರಿಲಾ (೩.೨೪೫)*

ನೀನರಿಯೆ, (ಅವರು) ಸತ್ಯದ ಬೊಕ್ಕಸವನ್ನು ತೆಗೆದು ಬಳಿಕ
ಪಾಪದ ಹುಲ್ಲುಪುಡಿಯನ್ನು ತುಂಬಿದರು.

*ಕಾಜ್ ಪಾಖಾಣಾಚಾಜ್ ಮಾಥಾಜ್ ಹಾಂಡೀ ಘೂಟಲೀ ಪಾರ್ಥಾ*
*ಜೇವಿಜ್ ತೈಸೇ ಸರ್ವಥಾ ಕೂಟ ಜಾಲೇ (೧೬.೩೬೬)*

ಕಲ್ಲಿನ (ತಲೆಯ!) ಮೇಲೆ, ಅರ್ಜುನನೇ, (ಮಣ್ಣಿನ) ಕೊಡವು
ಒಡೆಯಿತು. ಅದರಂತೆ ಅವನ ಅಂತಃಕರಣ (ಒಡೆದು) ಚೂರು
ಚೂರಾಯಿತು.

**ಕೇಳವಲೀ ಮುದುಕಿ**

ಕೇಳವಲೀ ಶಬ್ದದ ಪ್ರಯೋಗ ಜ್ಞಾನೇಶ್ವರೀಯಲ್ಲಿ ಒಮ್ಮೆ ಮಾತ್ರ ಬರುತ್ತದೆ.

*ನಾ ತರಿ ಕೇಳವಲೀ ನೋವರೀ ಸಂನ್ಯಾಸೀ ಕಾ ಜೇಯಾಪರಿಜ್*
*ತೈಸೀ ಸ ಮರತಾಜ್ ಕರೀ ಮೃತ್ಯು ಸೂಚನಾ (೧೩.೫೫೦)*

ವಿವಾಹಪೂರ್ವದಲ್ಲಿ ವಧೂವರರನ್ನು ಊಟಕ್ಕೆ ಕರೆದು ಹತ್ತಿರದ ಆಪ್ತರು ಉಡುಗೊರೆ ಕೊಡುವ ಪರಿಪಾಠ ಮಹಾರಾಷ್ಟ್ರದಲ್ಲಿದೆ. ಅದು 'ಕೇಳವಣ'.

*ಕೊಲಲುಂ ಪುಸಿಯಲುಮಾಗದು ಸಲಲಾಗದು ಪಜಿರಪಂಡಿರೊಳ್*
*ಕಳವನಣಂ (ಯಶೋಧರ ಚರಿತ ನಾಲ್ಕನೆಯ ಅವತಾರ)*

ಈ 'ಕಳವನಣ' ಅರ್ಥದಲ್ಲಿ ತುಸು ಮಾರ್ಪಾಡು ಹೊಂದಿ ಮರಾಠಿಯಲ್ಲಿ 'ಕೇಳವಣ' ಆಗಿ ಹೋಗಿದೆ.

ಈ ಸಂದರ್ಭ ತಿಳಿಯದ ಮರಾಠಿ ಪಂಡಿತರು ಹಳಗನ್ನಡದ 'ಕೆಳೆ' ಶಬ್ದದಿಂದ ಕೇಳವಣವನ್ನು ಸಿದ್ಧಿಸಿ 'ಕೇಳವಲೀ ನೋವರಿ' ಎಂದರೆ 'ಮದುವೆ ಗೊತ್ತಾದ ಕನ್ಯೆ' ಎಂದು ಅರ್ಥೈಸುತ್ತಾರೆ. ಹೀಗಾಗಿ 'ಮದುವೆ ಗೊತ್ತಾದ ಹುಡುಗಿ ತವರು ಮನೆಯ ಬಗ್ಗೆ ಉದಾಸೀನಳಾಗುತ್ತಾಳೆ. (ಸಂನ್ಯಾಸೀ?) ಅದರಂತೆ ಅವನು ಸಾವು ಒದಗುವ ಮುನ್ನವೇ ಅದರ ಬಗ್ಗೆ ತಿಳಿದು ಉದಾಸೀನನಿರುತ್ತಾನೆ' ಎಂದು ಅನ್ವಯ ಹೇಳುತ್ತಾರೆ. ಇದೊಂದು ಅಪಾರ್ಥದ ಮಾದರಿ. ಮದುವೆ ಗೊತ್ತಾದವಳು ಉದಾಸೀನಳಾಗಿರುವುದೆಂದರೇನು?

ಹಳಗನ್ನಡದಲ್ಲಿ 'ಕೆಲವನೆಂದು ಮುದುಕಂ' (ಶಬ್ದಮಣಿದರ್ಪಣ ಸೂತ್ರ ೩೩) ಹೀಗಾಗಿ ಕೇಳವಲೀ ಎಂದರೆ ಮುದುಕಿ.

'ಮುದಿ ಇದೆ (ರತಿಸುಖದ ಸಂದರ್ಭದಲ್ಲಿ) ಸನ್ಯಾಸಿನಿಯಾಗಿರುವಂತೆ' ಇತ್ಯಾದಿಯಾಗಿ ಭಾಷ್ಯವೇ ಸರಿಯಾದುದು.

**ಕೋಂಡಣೇಜ್ ಕೊಂಡು ಬಂಧಿಸು ಕಟ್ಟು**

ಹಳಗನ್ನಡ ನಡುಗನ್ನಡಗಳಿಗಾಗಿ ಸಾಕಷ್ಟು ಶಬ್ದಗಳನ್ನು ಕೊಟ್ಟು ಕನ್ನಡದಿಂದ ಮರೆಯಾಗಿ ಮರಾಠಿಯಲ್ಲಿ ಗಟ್ಟಿಯಾಗಿ ನೆಲೆಯೂರಿ ನಿಂತ ಪೂರ್ವಹಳಗನ್ನಡದ ಧಾತು 'ಕೊಂಡು' 'ಕೊಂದು'.

*ಆಹವನೀಯ ದಕ್ಷಿಣ ಗಾರ್ಹಪತ್ಯಂಗಳೆಂಬ ಮೂಱುಂ ಕೊಂಡಗಳೊಳ್ (ಪಂಪಭಾರತ ೬.೩೩ವ)* ಎಂಬುದಾಗಿ ಕೆರೆ, ಜಲಾಶಯ ಅರ್ಥದಲ್ಲಿ 'ಕೊಂಡ' ಶಬ್ದ ಕಾಣಸಿಕೊಂಡಿದೆ. ಕಿಟೆಲ್‌ರು ಹೇಳಿದ ಹಾಗೆ ಇದು 'ಕುಂಡ'ದ ತದ್ಭವವಲ್ಲ. 'ಕೊಂಡು' ಧಾತುವಿನಿಂದಾದ ನಾಮಪದ. ಪೆನುಗೊಂಡೆ, ಗೋವಳಕೊಂಡ, ಮುರುಗೊಂಡೆ, ಉರವಕೊಂಡ ಮೊದಲಾದ ಗ್ರಾಮನಾಮಗಳಲ್ಲಿಯ 'ಕೊಂಡ', 'ಕುಂಡ'ದ ತದ್ಭವವಿರಬಹುದೆಂದು ಬಿಟ್ಟರೂ, ಕನ್ನಡದಲ್ಲಿಯ ಕೆಲವು ಪ್ರಯೋಗಗಳು ಇಂತಿವೆ.

**ಕೊಂಡಿ :** ಕನ್ನಡದ ಕುಡು (ವಕ್ರಭಾವೇ) ದಿಂದ, ಚೇಳಿನ ಕೊಂಡಿಯಂತೆ ಇರುವ ಆಕಾರದಿಂದ, ಬಾಗಿಲಿಗೆ ಕೂಡಿಸಿದ 'ಕೊಂಡಿ' ತನ್ನ ಮೂಲ ಸೂಚಿಸುತ್ತದೆ ಎಂದು ಅನೇಕ ಪಂಡಿತರು ಭಾವಿಸಿದ್ದಾರೆ. ಆದರೆ ಕದ ಇಕ್ಕಿ, ಅದರಲ್ಲಿಯ ಚಿಲುಕವನ್ನೆಳೆದು ಸಿಕ್ಕಿಸುವ ಈ ಕೊಂಡಿಯ

ಪ್ರಯೋಜನ 'ದ್ವಾರಬಂಧನ'ವೂ ಹೌದು. ಮರಾಠಿಯಲ್ಲಿ ಇದರ ರೂಪ 'ಕೋಯಂಡಾ'.

**ಕೊಡತ :** ನಾಯಿಯ ಬಂಧನಕ್ಕಾಗಿ ಬಳಸಿದ ಕೋಲು.

**ಕೋಣ್ಪೆ :** ಕೋಟೆ ಅರ್ಥದಲ್ಲಿಯ ಈ ಶಬ್ದದ ಬಳಕೆ ಇಂತು. *ನೆಗೆದು ಸೊಗಯಿಸುವ ಕೋಣ್ಪೆಯೊಳ್ಪಿನಂ (ಪಂಪಭಾರತ ೪.೨೨)*

**ಕೊಂಡಪ್ಪ :** ಬಿಸಿಲಪ್ಪ, ಗಾಳಿಪ್ಪಗಳಂತೆ ಇದೂ ಒಂದು ವ್ಯಕ್ತಿ ನಾಮ. ಮಕ್ಕಳು ಗಟ್ಟಿಮುಟ್ಟಾಗಿರಲಿ ಎಂಬ ಭಾವನೆಯಿಂದ ಇಡುವ ಕಲ್ಲಪ್ಪ, ಗುಂಡಪ್ಪ ಹೆಸರುಗಳಾಗಲೀ, ಆಯುಷ್ಯ ದೀರ್ಘವಾಗಿರಲು ಎಂದು ಅಪೇಕ್ಷಿಸಿ ಇಡುವ ತಿಪ್ಪಣ್ಣ ಎಂಬ ಹೆಸರಾಗಲೀ ಉತ್ತರಕರ್ನಾಟಕದ ಜನಪದಕ್ಕೆ ಹೊಸತಲ್ಲ. ಬತ್ತದ ಜಲಾಶಯದಂತೆ ದೀರ್ಘಬಾಳಲಿ ಎಂದು ಹರಸಿ ಇಟ್ಟ ಹೆಸರು 'ಕೊಂಡಪ್ಪ'. ಮರಾಠಿಯಲ್ಲಿ 'ಕೋಂಡಿಬಾ'. ಈ ಬಗ್ಗೆ ಜ್ಞಾನೇಶ್ವರಿಯಲ್ಲಿಯ ಶಬ್ದಗಳಿವು.

**ಕೋಠಾ :** *ಬೈಲು ವಿಕೂನಿ ಕೋಠಾ (೧೪.೨೪೪)*
ಎತ್ತು ಮಾರಿ ಕೊಟ್ಟಿಗೆ

**ಕೋಂಢ :** *ಹೇ ದೇಹದುರ್ಗಿಚೇ ಡೊಂಡ ಇಂದ್ರಿಯಗ್ರಾಮಿಚೇ ಕೋಂಢ (೪.೨೪೭)*

(ಈ ಕಾಮಕ್ರೋಧವು) ಇದು ದೇಹವೆಂಬ ಕೋಟೆಯ ಬಂಡೆಗಲ್ಲು. ಇಂದ್ರಿಯಗಳೆಂಬ ಗ್ರಾಮದ (ಅಥವಾ ಇಂದ್ರಿಯಗಳ ಸಮೂಹದ) ಬಂದೀಶಾಲೆ.

ಮುಂದಿನ ಶಬ್ದಗಳನ್ನು ಪರಿಶೀಲಿಸುವ ಮುನ್ನ ಬಸವೇಶ್ವರರ ಈ ವಚನವನ್ನು ಗಮನಿಸಬೇಕು. *ಲಿಂಗಪಥವ ತಪ್ಪಿ ನಡೆವರು ಜಂಗಮ ಮುಖದಿಂದೆ ನಿಂದೆ ಬಂದರೆ ಕೊಂಡಮಾಜೆಂಗೆ ಹೋಹುದು ತಪ್ಪದು (ವ.೧೦೬)*

'ಕೊಂಡಮಾಜಿ' ಶಬ್ದಕ್ಕೆ 'ಬೆಟ್ಟದ ಇಳಕಲು?' ಎಂದು ಕಿಟೆಲ್‌ರು ಪ್ರಶ್ನೆಚಿಹ್ನೆಯೊಡನೆ ಅರ್ಥವಿಸಿದ್ದರೆ, ಆರ್.ಸಿ. ಹಿರೇಮಠರು 'ಕೊಂಡ ದರದಲ್ಲಿ ಮಾರುವದು' ಎಂದು ಅನ್ವಯ ಹೇಳುತ್ತಾರೆ. ನನಗನಿಸುವ ಮಟ್ಟಿಗೆ ಇದೊಂದು 'ಅಪ್ಪಟ' ಮರಾಠೀ ಶಬ್ದವಷ್ಟೇ ಅಲ್ಲ, ಅಂದಿನ ಶಿಕ್ಷೆಯ ಪದ್ಧತಿಯನ್ನು ಸೂಚಿಸುವ ಒಂದು ಸಂಕೇತ. ಕನ್ನಡದಿಂದ ಮರಾಠಿಗೆ ಹೋದ ಶಬ್ದ 'ಕೋಂಢ' (ಇದಕ್ಕೆ ಕೋಂಡ ಎಂಬ ಪಾಠಭೇದವೂ ಇದೆ). ಇದು ಬಂಧನವನ್ನು ಸೂಚಿಸಿದರೆ, ಮರಾಠಿಯ 'ಮಾರ' (ಹೊಡೆ) ಸೇರಿ 'ಕೋಂಡಮಾರ'ಕ್ಕೆ ಅತ್ತಿತ್ತ ಹೋಗದಂತೆ ಬಂಧಿಸಿ ಹೊಡೆಯುವುದ್ ಎಂಬರ್ಥ ವೇದ್ಯವಾಗುತ್ತದೆ. ಇಂದಿಗೆ ಈ ಶಬ್ದ ಮರಾಠಿಯಲ್ಲಿ ಆಲಂಕಾರಿಕವಾಗಿ 'ಮೂಕವೇದನೆ' 'ಹೇಳಲಾಗದ ಸಂಕಟ' ಎಂಬರ್ಥವನ್ನು ಹೊಂದಿದೆ. ಬಸವೇಶ್ವರರ ಮೇಲಿನ ವಚನದಲ್ಲೂ ಈ ಅರ್ಥವೇ ಅಭಿಪ್ರೇತವಿರಲು ಸಾಕು.

**ಕೋಂಡ, ಕೋಂದಾಟ, ಕೊದಾಕೋಂದೀ**

*ಇಹಿಜ್ ದೋಹೀಜ್ ಚಿ ಪರಿ ಸಂಸಾರು ಕೋಂದಲಾ ಅಸೇ (೧೫.೪೪೩)*

ಇವರಿಬ್ಬರಿಂದಲೇ (ಕ್ಷರ-ಅಕ್ಷರದಿಂದಲೇ) ಜಗತ್ತು (ಒತ್ತಿ) ತುಂಬಿಕೊಂಡಿದೆ.

*ಹ್ಯಣೌನಿ ರೇಲೀಜ್ ಠಾಜ್ ಕೋಂದೋನಿ ಅಪೇಜ್ ಆಪ (೧೮.೪೧೬)*

ಅಂತೆಯೇ (ಆಕಾಶವು) ತಾನೇ ತಾನಾಗಿ (ಒತ್ತಿ) ತುಂಬಿಕೊಂಡಿದೆಯೇ?

*ರಾಹೇ ಕಾಷ್ಠಾಚೀಯಾ ಮಾಂದುಸಾ ಕೋಂದಲೇಪಣೀಜ್ (೧೮.೪೧೩)*

(ಕಟ್ಟಿಗೆಯಿಂದ ಬೆಂಕಿಯನ್ನು ಬೇರ್ಪಡಿಸಿದ ಬಳಿಕ) ಆ ಬೆಂಕಿಯು ಕಟ್ಟಿಗೆಯ ಪೆಟ್ಟಿಗೆಯಲ್ಲಿ ಬದ್ಧವಾಗಿ ಉಳಿಯುವುದೇ?

*ತೈಸೇಜ್ ಆತ್ಮೇನಿ ಮಿಯಾಜ್ ಏಕೇಜ್ ಕೋಂದಲಾ ತೋ (೧೮.೧೧೬೦)*

ಕಲ್ಪಾಂತದಲ್ಲಿ ತಡೆದ ನೀರು ಪರಿಗಟ್ಟುವಂತೆ ನಾನು ಒಂದು ಆತ್ಮದಿಂದ (ಸರ್ವವನ್ನೂ) ಆವರಿಸಿ ಬಿಡುತ್ತೇನೆ.

*ಮಾಝಾರಿ ಚಿ ಕೋಂದಾಕೋಂದಿ (೧೨.೧೫೫)*

ನಡುವೆಯೇ ದಟ್ಟಣೆ.

*ಕಾಇ ಸೂರ್ಯಾಚಾಜ್ ಘರೀಜ್ ಪ್ರಕಾಶು ವಾತಿವೇರ್ಹೀಜ್*

*ಕಿಜ್‌ನ ನ ಲಪಿಜೇ ಚಿ ತರಿ ಅಂಧಾರೀಜ್ ಕೋಂಡ್ಯೆಲ ತೋ (೨.೩೬೦)*

ಸೂರ್ಯನ ಮನೆಯಲ್ಲಿ ಬೆಳಕು ಬತ್ತಿಯವರೆಗೋ (ಬತ್ತಿಯಿಂದಲೋ?) ಅದನ್ನು ಪಚ್ಚದಿದ್ದರೆ ಅವನು (ಸೂರ್ಯನು) ಅಂಧಃಕಾರದಿಂದ ಬಂಧಿತನಾಗುವನೋ?

*ತೇಜೇಜ್ ಕೊಂಧಾಟಲಿಯಾ ದಿಶಾ (೧.೧೩೯)*

ತೇಜಸ್ಸಿನಿಂದ ದಿಕ್ಕುಗಳು ಆವೃತ್ತವಾದವು.

ಇವೆಲ್ಲ ರೂಪಗಳನ್ನು ನೋಡಲಾಗಿ ತಮ್ಮಾದರದಿಂ ಮಾಲೆಗಟ್ಟಿ ತಂದು *ಗೊಂದಳಿಸಿ ಸಂದಣಿಸಿ ನೀಡಿದಾಗಳ್ (ಆದಿಪುರಾಣ ೬.೮೪೭)* ಎನ್ನುವಲ್ಲಿ ಬರುವ 'ಗೊಂದಳಿಸು' ಧಾತುವೂ, ಮರಾಠಿ 'ಕೋಂಡ', 'ಕೋಂದ'ಕ್ಕೆ ಮೂಲವಾದ ಪೂರ್ವ ಹಳಗನ್ನಡದ 'ಕೊಂಡು' 'ಕೊಂದು' ಧಾತುವೂ ಒಂದೇ ಮೂಲದಿಂದ ಹುಟ್ಟಿರಬಹುದೆಂದು ನನ್ನ ಅನಿಸಿಕೆಯಾಗಿದೆ. ಇಷ್ಟೇ ಏಕೆ, ಕನ್ನಡದ 'ಕುಂದಣ', 'ಕುಂದಣಿಗೆ' ಗಳೂ ಇದೇ ಮೂಲದವಿರಬಹುದು.

'ಜನಜಂಗುಳಿ' 'ಸಮ್ಮರ್ದ' 'ಗದ್ದಲ' (ಮಂದಿಯದು) ಅರ್ಥದಲ್ಲಿಯ 'ಗೊಂದಲ' ಶಬ್ದ 'ಗೋಂಧಳ'ವಾಗಿ ಜ್ಞಾನೇಶ್ವರಿಯಲ್ಲಿ ಬಳಸಿದುದವನ್ನು ಬೇರೆತೆ ಚರ್ಚಿಸಿದ್ದೇನೆ. 'ಕೊಂಡಮಾಜು' ಶಬ್ದದ ಇನ್ನೊಂದು ಬಳಕೆ ಅಲ್ಲಮಪ್ರಭುವಿನ ಈ ವಚನದಲ್ಲಿ:

*ಭಕ್ತಿಯನಜೆಯುರು, ಯುಕ್ತಿಯ ನಜೆಯುರು, ಮುಕ್ತಿಯನಜೆಯುರು ಮತ್ತೂ ಪಾದ-ಕೆಳಸುವರು ಹೋವರು, ಗುಹೇಶ್ವರ, ಸಲೆ ಕೊಂಡಮಾಜೆಂಗೆ.*

**ಕೋಂತ, ಕೊನ್ತ ಈಟಿ**

ಈಟಿ, ಭರ್ಚಿ, ಅರ್ಥದಲ್ಲಿಯ 'ಕೊನ್ತ' ಹಳಗನ್ನಡ ಶಬ್ದ ವಡ್ಡಾರಾಧನೆಯಲ್ಲಿ ಮೊದಲು ಕಾಣಸಿಗುತ್ತದೆ. ಅದರ ಪ್ರಯೋಗಗಳು ಹೀಗೆ.

*ಕೊನ್ತಗಳಿಂವಮಿಟ್ಟಿಗಳಿನ್ದಂ ಕರುಳ್ಗಳಂ ಸೋರೆಕುತ್ತುವುದುಂ (೯೬.೨೮)*
*ಕೊಂತಗಳಿಂದಮಿಟ್ಟಿಗಳಿಂದಂ ಕುತ್ತಿಸಿಜೆಂದಂ ಕರುಳ್‌ಮಾಲೆಗಳ್ ನೆಲದೊಳ್ ಸುರಿಯೆ (೧೨೭.೧೩)*

ಇವೆರಡೂ ಸಂದರ್ಭಗಳಲ್ಲಿ ಸಂಪಾದಕರಾದ ಡಿ.ಎಲ್. ನರಸಿಂಹಾಚಾರ್ಯರು 'ಒನಕೆ' ಎಂಬರ್ಥ ಕೊಟ್ಟಿದ್ದಾರೆ. ಈಟಿ, ಕೊನ್ತ ಇವು ದ್ವಿರುಕ್ತಿಕರವೆನಿಸಬಹುದಾದರೂ ಸೂಕ್ಷ್ಮ ಅರ್ಥಭೇದ ಇರಬಹುದಾಗಿದೆ. ಆದರೆ 'ಒನಕೆ' ಯಂತೂ (ಕುಟ್ಟುವ, ಒನೆಯುವ) ಅಲ್ಲ. ಬಸವೇಶ್ವರರ ಈ ವಚನ ನೋಡಬೇಕು.

*ಸಸ್ತಪಿದ್ದ ಮನೆಗೆ ಕೊನ್ತವ ತನ್ದನ್ತೆ (೧೦೦)*
*ಪಂಪರಾಮಾಯಣದಲ್ಲಿ ಹೀಗೆ ಬಳಸಲಾಗಿದೆ.*

*ಪರಚಕ್ರ ವಿಳಯಕೇತುವೊಲಿರೆ ಕೊಂತಂ ತಂನ ಹಸ್ತದೊಳ್ತಂನಬಲಂ (೧೪.೪೦)*
ಇನ್ನು ಜ್ಞಾನೇಶ್ವರಿಯಲ್ಲಿಯ ಪ್ರಯೋಗಗಳು ಹೀಗೆ.

*ಮಗ ಕೋಂತಾಜ್ ಪೇಜ್‌ವ ದೇಣೇಜ್ (೧೮.೬೪)*
ಬಳಿಕ ಈಟಿಗೆ ಅಪ್ಪುಗೆ ಕೊಡುವುದು (ತೆಕ್ಕೆ ಹಾಯುವುದು).

*ಡೋಳಾಜ್ ಹರಳು ನ ಥರೇ ಘಾಇಜ್ ಕೋಂತ ನ ಜಿರೇ (೧೩.೫೩೭ ಪಾಠಭೇದ)*
ಕಣ್ಣಿನಲ್ಲಿ ಹರಳು ಕರುಗುವುದಿಲ್ಲ. ಗಾಯದಲ್ಲಿ ಈಟಿ ಅರಗುವುದಿಲ್ಲ.

**ಕೋನ, ಕೋಣೆ ಓವರಿ ಕೋನಟಾ, ಗೂಡು**

*ಬಸದಿಯೊಳೊಂದು ಕೋಣೆಯೊಳೇ ಎಡೆಯೊಳ್ ನೀಮೊನ್ದು ಕೆಲದೊಳ್ ಮಗುಟಿದೆ (ವಡ್ಡಾರಾಧನೆ ೮೨.೨೮) ಮೂದೇವರುಮಂ ಮೂಜು ಕೋಣೆವುಗಿಸುಗುಮ್ ಅಸುರರ್ (ಶಬ್ದಮಣಿದರ್ಪಣ ಸೂತ್ರ ೨೩೮)* ಹೀಗೆ 'ಕೋಣೆ' ಶಬ್ದದ ಪ್ರಯೋಗಗಳು ಹಳಗನ್ನಡದಲ್ಲಿ ದೊರೆಯುತ್ತವೆ. ಆದರೆ ಇಂದು ನಾವು ಭಾವಿಸುವ ಹಾಗೆ 'ಮಲಗುವ ಕೋಣೆ' 'ಅಭ್ಯಾಸದ ಕೋಣೆ' ಗಳಲ್ಲಿಯಂತೆ ಅಂದು 'ಕೋಣೆ'ಗೆ ಅರ್ಥವಿರಲಿಲ್ಲ.

*'ಮೊನ್ನಂ ತುಡುಗೆಗಳುಮಂ ಬಸದಿಯೊಳಗೊಂದು ಕೋಣೆಯೊಳಿಟ್ಟಿರಿಸಿ ಬಂದು (ವಡ್ಡಾರಾಧನೆ ೧೭೭.೬) ಓವರಿಯೆಂದುಂ ಗಳಂತಿಯೆಂದುಂ ಕೋಣೆ*

*(ಕರ್ಣಾಟಕ ಶಬ್ದಸಾರ ೧೬.೩೦೮) ಓವರಿಯುದುಪಗ್ರಹಂ ಗರ್ಭಗೃಹಮಕ್ಕು (ಅಭಿನವಾಭಿದಾನಂ ೫೮.೮)*

ಬಸದಿ-ಗುಡಿಗಳಿಗೆ ಕಟ್ಟಿದ ಪ್ರಾಕಾರದ ಗೋಡೆಗಳಲ್ಲಿ, ಭಕ್ತರಿಗಾಗಿಯೋ ಅರ್ಚಕರಿಗಾಗಿಯೋ ಆಸರೆಗೆಂದು 'ಹುಟ್ಟಿಸಿದವು'ಗಳು 'ಕೋಣೆ'ಗಳು. ಎರಡನೆಯದಾಗಿ ದೇವರನ್ನು ಕೂಡ್ರಿಸುವ ಗರ್ಭಗೃಹವೂ 'ಕೋಣೆಯೇ'.

ಜ್ಞಾನೇಶ್ವರೀಯಲ್ಲಿ ಬರುವ ಶ್ರೀಕೃಷ್ಣಪರಮಾತ್ಮನ ಈ ತಕರಾರು ನೋಡಬೇಕು!

*ಮಾಝಿ ಮೂರ್ತಿ ಆಪಜವೀ ತೇ ಘರಾಚಾಿಜ್ ಕೋನಿಜ್ ಬೈಸವೀ ಆಣಿ ದೇವಾದೇವೀಜ್ ಯಾತ್ರೆ ಜಾವೆ (೧೩.೭೮೪)*

ನನ್ನ ಮೂರ್ತಿಯನ್ನು ದೊರಕಿಸುತ್ತಾರೆ. ಅದನ್ನು ಮನೆಯ ಕೋಣೆಯಲ್ಲಿ ಕೂಡ್ರಿಸುತ್ತಾರೆ. ಹಾಗೂ (ತಾವು) ಆದೇವ ಈ ದೇವಿಯೆಂದು ಯಾತ್ರೆಗೆ ಹೋಗುತ್ತಾರೆ.

'ಚಿಕ್ಕದು', 'ಹೀನತ್ವ' ಎಂದಾಗಿ ಸೂಚಿಸುವ 'ಟ' 'ಡ' ಪ್ರತ್ಯಯ ಹತ್ತಿ (ಉದಾ: ಪೋರ-ಪೋರಟಾ, ಘರ-ಘರಟೇಜ್, ರೋಪ-ರೋಪಟೇಜ್ ಇತ್ಯಾದಿ) 'ಕೋನ' ದಿಂದ 'ಕೋನಟಾ' (ದೇವರು ಕೂಡ್ರಿಸುವ ಗೂಡು) ಆಗಿದೆ. ಇಲ್ಲಿ 'ಮಾಡ' ಎನ್ನಬಹುದಿತ್ತು. ಆದರೆ ಪವಡಿಸುವ ಮಾಡಕ್ಕೆ (೪.೧೧೦ವ) ಎಂಬ ಪ್ರಯೋಗ ಪಂಪಭಾರತದಲ್ಲಿದೆ!

**ಕೋಪಟ ಕೊಂಪೆ, ಗುಡಿಸಲು; ಖೋಪೇ ಗುಡಿಲು ಗವಿ**

'ಪುಂಜೀಕರಣೇ' ಅರ್ಥದಲ್ಲಿಯ ಕುಪ್ಪು' ಹಳಗನ್ನಡ ಧಾತುವಿನಿಂದಾಗಲಿ 'ಗುಪ್ಪು' ಗುಮ್ಮಿ' ಅರ್ಥದ 'ಗುಪ್ಪು' ಶಬ್ದದಿಂದಾಗಲೀ ಬಂದಿರಬಹುದಾದ ಶಬ್ದ 'ಕೊಂಪೆ'. ಇದರ ಹಳಗನ್ನಡ ಪ್ರಯೋಗ ನನಗೆ ದೊರೆತಿಲ್ಲ. ಆದುಮಾತಿನಲ್ಲಿ ಮಾತ್ರ ಈ ಶಬ್ದ ಬಹಳ ಹಿಂದಿನಿಂದ ಇರಬೇಕು. ಜ್ಞಾನೇಶ್ವರೀಯಲ್ಲಿಯ 'ಕೋಂಪಟ' 'ಖೋಪೇ' ಶಬ್ದಗಳ ಪ್ರಯೋಗ ಹೀಗೆ.

*ಪ್ರಿಯೋತ್ತಮಾಚಾಿಜ್ ಕಂಠಿಜ್ ಪ್ರಮದಾ ಘೇ ಆಂಟೀ*
*ತೈಸಾ ಜೀವೇಸಿಜ್ ಕೋಂಪಟೀ ಧರುನಿ ಜೋತಾಕೇ (೧೩.೭೮೪)*

ಪ್ರಮದೆಯೊಬ್ಬಳು ತನ್ನ ಪ್ರಿಯೋತ್ತಮನ ಕಂಠಕ್ಕೆ ಅಂಟಿಕೊಳ್ಳುವಂತೆ (ಆಂಟೀ ಘೇ!) ಜೀವದ ಕೊಂಪೆಯನ್ನು ಗಟ್ಟಿ ಹಿಡಿದಿಡುವನು.

*ನೀಗೇ ಸಾಂಡೂನಿ ಕೊಂಪಟ ಭೋಗಕ್ಷಾಮ ಹೇಜ್ (೧೪.೨೧೬)*

ಭೋಗಿಸಲು ಯೋಗ್ಯವಾದ ಈ ಕೊಂಪೆಯನ್ನು ತ್ಯಜಿಸಿ ಹೋಗುವನು.

*ಆಕಾಶಾಚಿಯೇ ಖೋಜ್‌ಪೇ ವಾಯು ನಿವಾಂತೂ ಚಿ ಲೋಪೇ (೯.೧೦೨)*

ಆಕಾಶದ ಗುಡಿಲಿನಲ್ಲಿ ವಾಯುವು ನಿದಾನವಾಗಿ
ಲೋಪಗೊಳ್ಳುವುದು.

*ನ ವಟವೇ ಪೋಜ್‌ವೇಆಜ್‌ತು ವಾಘಾಚಿಯೇ (೧೮.೭೦೯)*

ಹುಲಿಯಲ್ಲಿ ಗವಿಯಲ್ಲಿ ಹೋಗಲಾಗದು.

**ಕೋರಣೆಜ್ ಕೊಚೆ ಕತ್ತರಿಸು ತೂತು ತೆಗೆ**

**ಕೋರಾಳೇಜ್ ಕೊಚಕಲು**

'ಖಂಡನ' ಅರ್ಥದಲ್ಲಿಯ ಈ ಹಳಗನ್ನಡ ಧಾತು ಕಿರೀಟಿಯ ಕಿರೀಟಮಂ *ಕೊಚೆದೊಡೆ (ಪಂಪಭಾರತ ೧೨.೨೦೧)* ಎಂದಾಗಿ ಪ್ರಯುಕ್ತವಾಗಿದೆ.

ಈ ಧಾತು ಇದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲಿಯೂ ಬಳಸಲಾಗಿದೆ.

*ಜೇಯಾ ಫುಲಾಚೇಜ್ ಗೋಮಟೇಜ್ ಘಾವೇ ತೋ ಕಿಜ್ ಕಾಷ್ಠೇಜ್ ಕೋರೂಜ್ ಧಾಜ್‌ವೇ ಪರಿಭ್ರಮರಪಣ ನವ್ಹೇ ಆಪ್ಹಾಜ್ ಜೇವಿ (೧೮.೭೧೬)*

ಯಾವುದಕ್ಕೆ ಹೂವಿನ ಸೌಂದರ್ಯವು ದೊರೆಯಬಹುದೋ
ಅದು ಕಟ್ಟಿಗೆ ಕೊರೆಯಲೂ ಹೋಗುವುದು. ಆದರೆ (ಅದರ)
ಭ್ರಮರತನವು ಅಂತಹದು ಅಲ್ಲ. ಹಾಗೆ

'ಕೊಚೆ' ಧಾತುವಿನಿಂದಾದ 'ಕೊಚಕಲು' ಶಬ್ದವೂ 'ಕೋರಾಳೇಜ್' ಆಗಿ ಮರಾಠಿಗೆ ಹೋಗಿದೆ.

*ಯರ್ಥವಿಜ್ ಫೋಡೀ ಕರಾಳೇಜ್ ಪಾಣೀ ಜೈಸೇಜ್ (೧೬.೧೧೧೬) (ಪಾಠಭೇದ. ಕೋಜ್‌ರಾಳೇಜ್)*

(ಕಣ್ಣಿಗೆ ಚುಚ್ಚದ) ನೀರು, ಇಲ್ಲದಿದ್ದರೆ (ಕಲ್ಲು) ಒಡೆದು
ಕೊರಕಲು ಮಾಡುವ ಹಾಗೆ-

**ಕೋಲಿತ, ಕೋಲತಿ, ಕೊಳ್ಳಿ ಉರಿಯುವ ಕಡ್ಡಿ, ಕಟ್ಟಿಗೆ**

*ಆಜಿಗೆ ಜಟ್ಟಿಗರಾಗಿ ಕೊಳ್ಳಿವೀಸಿಸುಗೆ* ಎಂದು ಪಂಪಭಾರತದಲ್ಲಿ (೧೦.೩೨) ಕೊಳ್ಳಿ ಶಬ್ದದ ಪ್ರಯೋಗವಾಗಿದೆ. ಇದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲಿಯೂ ಈ ಶಬ್ದ ಬಳಸಲಾಗಿದೆ.

*ಆಂಧಾರಿಜ್ ಭವಂಡಿತಾಜ್ ಕೋಲಿತೀ ತೇ ದೀಸೇ ಜೈಸೀ*
*ಆಇತೀ ರೇಖ ಸ್ಯೆಂಭ (೧೫.೧೩೬)*

ಕತ್ತಲೆಯಲ್ಲಿ ಕೊಳ್ಳಿಯನ್ನು ತಿರುಗಿಸಿದರೆ ಅದು ಅಖಂಡ ಗೆರೆ
ಆದಂತೆ ಕಾಣುವ ತೆರದಿಂದ-

ಇಲ್ಲಿಯ ಎರಡನೆಯ ಪ್ರಯೋಗ ಆಲಂಕಾರಿಕವಾಗಿದೆ. ಅದನ್ನು ಉಲ್ಲೇಖಿಸುವ ಮುನ್ನ ಇಂದಿನ ಮರಾಠಿಯಲ್ಲಿಯ ಹಾಗೂ ಉತ್ತರ ಕರ್ನಾಟಕ

ಆಡುಮಾತಿನಲ್ಲಿಯ ಕೆಲವು ಸಾಮ್ಯಸ್ಥಳಗಳನ್ನು ಗುರುತಿಸುವುದು ಅಗತ್ಯ. ರುಚಿಗಳಲ್ಲಿ ಅತಿಶಯವಾದಾಗ ಅದಕ್ಕೊಂದು ವಸ್ತುವನ್ನು ನಿರ್ದೇಶಿಸುವ ರೂಢಿ ಎರಡೂ ಭಾಷೆಗಳಲ್ಲಿದೆ. ಕೆಳಗಿನ ಸಾಮ್ಯಗಳನ್ನು ನೋಡಬೇಕು.

**ಕನ್ನಡ :** ಕಾರಬೇಂಕಿ; ಕಹಿವಿಷ; ಉಪ್ಪುಕಟಿ; ಹುಳಿಜೊಟ್ಟು ; ಹುಳಿಕೊಳ್ಳ

ಮರಾಠಿ : ತಿಖಟಜಾಳ; ಕಡು ಜಾರ (ಜಹರ) ; ಖಾರಟ ಢೋಣ; ಆಂಬಟಕೋಳ

ಈ ಹುಳಿಕೊಳ್ಳ ಜ್ಞಾನೇಶ್ವರೀಯಲ್ಲಿ ಹೇಗೆ ಬಂದಿದೆ, ನೋಡಿ!

*ಪೈಜ್ ಕೋಲಿತಾ ಹೀ ಹೂನು ಬಹುವಸೇಜ್ ದ್ರಾಕ್ಷಾಚೀಜ್ ಹಿರವೇಪಣ ಆಸೇ ತೇ ಪರಿಪಾಕೀಜ್ ಕಾಜ್ ಜೈಸೇಜ್ ಮಾಧುರ್ಯ ಹೋಏ (೧೮.೭೮೭)*

ಕೊಳ್ಳಗಿಂತಲೂ ಹೆಚ್ಚಾಗಿ ದ್ರಾಕ್ಷಿಯ ಹಸುರುತನ (ಹುಳಿತನ) ಇರುತ್ತದೆ. ಅದು ಹಣ್ಣಾದಾಗ ಸಿಹಿಯಾಗುತ್ತದೆ. ಹಾಗೆ-

**ಕೋಲು-ಕೋಲು ಬಡಿಗೆ**

ಕೇಲಂ ಮಾಡುವ ತಿಗುರಿಯ ಕೋಲಂತೆವೊಲ್ ಇರ್ದು (ಶಬ್ದಮಣಿದರ್ಪಣ ಸೂತ್ರ ೭೯) ಇದು ಬಡಿಗೆ, ದಂಡ ಅರ್ಥದಲ್ಲಿಯ 'ಕೋಲು' ಶಬ್ದದ ಹಳಗನ್ನಡ ಪ್ರಯೋಗ. ಇದು 'ಕೋಲು' ರೂಪದಲ್ಲಿ ಅದೇ ಅರ್ಥದಲ್ಲಿ ಮರಾಠಿಗೆ ಹೋಗಿದೆ.

ಲೀಳಾಚರಿತ್ರದಲ್ಲಿಯ ಉದಾಹರಣೆಗಳು:

*ಆಪುಲಿಏ ಹಾತೀಚಾ ಕೋಲು ಗೋಸಾವೀಯಾಚಿಯೇ ಶ್ರೀಕರೀಜ್ ವೋಳಾಗವಿಲಾ (ಪೂ. ೧೧೮)*

ತನ್ನ ಕೈಯಲ್ಲಿಯ ಕೋಲನ್ನು ಚಕ್ರಧರರ ಕೈಗೆ ಒಪ್ಪಿಸಿದನು.

*ಸರ್ವಜ್ಞೇಜ್ ಮ್ಹಣಿತಲೇಜ್: 'ಏಥೇಜ್ ಕರೂನಿ ದಾವಿವಾಪಾ'; ಮಗ ಸರಾಂತೇಯಾಚಾ ಕೋಲು ಕೇಲಾ (ಪೂ. ೧೩೭)*

ಚಕ್ರಧರರೆಂದರು : 'ಇಲ್ಲಿ ಮಾಡಿ ತೋರಿಸಪ್ಪ' ; ಬಳಿಕ ಸರಳವಾದ ಕೋಲು ಮಾಡಿದನು.

ಜ್ಞಾನೇಶ್ವರೀಯಲ್ಲಿಯ ಉದಾಹರಣೆ:

*ದೇವಾ ತುಜಸಿಜ್ ಆಮ್ಹೀ ಕೋಲು ಧರುಜ್ (೧೧.೫೪೧)*

ಭಗವಂತಾ, ನಿನ್ನೊಡನೆ ನಾವು ಕೋಲು ಹಿಡಿದೆವು (ಕೋಲಾಟ ಆಡಿದೆವು).

**ಕೋಳ, ಕೊಳ್, ಬೇಟೆಯಾಡಿ ಬದುಕುವ ಪಶು**

ವಿಷಮಸಿಂಹಂ ವ್ಯಾಘ್ರಶೂಕರ ವೃಷಾದಿಮೃಗಂ ಕೊಳ್ಕಗಂ ಎನಿಕ್ಕುಂ ಎಂದು ಮಂಗರಾಜನು ತನ್ನ ನಿಘಂಟುವಿನಲ್ಲಿ ಹೇಳುತ್ತಾನೆ. (೧೭೭) ಆದರೆ ಈ ಅರ್ಥದಲ್ಲಿಯ 'ಕೊಳ್' (ಕೊಳು ಅಥವಾ ಕೋಳ್) ಶಬ್ದ ಹಳಗನ್ನಡದಲ್ಲಿ

ಸ್ವತಂತ್ರವಾಗಿ ಬಳಕೆಯಾದದ್ದು ಕಂಡುಬಂದಿಲ್ಲ. ಜ್ಞಾನೇಶ್ವರೀಯಲ್ಲಿ ಮಾತ್ರ ಇದು ಹೀಗೆ ಬಂದಿದೆ.

*ಯಾ ಗ್ರಾಮಕೋಳಾಚಾಜಿ ರಾಇಜ್ ಜೈಸಾ ಮಿಳಣೀ ರಾಪಿ ನಾಹಿಜ್*
*ತೈಸಾ ಸ್ತ್ರೀವಿಷಇಜ್ ಕಾಜ್‌ಹಿಜ್ ವಿಚಾರೀನಾ (೧೩.೭೭೯)*

ಈ ಗ್ರಾಮಕೋಳ (ನಾಯಿ) ಗಳಲ್ಲಿ ಸಮಾಗಮಕ್ಕೆ (ಕೂಡುವುದಕ್ಕೆ) ಹೇಗೆ ಜಾಗ (ಅದರ ಬಂಧನ) ವಿಲ್ಲವೋ, ಹಾಗೆ (ಈ ಅಜ್ಞಾನಿಯು) ಹೆಣ್ಣಿನ ವಿಷಯದಲ್ಲಿ (ಬೇರೆ) ಯಾವ ವಿಚಾರವನ್ನೂ ಮಾಡುವುದಿಲ್ಲ.

**ಖುಪಣೇಜ್- ಕೂರ್ಮು - ಚುಚ್ಚು,**

**ಖುರಪಣೇಜ್-ಕೂರ್ಮು ನಾಶಪಡಿಸು**

ಕೂರಿಮುವೆನೆ ತೋಳಪವಾಡೆ (ಪಂಪ ಭಾರತ ೩.೨೦) ಎನ್ನುವಲ್ಲಿ 'ತೀಕ್ಷ್ಣತೆ' ಅರ್ಥದಲ್ಲಿಯ 'ಕೂರ್' ಶಬ್ದದಿಂದ 'ಹದನಮಾಡು' ಅರ್ಥದಲ್ಲಿಯ ಧಾತು ಸಾಧಿಸಿದ್ದನ್ನು ನೋಡಬಹುದಾಗಿದೆ. ಆದರೆ 'ಕೂರ್ಮು' ಧಾತು, ಅದೂ 'ಚುಚ್ಚು', 'ತಿವಿ' ಅರ್ಥದಲ್ಲಿ ಬಳಸಿದ ಪ್ರಯೋಗಗಳು ಕಂಡುಬಂದಿಲ್ಲ. ಈ ದೃಷ್ಟಿಯಿಂದ ಮರಾಠಿಯಲ್ಲಿಯ 'ಖುಪಣೇಜ್' ಧಾತುವು ಮಹತ್ವದಾಗಿದೆ. ಕನ್ನಡದಲ್ಲಿ 'ಕೂರ್ಮು' ಧಾತು ('ಚುಚ್ಚು' ಅರ್ಥದಲ್ಲಿ) ಇದ್ದುದನ್ನು ಅದು ಸ್ಪಷ್ಟಗೊಳಿಸುತ್ತದೆ. ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗಗಳನ್ನು ನೋಡಬೇಕು.

*ಕಿಂಬಹುನಾ ಪ್ರಿಯಪಣೇಜ್ ಕೋಣ್ಹಾತೇಜ್ ಹಿಜ್ ಝಾಕಲುಜ್ ನೇಜೇ*
*ಯಥಾರ್ಥು ತರ್‍ಹೀಜ್ ಖುಪಣೇಜ್ ನಾಹಿಜ್ ಕವ್ಹಣಾಜ್ (೧೬.೧೧೯)*

ಹೆಚ್ಚೇನು (ಹೇಳಲಿ?) ಪ್ರೀತಿಯಿಂದ (ಹೇಳಿದುದು) ಯಾರನ್ನೂ ಮುಟ್ಟಿ ಉಳಿಸುವುದಿಲ್ಲ. ಯಥಾರ್ಥವಾಗಿದ್ದರೂ ಯಾರಿಗೂ ಚುಚ್ಚುವುದಿಲ್ಲ.

*ತೇವಿಜ್ ಚಿ ಸಂಜಯೋ ಮ್ಹಣೇ ಚಿತ್ತೀಜ್ ಹಾ ಅತಿಸೋ ಯಾ ನೃಪತಿ ಖುಪೈಲ*
*ಹ್ಮಣೌನಿ ಕೇತಿ ಬೋಲೋಜ್ ಅಸೋ (೧೭.೪೨೮)*

ಅದರಂತೆ ಸಂಜಯನು ಮನಸಿನಲ್ಲಿ ಅಂದದ್ದು (ಅರ್ಜುನನ ಒಳ್ಳೆಯತನದ ಬಗ್ಗೆ ಹೇಳಿದ್ದು) ಇದು ಅತಿಯಾಯಿತು.ಈ ಅರಸನಿಗೆ (ಧೃತರಾಷ್ಟ್ರನಿಗೆ) ಚುಚ್ಚಬಹುದಾದುದನ್ನು ಎಷ್ಟೊಂದು ಹೇಳಿದೆನಲ್ಲ!

ಇನ್ನು 'ನಾಶಪಡಿಸು' ಅರ್ಥದಲ್ಲಿಯ 'ಖುರಪಣೇ'ಯ ಪ್ರಯೋಗ ಹೀಗೆ.

*ಧರ್ಮಧೇನು ಖುರಪೇಜ್ ಸೂಟಲೀಜ್ ಜೈಸೇಜ್ (೧೬ ೩.೨೭)*

ದೇವರಿಗೆ ಬಿಟ್ಟ ಆವು (ಅಲ್ಲಿಲ್ಲಿ ಬಾಯಿಹಾಕಿ) ನಾಶಪಡಿಸುತ್ತ ಹೊರಟ ಹಾಗೆ-

**ಹೋಡೇ ಕೋರಡಾ ಕೊರಡು, ಒಣ, ವ್ಯರ್ಥ**

ಮರಾಠಿಯಲ್ಲಿ ಬರುವ 'ವ್ಯರ್ಥ' ಅರ್ಥದ ಕೋರಡಾ ಶಬ್ದದ ಮೂಲವನ್ನು ಕನ್ನಡದಲ್ಲಿ ಗುರುತಿಸುವಾಗ ಪುನರಾವಲೋಕನ ಅವಶ್ಯವೆನಿಸುತ್ತದೆ. 'ಕೊರಡು', 'ಕೊಱಡು' ಶಬ್ದಗಳು 'ಕೊರೆ' ಧಾತುವಿನಿಂದ ಸಿದ್ಧವಾಗಿರಬಹುದು, ಮರ 'ಕೊರೆ'ದಾಗ ಉಂಟಾದ ತುಂಡು 'ಕೊರಡು', ಎಂದೂ ಅನಿಸಬಹುದು. ನೀನೊಲಿದರೆ ಕೊರಡು ಕೊನರುವುದಯ್ಯಾ ಎಂಬ ಉದಾಹರಣೆಯೂ ನೆನಪಾಗಬಹುದು. 'ಕೊರೆ'ದದ್ದು 'ಕೊರಡು' ಸರಿ. ಅದು ಮರಾಠಿಯಲ್ಲಿ 'ಹೋಡಾ' ಆಗಿದೆ. ಆದರೆ ಮರಾಠಿಯಲ್ಲಿ ಬರುವ 'ವ್ಯರ್ಥ' ಅರ್ಥಕ್ಕೆ ಆಧಾರವೇನು?

ಈ ದೃಷ್ಟಿಯಿಂದ 'ರಸವಿಹೀನೇ' ಅರ್ಥದಲ್ಲಿಯ 'ಕೊರಗು' ಧಾತುವನ್ನು ವಿಶ್ಲೇಷಿಸಬೇಕು. 'ಒಣಗು' 'ಮಿರುಗು' ಮೊದಲಾದ ಧಾತುಗಳಲ್ಲಿ 'ಒಣ', 'ಮಿರ್' ಇವು ಮೂಲಸತ್ತ್ವಗಳೆಂದು ಒಪ್ಪಿಕೊಳ್ಳಬಹುದಾದರೆ 'ಕೊರಗು' ಕೂಡ 'ಕೊರ+ಆಗು' ಎಂದ ವಿಭಜಿಸಬಹುದಾಗಿದೆ. (ಎಲ್ಲ -ಆಗು ಅಂತ್ಯದ ಧಾತುಗಳನ್ನು ಹೀಗೆ ಒಡೆಯುವುದು ಸಾಧ್ಯವೇ, ಎಂಬುದು ಅಭ್ಯಸಿಸಬೇಕಾದ ವಿಷಯ) 'ಪೋ' ಅರ್ಥದ್ದೇ 'ಪೋಗು', 'ಮಡು' ಹಾಗೂ 'ಮಡುಗು', 'ತೊಡು' 'ಹಾಗೂ 'ತೊಡಗು' ('ದಿಂದ' ಎನುವ ಅರ್ಥದಲ್ಲಿಯ ಪಂಚಮಿಾ ಭಾವದ ಹಳಗನ್ನಡ ಅವ್ಯಯ 'ತೊಟ್ಟು' ನೆನಪಿಸಿಕೊಳ್ಳಬಹುದು) ಹೀಗೆ ಇನ್ನೂ ಎಷ್ಟೋ ಧಾತುಗಳನ್ನು ಉದಾಹರಿಸಬಹುದಾಗಿದೆ.

ಇನ್ನು ಮರಾಠಿಯಲ್ಲಿಯ ಉದಾಹರಣೆಗಳನ್ನು ಪರಿಶೀಲಿಸಬೇಕು.

*ಹಿಂಡಣವಾರಾ ಕೋರಡಾ ತೈಸಾ ಜೀಯಾ (೧೩.೬೮೮)*
ವ್ಯರ್ಥವಾಗಿ ಸಂಚರಿಸುವ ಒಣ ಗಾಳಿಯಂತೆ.
*ವಾಢತೀ ಆಸ ಜೈಸೀ ಕೋರಡೀ ನಿದೈವಾಚೀ (೧೫.೨೫೧)*
ದುರ್ದೈವಿಯ ಒಣ ಆಸೆಯು ಬೆಳೆದಂತೆ-
*ಮಗ ಕೋರಡಿಯೇಚಿ ಆಶೇಚೀ ಸಂತತೀ (೧೬.೩೩೬ ಪಾಠಭೇದ)*
ಬಳಿಕ ಒಣ ಆಶೆಯ ಸಂತತಿಯು-
*ಕೋರಡಾ ನಾ ವೋಲಾ ಉಪೇಗಾ ಅಧಿ ಗೇಲಾ (೧೮.೫೬೨)*
ಒಣವೇ ಇರಲಿ, ಹಸಿಯದೇ ಇರಲಿ ಉಪಯೋಗಕ್ಕೆ ಬಾರದಂತೆ-

ಮುಂದಿನ ಉದಾಹರಣೆ ಹೇಳುವ ಮೊದಲು 'ವ್ಯರ್ಥ' ಅರ್ಥದಲ್ಲಿಯ 'ಒಣ'ದ ಬಗ್ಗೆ ಒಂದಿಷ್ಟು ಯೋಚಿಸಬೇಕು. ಭಿನ್ನ ಅರ್ಥದ ಒಂದೇ ಮೂಲ ಧಾತು ದೊರೆಯುವವರೆಗೆ ಅಲಂಕಾರಿಕವಾಗಿ 'ಒಣ=ವ್ಯರ್ಥ' ಹೀಗೆ ಶಬ್ದಪ್ರಯೋಗ ಆಡುಮಾತಿನಲ್ಲಿ ಬಂದಿತೆಂದು ತಿಳಿಯುವುದು ಯುಕ್ತವಾದೀತು. ಇಂತಹದೇ ಇಲ್ಲಿ ನೆನಪಾಗುವ ಇನ್ನೊಂದು ಹಳಗನ್ನಡ ಶಬ್ದ 'ಬಜೆವು'. ಕುಡಿವನೋ ಲವಣಾಬ್ಧಿಯನೀಗಡೆ ತೋಳೊಳ್ ತುಳ್ಕಿ ಬಜೆದು ಮಾಪ್ಪನೊ (ಆದಿಪುರಾಣ

೧೨.೮೭) ಎಂಬಲ್ಲಿ ಬರುವ 'ತೆರವು' ಅರ್ಥದ 'ಬಜೆದು' ಶಬ್ದ ಇಂದಿಗೂ ರೂಢಿಯಲ್ಲಿದೆ. ಬರಿವೋ ಬರಿದು, ತೆರವೋ ತೆರವು ಬಡವರ ಬಗ್ಗರ ತುತ್ತಿನ ಚೀಲಾ (ಅಂಬಿಕಾತನಯದತ್ತ). ಈ 'ಬರಿ' ಶಬ್ದಕ್ಕೂ 'ವ್ಯರ್ಥ'ವೆಂಬ ಅರ್ಥವಿದೆ. ಬಜೆವೆ ತಿನುತಿರ್ಪವನ್ ಎಂದು ಕೇಶಿರಾಜನೂ ಉದಾಹರಣೆ ಕೊಡುತ್ತಾನೆ. (ಸೂತ್ರ ೨೧೭). ಈ ವಾಕ್ಪ್ರಯೋಗ ಮರಾಠಿಯಿಂದ ಮುಂದೆ ಹಿಂದೀ ಆಡುಮಾತಿಗೂ ಹೋಗಿದೆಯೆಂದರೆ ಮೋಜೆನಿಸುವುದಿಲ್ಲವೇ? *(ಖಾಲೀ ಪೀಲೀ ಸತಾತಾ ಹೈ)*

ಇನ್ನು ಕನ್ನಡದ 'ಕೊರಡು' ಅರ್ಥದಲ್ಲಿಯ ಮರಾಠಿಯ 'ಖೋಡಾ'.

*ತೇಥ ಚಂದನಾಚೆ ಖೋಡೇ ನ ಲೇ ಚಿ ತೋ (೧೮.೮೯೪)*
ಅಲ್ಲಿ ಚಂದನದ ಕೊರಡನ್ನು ಅವನು ಧರಿಸುವುದಿಲ್ಲ

ಪೂಜೆಯಾದ ಬಳಿಕ ಬ್ರಾಹ್ಮಣರು ಭಗವಂತನಿಗೆ ಅರ್ಪಿಸಿದ ಶ್ರೀಗಂಧವನ್ನು ಮೈಗೆ ಪೂಸಿಕೊಳ್ಳುವರಷ್ಟೇ? ಮೂರ್ತಿಪೂಜೆಯಲ್ಲಿ ಕಾಮ್ಯತೆ ಇದೆ. ಜ್ಞಾನೇಶ್ವರರಿಗೆ ಅಭಿಪ್ರೇತವಿದ್ದ ಮುಮುಕ್ಷುವು ಕಾಮ್ಯಕ್ಕೆ ಹೊರತಾಗಿದ್ದಾನೆ. ಅಂತೆಯೇ ಅವನು ಶ್ರೀಗಂಧವನ್ನೂ ಲೇಪಿಸಿಕೊಳ್ಳುವುದಿಲ್ಲವೆಂದು ಅವರ ಭಾವನೆ. ದಾಂಡೇಕರ ಮೊದಲಾದವರಿಗೆ 'ಗಂಧ ಕೊರಡು' (ಶಬ್ದಪ್ರಯೋಗ) ಗೊತ್ತಿಲ್ಲದ್ದರಿಂದ ಅವರು ಖೋಡಾ ಎಂದರೆ 'ಅಪರಾಧಿಗಳ ಕೈಕಾಲು ಸಿಗಿಸುವುದಕ್ಕಾಗಿ ಮಾಡಿದ ಕಟ್ಟಿಗೆಯ ಚೌಕಟ್ಟು' ಎಂದು ಅರ್ಥವಿಸಿ, ಓವಿಯ ಅಪಾರ್ಥ ಮಾಡಿದ್ದಾರೆ.

ಖೋಡಾ ಶಬ್ದದ ಬಳಕೆಯ ಇನ್ನೊಂದು 'ಅನರ್ಥಕರ' ಓವಿ ಹೀಗೆ :

*ಸಮರ್ಥು ಆಪುಲಾ ಖೋಡಾ ಸೀಸೇ ವಾಹಾವೀ ಜೈಸಾ ಹೋಡಾ (೧೮.೧೦೫೭)*
ಸಮರ್ಥನು (ಶ್ರೀಮಂತನು) ತನ್ನ ಕೊರಡನ್ನು (ತಾನು ಹೊರದೆಯೆ) ಹೊಲೆಯನ ತಲೆಯ ಮೇಲೆ ಹೊರೆಸಿದಂತೆ

ಇಲ್ಲೂ 'ಖೋಡಾ' ಎಂದರೆ ... ಕಟ್ಟಿಗೆಯ ಚೌಕಟ್ಟು' ಎಂದೇ ಅರ್ಥೈಸಲಾಗಿದೆ.

ಖೋಡಾ (ಕೊರಡು = ಕಟ್ಟಿಗೆಯ ತುಂಡು) ಹಾಗೂ ಕೋರಡಾ (ಕೊರಡು=ಒಣ) ಈ ಶಬ್ದಗಳ ಅರ್ಥಭೇದ ಸ್ಪಷ್ಟ ಪಡಿಸಿದ ಬಳಿಕ ಒಂದು ಸ್ವಾರಸ್ಯಕರ, ಎರಡೂ ಜನಪದ ಭಾಷೆಗಳಲ್ಲಿಯ ಸಮಾಂತರ ವಾಕ್‌ಪ್ರಯೋಗವನ್ನು ಇಲ್ಲಿ ಕೊಡುವುದು ಪ್ರಸ್ತುತವಾದೀತು.

ಉತ್ತರ ಕರ್ನಾಟಕದ ರೈತಾಪಿ ಜನರಲ್ಲಿ 'ಒಣಿಗ್ಗೆ' ಎಂದೊಂದು ಶಬ್ದಪ್ರಯೋಗವಿದೆ. 'ವ್ಯಂಜನ', 'ಭಕ್ಕರಿಯೊಡನೆ ಬಾಡಿಸಿಕೊಳ್ಳಲು ಬೇಕಾದ ಸಾರು, ಪಲ್ಯ ಇತ್ಯಾದಿ' ಎಂದು ಅದರ ಅರ್ಥ. ಮಹಾರಾಷ್ಟ್ರದ ರೈತರಲ್ಲಿ (ಕೃಷ್ಣಾ-ಗೋದಾವರಿ ಕಣಿವೆಯ ಪ್ರದೇಶದಲ್ಲಿ) ಅದೇ ಅರ್ಥದಲ್ಲಿ 'ಕೋರಡ್ಯಾಸ' ಎಂಬ ಶಬ್ದ ಪ್ರಯೋಗವಿದೆ. 'ಒಣ' ಶಬ್ದದ ಚತುರ್ಥಿಏಕವಚನ ಒಣಕ್ಕೆ, 'ಒಣಿಗ್ಗೆ'. ಹಾಗೆಯೇ 'ಕೋರಡೆ' ಶಬ್ದದ ಚತುರ್ಥಿ ಏಕವಚನ 'ಕೋರಡ್ಯಾಸ.' ಇದರ

ಮೂಲವೇನಿರಬಹುದು?

ವ್ಯಂಜನವಿಲ್ಲದ ಭಕ್ಕರಿ 'ಒಣ' ಭಕ್ಕರಿ. 'ಕೋರಡೀ' ಭಾಕರ. ಕನ್ನಡದಲ್ಲಿ *'ಇಂದ ನಿಮ್ಮ ಮನ್ಯಾಗ ಒಣಗ್ಗೆ (ಒಣಕ್ಕೆ, ಒಣದಕ್ಕೆ) ಊಟ ಮಾಡಿದೀ? ಇದಕ್ಕೆ ಆಜ ತುಮಚ್ಯಾ ಘರಾಜ್ತ ಕೋರಡ್ಯಾಸ ಕಾಯ ಕೇಲೇಸ?* ಇದು ಸಮಾಂತರ, ರೂಢ ಮರಾಠಿ ಪ್ರಯೋಗ.

'ಗುರು ಕೋರಾನ್ನದಲ್ಲಿ ಭಿಕ್ಷ' ಎಂದು ಬೇಡುವ ಜಂಗಮರನ್ನು ನಾವೆಲ್ಲಿ ನೋಡಿಲ್ಲ? 'ಕೋರಾನ್ನ' ವೆಂದರೆ 'ಒಣ' ಅನ್ನ. 'ಬೇಯಿಸದ' ಅನ್ನ. ಅಂದರೆ ಧಾನ್ಯ ಹಿಟ್ಟು ಇತ್ಯಾದಿ. ಈ 'ಕೋರಾನ್ನ' ಶಬ್ದ ಜ್ಞಾನೇಶ್ವರೀಯಲ್ಲಿ ಒಮ್ಮೆ ಬಂದಿದೆ.

*ಮಾರ್ಥೀಯಾ ಆಣಿ ಭಕ್ತಾಜ್ ಸಜ್ವಸಾರೀಚೀ ಚಿಂತಾ*
*ಕಾಇ ಸಮರ್ಥಾಚೀ ಕಾಂತಾ ಕೋರಾನ್ನ ಮಾಗೇ (೧೨.೮೫ ಪಾರಭೇದ)*

ಅಲ್ಲದೆ (ಅದೂ) ನನ್ನ ಭಕ್ತನಿಗೆ ಸಂಸಾರದ ಚಿಂತೆಯೇ?
ಅರಸನ (ಶ್ರೀಮಂತನ) ಹೆಂಡತಿ ಕೋರಾನ್ನ ಬೇಡುತ್ತಾಳೆಯೇ?

ಗೋದಾವರಿಯ ಸೀಮೆಯುವರೆಗೆ ಪ್ರಚಾರ ಹೊಂದಿದ ವೀರಶೈವಧರ್ಮದ ಇದೊಂದು ಕುರುಹು.

ಈ ಸಂದರ್ಭದಲ್ಲಿ ನಾವು ಕೈಬಿಡುತ್ತಿರುವ ಒಂದು ಒಳ್ಳೆಯ ಶಬ್ದವನ್ನು (ವಸ್ತುವನ್ನು ಕೂಡ!) ನೆನಪಿಸಿಕೊಳ್ಳಬೇಕಾಗಿದೆ. ಅದು ಕೊಣವಿಗೆ-ಕೊಣಬಿಗೆ. ಸಾಹಿತ್ಯ ಪರಿಷತ್ತಿನ ಕೋಶಕಾರರಿಗೆ ಮೂಲ ತಿಳಿಯದೆ ಹೋಗಿದೆ. ಕೃಷ್ಣಾನದಿಯ ಉತ್ತರದ ಜನಪದ ಭಾಷೆಯಲ್ಲಿ ಇದರ ರೂಪ ಮೂಲಕ್ಕೆ ಹತ್ತಿರವಾಗಿದೆ. ಅವರು ಇದಕ್ಕೆ ಹೇಳುವುದು ಕೊಡ್ಡಾವಿಗೆ. ಹಿಟ್ಟು ನೆನೆಸಿ ನಾದಿಕೊಳ್ಳಲು ಬಳಸುವ ಈ ಸಾಧನದ ಮೂಲ ರೂಪ ಕೊರಡು+ಅವುಗೆ. ಇದು ಮರಾಠಿಯಲ್ಲಿ ಅನುವಾದಿತಗೊಂಡು (ಕಾಷ್ಠಪಾತ್ರದ ತದ್ಭವದಂತೆ) 'ಕಾಠವಟ' ಆಗಿದೆ.

**ಪೋಲ ಬುಂಥಿ-ಕೊರಳ ಪಟ್ಟಿ, ಮೋರೆ ಮುಚ್ಚುವ ಬಟ್ಟೆ**

*ಕೊರಲಿಂಚರದ ಸರಮ ಸಪಿಕಪಿಗಿವರೊಳ್ (ಪಂಪಭಾರತ ೫.೫೭)* ಇಲ್ಲಿ 'ಕಂಠ' ಅರ್ಥ ಕೊಡುವ 'ಕೊರಲ್' ಶಬ್ದ ಹಾಗೂ *ಪಟ್ಟೆಗೆಯುನುಟ್ಟು ಮೈಯುಂ ಪೂಸಿ (ವಡ್ಡಾರಾಧನೆ ೧೩೩.೧)* ಇಲ್ಲಿ ಬರುವ 'ವಸ್ತ್ರ' ಅರ್ಥದ 'ಪಟ್ಟೆಗೆ'ಯ ಮೂಲವಿರಬಹುದಾದ 'ಪಟ್ಟೆ' ಶಬ್ದ ('ಬಟ್ಟೆ' ಶಬ್ದದ ಮೂಲವೂ ಇದೇ ಇರಬಹುದಾಗಿದೆ. 'ವಸ್ತ್ರ'ದ ತದ್ಭವ ಇದು ಆಗಿರಲಾರದು) ಸೇರಿ 'ಕೊರಲ್‌ಪಟ್ಟೆ'ಯಿಂದ ಮರಾಠಿಯಲ್ಲಿ ಪೋಲಬುಂಥಿ ಶಬ್ದ ಕಾಣಿಸಿಕೊಂಡಿದೆ. ಲೀಳಾಚರಿತ್ರದಲ್ಲಿಯ ಏಕಮಾತ್ರ ಪ್ರಯೋಗವಿದು.

ರಿಧಪುರ (ಜಿಲ್ಲಾ ಅಮರಾವತಿ) ಯಲ್ಲಿ ನಡೆಯಿತೆನ್ನಲಾದ ಲೀಳೆಯಿದು. ಗೋವಿಂದಪ್ರಭುಗಳು ಚಕ್ರಧರರ ಗುರುಗಳು.

*(ಶ್ರೀಪ್ರಭು) ಮಗಭೀತರಿ ಬೀಜೇಜ್ ಕೇಲೀಜ್; ಗೊಸಾವೀಹೀಜ್ ಭೀತರಿ*

*ಬೀಜೇಜ್ ಕೇಲೇಜ್; ಪೋಲು ಬುಂಥಿ ಘಾತಲೀ (ಪೂ. ೬೫)*

(ಗೋವಿಂದ ಪ್ರಭುಗಳು) ಬಳಿಕ ಒಳಗೆ ಬಿಜಯಂಗೈಸಿದರು. ಚಕ್ರಧರರೂ ಒಳಗೆ ಬಿಜಯಂಗೈಸಿದರು. ಕೊರಳಮಟ್ಟಿ ಹಾಕಿಕೊಂಡರು.

ಸಾಧನೆಯ ಸಮಯದಲ್ಲಿ ತಲೆ-ಮೋರೆ ಮುಚ್ಚಿಕೊಳ್ಳುವ ಕೊರಳವರೆಗಿನ ವಸ್ತ್ರ ಮಹಾನುಭಾವ ಸಂಪ್ರದಾಯದ ವೈಶಿಷ್ಟ್ಯವಾಗಿರಬೇಕು. ಜ್ಞಾನೇಶ್ವರೀಯಲ್ಲಿ ಈ ಶಬ್ದ ಬರುವುದಿಲ್ಲ. ಆದರೆ 'ಬಟ್ಟೆ' ಅರ್ಥದಲ್ಲಿಯ 'ಬುಂಥಿ' ಶಬ್ದ ಪ್ರಯೋಗ ಅಲ್ಲಿ ಎರಡು ಸಲ ಬಂದಿದೆ.

*ನಾತರಿ ಕವಳಿ ಚಾ ಗಾಭಾ ಬೂಂಥಿ ಸಾಂಡೂನಿ ಉಭಾ (೬.೨೯೫)*

ಅಥವಾ ಬಾಳೆಯದಿಂಡು ವಸ್ತ್ರವನ್ನು ಕಳಚಿ (ಹೊರಗಿನ ಆವರಣವನ್ನು ಉಚ್ಚಿ) ನಿಂತಂತೆ

*ಜೈಸೀ ಅಭ್ರಾಳೀಚೀ ಬೂಂಥಿ ಕರೂನಿ ರಾಹೇ ಗಭಸ್ತಿ*
*ಮಗ ಫೀಟಲೇಯಾ ದೀಪ್ತಿ ಧರೂಜ್ ನೈಯೇ (೬.೨೫೧)*

ಮೋಡದ ಬಟ್ಟೆಯ (ಮುಸುಕು) ಮಾಡಿಕೊಂಡು ಸೂರ್ಯನಿರುತ್ತಾನೆ. ಅದನ್ನು ಕಳೆದ ಬಳಿಕ (ಅವನ) ತೇಜವನ್ನು ಹಿಡಿಯಲು ಬರುವುದಿಲ್ಲ. ಹಾಗೆ-

'ಬುಂಥಿ' ಶಬ್ದದ ಸಿದ್ಧಿಗೆ ಇನ್ನೊಂದು ಪರ್ಯಾಯವನ್ನೂ ಸೂಚಿಸಬಯಸುತ್ತೇನೆ.

'ಮುಚ್ಚು' 'ನಿರೋಧಾವರಣ' ಅರ್ಥದಲ್ಲಿಯ 'ಮುತ್ತು' ಧಾತುವಿನಿಂದಾದ ನಾಮಪದದಿಂದ 'ಬುಂಥಿ' ಶಬ್ದ ಹೋಗಿರಬಹುದಾಗಿದೆ.

*ನರನಂದನನ ರಥಮಂ ಸುತ್ತಿ ಮುತ್ತಿಕೊಂಡು (ಪಂಪಭಾರತ ೧೧.೧೮೦ವ)*
*ಮುತ್ತಿದನೋ? ಇಂದೆ ಕೋಂಟೆ ಧೂಳಿಪಟಂ (ಶಬ್ದಮಣಿದರ್ಪಣ ೮೯)*

ಇವು 'ಮುತ್ತು' ಧಾತುವಿನ ಉದಾಹರಣೆಗಳಾಗಿವೆ.

ಮರಾಠಿಯ ಮೂರೂ ಉದಾಹರಣೆಗಳಲ್ಲಿ ವಸ್ತ್ರ, ಬಟ್ಟೆ ಅರ್ಥಗಳನ್ನು ಬಿಟ್ಟು, 'ಮುತ್ತು'ದಿಂದ ಬೆಳೆದ 'ಮುಚ್ಚು' 'ಮುಸುಕು' ಅರ್ಥಬಳಸಿದಲ್ಲಿ ಹೆಚ್ಚು ಸಮರ್ಪಕವೆನಿಸುತ್ತದೆ.

**ಗಂಡು-ಗಂಡ, ಪುರುಷ, ಬಿರುಸು**

ಇದು ಮೂಲ ಸಂಸ್ಕೃತ ಶಬ್ದವೆಂದು ಕೇಶಿರಾಜ ಹೇಳುತ್ತಾನೆ. ಆದರೆ ಜ್ಞಾನೇಶ್ವರೀಯ ವ್ಯಾಖ್ಯಾನಕಾರರಿಗಾಗಲೀ ಭಾಷಾತಜ್ಞರಿಗಾಗಲೀ ಇದು ಸಮ್ಮತವೆನಿಸಿರಲಿಕ್ಕಿಲ್ಲ. ಒಂದು ಸಂದರ್ಭದಲ್ಲಿ (೧೬.೨೩೪) 'ಆವೇಗ'ವೆಂದೂ ಇನ್ನೊಂದು ಸಂದರ್ಭದಲ್ಲಿ (೧೩.೭೧೬) ಸೊಕ್ಕಿದವನೆಂದೂ ಅವರು ಅರ್ಥ ಹೇಳುತ್ತಾರೆ. ಒಂದು ಸಂಸ್ಕೃತಜನ್ಯಭಾಷೆಗೇ ಎರವಲು ಹೋದ ಈ ಶಬ್ದ

ಸಂಸ್ಕೃತವೆಂದು ಅವರು ಭಾವಿಸಬಿದ್ದರೆ, ಹಾಗೆ ಅರ್ಥೈಸಬಿದ್ದರೆ ತಪ್ಪು ಅವರದಲ್ಲ. ಮೇಲಾಗಿ ಈ ಶಬ್ದವು ಇನ್ನಿತರ ಭಾರತೀಯ ಆರ್ಯ ಭಾಷೆಗಳಲ್ಲಿ ಕಾಣಸಿಗುವುದಿಲ್ಲ. ಹೀಗಿರುವಾಗ ಇದು ಶುದ್ಧ ದೇಶ್ಯ ಕನ್ನಡ ಶಬ್ದವೆಂದು ಹೇಳುವುದು ತಪ್ಪಾದೀತೇ?

ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳಿವು.

*ನಾಹಿಂ ಮಾಝೇನಿ ಪಾಡೇಂ ಪಾಡು ಮೀಚಿ ಸರ್ವಜ್ಞು ಏಕು ರೂಢು ಐಸಾ ಶಿವಮುಷ್ಟಿಗಂಡು ಫೇಂಜಾಸು ಠಾಕೇ (೧೩.೭೧೬) (ಪಾಠಭೇದ:ಗರ್ವತುಷ್ಟಿಗಂಡು)*

ನನಗಿಂತ ದೊಡ್ಡವರು ಯಾರೂ ಇಲ್ಲ. ಪ್ರಸಿದ್ಧನಾದ ಸರ್ವಜ್ಞನು ನಾನು ಒಬ್ಬನೇ. ಹೀಗೆ ಆ ಗಂಡಸು ಸೊಕ್ಕುಳ್ಳವನಾಗುತ್ತಾನೆ.

ಹಳಗನ್ನಡದ 'ಪಾಡು' (ಸದೃಶ) ಶಬ್ದ ಬಳಸಿ 'ಮಾರೆಘೇನಿ ಪಾಡೇಂ' ಈ ರೂಪ (ನನ್ನ ಅಂತಹರಿಗಿಂತ) 'ನನಗಿಂತ' ಎನ್ನುವ ಅರ್ಥದಲ್ಲಿ ಬಳಸಿದುದನ್ನು ಗಮನಿಸಬೇಕು.

*ಐಸಾ ಮಾನಿತೇಜಾ ಗಂಡು ತೋ ಅಭಿಮಾನು ಜಾಣ್ಕೆ ಕುಡು (೧೬.೨೩೪)*

ಹೀಗೆ ಆ ಗಂಡಸು ತಿಳಿಯುತ್ತಾನೆ. ಅವನ ಅಭಿಮಾನ ಕೊಂಕೆಂದು ತಿಳಿಯ್ಕೆ. ಅಥವಾ ಹೀಗೆ ತಿಳಿಯುವ ಆ ಬಿರುಸು ಅಭಿಮಾನವು ಕೊಂಕೆಂದು ತಿಳಿಯ್ಕೆ.

ಎಂದೂ ಅರ್ಥೈಸಬಹುದು. 'ವಕ್ರೀ' ಅರ್ಥದಲ್ಲಿಯ ಹಳಗನ್ನಡ 'ಕುಡು' ಶಬ್ದ ಇಲ್ಲಿ ಬಳಸಲಾದುದನ್ನೂ ಕಾಣಬಹುದು.

**ಗಾಡಗೇ - ಗಡಿಗೆ**

ಸಂಸ್ಕೃತ 'ಘಟಕ' ಶಬ್ದದಿಂದ ಉಂಟಾದ ತದ್ಭವ ಗಡಿಗೆ (ಶಬ್ದಮಣಿದರ್ಪಣ ಸೂತ್ರ ೨೬೯). ಅದೇ ಅರ್ಥದಲ್ಲಿ ಮರಾಠಿಯಲ್ಲೂ ಬಳಸಲಾಗಿದೆ. ಸಂಸ್ಕೃತ ಪ್ರಾಕೃತಗಳಿಂದಲೇ 'ಗಾಡಗೇ' ಶಬ್ದ ಮರಾಠಿಗೆ ಹೋಗಿರಬಹುದಲ್ಲ ಎಂದೆನಿಸಬಹುದು. ಆದರೆ ಸಂಸ್ಕೃತ 'ಟ' > ಮರಾಠಿ 'ಡ' ಆಗುವುದಿಲ್ಲ. ಕೀಟ =ಕೀಡ್, ಘಟ(ಕ್ರಿ) = ಘಡ ಇವು ಅಪರೂಪದ ಅಪವಾದಗಳು. ಆದುದರಿಂದ ಅಡವಿ, ಗಾಡಗೇ. ಮಡಕೆ (ಜ್ಞಾನೇಶ್ವರಿಯಲ್ಲಿ ಬಳಸಿಲ್ಲ) ಇಂತಹ ಶಬ್ದಗಳು ಕನ್ನಡದಿಂದಲೇ ಮರಾಠಿಗೆ ಹೋಗಿವೆಯೆನ್ನಬೇಕು. ಕಿಡಾ ಕೂಡ ಬಹುವಚನಾತ್ಮಕ 'ಅರ್' ಪ್ರತ್ಯಯದೊಡನೆ 'ಕೀಡರು' ಆಗಿಯೂ ಜ್ಞಾನೇಶ್ವರೀಯಲ್ಲಿ ಬಳಸಿದ್ದಾರೆ.

*ಅವತರಲೀ ಗಾಡುವಾಂ (ಪಾಠಭೇದ ಗಾಡಗ್ಯಾಂ) ಘಡಾಂ ಪೃಥ್ವೀ ಅನೇಕಳು ಜಾಲೀ ಮೂಢಾಂ ವಸ್ತಿ ಹೋಉನಿ ಠೇಲಾ ಕಾನವಡಾ (ಪಾಠಭೇದ ಕಾನಡಾ) ದೀಪಾಸಾರಿಂ (೧೮.೫೪೦)*

ಗಡಿಗೆ ಕೊಡಗಳ ರೂಪಪಡೆದಾಗ (ಅವುಗಳಲ್ಲಿಯ) ಮಣ್ಣು ಮೂಢರಿಗೆ ಅಪರಿಚಿತವೆನಿಸುತ್ತದೆ. ಹಾಗೆಯೇ ದೀಪಕ್ಕಾಗಿ ಬೆಂಕಿಯು ಕಂದಮ್ಮ (ಕಾನಡಾ!) ವಾಗಿ ಉಳಿಯುತ್ತದೆ.

**ಗುಂಡಣೇಜ್-ಗುಂಡಾಳಣೇಜ್ -**

**ದುಂಡಿಸು, ಸುತ್ತು, ಆವರ್ತಿಸು**

ಇಂದಿಗೂ ಕನ್ನಡದಲ್ಲಿ 'ದುಂಡಗೆ' 'ಗುಂಡಗೆ' ಶಬ್ದಗಳು ಸಮಾನಾರ್ಥಿಯಾಗಿ, ಒಂದೇ ಎನ್ನುವಂತೆ ಬಳಸುವದನ್ನು ನಾವು ಕಾಣುತ್ತೇವೆ. ಜ್ಞಾನೇಶ್ವರೀ ಪೂರ್ವಕಾಲೀನ ನಡುಗನ್ನಡ ಸಾಹಿತ್ಯದಲ್ಲಿ 'ದುಂಡಿಸು' ಶಬ್ದ 'ಸುತ್ತು' 'ಆವರ್ತಿಸು' ಎನ್ನುವ ಅರ್ಥದಲ್ಲಿ ಹೀಗೆ ಬಳಕೆಯಾದುದನ್ನು ಗಮನಿಸಬಹುದು.

*ಹಿಂದೆ ಮೆಟ್ಟಿದ ಕೆಲಕೆ ಚಿಮ್ಮುವ ದುಂಡಿಸಿ ನೆಗೆವ (ಗಿರಿಜಾಕಲ್ಯಾಣ ೨.೧೦೫೭)*
*ಪೊಳೆವ ದುಂಡಿಸುವೊತ್ತುವೆತ್ತುವ ಮಲೆನ (ಕುಮುದೇಂದು ರಾಮಾಯಣ ೩.೬೦)*

ಇದು ಗುಂಡಾಳಣೇಜ್ (ಗುಂಡು+ಆಡಿಸು ದಿಂದ), ಗುಂಡಣೇಜ್ ಆಗಿ ಜ್ಞಾನೇಶ್ವರಿಯಲ್ಲಿ ಪ್ರಾಯುಕ್ತವಾಗಿದೆ.

*ಗಾರ ಸೇವಾಳೇಜ್ ಗುಂಡಾಳಲೀ (೧೩.೬೭೯)*
ಪಾಚಿಯಿಂದ ಸುತ್ತುವರಿದ ಕಲ್ಲು
*ಗೂಂಡುನಿ ಘೇತಲಾ ಪಟೀಜ್ ರತ್ನದೀಪು (೧೩.೧೦೦೫)*
ಬಟ್ಟೆಯಲ್ಲಿ ರತ್ನದೀಪವನ್ನು ಸುತ್ತಿಕೊಂಡರು
*ತಿಯಾ ಗುಂಡಾಳಲಿಯಾ ಪ್ರಕಾಶಾ ಕ್ಷೇತ್ರಜ್ಞುನಾಜ್‌ವ (೧೪.೭೯)*
ಅದನ್ನು ಪ್ರಕಾಶದಿಂದ ಸುತ್ತಿದುದಕ್ಕೆ ಕ್ಷೇತ್ರಜ್ಞವೆಂದು ಹೆಸರು.
*ವರಿಲು ಕೋಂಡೇಯಾಚಾ ಗುಂಡಾಳಾ ಸಂಡುನು ಕೇಲೇಯಾಜ್ ವೇಗಳಾ (೧೫.೪೩೩)*
ಮೇಲಿನ ತವಡಿನ ಸುತ್ತುವರಿಕೆಯನ್ನು (ಆವರಣವನ್ನು) ಕುಟ್ಟಿ ಬೇರೆ ಮಾಡಿದಾಗ.

**ಗುಂಡಾ-ಗುಂಡು, ಕಲ್ಲು**

*ಬಡಿಯಿಂ ಗುಂಡಿಂ ಕಲ್ಲಿಂದಿಡುತುಂ ಬೆನ್ನಟ್ಟಿ ಬೆರ್ಚಿ ಭಯವಂದಿಂ ಮೈನಡುಗೆ (ಧರ್ಮಾಮೃತಂ ೭.೮೪)* ಹೀಗೆ ಹಳಗನ್ನಡದಲ್ಲಿ 'ಕಲ್ಲು' ಅರ್ಥದಲ್ಲಿ 'ಗುಂಡು' ಶಬ್ದದ ಬಳಕೆ ಕಾಣಸಿಗುತ್ತದೆ. ಇದು 'ಗುಂಡಾ' ಆಗಿ ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾಗಿದೆ.

*ಕರ್ಮಾ ಅಕರ್ಮಾಚೇ ಗುಂಢೇ ಘಾತಲೇ ದೋಹಿಜ್‌ಕಡೇ (೧೩.೪೮)*
ಕರ್ಮ ಅಕರ್ಮಗಳ ಕಲ್ಲುಗಳನ್ನು ಎರಡೂ ಬದಿಗೆ ಹಾಕಿದರು.
*ತಿಯೇ ಕರ್ಮರಂಧ್ರೀಜ್ ಗುಂಡೇ ನಿಯಮಾಚೇ ದಾಟೀ (೧೩.೫೪೯)*
ಆಯಾ ಕರ್ಮರಂಧ್ರಗಳಲ್ಲಿ (ಇಂದ್ರಿಯಗಳಲ್ಲಿ) ನಿಗ್ರಹದ ಕಲ್ಲುಗಳನ್ನು ತುರುಕುತ್ತಾನೆ.
*ಘಾಣಾ ಗಾಳಿಲೇ ಗುಂಡೇ ತೇಲ ನಾ ವೇಂಡಿ ಜೋಡೇ (೧೭.೪೧೭ ಪಾಠಭೇದ)*
ಗಾಣದಲ್ಲಿ ಕಲ್ಲುಗಳನ್ನು ಅರೆದರೆ ಎಣ್ಣೆ (ಯಾಗಲೀ)

ಹಿಂಡಿಯಾಗಲೀ ಸಿಕ್ಕುವುದಿಲ್ಲ.

*ರತ್ನ ಗುಂಡೇಯಾ ಕಾಹಿಜ್ ನೇಣಿಜೇ ಭೇದು (೧೪.೩೫೪)*

ರತ್ನ (ಹಾಗೂ) ಕಲ್ಲುಗಳಲ್ಲಿಯ ಭೇದವನ್ನೇನೂ ಅರಿಯರು.

**ಗುಥಣೇಜ್, ಗೂಥಣೇಜ್ ಕೂಡು**

'ಸಂಮೇಲನೇ' ಅರ್ಥದಲ್ಲಿಯ 'ಕೂಡು' ಧಾತು ಹಳಗನ್ನಡದಲ್ಲಿ ಪ್ರಯುಕ್ತ-ವಾದ ಸಂದರ್ಭವೊಂದು ಹೀಗೆ. *ಕೂಡುಗುಂ ಮಾತಿನೊಳೇನೊ ಸಂಖ್ಯೆಗಳೊಳೇಕ ಬಹುತ್ವ ವಿಪರ್ಯಕ್ಕಸಂಖ್ಯಾತಗುಣಂ (ಕವಿರಾಜಮಾರ್ಗ ೧.೧೧೯)*

ಇದೇ ಅರ್ಥದಲ್ಲಿಯ ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು ಹೀಗಿವೆ.

*ಭೂತಳ ಭೂರುಹಿಜ್ ಮಾಂಡಲೇಜ್ ಜೈಸೇಜ್ ನಕ್ಷತ್ರೀಜ್ ಗಗನ ಗೂಥಲೇಜ್ (೧೧.೨೮೧)*

ಪೃಥ್ವಿಯು ಗಿಡಗಳಿಂದ ಶೋಭಿಸಿತು. ಆಕಾಶ ನಕ್ಷತ್ರಗಳಿಂದ ಹೇಗೆ ಕೂಡಿತೋ ಹಾಗೆ-

*ತೈಸಾ ಅಹಂಕಾರು ಆಲಾ ಬಳಾ ದರ್ಪ ಕಾಮಕ್ರೋಧೀಜ್ ಗೂಥಲಾ (೧೬.೩೯೪ ಪಾಠಭೇದ)*

ಹಾಗೆ ಅಹಂಕಾರಕ್ಕೆ ಬಲವು ಬಂದಿತು. ಕಾಮಕ್ರೋಧಗಳಲ್ಲಿ ಉನ್ಮತ್ತತೆ ಕೂಡಿತು.

*ಏಯಾ ಹಿ ಹೂನಿ ಊಜ್‌ಚವಡೇಜ್ ಗೂಥಲೇ ಫಳಾಚೇನಿ ಬುಡೇಜ್ ಇಂದ್ರಾದಿಕ ತೇ ಮಾಂದೋಡೇ ಥೋರ ಶಾಖಾಂಚೇ (೧೫.೧೯೪)*

ಇಂದ್ರಾದಿ ತೋರ ಶಾಖೆಗಳು ದಟ್ಟಗೊಂಡು (ಮಂದೈಸಿ), ಇದಕ್ಕಿಂತಲೂ ಮೇಲಿನ ಭಾಗದಲ್ಲಿ ಹಣ್ಣುಗಳ ಕೆಳಗೆ ಕೂಡಿಕೊಂಡವು.

ಇಲ್ಲಿ ಹಳಗನ್ನಡದ 'ಸಾಂದ್ರತ್ವೇ' ಅರ್ಥದಲ್ಲಿಯ 'ಮಂದಯಿಸು' ಧಾತು (ಉದಾ : *ಮೊದಲೊಳಾ ನೀಳ್ದು ಪೊದಟ್ದು ಪರ್ಬಿ ಪದಪಂ ಕೈಕೊಂಡು ಮಂದೈಸಿ ಮಾಣದೆ - ಆದಿಪುರಾಣ ೫.೨೩*) 'ಮಾಂದೋಡೇ' ಯಾದುದನ್ನೂ ನೋಡಬಹುದಾಗಿದೆ.

**ಗುಢಿ-ಗುಡಿ ಧ್ವಜ**

*ಪೊಟಲ ಬೀದಿವೀದಿಗಳನಿತುಮನೋರಂತೆ ತಳಿದು ಗುಡಿಗಟ್ಟಿಸಿ (ಆದಿಪುರಾಣ ೫.೮) ಗುಡಿ ಶಂಖಂ ಚಾಮರಂ ಬೆಳ್ಗೊಡೆ (ಎ.ಇ ೩೩೦.೧೩ 929)* ಹೀಗೆ 'ಧ್ವಜ' ಅರ್ಥದಲ್ಲಿಯ ಗುಡಿ ಶಬ್ದ ಪರಿಚಿತ. ಮರಾಠಿಯಲ್ಲಿಯ ಈ ಶಬ್ದದ ಬಳಕೆಯನ್ನು ಜ್ಞಾನೇಶ್ವರೀಯಲ್ಲಿ ಹೀಗೆ ಗುರುತಿಸಬಹುದು.

*ಸಜ್ಜನಾಕರವಿ ಗುಢೀ ಉಭವೀ ಮಿಾಜ್ (೪.೫೧)*

ಸಜ್ಜನರ ಕೈಯಿಂದ ನಾನು ಧ್ವಜ ನಿಲ್ಲಿಸುವೆ. 'ಸಜ್ಜನರಿಂದ' ಎನ್ನುವ ಬದಲು 'ಸಜ್ಜನರ ಕೈಯಿಂದ' ಈ ಪ್ರಯೋಗ ಗಮನಾರ್ಹ.

*ಆಪುಲಿಯೇ ಧಾವೇಪುಢಾಜ್ ಘಾಲೂನಿ ಜ್ಞೇಯಾಚಾ ಗುಢಾ (೧೮.೪[illegible])*
(ವಿಪರೀತ ಜ್ಞಾನವು-ಅವಿದ್ಯೆಯು) ತನ್ನ ಓಟದ ಮುಂದೆ ಜ್ಞೇಯದ ಪತಾಕೆ ಹಚ್ಚಿ-

*ಮಾಝೀ ಅವಸರಚಿಂತಾ ಫೇಡೀಜ್ ಸಾಂಘ್ಯೆ ವಿಜಯಾಚೀ ಗುಢೀ (೧೪[illegible])*
(ಧೃತರಾಷ್ಟ್ರ ಸಂಜಯನಿಗೆ ಹೇಳಿದ್ದು) ನನ್ನ ಈ ಸಮಯದ ಚಿಂತೆಯನ್ನು ಕಳೆ. (ನನ್ನ ಮಗನ) ವಿಜಯಧ್ವಜದ ಬಗ್ಗೆ ಹೇಳ್ಳೆ.

'ಗುಡಿ' ಶಬ್ದವು ಕನ್ನಡದ್ದಲ್ಲವೆಂದು ಕಿಟೆಲ್ಲರು ಹೇಳಿದ್ದು, ಕರ್ನಾಟಕದಲ್ಲಿ ಪ್ರತಿಪದೆಯಂದು 'ಗುಡಿ' ನಿಲ್ಲಿಸುವ ಪದ್ಧತಿಯಿಲ್ಲ, ಇದು ವಿಶೇಷವೆಂದು ತುಳಪುಳೆ ಬರೆದಿದ್ದು[11] ಕೇವಲ ಸತ್ಯಾಪಲಾಪ. 'ಕನ್ನಡ'ದ ಗುಡಿ ಶಬ್ದಗಳ ಅರ್ಥವಿವರಣೆ ಮುಗಿದ ನಂತರ, ನವವರ್ಷದ ಮೊದಲ ದಿನದಂದು ನಿಲ್ಲಿಸುವ ಕೋಲಿಗೆ ಗುಡಿ ಎನ್ನುತ್ತಾರೆಂದು ಕನ್ನಡದ್ದಲ್ಲದ ಶಬ್ದವೆಂದು ಕಿಟೆಲ್ಲರು ತಮ್ಮ ಕೋಶದಲ್ಲಿ ಸಣ್ಣಲಿಪಿಯಲ್ಲಿ ಕೊಟ್ಟು ಹೇಳಿದ್ದಾರೆ. (ಪುಟ ೫೮೩)

ವಸುತ್ತ: 'ಗುಡಿ' ಇದು ಕನ್ನಡದ್ದೇ ಶಬ್ದ. ಆದಿಪುರಾಣದಲ್ಲಿಯ ಪ್ರಯೋಗವನ್ನು ಕಿಟೆಲ್ಲರೇ ಕೊಟ್ಟಿದ್ದಾರೆ. ಆದರೆ ಶಾಲಿವಾಹನಶಕ ವರ್ಷದ ಮೊದಲ ದಿನದಂದು 'ನಿಲ್ಲಿಸುವ ಧ್ವಜ' (-ಕಟ್ಟುವ ಕೋಲಲ್ಲ!) ಅವರಿಗೆ ತಿಳಿದಿಲ್ಲ. ಕೋಲಿನ ತುದಿಗೆ ನವವಸ್ತ್ರ, ಕಣ ಇತ್ಯಾದಿ ಕಟ್ಟಿ, ಅದಕ್ಕೊಂದು ಚೆಂಬುಹಾಕಿ ಧ್ವಜದಂತೆ ಮಾಡಿ ಮನೆಮನೆಯ ಮುಂದೆ ನಿಲ್ಲಿಸುವುದು ಮಹಾರಾಷ್ಟ್ರದಲ್ಲಿಯ ರೂಢಿ. ಅಂತೆಯೇ ಯುಗಾದಿ ಪಾಡ್ಯಕ್ಕೆ ಮರಾಠಿಯಲ್ಲಿ ಗುಢೀಪಾಡವಾ ಎಂದು ಹೆಸರು.

ಜ್ಞಾನೇಶ್ವರಿಯಲ್ಲಿಯ 'ಗುಢೀ' ಶಬ್ದ ಪ್ರಯೋಗಗಳಲ್ಲಿ ಎಲ್ಲೂ ಈ ಪಾಡ್ಯದ 'ಗುಢಿ'ಯ ಸಂದರ್ಭ ಬಂದಿಲ್ಲ.

ಮರಾಠೀ ಸಂಶೋಧಕರ ಅಪಪ್ರಚಾರದ ಇದೊಂದು ವೈಖರಿ.

**ಗುಂತಣೇಜ್ ಗುಂಥಣೇಜ್ - ಗುಂಜು, ತೊಡಕಾಗು**

ಈ ಮರಾಠಿ ಧಾತುವಿನ ವ್ಯುತ್ಪತ್ತಿಯನ್ನು ಮರಾಠಿ ಪಂಡಿತರು ವಿವರಿಸಲು ಹೋಗಿಲ್ಲ. ಹಳಗನ್ನಡದಲ್ಲೂ ಇದರ ಪ್ರಯೋಗ ದೊರೆತಿಲ್ಲ. ಗುಚ್ಛ, ಗುತ್ಸ ಈ ಸಂಸ್ಕೃತ ಶಬ್ದಗಳಿಗೆ ಗೊಂಚಲು ಎಂಬ ಅರ್ಥವಿದೆಯೇ ವಿನಾ ಗುಂಜುವಿನಲ್ಲಿಯ ಗೋಜು ಇಲ್ಲ. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳಿವು:

*ಸಾರಾಸಾರಾಚೇಜ್ ತೋಡೀ ಗುಂತಲೇಜ್ ಜೇಜ್ (೬.೩೭೧)*
ಸಾರ-ಅಸಾರದ ವಿವೇಚನೆಯಲ್ಲಿ ತೊಡಕಿ ಕೊಂಡವರಿಗೆ-

11. ಯಾದವಕಾಲೀನ ಮರಾಠೀ ಭಾಷಾ ಪುಟ. ೧೦೪

*ದೇಹ ತಪ್ವ ಪಾಪ್‌ಬಾಚೇಯ್ ಜಾಲೇಯ್ ಕರ್ಮಾಬಾಬ್ ಗುಣಬ್ ಗುಂತಲೇಯ್ (೧೩.೧೦೯೭)*

ಆಗ ಐವರಿಂದ ದೇಹವಾಯಿತು. ಕರ್ಮದ ಗುಣಗಳಲ್ಲಿ ತೊಡಕಿಕೊಂಡಿತು.

*ತೂಟೇ ಬಂಧಮೋಕ್ಷಾಚೇಯ್ ಗೂಂತಲೀ ಪಥ (೧೮.೩೧೭)*

ಬಂಧ-ಮೋಕ್ಷಗಳ ಗೋಜಲು ತುಂಡರಿಸಿ ಹೋಗುತ್ತದೆ. (ಇಲ್ಲಿ 'ತೂಟೇ'ಗೆ (ತುಂಡರಿಸಿ) ಗೆ ಬದಲಾಗಿ 'ಸೂಟೇ' (ಬಿಡಿಸಿ) ಶಬ್ದ ಎಷ್ಟೊಂದು ಒಪ್ಪವಾಗಬಹುದು!)

ಈ ಕೊನೆಯ ಉದಾಹರಣೆಯಿಂದಾಗಿ ನನಗೆ 'ಗುಂತಲೇಯ್'ಗೆ 'ಕೂದಲೀ' ಮೂಲವಾಗಿರಬಹುದೇನೋ ಎನಿಸುತ್ತದೆ. ಹಿಕ್ಕಿಕೊಂಡ ಬಳಿಕ ಹೆಣ್ಣುಮಕ್ಕಳು ಹಣಿಗೆಯಲ್ಲಿಯ ಕೂದಲ ತುಂಡುಗಳನ್ನು ತೆಗೆದು ಬೆರಳಿಗೆ ಸುತ್ತಿ ಕಸದಲ್ಲಿ ಹಾಕುವ ರೂಢಿ ನಮ್ಮಲ್ಲೆಲ್ಲ ಇದೆಯಷ್ಟೇ? ಬೆರಳಿಗೆ ಸುತ್ತಿದ ಕೂದಲಿಗೆ ಇಂದಿಗೂ ಮಹಾರಾಷ್ಟ್ರದಲ್ಲಿ 'ಗುಂತವಳಾ' (ಗೂಂತಲಾ) ಎನ್ನುತ್ತಾರೆ.

ಕನ್ನಡ 'ಕೂದಲ್' ತುಳುವಿನಲ್ಲಿ 'ಕುಜಲ್' ಎಂದಿದೆ. ಕುಜಲ್‌ದಿಂದಲೇ ಕನ್ನಡದಲ್ಲಿ ಗುಂಜು, ಗುಂಜಲು ಗೋಜಲು ಶಬ್ದಗಳಾಗಿರಲು ಸಾಕು.

ಕನ್ನಡದ ಕೂದಲು ಶಬ್ದ ಹೀಗೆ ಮರಾಠಿಗೆ ಹೋದರೆ, ತುಳು, ಕುಜಲ್ ಕನ್ನಡಕ್ಕೆ ಬಂದಿದೆ! ಕೂದಲಿಗೆ ಮೂಲ ಶಬ್ದವಾದ 'ಕುರುಳ್' (ನೋಡಿರಿ ಮಿಳಿರ್ವ ಕುರುಳ್ಗಳೊಳ್ ತೊಡರ್ದು-ಪಂಪಭಾರತ - *೨.೧೭)* ಮರಾಠಿಯಲ್ಲಿ ಸೌಂದರ್ಯದರ್ಶಕ 'ಗುಂಗರುಕೂದಲು' (ಕುರಳೇಯ್ ಕೇಸ) ಮಾತ್ರ ಹೌದು.

**ಗುಂಠೀ - ಗುತ್ತಿ, ಆಶ್ರಯ**

ಇಕ್ಕೆ, ಇಂಬು, ಗೊತ್ತು... ಆಗರಂ ಈ ೧೫ ಆಶ್ರಯಕ್ಕೆ ಪೆಸರ್ (ಕ.ಶ.ಸಾ. ೧೫.೨೯೦) ನೆಲೆ ತಾಣ ಗೊತ್ತುಂ ಗಕ್ಕನೆ ಚಾವಡಿಯು ಮೇರೆಯಾಗರವಸದಿಂ (ಕ.ವಿ.ಕಂ. ೧೩೫) ಜಸದ ಸಯ್ದು ನೆಗಳ್ತೆಯ ಲೋಕದೇಳ್ಗೆ ಯೌನ್ನತ್ಯದ ಗೊತ್ತೆನುತ್ತೆ ಧರೆ ಬಣ್ಣಿಪುದೀ ಕಲಿದೇವ ಸೆಟ್ಟಿಯುಂ (ಸೌ. ಇ.ಇ. ೨೯೬.೩೯ ಕ್ರಿ.ಶ. ೧೧೬೬) ಹೀಗೆ ಹಲವೆಡೆ ಆಶ್ರಯ ಅರ್ಥದಲ್ಲಿ ಬರುವ ಗೊತ್ತು ಶಬ್ದಕ್ಕೆ ಗುಂತು ಎಂಬ ಪರ್ಯಾಯವೂ ಇದೆ. ನೆಲ, ಭೂಮಿ, ಅರ್ಥದಲ್ಲಿಯ ತಮಿಳು ಕುತ್ತಿ ಶಬ್ದವೂ ಗಮನಾರ್ಹ. ಇದು ಗುಂತಿಯಾಗಿ ಮರಾಠಿಯಲ್ಲಿ ಹೋಗಿದೆ.

ಜ್ಞಾನೇಶ್ವರೀಯಲ್ಲಿಯ ಈ ಓವಿ ಪರಾಮರ್ಶಿಸಬೇಕು.

*ಯೇವಢಿಯಾ ಗಾ ಪ್ರತೀತೀ ತೋ ದೇಹಾ ಆಲಾ ಅಸೇ ವಸ್ತೀ*
*ವಾಟೇ ಜಾತಾಜ್ ಗುಂತೀ ಮಾಝಿ ಜೈಸಾ. (೧೪.೩೩೫)*

ದಾರಿಯಿಂದ ಹೋಗುವಾಗ (ಯಾವದೋ ಒಂದು) ಆಶ್ರಯದಲ್ಲಿ (ಗುತ್ತಿಯಲ್ಲಿ) ವಸತಿ ಮಾಡಿದ ಹಾಗೆ ಆ (ಆತ್ಮನು) ದೇಹದಲ್ಲಿ ಬಂದಿದ್ದಾನೆಂಬುದರ ಪ್ರತೀತಿ (ಅವನಿಗೆ ಇದೆ.)

**ಗೋಚೇಜ್, ಗೋವಚೇಜ್, ಕೋ ಪೋಣಿಸು**

'ಸೂತ್ರಪ್ರವೇಶ' ಅರ್ಥದಲ್ಲಿಯ 'ಕೋ' ಧಾತು ಮುತ್ತುಂ ಮಣಿಸುಂ ಕೋದಂತಕ್ಕುಂ ಎಂಬುದಾಗಿ ಕವಿರಾಜಮಾರ್ಗದಲ್ಲಿ ಮೊದಲು ಕಾಣಸಿಕೊಳ್ಳುತ್ತದೆ. (೨.೫) ಮುತ್ತುಂ ಮಣಿಸುಂ ಕೋದಂತುಟೆ ನಿನ್ನ ತಪದ ಪಾಂಗು (ಪಂಪಭಾರತ ೭.೯೨) ಎಂದೂ ಹಳಗನ್ನಡದಲ್ಲಿ ಪ್ರಯೋಗವಿದೆ. ಈ 'ಕೋ' ಧಾತು 'ತೊಡಗಿಸು' 'ಅಡಕಗೊಳಿಸು' 'ಸಿಕ್ಕಿಸು' ಅರ್ಥಗಳಲ್ಲಿ 'ಗೋ' ಆಗಿ ಜ್ಞಾನೇಶ್ವರೀಯಲ್ಲಿ ಕಾಣಸಿಕೊಳ್ಳುತ್ತದೆ.

*ವಿಷಯ ಇಂದ್ರಿಯಾಜ್ ಗೋಸೀಜ್ ಸ್ವಭಾವೇಜ್ ತರಿ ಭೂತಾಜ್‌ಸಿ (೧೪.೯೨)*
ವಿಷಯ ಇಂದ್ರಿಯಗಳು ಸ್ವಭಾವತಃ ಪಂಚಮಹಾಭೂತಗಳಲ್ಲಿ ತೊಡಕಿಕೊಂಡಿರುವುದರಿಂದ

*ತೈಜ್‌ಕಾಹಿಜ್ ನ ತ್ಯಜೇ ಅಧಿಕೇಜ್ ಗೋವೀ ಚಿ ಪಡೇ (೧೮.೧೩೦)*
ಅಲ್ಲಿ ಯಾವುದನ್ನು ಬಿಡಲಾಗುವುದಿಲ್ಲ. ಹೆಚ್ಚು ತೊಂದರೆಯಲ್ಲಿ ಬೀಳುತ್ತಾನೆ.

*ಅಹೋರಾತ್ರಾಚಿ ಗೋವೀ ಅಂಧಳೇಜ್ ನೇಣೇಜ್ (೧೮.೭೧೫)*
ಹಗಲು ಇರುಳುಗಳ ಪವಣಿಗೆ (ಹಗಲಾದ ಬಳಿಕ ರಾತ್ರಿ, ರಾತ್ರಿಯಾದಬಳಿಕ ಮತ್ತೆ ಹಗಲು ಹೀಗೆ ಪೋಣಿಸಿದ್ದನ್ನು) ಯನ್ನು ಕುರುಡ ಅರಿಯಲಾರ.

*ಗೋವೀ ಕೇಲಿಯಾಜ್ ಜವಳಿ ಝುಗಟಲಿಯಾಜ್ ಅಂಗ ಫಾಳೀ (೧೮.೬೫)*
ಹತ್ತಿರಹೋದರೆ (ಬೋರೆಕಂಟಿ) ಸಿಕ್ಕಿಸುತ್ತದೆ. ಕೊಸರಾಡಿದರೆ ಮೈ ಹರಿಯುತ್ತದೆ.

**ಗೋದರಿ-ಕೊತ್ತಳಿ, ಗೊಂದಣ ಗದ್ದಲ**

*ದಿವಿಜ ಸೌಂದರಿಯರ್ ಗೊಂದಣಂ ಮಾಡುವಲ್ಲಿ* (ಆದಿಪುರಾಣ ೭.೧೨೫ವ) ಇದು 'ಗೊಂದಣ' ಶಬ್ದದ ಹಳಗನ್ನಡದಲ್ಲಿಯ ಪ್ರಯೋಗ. ಈ ಶಬ್ದವು 'ಗೋದರಿ' ಯಾಗಿ ಮರಾಠಿಯಲ್ಲಿ ಹೋಗಿದೆ. ಲೀಳಾಚರಿತ್ರದಲ್ಲಿಯ ಪ್ರಯೋಗಗಳು ಇಂತಿವೆ.

*ಗೋಸಾವೀ ಶ್ರೀಮೂರ್ತಿ ಆಛಾದುನಿ ಮಠಾ ಉತರಿಲೀಃ ಗೋದರಿಯಾ ಬೀಜೆಜ್ ಕೇಲೇಜ್ (ಪೂ. ೩೫)*
ಚಕ್ರಧರರು (ಸೆಲ್ಲೆ) ಹೊದ್ದುಕೊಂಡು ಮಠದಿಂದ ಇಳಿದರು. ಗದ್ದಲದಲ್ಲಿ ಬಿಜಯಂಗೈಸಿದರು.

*ಹಾಟವಟಿಯಾ ಜಾತ ಆಸತಿಃ ವಿಳಿಚಾಜ್ ಗೋದರೀ ಭರಲೀ ಆಸೇ (ಪೂ. ೧೨೧)*
ಪೇಟೆಯ ಓಣಿಯಲ್ಲಿ ಹೋಗುತ್ತಿದ್ದರು. ಇಳಿಹೊತ್ತಿನ ಗದ್ದಲ ತುಂಬಿಕೊಂಡಿತ್ತು.

**ಗೋಂದಳ- ಗೊಂದಣ, ಗೊಂದಳ.**

ಜನಸಮೂಹವೆಂಬ ಅರ್ಥದಲ್ಲಿ ಗೊಂದಣ, ಗೊಂದಳ ಶಬ್ದಗಳ ಬಳಕೆ

ಹಳಗನ್ನಡದಲ್ಲಿ ಇಂತು:

*ಗೊಂದಣಸು ಸಮೂಹೇ ಬಾಹುಲ್ಯೇಚ (ಶಬ್ದಮಣಿದರ್ಪಣ ಧಾತುಪ್ರಕರಣ)*
*ಇಕ್ಕಿದಾಹುತಿಗಳ ಗೊಂದಳದಿನೊದಸೊಗೆದ ಪೊಗೆಗಳ್ ಬಳಸಿದುವು (ಪಂಪಭಾರತ ೬.೩೫)*

ಜ್ಞಾನೇಶ್ವರಿಯಲ್ಲಿಯ ಏಕಮಾತ್ರ ಪ್ರಯೋಗ ಹೀಗೆ:

*ಕಾಜ್ ಸಾಧುತೇಜ್ ಗೋಂದಳಿಜ್ ಸಂಚರೌನಿ ಸುಯೇಜ್ ಮೇಳಿಜ್ (೧೩.೧೦೦೪)*

ಇಲ್ಲಿ 'ಮೇಳಿಜ್'ಗೆ 'ಮೈಳಿಜ್' ಎಂಬುದಾಗಿ ಬಂದ ಪಾಠಭೇದವೇ ಸಮರ್ಪಕವಾದದ್ದು.

> ಗೊಂದಲದಲ್ಲಿ (ಗದ್ದಲದಲ್ಲಿ) ಸಂಚರಿಸಿ ಸಾಧುವು ಮೈಲಿಗೆ ಮಾಡಿಕೊಳ್ಳಬೇಕೆ?

ಕನ್ನಡದಿಂದ ಹೋದ 'ಗೊಂದಲ' ಶಬ್ದ 'ಗೋಂಧಳ' ಎಂಬುದಾಗಿ ಅದೇ ಅರ್ಥದಲ್ಲಿ ಇಂದು ಬಳಸಲಾಗುತ್ತಿದ್ದರೂ ದಾಂಡೇಕರ ಮೊದಲಾದವರಿಗೆ ಈ ಸಾಲಿನ ಅರ್ಥ ಹಚ್ಚಲು ಬಂದಿಲ್ಲ.

ಅವರು 'ಗೋಂದಳಿ' ಎಂದರೆ 'ಪಿಶಾಚ್ಚ (?)' ವೆಂದು ಅರ್ಥೈಸಿ 'ಪಿಶಾಚ್ಚವು ಸಾಧುವಿನ ಮೈಯಲ್ಲಿ ಸೇರಿಕೊಂಡು...." ಎಂದು ಏನೇನೋ ಹೇಳಿದ್ದಾರೆ. ಕಾರಣವಿಷ್ಟೇ. ಕನ್ನಡ ಜನಪದ ಶಬ್ದವಾದ 'ಮೈಲಿಗೆ' (ಅಶೌಚ) ಅವರಿಗೆ ಅಪರಿಚಿತ.

ಜ್ಞಾನೇಶ್ವರರ ಆಚಾರಧರ್ಮ ಪ್ರೀತಿಯು ಅನನ್ಯ ಸಾಧಾರಣವಾದದ್ದು.

*ಕಾಯಿ ದ್ವಿಜು ಅಂತ್ಯಜು ಘೃಷ್ಟೀ ಅಂತ್ಯಜು ನೋಹೇ (೧೭.೫೧)*

> ಅಂತ್ಯಜನೊಡನೆ (ಮೈ) ತಿಕ್ಕಿದರೆ ಬ್ರಾಹ್ಮಣನು ಅಂತ್ಯಾಜನಾಗುವುದಿಲ್ಲವೇ?
> ಎಂದವರು ಬೇರೆ ಸಂದರ್ಭದಲ್ಲಿ ಕೇಳಿದ್ದಾರೆ.

**ಗೋಮಟೇ-ಗೊಮ್ಮಟ, ಸುಂದರ, ಒಳ್ಳೆಯ**

ಇದಜಾಸೆಯ ಬಿಡಿಸು ಗೊಹೆಯ ಗೊಮ್ಮಟನ ನೋಡಯ ಅಗಮ್ಯೇಶ್ವರಲಿಂಗ ಎಂಬುದಾಗಿ ಮನುಮುನಿ ಗುಮ್ಮಟ ದೇವನ ವಚನಗಳಲ್ಲಿ (ಕ್ರಿ.ಶ. ೧೧೬೦) 'ಗೊಮ್ಮಟ' ಶಬ್ದದ ಬಳಕೆ ಬರುತ್ತದೆ. ಇದು ಜ್ಞಾನೇಶ್ವರಿಯಲ್ಲಿ 'ಗೋಮಟೇ' ಆಗಿದೆ.

*ಗೋಮಟೇಜ್ ಕಾಹಿಜ್ ಪಾವೇ ತರಿ ಸಂತೋಷೇಜ್ ತೇಣೇಜ್‌ನಾಭಿಭವೇ (೨.೨೯೯)*

> ಒಳ್ಳೆಯದೇನಾದರೂ ಹೊಂದಿದರೂ ಅವನಲ್ಲಿ ಸಂತೋಷ ಉಂಟಾಗುವದಿಲ್ಲ.

*ಜೋ ಆತ್ಮಲಾಭಾ ಸಾರಿಖೇಜ್ ಗೋಮಟೇ ಕಾಹಿಜ್ ಚಿ ನೇದಖೇ (೧೨.೧೯೦)*

ಆತ್ಮಲಾಭದಂತಹ ಒಳ್ಳೆಯದಿನ್ನಾವುದನ್ನೂ ಯಾವನು ಕಾಣುವುದಿಲ್ಲವೋ-

*ವೋಖಟೇಜ್‌ನಾ ಗೋಮಟೇಜ್ (೧೨.೧೯೪)* ಕೆಟ್ಟದಕ್ಕೂ ಇಲ್ಲ ಒಳ್ಳೆಯದಕ್ಕೂ ಇಲ್ಲ.

*ಮಿ ವಾಜ್‌ಖುನು ಕಾಹಿಜ್ ಗೋಮಟೇಜ್ ಜೇಯಾ ನಾಹಿಜ್ (೧೩.೭೦೨)*

ನಾನಲ್ಲದೆ ಬೇರೆ ಒಳ್ಳೆಯದೆಂದು ಯಾರಿಗೆ ಎನಿಸುವುದಿಲ್ಲವೋ-

*ಜೇವಿತಾಜ್ ಗಮೇ ಗೋಮಟೇಜ್ (೧೮.೨೪೭)*

ಉಣ್ಣುವಾಗ ಒಳ್ಳೆಯದೆನಿಸುತ್ತದೆ.

**ಗೋರವ (ಗೋಖ?) ಗೊರವ**

ಪ್ರತಿಕಾರನ ಲೇಖನದೋಷದ ಒಂದು ಉತ್ಕೃಷ್ಟ ಉದಾಹರಣೆ! ನಾಗರೀ ಲಿಪಿಯಲ್ಲಿ 'ಖ' ಅಕ್ಷರ ಬರೆಯುವಾಗ 'ರ' 'ವ' ಕೂಡಿಸಿ ಬರೆಯುತ್ತಾರೆ. 'ಗೋರವ' ಎಂದು ಮೂಲ ಪ್ರತಿಯಲ್ಲಿ ಇರಬಹುದಾದುದನ್ನು ಪ್ರತಿಕಾರ 'ಗೋಖ' ಎಂದು ಬರೆದ. ಇಂದಿಗೂ ಅದೇ ಉಳಿದಿದೆ ಜ್ಞಾನೇಶ್ವರಿಯಲ್ಲಿ. ಇದು ಓವಿ.

*ಕೈಸಾ ಸ್ಥವತಾ ಪ್ರಳಯಾಚಾ ವೇಳು ಗೋರವಾಜ್ ತೂಜ್ ಚಿ ಮಾಂಡಲಾ ಕಾಳು ಬಾಪುಡಾ ಹಾ ತ್ರಿಭುವನ ಗೋಳು ಅಲ್ಪಾಯು ಜಾಲಾ (೧೧.೩೮೪)*

ಪ್ರಳಯದ ಸಮಯ ಬಂದಿರಲಿಲ್ಲ. ಗೊರವನೇ, ನೀನೇ ಕಾಲನಾಗಿ ಬಂದೆ. ಈ ದುರ್ದೈವಿ ತ್ರಿಭುವನಗೋಲವು ಅಲ್ಪಾಯುವಾಯಿತು.

ಇಲ್ಲಿಯ ಗೊರವ ಕನ್ನಡ ಶಬ್ದ, *ಗೊರವನಲ್ಲದೆ ಪೋಗಲಿಂ (ಶಬ್ದಮಣಿ-ದರ್ಪಣ ಸೂತ್ರ ೫೭) ಪೊಡವಿಪತಿ ಗೊರವನೆನೆ ಪೆಟ್ಟಿಡೆಯದು (ಕವಿರಾಜಮಾರ್ಗ ೧.೪೯)* ಎಂಬುದಾಗಿ ಉದಾಹರಣೆಗಳು.

ಸಂದರ್ಭದ ಮೇಲಿಂದ 'ಗೋಖಾ' ಶಬ್ದಕ್ಕೆ 'ನಡುವೆಯೇ' ಎಂದು ವ್ಯಾಖ್ಯಾನಕಾರರು ಅರ್ಥ ಹಚ್ಚಿದ್ದಾರೆ. ಇದೇ ತಪ್ಪು ಇನ್ನೊಂದೆಡೆಯಾದದ್ದು ಹೀಗೆ:

*ಹ್ಮಣೇಜ್ ಈಶ್ವರಾತೇಜ್ ಖಾವಿ ತೇಯಾ ವೇದಾ ಕಾಯಿ ವಿಷ ಸೂವಿ*
*ಗೋರವಾಮಾಜಿ ತ್ರಾಯೇ ಭಂಗಿತಸೇ (೧೬.೨೩೧)*

ಈಶ್ವರನನ್ನು ತಿನ್ನುತ್ತೇನೆ. ಆ ವೇದಕ್ಕೆ ವಿಷ ಹಾಕುವುದಿದೆಯೇ ಎನ್ನುತ್ತಾನೆ. ಗೊರವನಲ್ಲಿಯ ತ್ರಾತಭಾವ (ಸು-ರಕ್ಷಿತಾಭಾವನೆ) ವನ್ನು ಭಂಗಗೊಳಿಸುತ್ತಾನೆ.

ರಾಜವಾಡೇ ಪ್ರತಿಯಲ್ಲಿಯ 'ಗೋಖಾ' ಶಬ್ದಕ್ಕೆ ದಾಂಡೇಕರರ ಹಾಗೂ ಇತರರ ಪ್ರತಿಗಳಲ್ಲಿ 'ಗೌರವಾ' ಎಂದು ಪಾಠಭೇದವೂ ಇದೆ. ಮೇಲ್ಕಾಣಿಸಿದ 'ರ+ವ=ಖ' ಈ ಕೈತಪ್ಪಿಗೆ ಇದು ಇನ್ನೊಂದು ಪುಷ್ಟಿ! ಈ ಸಂದರ್ಭದಲ್ಲಿ 'ಗೌರವ' ಶಬ್ದವೂ ಹೊಂದುವುದಿಲ್ಲ. ಆ ಮಾತು ಬೇರೆ.

'ಗೊರವ' ಶಬ್ದವು 'ಗುರವ' ಆಗಿ ಬಳಸಲಾದ ಇನ್ನೊಂದು ಸಂದರ್ಭ

ಲೀಳಾ ಚರಿತ್ರದಲ್ಲಿ:

*ಭೈರವೀಙ್ ಅವಸ್ಥಾನ; ದೀಸ ವೀಸ; ಲೋಣಾರೀಙ್ ತಾರಾತೀರ್ಥೀಙ್ ಆಸನ; ತೇಥ ಕಾನ್ಹದೇವೋ ಆಲಾ ಹೋತಾ; ತೇಥ ಗುರುವೇಙ್ ಸಾಂಘಿತಲೇಙ್ (ವಿಕಾರ ೪೧)*

ಭೈರವನಲ್ಲಿ (ಭೈರವನ ಗುಡಿಯಲ್ಲಿ) ವಾಸ; ಇಪ್ಪತ್ತು ದಿವಸ; ತಾರಾ ತೀರ್ಥದಲ್ಲಿ ಲೋಣಾರ ಊರಿನಲ್ಲಿ ಆಸನ; ಅಲ್ಲಿ (ಸೇವುಣ ಅರಸು) ಕಾನ್ಹದೇವರಾಯ ಬಂದಿದ್ದ; ಅಲ್ಲಿ ಗೊರವನು ಹೇಳಿದ;

ಗೊರವ ಶಬ್ದದ ಎರಡನೆಯ ಅರ್ಥ ಭೈರವನ ಪೂಜಾರಿ. ಇದನ್ನರಿಯದ ಮರಾಠಿ ಪಂಡಿತರು 'ಗುರುವ' ಶಬ್ದಕ್ಕೆ 'ದನಗಾಹಿ' ಎಂದರ್ಥ ಹಚ್ಚಿದ್ದಾರೆ. (ಸಂಸ್ಕೃತ 'ಗೋ' + ಕನ್ನಡ ಪ್ರತ್ಯಯ 'ರು' ಸೇರಿ ಆದ ಮರಾಠಿ ಶಬ್ದದ ಅರ್ಥ 'ಆ+ಕಳ್', 'ಆಕಳು')

**ಘಾಣಾ ಗಾಣ ತಿಲಯಂತ್ರ,**

**ಗಾಳಣೇಙ್ ಹಿಂಡು, ಪೇಂಡ, ಹಿಂಡಿ**

'ತಿಲ'ದಿಂದ 'ತೈಲ', 'ಎಳ್' ನಿಂದ 'ಎಳ್+ನೆಯ್=ಎಣ್ಣೆ' ಸಿದ್ಧವಾಗುವುದೇನೋ ಸುಲಭವೇ. ಆದರೆ ಲಬ್ಧವಾಗುವುದು ಕಷ್ಟಕರ! ಮೊದಲು ಎಣ್ಣೆಕಾಳು ಅರೆಯಬೇಕು. (ಅಥವಾ ಕುಟ್ಟಬೇಕು). ಬಳಿಕ ಹಿಂಡಬೇಕು. ನಂತರ ಸೋಸಬೇಕು. ಆಗ ಎಣ್ಣೆ ಹಾಗೂ ಚರಟ ಸಿದ್ಧ. ಎಳ್ನೆಯ್ ಎಣ್ಣೆ ಎಂದು ಕೇಶಿರಾಜನು ಹೇಳುತ್ತಾನೆ. (ಸೂತ್ರ ೧೪೪) ಎಣ್ಣೆ ಅರೆಯುವ, ಹಿಂಡುವ ಅಥವಾ ಸೋಸುವ ಪ್ರಕ್ರಿಯೆಗಳ ಬಗ್ಗೆ ಸುಯೋಗ್ಯವಾದ ಹಳಗನ್ನಡ ಶಬ್ದಗಳು, ಧಾತುಗಳು ನನಗೆ ದೊರೆತಿಲ್ಲ. *(ಕಬ್ಬಂ) ತುಣ್ದು ತುಣ್ದಾಗಿ ಕತ್ತರಿಸಿ ಗಾಣದೊಳ್ ಅರೆದು* ಎಂದು ಬಸವಪುರಾಣದಲ್ಲಿ (೨೮.೩೦) ಉಲ್ಲೇಖ ಬರುತ್ತದೆ. ಆದರೆ ಎಣ್ಣೆ ಗೊತ್ತಿತ್ತು. *ಸಜ್ಜರಸವೆಣ್ಣೆಯ ತುಪ್ಪದ (ಪಂಪಭಾರತ ೩.೪)* ಸರಿಯೇ. ಅರೆದದ್ದನ್ನು ಹಿಂಡಿದ ಬಳಿಕ ಉಳಿದ ಚರಟ 'ಪಿಂಡಿ' (ಹಿಂಡಿ) ಮರಾಠಿಯಲ್ಲಿ 'ಪೇಂಡ' ಆದದ್ದೂ ಉಂಟು. ಆದರೆ ಗಾಣದ ಕಲ್ಪನೆ ಮೊದಲು ನಮ್ಮಲ್ಲಿ ಇತ್ತೇ, ಎಂದು ಯೋಚಿಸಬೇಕಾಗಿದೆ.

ಉತ್ತರಕರ್ನಾಟಕದ ಆಡು ಮಾತಿನಲ್ಲಿ ಒಳ್ಳೆಣ್ಣೆ (ಒರಳೆಣ್ಣೆ) ಹಾಗೂ ಗಾಣದೆಣ್ಣೆ ಹೀಗೆ ಎರಡೂ ಶಬ್ದಪ್ರಯೋಗಗಳು ರೂಢಿಯಲ್ಲಿವೆ.

ಕರ್ನಾಟಕದಲ್ಲಿ ಮೊದಲು ಎಣ್ಣೆಕಾಳು ಕುಟ್ಟಿ, ಕೈಯಾರೆ ಹಿಂಡಿ, ಎಣ್ಣೆ ತೆಗೆಯುತ್ತಿದ್ದರೇ?

ಜ್ಞಾನೇಶ್ವರಿಯಲ್ಲಿಯ ಈ ಪ್ರಯೋಗಗಳನ್ನು ನೋಡಬೇಕು.

*ಘಾಣಾ ಗಾಳಿಲೇ ಖಿಡೇ ತೇಲ ನಾ ಪೇಂಡಿ ಜೋಡೇ (೧೭.೪೧೬)*

ಹರಳು ಹಾಕಿ ಗಾಣವಾಡಿಸಿದರೆ ಎಣ್ಣೆಯೂ ದೊರೆಯುವುದಿಲ್ಲ.
ಹಿಂಡಿಯೂ ದೊರೆಯುವುದಿಲ್ಲ.

*ಕಾಹಿಜ್ ನ ದಿಸೇ ಗಾಳಿಲೇಯಾಜ್ ವಾಳುವೇಚಾ ಘಾಣಾ (೧೮.೬೧೦)*

ಮರಳು ಹಾಕಿ ಗಾಣ ಆಡಿಸಿದಾಗ ಏನೂ ಕಾಣುವುದಿಲ್ಲ.

*ವಾಳುವೇ ತಿಳಾಜ್ ಘಾಣಾ ಗಾಳಣೇಜ್ ಏಕ (೧೮.೯೩೨)*

ಗಾಣವಾಡಿಸುವಾಗ ಮರಳು, ಎಳ್ಳು (ಯಾವುದು ಹಾಕಿದರೂ
ಆಗುವ ಶ್ರಮ) ಒಂದೇ.

ಇಲ್ಲಿ ಗಾಣವಾಡಿಸುವ, ಎಣ್ಣೆ ತೆಗೆಯುವ ಕಾರ್ಯಕ್ಕೆ ಯೋಜಿಸಲಾದ ಗಾಳಣೇಜ್ ಶಬ್ದವು ವೈಶಿಷ್ಟ್ಯಪೂರ್ಣವಾಗಿದೆ. ಗಾಣಕ್ಕೆ ಕೃತಿರೂಪವಾದ ಗಾಳ ಶಬ್ದ ಬೇಕೇಬೇಕು. ಇಷ್ಟೇ ಅಲ್ಲ, ಗಾಳಣೇಜ್ ಶಬ್ದಕ್ಕೆ ಮರಾಠಿಯಲ್ಲಿ (ಚಹ ಮೊದಲು ಮಾಡಿಕೊಂಡು) ಸೋಸು ಎಂಬರ್ಥವೂ ಇದೆ. ಇದು ಎಣ್ಣೆಯ ಸಂದರ್ಭದಿಂದ ಬಂದದ್ದೆಂಬುದು ಸ್ಪಷ್ಟ. ಜ್ಞಾನೇಶ್ವರಿಯಲ್ಲಿಯ ಈ ಓವಿ ನೋಡಿರಿ.

*ಜ್ಞಾತೃಜ್ಞೇಯ ವಿಹೀನ ನಸುಧೇಜ್‌ಚಿ ಜೇಜ್ ಜ್ಞಾನ*
*ಸುಖಾ ಭರಲೇಜ್ ಗಗನ ಗಾಳೀಜ್‌ವ ಜೇ (೧೫.೭೭)*

ಜ್ಞಾತೃ-ಜ್ಞೇಯಗಳನ್ನು ಕಳೆದು ವಿಶುದ್ಧವಾದ (ಗಾಳೀಜ್‌ವ=
ಸೋಸಿದ) ಜ್ಞಾನವು ಆನಂದದಿಂದ ಆಕಾಶವನ್ನು ತುಂಬಿ
ಕೊಂಡಿತು.

ಈ 'ಗಾಳ' ಧಾತುವಿಗೆ ಯಾವ ಮೂಲವೂ ದೊರೆತಿಲ್ಲ. ಸಂಸ್ಕೃತ 'ಗಲ' ದಲ್ಲಿ ಅರ್ಥಭೇದವಿದೆ.) ಸಂಸ್ಕೃತ 'ಕಣ್ಡ' (ಕುಟ್ಟು) ದಿಂದ ಮರಾಠಿಯಲ್ಲಿ ಕಾಂಡಣೇ ಎಂಬ ಧಾತು ಬಂದಿದೆ. ಅದೇ ಕ್ರಮೇಣ 'ಗಾಳಣೇ' ಆಗಿರಬಹುದಾಗಿದೆ. 'ಗಾಳ' ದಿಂದಲೇ 'ಗಾಣ' ವಾಗಿದೆ. ತಮಿಳು 'ಕಾಣ' ವೆನ್ನುವುದು ಹೆಚ್ಚು ಯೋಗ್ಯವಾದೀತು.

**ಘಾಯ, ಗಾಯ ಹುಣ್ಣು**

*ಕರಣಂಗಳ ಗಾಯಂಗಳ ಪರಿಣತೆಯಂ ಮೆಚಿದು ಪೊಣರ್ದು ಸನ್ನೊಡ್ಡಿಡೆಯೊಳ್ (ಆದಿಪುರಾಣ ೧೪.೧೧೦)* ದಂತಹ ಸಂದರ್ಭದಲ್ಲಿ ಬರುವ 'ಗಾಯ' ಶಬ್ದವು ದೇಶ್ಯವೆಂದು ಕಿಟೆಲ್‌ರು ಭಾವಿಸಿದ್ದರೂ ಆದರ ಮೂಲ ಸಂಸ್ಕೃತ - 'ಘಾ=ಕೊಲ್ಲು' ಈ ಧಾತುವಿನಿಂದ ಸಿದ್ಧವಾದುದೆಂದು ನನ್ನ ಅನಿಸಿಕೆಯಾಗಿದೆ. ಜ್ಞಾನೇಶ್ವರೀಯಲ್ಲಿಯ ಈ ರೂಪಗಳನ್ನು ನೋಡಬಹುದು.

*ಸ್ವಪ್ನಿಚೇನಿ ಘಾಯೇಜ್ ಕಿಜ್ ಮರೇ ಸಾಚೇಜ್ (೬.೭೫)*

ಕನಸಿನಲ್ಲಿಯ ಕತ್ತಳಿಕೆಯಿಂದ ನಿಜಕ್ಕೂ ಸತ್ತಾನೇ?

*ಠಾಣೌರಿಯಾಚೇ ಮನಾವೇ ಆಣಿಕಿಜ್ ಘಾಯೇ (೧೮.೪೩೬)*

(ಯುದ್ಧದಲ್ಲಿ) ಗಾಯಗೊಂಡವನ ಕ್ಷತಿಗಳನ್ನು ಇನ್ನೊಬ್ಬರು
ಎಣಿಸಬೇಕು.

*ಪಾರೀಜ್ ಲಾಗತಾಜ್ ಘಾಇಜ್ ಮರಣ ನ ಚುಕೇಚಿ ಪಾಹೀಜ್ (೧೮.೯೩೮)*

ಬೆಂಬತ್ತಿದ ಕಾಳಗದಲ್ಲಿ ಸಾವು ತಪ್ಪಿದಲ್ಲವೆಂಬುದನ್ನು ತಿಳಿದು-

(ಘಾಈ ಲಾಗಣೇ = ಅವಸರದಲ್ಲಿರು. ಈ ಇಂದಿನ ಮರಾಠಿ ವಾಕ್ಪ್ರಯೋಗದ ಮೂಲ ಇಲ್ಲಿದೆ. 'ಬೆಂಬತ್ತಿದ ಕಾಳಗ'ದ ಆಲಂಕಾರಿಕ ಅರ್ಥವನ್ನು ಇಲ್ಲಿ ಗಮನಿಸಬೇಕು.)

*ದುಃಖಶೋಕಾಚಾಜ್ ಘಾಜ್‌ಇಜ್ ಮಾರಿಲೇಯಾಚೀ ಸೇ ಚಿ ವಾಹಿಜ್ (೭.೧೦೪)*

ದುಃಖಶೋಕಗಳ ದಾಳಿಯಲ್ಲಿ ಸಾಯುವ ಬಗ್ಗೆ ಅನುಮಾನವೇ ಬೇಡ.

ಹೀಗೆ ಘಾತ, ಘಾತಿ ಶಬ್ದಗಳ ಮೂಲದಿಂದಾಗಿ ಘಾಯ, ಘಾಇ ಶಬ್ದಗಳು ಯುದ್ಧ, ಕತ್ತಳಿಕೆ (ಕತ್ತಿಯ ಹೊಡೆತ ಅರ್ಥದಲ್ಲಿಯ 'ಒರೆಯಿನ್ದಿಡುವ ಅರೆವೊಯ್ಲು ಕತ್ತಳಿಕೆ' ಚೆನ್ನಬಸವ ಪುರಾಣ ೫.೧೦೪ - ಕಿಟೆಲ್ಲರಿಗೆ ಅರ್ಥ ಹತ್ತಿಲ್ಲ. ಈ ಶಬ್ದ ಮರಾಠಿಯಲ್ಲಿಯ 'ಕತ್ತಲ' ಶಬ್ದದ ಮೂಲವಿರಬಹುದು) ಅರ್ಥದಲ್ಲಿ ಹುಟ್ಟಿ ಮುಂದೆ ಮರಾಠಿಯಲ್ಲಾಗಲೀ ಕನ್ನಡದಲ್ಲಾಗಲೀ ವ್ರಣ, ಕ್ಷತಿ ಅರ್ಥ ಪಡೆದಿವೆ.

**ಘೇ-ಕೊಳ್ (ಕೊಳ್ಳು)**

ಸಂಯುಕ್ತ ಕ್ರಿಯಾಪದಗಳಲ್ಲಿ ನಾಮಪದಗಳೊಡನೆ, ಕೃದಂತಗಳೊಡನೆ ಕೊಳ್ ಧಾತುವು ಪೂರ್ವಪದದ ಕ್ರಿಯೆಯನ್ನು ಮಾತ್ರ ಸ್ಪಷ್ಟಪಡಿಸುತ್ತದೆ. *ಅಸುಂಗೊಳ್ ಕಣ್‌ಗೊಳ್, ಮಾರ್ಕೊಳ್, ನೆಲೆಗೊಳ್, ಭಯಂಗೊಳ್* ಇತ್ಯಾದಿಯಾಗಿ ಹಳಗನ್ನಡದ ಪ್ರಯೋಗಗಳನ್ನು ಉದಾಹರಿಸಬಹುದು. ಕೊಳ್ ಸಹಾಯಕ ಕ್ರಿಯಾಪದವು ರೂಪಾಂತರಗೊಂಡು-ಘೇ (ಕೊಳ್ಳು) ಆಗಿ ಮರಾಠಿಯಲ್ಲಿ ಸೇರಿದೆ. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳನ್ನು ವೀಕ್ಷಿಸಬಹುದು. ಕೆಲವು ಸಲ ಇಲ್ಲಿ ಕನ್ನಡದ ಮೂಲ ಕೃದಂತಗಳೂ ಸೇರಿಕೊಂಡಿವೆ. (ಅಂಟಿಕೊಳ್ಳು=ಆಂಟೀ ಘೇ, ಆಂಠೀ ಘೇ)

*ಮಗ ಸುಖೇಜ್‌ಸೀಜ್ ಘೇ ಆಂಟೀ ಗಾಢೇಪಣೇಜ್ (೫.೧೩೧)*

ಬಳಿಕ ಸುಖಕ್ಕೆ ಗಾಢವಾಗಿ ಅಂಟಿಕೊಳ್ಳುತ್ತಾನೆ.

*ಪ್ರಿಯೋತ್ತಮಾಚಾಜ್ ಕಂಠಿಜ್‌ಪ್ರಮದಾ ಘೇ ಆಂಟೀ (೧೩.೭೮೪)*

ಪ್ರಿಯಕರನ ಕೊರಳಲ್ಲಿ ಪ್ರಮದೆ ಅಂಟಿಕೊಳ್ಳುತ್ತಾಳೆ. (ಹಾಗೆ-)

(ಕುಳಿತುಕೊಳ್ಳು = ಬೈಸಣೇ ಘೇ)

*ಸ್ಥಾವರಾಜ್‌ಹಿಜ್ ತಳವಟೀಜ್ ಬೈಸಣೇಜ್ ಘೇ (೧೬.೨೬೦)*

ಸ್ಥಾವರಕ್ಕಿಂತಲೂ ಕೆಳಗೆ ಕುಳಿತುಕೊಳ್ಳುತ್ತಾನೆ.

*ಪರಿ ಹೇಜ್ ಆಇಕೋನಿ ಝುಣೇಜ್ ಭಯಘೇಸೀ ಹೋ ಮನೇಜ್ (ದಾಂಡೇಕರ ಪಾಠ ೧೬.೨೬೭)*

ಆದರೆ ಇದನ್ನು ಕೇಳಿ ಕೂಡಲೇ (ನೀನು) ಮನಸ್ಸಿನಲ್ಲಿ ಹೆದರಿಕೊಳ್ಳಬಹುದು.

(ಹೀರಿಕೊಳ್ಳು = ಹಿರೋನಿ ಘೇ)

*ಜೋ ಕರಿತಾ ಹಿರೋನಿ ಘೇ ಶ್ರಮು (ದಾಂಡೇಕರ ಪಾಠ ೧೮.೯೪೯)*

ಯಾವುದನ್ನು ಮಾಡುವಾಗ ಶ್ರಮವನ್ನು ಹೀರಿಕೊಳ್ಳುತ್ತದೆಯೋ-

**೬ - ಎ, ಏ, -ಅ**

ನಾಮಪದಗಳಿಗೆ ಕ್ರಿಯಾಪದಗಳಿಗೆ ಆಯಾ ಭಾವಕ್ಕೆ ಒತ್ತು ಕೊಡುವುದಕ್ಕಾಗಿ ಹಳಗನ್ನಡದಿಂದಲೂ ಎ, ಏ, ಪ್ರತ್ಯಯಗಳನ್ನು ಬಳಸಲಾಗುತ್ತದೆ. ಶಬ್ದಮಣಿದರ್ಪಣದಲ್ಲಿಯ ಉದಾಹರಣೆಗಳು.

*ದೇಸಿಗರಂ ದೇವರ್ಕ್ಕಳ್ಗೊಡೆಯರ ಮಾಟ್ಪುರೆ, ನೀಟ್ಕಿರಿಸಿದ ನಿಮ್ಮ ದೊರೆಗೆ ಬೋಟಿಯರೊಳರೇ (೩೪) ನಡೆನುದೆ ಮಾರ್ಗಂ ಪದವಿಡಲೊಡರಿಸಿದುದೆ ಭಂಗಿ (೩೩೮) ಆನೆಯ ನಡು ಬಡವೇ (ಅದೇ) ಯೋಗವಾಹಮವು ನಾಲ್ಕೆ ವಲಂ (೪೨) ಒರ್ವನೆ ಗಂಡನಲ್ತೆ ಜಗತೀತಳದೊಳ್ (೫೭ ವೃತ್ತಿ) ಹೊರೆವನೆ ಇಂದ್ರಂ ಕೂರ್ಪನೆ ಆಪ್ತಂ (೬೬ ಪ್ರ) ಪೊನ್ನುಳ್ಳವನೆ ಕುಲೀನಂ -ಪೊನ್ನನೆ ಪಡೆವುದು (೭೯ ಪ್ರ.) ಜಿನೇಶ್ವರ ಧರ್ಮವೊಂದೆ ತಾನದು ಶರಣಂ (ಅದೇ) ಎನ್ನ ಮಾತಿನೊಳ್ ತೊದಳುಂಟೇ (ಅದೇ)*

ಇವುಗಳಲ್ಲಿ ಸ್ಪಷ್ಟವಾಗಿ ಬರುವ ಪ್ರಕಾರಗಳು ಎರಡು. 'ಬೋಟಿಯರೊಳರೇ' 'ಆನೆಯ ನಡುಬಡವೇ', 'ಗಂಡನಲ್ತೆ', 'ತೊದಳುಂಟೇ' ಇಲ್ಲಿ ಬರುವ -ಎ, -ಏ ಪ್ರತ್ಯಯಗಳು ಏಂ, ಏನ್, ಏನು, ಇದರ ಸಂಕ್ಷಿಪ್ತ ರೂಪಗಳು. ಅವು ಪ್ರಶ್ನೆ ಕೇಳುವುದಿಲ್ಲ. ಉತ್ತರ ಗೃಹೀತ, ಹೌದು ಅಥವಾ ಇಲ್ಲ. ಅದೂ ಸಂದರ್ಭಕ್ಕೆ ಅನುಸರಿಸಿ. 'ಆನೆಯ ನಡು ಬಡವೇ' ಇದರ ಉತ್ತರ 'ಇಲ್ಲ'. 'ಗಂಡನಲ್ತೆ ಜಗತೀ ತಳದೊಳ್' ಇಲ್ಲಿ ಉತ್ತರ 'ಹೌದು'. 'ಎನ್ನ ಮಾತಿನೊಳ್ ತೊದಳುಂಟೇ' 'ಇಲ್ಲ'. ಈ ಪ್ರಯೋಗ ಸಂಸ್ಕೃತದಿಂದ ಬಂದಿರಬಹುದಾಗಿದೆ. ನೋಡಿರಿ.

*ಕೇ ಆವಾಂ ಪರಿತ್ರಾತುಂ? ದುಷ್ಯಂತಮಾಕ್ರಂದ (ಶಾಕುಂತಲ ೧)*

ರಕ್ಷಿಸುವ ನಾವಿಬ್ಬರಾರು? ದುಷ್ಯಂತನನ್ನು ಕರೆ.

*ಕಿಂ ಕುಲೇನೋಪದಿಷ್ಟೇನ? ಶೀಲಮೇವಾತ್ರ ಕಾರಣಂ (ಮೃಚ್ಛಕಟಿಕ ೯.೭)*

ಕುಲವನ್ನು ಹೇಳಿದರೇನು? ಇಲ್ಲಿ ಶೀಲವೇ ಕಾರಣವು.

ಆದರೆ ಎರಡನೆಯ ಪ್ರಕಾರದಲ್ಲಿ ಬರುವ 'ನಡೆದುದೆ ಮಾರ್ಗ' 'ಧರ್ಮವೊಂದೇ ತಾನದು ಶರಣಂ' ಉದಾಹರಣೆಗಳಲ್ಲಿಯ -ಎ, -ಏ ಕಾರಗಳು ಹೀಗೆ ಅಲಂಕಾರಕ್ಕಾಗಿ ಬಳಸಿದುವಲ್ಲ. ಅವಧಾರಣೆಯೆಂದು ಕರೆಯವಾಗುವ '-ಎ, -ಏ' ದ ಪ್ರಯೋಗಗಳಿವು. ಈ ಪ್ರತ್ಯಯ ಹೇಗೆ ಬಂದಿರಬಹುದು? ವಿವರಣೆಗಾಗಿ ಹೊಸಗನ್ನಡದ ಕೆಲ ಉದಾಹರಣೆಗಳನ್ನು ತೆಗೆದುಕೊಂಡರೆ ತಪ್ಪಾಗಲಿಕ್ಕಿಲ್ಲ.

*ಅವನೇ ಈ ಕೆಲಸವನ್ನು ಮಾಡಿದನು. ನಾನೇ ಊರಿಗೆ ಹೋದೆನು.*
*ಆ ಹುಚ್ಚನೇ ನನ್ನ ಮೈಮೇಲೆ ಏರಿ ಬಂದನು*

ಇವುಗಳನ್ನು ಹೀಗೂ ಹೇಳಬಹುದು.

*ಅವನಾಗಿ (ಅವನು ತಾನಾಗಿ) ಈ ಕೆಲಸವನ್ನು ಮಾಡಿದನು. ನಾನಾಗಿ ಊರಿಗೆ ಹೋದೆನು.*

*ಆ ಹುಟ್ಟನು ತಾನಾಗಿ ನನ್ನ ಮೈಮೇಲೆ ಏರಿ ಬಂದನು.*

ಇಲ್ಲಿ 'ಆಗು'ವ ಯಾವ ಪ್ರಕ್ರಿಯೆಯೂ ಇಲ್ಲ. ಆದರೆ ಅವಧಾರಣೆಯು ಒತ್ತು ಕೊಡುತ್ತದೆ.

'ಆಗು' (ಆಗು) ಮತ್ತು 'ಅದು' (ಉದು) ಇವು ಸಮಾನಾರ್ಥಗಳು, ಎನ್ನುವುದಕ್ಕಿಂತ ಒಂದೆಯೆ ಮೂಲದ ಎರಡು ರೂಪಗಳು. -'ಕುಂ' ಮತ್ತು -'ಉದು' ಈ ಪ್ರತ್ಯಯಗಳ ಕಾರ್ಯವನ್ನು ನೋಡಿದರೆ ಇದು ಸ್ಪಷ್ಟವಾದೀತು. ಕಾಲ್ಯಾರ್ಥದಲ್ಲಿಯ 'ಆಗ' ಶಬ್ದದ ಕೆಲಸವನ್ನು 'ಅದೇ' ಕೂಡ ಮಾಡುತ್ತದೆ. 'ಅದು', ಅದರ ಸಂಕ್ಷಿಪ್ತರೂಪವಾದ 'ಅ' 'ಆ' ಇವು ಷಷ್ಠಿಯ ಪ್ರತ್ಯಯಗಳು.

ಎರಡನೆಯಸಲ ಹತ್ತುವ ಈ ಷಷ್ಠಿಯ ಪ್ರತ್ಯಯಗಳು ಅವಧಾರಣ ಸಾಧಿಸಿದುದನ್ನು ನಾವು ಬಸವಪುರಾಣದಲ್ಲಿ ಕಾಣುತ್ತೇವೆ. *ಎನ್ನಯ ಕಂಠಂ (೧೩.೧೨) ಎಮ್ಮಯ ತೊತ್ತು (೨೪.೮೭) ಎಮ್ಮಯ ಜಂಗಮಂ (೨೬.೪೮) ತನ್ನಯ ಮಡದಿ (೧೧.೩೬) ತನ್ನಯ ನೆಟಿಲ್ (೪೨.೫)* ಹಳಗನ್ನಡದಲ್ಲಿ ಹೀಗೆ

*ನುಡಿ ನಿನಗಂ ದಿನೇಶ ತನಯಂಗಮದೆನ್ನಯ ಪಕ್ಕವಾದೊಡಂ (ಪಂಪಭಾರತ ೧೩.೨೮) ಆತನಯ ತೋರದೊಡೆಗಳಿವಾತನ ನಿಡಿದೋಳ್, ಅವಳಯ, ಅದಱಯ (ಶಬ್ದಮಣಿದರ್ಪಣ ೫೩ ಪ್ರ.)* ಈ 'ಯ' ಪ್ರತ್ಯಯವು ಕನ್ನಡದಲ್ಲಿ 'ಎ' 'ಏ' ರೂಪ ಹೊಂದಿತು. ಅಂದರೆ ಸಂಬಂಧವಾಚಕ ಷಷ್ಠಿಯ ಅವಧಾರಣೆಯನ್ನೂ ಸಾಧಿಸವುದೆಂದಂತಾಯಿತು. ಮರಾಠಿಯಲ್ಲಿ ಷಷ್ಠಿಯ ಪ್ರತ್ಯಯ 'ಚ' ಎಂಬುದನ್ನು ಈಗಾಗಲೇ ನೋಡಿದ್ದೇವೆ. ಹೀಗೆ ಮರಾಠಿಯಲ್ಲಿ ಅವಧಾರಣೆಗಾಗಿ (ಚ) 'ಚಿ' ಬಳಸಲಾಗಿದೆ. ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳು.

*ತರಿ ದೇವ ಚಿ ಖಾಏ ವಿಕೂನಿಯಾಜ್ (೧೮.೫೬೬)*

ಆಗ ದೇವರನ್ನೇ ಮಾರಿ ತಿನ್ನುವರು

*ತೇಜ್ ಚಿ ಸಾಚ ಹೇ ಪ್ರತೀತಿ (೧೮.೫೭೦)* ಅದೇ ಸತ್ಯವೆಂಬ ಅನುಭವವು.

*ದ್ರಾಕ್ಷಿಚೇಯಾ ತರಿ ಬುಢಾ ದೂಧಚಿ ಲಾವಿಜೇ (೧೮.೫೯೩)*

ದ್ರಾಕ್ಷಿ (ಬಳ್ಳಿಯ) ಬುಡಕ್ಕೆ ಹಾಲನ್ನೇ ಹಚ್ಚುವರು. (ತುಳಸಿಗೆ ದೂರಿನಿಂದ ನೀರು ಸಿಂಪಡಿಸಿ)

ಮರಾಠಿ ಪಂಡಿತರು 'ಚಿ (ಚ)' ಶಬ್ದವನ್ನು (ಪ್ರತ್ಯಯವಲ್ಲ!) 'ಚೈವ' ಈ ಸಂಸ್ಕೃತ ಶಬ್ದದಿಂದ ಸಾಧಿಸಲು ಪ್ರಯತ್ನಿಸಿದ್ದಾರೆ. 'ಚೈವ' ಇದು 'ಚ + ಏವ' ಹೀಗೆ ಹುಟ್ಟಿದುದು. ಸಂಸ್ಕೃತದ 'ಚ' ಅಪಭ್ರಂಶದಲ್ಲಿ 'ಅ' ಆಗುತ್ತದೆ. ತಗಾರೆಯವರು ಕೊಟ್ಟ ಈ ಉದಾಹರಣೆ ನೋಡಿರಿ.

*ಮಹಾರಾಷ್ಟ್ರೀ ಅಪಭ್ರಂಶ. ಅಮಿಅಂ ಪಾಉಅಕವ್ವಂ ಪಢಿಉಂ ಸೋಉಂ ಅ ಜೇಣ ಆಣಂತಿ*

*ಸಂಸ್ಕೃತ : ಅಮೃತಂ ಪ್ರಾಕೃತ ಕಾವ್ಯಂ ಪಠಿತುಂ ಶ್ರೋತುಂಚ ಯೇ ನ ಜಾನಂತಿ (ಮರಾಠೀ ವಿಶ್ವಕೋಶ ೧೩.೪೬೯)*

ಅದರಂತೆ 'ಏವವು 'ಎವ್ವ' ವಾಗುತ್ತದೆ. ನೋಡಿರಿ.

*ಆಕಹಿದೇವಿ ಏದಂ ಸಂಪಜ್ಜಇ ಜದೋ ಏಕ್ಕಂ ಎವ್ವ ಣೋ ಜೀವಿದಂ*
*ಆಕಥೀತೇಪಿ ಏತತ್ ಸಂಪದ್ಯತೇ ಯತ್ ಏಕಮೇವ ನೌ ಜೀವಿತಂ*
*(ಶಾಕುಂತಲ ೬)*
*ಮಏ ವಿ ಮಿಪ್ಪಿಂಡ ಬುದ್ಧಿಣಾ ತಹ ಎವ್ವ ಗಹೀದಂ*
*ಮಯಾಪಿ ಮೃತ್‌ಪಿಂಡ ಬುದ್ಧಿನಾ ತಥೈವ ಗೃಹಿತಮ್ (ಅದೇ)*

**ಚಿಮೂಟಣೇಜ್ ಚಿವುಟು,**

**ಚಿಮುಟಾ, ಚಿಮಟಿ**

ಚಿವುಟು ಇದು ಕನ್ನಡದಲ್ಲಿಯ ಪ್ರಮಾಣಿತ ಹಾಗೂ ಜನಪದ ಭಾಷೆಗಳಲ್ಲಿ ಪ್ರಚಾರದಲ್ಲಿರುವ ಶಬ್ದ. ಹಳಗನ್ನಡ ಸಾಹಿತ್ಯದಲ್ಲಿ ನನಗೆ ಇದರ ಪ್ರಯೋಗ ದೊರೆಯಲಿಲ್ಲ. ಆದರೆ ಶಬ್ದಮಣಿದರ್ಪಣದ ಧಾತುಪ್ರಕರಣದಲ್ಲಿ ಕೇಶಿರಾಜನು 'ಚಿವುಡು', 'ನಖಚ್ಛೇದೇ', (ಉಗುರಿನಿಂದ ಕತ್ತರಿಸಿ ಹಾಕುವುದು) ಶಬ್ದ ಕೊಟ್ಟಿದ್ದಾನೆ. ಬಹುಶಃ ಇದು ಎಲೆ ಹೂಗಳಿಗೆ ಅನ್ವಯವಾಗುವ ಕ್ರಿಯೆ. ಇದಕ್ಕೆ ಹತ್ತಿರವಾದದ್ದು ಹಿಂಸಿಸುವ 'ಚಿವುಟ್ಟು'. ತೋರು ಬೆರಳು ಹೆಬ್ಬೆರಳುಗಳ ತುದಿಗಳಿಂದ ಒತ್ತುವುದು. ಬಳಿಕ ಇನ್ನೂ ಒಂದಿಷ್ಟು ಅರ್ಥಾಂತರ. ಇಲ್ಲಿ ಹಿಂಸೆ ಅಭಿಪ್ರೇತವಿಲ್ಲ. ಆ ಬೆರಳ ತುದಿಗಳಲ್ಲಿ ಹಿಡಿಸುವಷ್ಟು ಎಂಬರ್ಥದಲ್ಲಿ ಚಿಮಟಿ ಹಿಟ್ಟು, ಚಿಮಟಿ ಉಪ್ಪು ಇತ್ಯಾದಿಯಾಗಿ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು ಇಂತು.

*ಜಿಜ್‌ತಿಯಾ ಮಾಸಾಚೇ ಚಿಮುಟೇ ತೋಡಿತಿ ಜೇಥ (೧೭.೨೫೭)*
ಜೀವಿಸಿರುವಾಗಲೇ (ತಮ್ಮ ಮೈ) ಮಾಂಸದ ಚಿಮುಟಿಗಳನ್ನು ಎಲ್ಲಿ ಕಿತ್ತುತ್ತಾರೋ-

*ತೇ ವಜ್ರಾಸನೇ ಚಿಮೂಟಲೀ ಸಾವಧ ಹೊಯೇ (೬.೨೨೫)*
ಅದು (ಕುಂಡಲಿನಿಯು) ವಜ್ರಾಸನವು ಚಿವುಟಿದಾಗ ಎಚ್ಚರಗೊಳ್ಳುತ್ತದೆ.

**ಚೀಮೋರೆ, ಛೀಮಾರಿ**

'ನಿಂದನೆ', 'ನಿರ್ಭರ್ತ್ಸನೆ' ಅರ್ಥಗಳಲ್ಲಿ ನಾವಿಂದು 'ಛೀಮಾರಿ' ಶಬ್ದವನ್ನು ಬಳಸುತ್ತೇವೆ. ಹಿಂದಿನ ಯಾವ ಗ್ರಂಥಗಳಲ್ಲೂ ಈ ಶಬ್ದ ಬರುವುದಿಲ್ಲ. 'ಚಿಃ' ಶಬ್ದವೇನೋ ಜುಗುಪ್ಸಾರ್ಥದಲ್ಲಿ ಪಂಪಭಾರತದಲ್ಲಿ ಬಳಸಲಾಗಿದೆ. *ಚಿಃ ತುಱುಗೊಳೆ ಬಾಟೆಮೆಂದು (೮.೯೫)*

ಮೋರೆ ಎದುರು ('ಮಾರಿ' ಇದು ಉತ್ತರಕರ್ನಾಟಕದ ಜನಪದ ಶಬ್ದ) ನಿಂದಿಸುವುದು, ಬೈಯ್ಯುವುದು, 'ಛೀಮಾರಿ'. ಇದರ ಗ್ರಾಂಥಿಕವಿರಬಹುದಾದ ರೂಪ 'ಚೀಮೋರೆ.' ಮರಾಠಿಯಲ್ಲಿ ಅದೇ ರೂಪದಲ್ಲಿ ಅದೇ ಅರ್ಥದಲ್ಲಿ ಹೋಗಿ ಲೀಳಾ ಚರಿತ್ರದಲ್ಲಿ ಹೀಗೆ ಬಳಸಲಾಗಿದೆ.

ಪ್ರಸಂಗ ಹೀಗೆ. ಚಕ್ರಧರರ ಸಂಜೆಯ ಪೂಜೆಯ ಹೊತ್ತಿನಲ್ಲಿ ಭಕ್ತರು ಬಂದಿದ್ದರು. ಪೂಜೆಯಾಯಿತು. ಅವರೆಲ್ಲ ಎದ್ದು ಹೋದರು. ಒಳಗೆ ಕಂಬದ ಮರೆಯಾಗಿ ಇಂದ್ರಭಟರ ಹೆಂಡತಿ ಗೌರಾಯಿ ಮಾತ್ರ ಮಲಗಿದ್ದಳು. ನಂತರ ಚಕ್ರಧರರ ಲಕ್ಷ್ಯಕ್ಕೆ ಬಂದಾಗ ನಾಗೂಬಾಯಿಯಿಂದ ಅವಳನ್ನು ಎಚ್ಚರಿಸಿದರು. ಅವಳೂ ಎದ್ದು ಚಕ್ರಧರರ ಕಾಲೊತ್ತತೊಡಗಿದಳು. ಮಗ ಪದ್ಮನಾಭಿ ಹುಡುಕುತ್ತಾ ಬಂದ. ಮುಂದೆ

*ರಾತ್ರೀಚ್ ಗೌರಾಇಸಾಚ್ಸಿ ಇಂದ್ರಭಟ ಕೋಪೋಚ್ ಲಾಗಲೇ: ಚೇಮೋರೆ ಘೇತಿ; ಇಸಾಳು ಕರೀತಿ (ಪೂರ್ವಾರ್ಧ ೧೮೮)*

ರಾತ್ರಿಯಲ್ಲಿ ಇಂದ್ರಭಟರು ಗೌರಾಯಿಗೆ ಸಿಟ್ಟು ಮಾಡಿದರು: ಚೀಮೋರೆ ಹಾಕಿದರು; ದುಃಖಪಟ್ಟರು.

**ಚಿಳಸಣೇಚ್ ಕೀಟ್+ಅಸು**

ಅಧಮ, ನೀಚ ಅರ್ಥದಲ್ಲಿ ಹಳಗನ್ನಡದಲ್ಲಿ ಕೀಟ್ ಶಬ್ದ ಬಳಸಲಾಗಿದೆ. ಉದಾ: *ಕುದುರೆಗಳ್ ಕುದುರೆಯುಂ ಕಿಟಾಡೆ (ಪಂಪಭಾರತ ೫.೨೬) ಕಪಿ ಪೊಜಗಿರೆ ಕೀಟ್ ಒಳಗಿರೆ ಅಪಿರಲಮೋ (ಶಬ್ದಮಣಿದರ್ಪಣ ೧೪೫)*

ಧಾತುಗಿಸು ಕನ್ನಡಕ್ಕೆ  ಎಂದು ಕೇಶಿರಾಜನು ಹೇಳುವಂತೆ (ಸೂ. ೨೪೨), ಕೀಟ್ ಶಬ್ದದಿಂದ ಕೀಟಿಸು, ಕಿಟಿಸು ಎಂದು ಧಾತು ಸಿದ್ಧವಾಯಿತು. ಈ ಕೀಟಿಸು ಜ್ಞಾನೇಶ್ವರಿಯಲ್ಲಿ ಚಿಳಸ ಆಗಿ ಹೋಗಿದೆ.

ಮೂಲ 'ಕ' ಕಾರವು ಮರಾಠಿಯಲ್ಲಿ 'ಚ'ಕಾರವಾಗುವುದು ವಿಶೇಷವಲ್ಲ. *ಮಿಾ ಪಾರ್ಥು ದ್ರೋಣಾಚಾ ಕೇಲಾ (೨.೩೭)*  ಇಲ್ಲಿ ಚೇಲಾ (ಶಿಷ್ಯ) ಶಬ್ದದ ಮೂಲವನ್ನು ನೋಡಬಹುದು. ಅದರಂತೆ ಕಂದುಕ = ಚೆಂಡು

*ಕಿಂ ಬಹುನಾ ಚಿಳಸೀ ಪಾತ್ರ ಹೋಈನ (೧೩.೫೭೨)*

ಅಥವಾ (ಅವರ) ಕೀಳ್ಮೆಗೆ ಪಾತ್ರನಾದೇನು.

*ತೇಹಿಚ್ ಸಾಂಘೋಚ್ ಚಿಳಸಾ ಝುಸೇಚ್ ತುಹ್ಮೇಚ್ (೧೭.೧೫೨)*

ಅದನ್ನು ಹೇಳುವುದು ನಿಮಗೆ ಕೀಳೆನಿಸಬಹುದು.

**ಚುರುಮುರೀಚ್ ಚುರುಮುರಿ, ಕಾರಬೆಂಕಿ**

'ದಾಹ' ಅರ್ಥದಲ್ಲಿಯ 'ಚುರ್ಚು' ಹಳಗನ್ನಡ ಧಾತುವಿನ ಪ್ರಯೋಗಗಳು ಇಂತಿವೆ. *ಉರಿವ ಕೈದೀವಿಗೆಗಳೊಳ್ ಮೊಗಮಂ ಚುರ್ಚುವರುಂ (ಆದಿಪುರಾಣ ೫.೮೫ ವ) ಚುರ್ಚಿದವೋಲ್ ಬಿಸಿಲ್ ಅಳುರೆ (ಶಬ್ದಮಣಿದರ್ಪಣ ಸೂತ್ರ ೩೩೩) ಚುರ್ಚುಂಗೊಳ್ಳಿ (ಶಬ್ದಮಣಿದರ್ಪಣ ಸೂತ್ರ ೧೮೧)*

'ಇಸು' ಪ್ರತ್ಯಯಕ್ಕೆ ಬದಲಾಗಿ ಬರುವ 'ಚು' ಪ್ರತ್ಯಯವನ್ನು ಗಮನಿಸಿದರೆ (ಶಬ್ದಮಣಿದರ್ಪಣ ಧಾತು ಪ್ರಕರಣ) 'ಚುರ್' ಶಬ್ದದ 'ದಾಹ' ಅರ್ಥದ ನಾಮಪದ ಸ್ಪಷ್ಟವಾಗುತ್ತದೆ.

'ತೀಕ್ಷ್ಣ' ಅರ್ಥದಲ್ಲಿಯ 'ಚುಱುಕು' ಶಬ್ದದತ್ತಲೂ ಲಕ್ಷ್ಯವೇಧಿಸಬೇಕು. ಇಲ್ಲೂ 'ಕು' ಪ್ರತ್ಯಯವನ್ನೂ ಬೇರ್ಪಡಿಸಿದರೆ ದೊರೆಯುವ 'ಚುಱು' ನಾಮಪದ ಅದೇ 'ತೀಕ್ಷ್ಣ' ಅರ್ಥದ್ದು.

ಇನ್ನು ಸಂಸ್ಕೃತದ 'ತೀಕ್ಷ್ಣ' ಶಬ್ದಕ್ಕೆ 'ಹರಿತವಾದ', 'ಬಿಸಿ', 'ಕಾರ', 'ಆವಸರದ' ಹೀಗೆಲ್ಲ ಅರ್ಥಗಳು. ಉಭಯಭಾಷಾಕೋವಿದರ ಬಳಕೆಯಿಂದಾಗಿ 'ಚುರ್' (ಚುಱು)' ಶಬ್ದಕ್ಕೆ ಇವೆಲ್ಲ ಅರ್ಥಗಳು ಒದಗಿದವು. ಮೂಲತಃ ಚುರ್ (ಚುಱು) ಶಬ್ದಕ್ಕೆ 'ಕಾರ' ಅರ್ಥವಿರಲಿಲ್ಲವೆಂಬುದು ಸ್ಪಷ್ಟ. ಈ 'ತೀಕ್ಷ್ಣ' ಶಬ್ದದ ಅರ್ಥಭೇದಗಳಿಂದಾಗಿ ಬಹಳೇ ಕಾರವಿದ್ದದ್ದನ್ನು ಕನ್ನಡದಲ್ಲಿ 'ಕಾರಬೆಂಕಿ'ಯೆಂದು ಹೇಳುತ್ತೇವೆ. ಮರಾಠಿಯಲ್ಲಿ ಇದು 'ತಿಖಟಜಾಳ' (ಜಾಳ=ಜ್ವಾಲೆ) ಆಗುತ್ತದೆ. (ಇಂಗ್ಲೀಷಿನಲ್ಲೂ hot ಶಬ್ದಕ್ಕೆ ಕಾರ ಮತ್ತು ಬಿಸಿ ಇವೆರಡೂ ಅರ್ಥಗಳಿವೆ. ಇದು ಬಹುಶಃ ಭಾರತೀಯ ಭಾಷೆಗಳ ಬಳುವಳಿ)

ಇದೇ ಹಳಗನ್ನಡದಲ್ಲಿ 'ಚುರಂ+ಉರಿ' ಹೀಗೆ 'ಚುರುಮುರಿ' ಆಗಿರಲು ಸಾಕು. ಇದುವೆ 'ಕಾರಬೆಂಕಿ' ಅರ್ಥದಲ್ಲಿ ಮರಾಠಿಗೆ 'ಚುರುಮುರಿ' ಎಂದಾಗಿ ಹೋಗಿದೆ. (ಮಂಡಕ್ಕಿ ಪುರಿ ಅರ್ಥದಲ್ಲಿಯ ಇಂದಿನ 'ಚುರುಮರಿಗೂ' ಈ ಶಬ್ದಕ್ಕೂ ಅರ್ಥಾಅರ್ಥೀ ಯಾವ ಸಂಬಂಧವೂ ಇಲ್ಲ) ಇಷ್ಟೊಂದು ಆಯಾಮವನ್ನು ಒದಗಿಸಿಕೊಟ್ಟ ಈ ಹಳಗನ್ನಡ ಶಬ್ದದ ಒಮ್ಮೆ ಮಾತ್ರ ಪ್ರಯೋಗವಾದದ್ದು ಜ್ಞಾನೇಶ್ವರೀಯಲ್ಲಿ ಹೀಗೆ-

*ಆಧಿಜ್ ಚಿ ದ್ರವ್ಯೇಜ್ ಚುರುಮುರೀಜ್ ವರಿ ಪರಿವಂಡಿಲೀಜ್ ಮಹುರೀಜ್*
*ಜಿಯೇ ಘೇಜ್‌ತಾಜ್ ಹೋಯೇ ಧುವಾರೀ ನಾಕ ತೋಂಡಾಚೀ (೧೭.೧೪೫)*

ಮೊದಲೇ ಪದಾರ್ಥಗಳು ಕಾರಬೆಂಕಿ. ಮೇಲೆ ಸಾಸುವೆ (ಅರೆದು) ಹಾಕಿದುದು. ಅವನ್ನು ತೆಗೆದುಕೊಂಡರೆ ಮೂಗು-ಬಾಯಿ (ಕೂಡಿಯೇ) ಉರಿಯಬೇಕು!

**ಜಗತೀ ಜಗಲಿ, ಕಟ್ಟೆ**

'ಜಗತಿ'ಯೆಂದರೆ 'ಜಗಲಿ' 'ವೇದಿ'ಯೆಂದು ನಾನಾರ್ಥ ರತ್ನಾಕರ (೮೬) ಹೇಳುತ್ತದೆ. ಕಪ್ಪುರವಳುಕಿನ ಜಗುಲಿಯ ಮೇಗಣ ಕುಸುಮದೆಸಳ್- ಎಂದಾಗಿ ಜಗಲಿ ಶಬ್ದದ ಪ್ರಯೋಗ ಆದಿಪುರಾಣದಲ್ಲಿ (೧೧.೭೩ ವ) ದೊರೆಯುತ್ತದೆ. ಈ 'ಜಗತಿ' ಶಬ್ದ ಅದೇ ಅರ್ಥದಲ್ಲಿ ಲೀಳಾಚರಿತ್ರದಲ್ಲಿ ಬಳಸಲಾಗಿದೆ.

*ಜಗತಿಜ್‌ಆಜ್‌ತು ಗುಂಫೇ ಆವಸ್ಥಾನ ಜಾಲೇಜ್ (ಪೂರ್ವಾರ್ಧ ೧೦೩)*
ಜಗುಲಿಯ ಮೇಲಿನ ಪರ್ಣಕುಟಿಯಲ್ಲಿ ವಾಸವಾಯಿತು.
*ಜಗತೀಜ್ ಆಜ್‌ತು ಲಿಂಗಾಚಾಜ್ ದೇಉಳೀಜ್ ವಸತಿ (ಪೂರ್ವಾರ್ಧ ೧೧೨)*
ಜಗುಲಿಯ ಮೇಲಿನ ಲಿಂಗದ ಗುಡಿಯಲ್ಲಿ (ಬಸವಣ್ಣನ ಗುಡಿಯಲ್ಲಿ) ವಾಸ.

**ಜಾಕಳಣೇಜ್ ಜಕ್ಕುಳಿಸು,**

**ಗುತಕುಲಿ ಕಚಗುಳಿ**

'ವಿಲಾಸ', 'ನರ್ಮಕರಣ' 'ಚಕ್ಕಂದ' ಅರ್ಥದಲ್ಲಿಯ ಹಳಗನ್ನಡದ ಧಾತು 'ಜಕ್ಕುಲಿಸು' ಪಂಪರಾಮಾಯಣದಲ್ಲಿ ಹೀಗೆ ಪ್ರಯುಕ್ತವಾಗಿದೆ. *ಕುಚಚೂಚುಕಗಳಿಂದೆಸೆವ ತೋಳಮೊದಲಂ ಜಕ್ಕುಲಿಸುವ ಪೆರ್ಮೊಗಲೆ ಕಂನೆಯ್ದಿಲೆಸಳಂ.. (೩.೧೩೩ ವ)* ವರ್ಧಮಾನ ಪುರಾಣದಲ್ಲಿ *ಎತ್ತಿದ ಪಟಯಿಗೆ ಜಕ್ಕುಲಿಸುತಿರೆ (೮.೩)* ಈ ಶಬ್ದ 'ಜಾಕಳ'ವಾಗಿ ಜ್ಞಾನೇಶ್ವರಿಯಲ್ಲಿಯೂ ಅದೇ ಅರ್ಥದಲ್ಲಿ ಬಳಸಲಾಗಿದೆ.

*ದೀಠಿ ಜಾಕಳೂನಿ ನಿಗೋಜ್ ಪಾಪಿ (೬.೨೬೭)*

(ರೆಪ್ಪೆಗಳ ಹಿಡಿತದಲ್ಲಿ ಸಾಲದೆ) ದೃಷ್ಟಿ ಮೋಜಿನಿಂದ ಹೊರಡಲು ನೋಡುತ್ತದೆ.

*ಆತಾಜ್ ದೇವಾಚೇಯಾ ಐಸೇಜ್ ಜಾಕಳಿಪತ ಪೋರಸೇಜ್ (೧೪.೬೨)*

ಆಗ ಭಗವಂತನ ಇಂತಹ ಸಲ್ಲಾಪದ (ನಿರೂಪಣದ) ಪ್ರವಾಹವು.

*ಜಾಕಳಿಲಾ ಢೇಜ್‌ಕರೇಜ್ ತೃಪ್ತು ಜೈಸಾ (೧೮೧೭)*

(ಉಂಡು) ತೃಪ್ತನಾದವನು ಆನಂದದಿಂದ ತೇಗಿದಂತೆ.

*ತುಜ ದೀಧಲಾ ಕಣಾವಾ ಜಾಕಳಿಲೇಪಣೇಜ್ (೧೮.೧೩೧೮)*

(ನಾವು ಇಡುಗಂಟನ್ನು) ನಿನಗೆ ಮಮತೆಯಿಂದ ಆನಂದದಿಂದ ಕೊಟ್ಟಿದ್ದೇವೆ.

*ತರಿ ವ್ಯಭಿಚಾರರಹಿತೇಜ್ ಭಕ್ತಿಯೋಗೇಜ್ ಮಾತೇಜ*

*ಸೇವಿತೋ ಗುಣಾತೇಜ್ ಜಾಕಳೂಜ್‌ಸಕೇ (೧೪.೩೬೮)*

'ಜಾಕಳ' ಶಬ್ದದ ಬಗ್ಗೆ ವಿಸಂವಾದಿಯಾಗಿ ಬಂದ ಪ್ರಯೋಗವಿದು. ಇದಕ್ಕೆ 'ಜಾಕಳೂಜ್‌ನ' 'ಜಾಳೂಜ್' ಎಂದಾಗಿ ಪಾಠಭೇದಗಳೂ ಇವೆ. ಈಗ ಇದ್ದಂತೆ ಮೊದಲಿನ ಮೂರು ಪಾದಗಳ ಅರ್ಥ ಹೀಗೆ-

ಆದ್ದರಿಂದ ಅವ್ಯಭಿಚಾರಿಯಾದ ಭಕ್ತಿಯಿಂದ ನನ್ನ ಸೇವೆ ಮಾಡುವವನು ಗುಣಗಳನ್ನು

ಈ ಓವಿಗೆ ಆಧಾರಭೂತವಾದ ಭಗವದ್ಗೀತೆಯಲ್ಲಿಯ ಶ್ಲೋಕವಿದು.

*ಮಾಂ ಚ ಯೋऽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ*

*ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ (೧೪.೨೬)*

ಆದುದರಿಂದ ಇತರ ಓವಿಗಳಲ್ಲಿಯಂತೆ 'ಜಾಕಳ' ಕ್ಕೆ 'ಆನಂದಿಸು' ಎಂದು ಅರ್ಥ ಹಚ್ಚುವುದು ತರವಲ್ಲ. ಜಕ್ಕುಲಿಸು ಈ ಧಾತುವಿಗೆ 'ಸೋಲಿಸು, ಹಿಮ್ಮೆಟ್ಟಿಸು ಎಂದು ಅರ್ಥವೂ ಇದೆ. ಈ ಸಂದರ್ಭ ನೋಡಿರಿ.

*ಜವನಂ ಜಕ್ಕುಲಿಪಂತೆ ಮಾರಿಗಿದಿರಂ ಪೋಪಂತೆ (ರಾ.ಏ.ಸೋ.ಮುಂ.ಶಾ. ಪತ್ರಿಕೆ ಹತ್ತು ೨೪೩-೨೮ ದಲ್ಲಿ ಪ್ರಸಿದ್ಧಿಸಿದ ಶಿಲಾಲೇಖದಿಂದ ಕ್ರಿ.ಶ. ೧೨೧೯)*

ಹೀಗೆ ಓವಿಯ ಕೊನೆಯ ಅರ್ಧ ಪಾದವನ್ನು (ಸತ್ವರಜತಮ) ಗುಣಗಳನ್ನು ಸೋಲಿಸಲು ಶಕ್ತನಾಗುವನು. ಹೀಗೆ ಅರ್ಥವಿಸಬಹುದು. ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ (೧೪.೨೫) ಈ ಗೀತೋಕ್ತಿಗೆ ಇದು ಅನುಗುಣವಾಗುವುದು.

ಹಳಗನ್ನಡ 'ಜಕ್ಕುಲಿಸು' ಧಾತುವಿಗೆ 'ಕಚಕುಳಿ ಇಡು' ಎಂಬರ್ಥವೂ ಇದೆ. ಕಿಟೆಲ್‌ರು 'ಕಚಗುಳಿ' ಶಬ್ದ ಕೊಡುವುದಿಲ್ಲ. ಕನ್ನಡನಿಘಂಟುಕಾರರು ಇದನ್ನು ಕೊಟ್ಟರೂ ಮೂಲ ತಿಳಿಯದೆ ಪ್ರಶ್ನೆ ಚಿಹ್ನೆ ಹಾಕಿದ್ದಾರೆ. ವಸ್ತುತಃ ಕಚಕುಳಿ ಶಬ್ದ 'ಜಕ್ಕುಲಿಸು'ದಿಂದಲೇ ಬಂದುದಾಗಿದೆ. ಇಷ್ಟೇ ಅಲ್ಲ, 'ಕಚಕುಳಿ' ಶಬ್ದವು ನಮಗೆ ಹಳಗನ್ನಡ ಸಾಹಿತ್ಯದಲ್ಲಿ ದೊರೆಯದಿದ್ದರೂ ರೂಢಿಯಲ್ಲಿ ಇರಲೇಬೇಕು. ಇದಕ್ಕೆ ಕಾರಣ ಇದೇ ಅರ್ಥದ ಇದರ ಮರಾಠಿರೂಪ 'ಗುತಕುಲಿ'. ಸಾಧ್ಯವಿದ್ದಷ್ಟು ಮರಾಠೀ ಶಬ್ದಗಳ ಮೂಲಗಳನ್ನು ಸಂಸ್ಕೃತ, ಪ್ರಾಕೃತ ಇತ್ಯಾದಿ ಭಾಷೆಗಳಲ್ಲಿ ಅರಸುವ ಸಂಶೋಧಕರು 'ಗುತಕುಲಿ' ಶಬ್ದ ದೇಶೀನಾಮಮಾಲೆಯಲ್ಲಿಯ 'ಗಂಜೋಲ್ಲಿಅಂ' ಶಬ್ದಕ್ಕೆ ಜೋಡಿಸಿದ್ದಾರೆ.[12] ಜ್ಞಾನೇಶ್ವರಿಯಲ್ಲಿಯ ಪ್ರಯೋಗ :

*ಹೃದಯಾಚಾಜ್ ಜೇಜೀಜ್ ಗುತಕುಲಿಯ ಹೋಜ್‌ಶೀ ಆಥಿ (೭.೧೮೫)*

ಅವನ ಹೃದಯಾಂತರಾಳದಲ್ಲಿ ಕಚಕುಳಿಯಾಗತೊಡಗಿತು.

**ಜಾಯೇ, ಜಾವಿ, ಪೋಗು, ಹೋಗು**

ಯಾವುದೊಂದು ಕ್ರಿಯೆಯನ್ನು ಗಟ್ಟಿಸಿ ಹೇಳುವಾಗ ಪೋಗು, ಹೋಗು ಧಾತುವಿನ ಆಧಾರ ತೆಗೆದುಕೊಳ್ಳುವುದು ಇಂದಿಗೂ ನಮ್ಮಲ್ಲಿ ರೂಢಿಯಲ್ಲಿದೆ. ಕೆಟ್ಟುಪೋಗು, ಈಚುವೋಗು, ಏವೋಗು, ಕಡಿವೋಗು ಮುರಿವೋಗು, ಹಮ್ಮದಂಬೋಗು ಹೀಗೆ ಹಳಗನ್ನಡದಲ್ಲಿ ಉದಾಹರಣೆಗಳು ದೊರೆಯುತ್ತವೆ.

ಪೋಗು ಶಬ್ದ ಅನುವಾದಿತಗೊಂಡು ಮರಾಠಿಯಲ್ಲಿ ಅಂತಹದೇ ಕ್ರಿಯೆ ಸಾಧಿಸುವಲ್ಲಿ ಪ್ರಯುಕ್ತವಾಗಿದೆ. ಜ್ಞಾನೇಶ್ವರಿಯಲ್ಲಿಯ ಕೆಲವು ಉದಾಹರಣೆಗಳು.

*ಆಲೇಪಣೇಜ್ ವಾಯಾಜ್ ಜಾಯೇ (೧೩.೫೮೩)*

ಜನ್ಮಕ್ಕೆ ಬಂದದ್ದು ವ್ಯರ್ಥವಾಗಿ ಹೋಗುವುದು.

*ತೈಸಾ ಜ್ಞಾನ ನಿಶ್ಚಯೋ ಅಥವಾ ವಾಯಾಜ್ ಜಾವಿ (೧೩.೬೨೫)*

ಜ್ಞಾನನಿಶ್ಚಯನ ಸರ್ವಸ್ವವೂ ವ್ಯರ್ಥವಾಗಿ ಹೋಗುವುದು.

*ತೇವಿಜ್ ಚಿ ಕಾಹಿಜ್ ಬೋಲೋಜ್ ಜಾವಿ (೧೧.೪೮೩)*

ಅದರಂತೆ ಏನಾದರೂ ಹೇಳಲು ಹೋದರೆ

*ತೈಸೀ ಉಪಾಸ್ತೀಚೀ ಪದವಿ ಮಿಾ ಪೋಖೀತು ಜಾಯೇಜ್ (೧೦.೧೧೯)*

---

12. ಯಾದವಕಾಲೀನ ಮರಾಠೀ ಭಾಷಾ ಪು. ೭೯

ಅದರಂತೆ ನಾನು (ನನ್ನ ಭಕ್ತಿಯು) ಉಪಾಸನೆಯ
ಅಧಿಕಾರವನ್ನು ಪೋಷಿಸುತ್ತ ಹೋಗುತ್ತೇನೆ.

*ತೋಹೀ ಜೇಥ ಸಮು ಹೋಊನಿ ಜಾಏ (೧೮.೧೦೮)೮*

ಅದೂ (ಆ ಶ್ರಮವೂ) ಅಲ್ಲಿ ಶಾಂತವಾಗಿ ಹೋಗುವುದು.

*ದೇಹಸ್ಮೃತಿಚೇ ತ್ರಾಯೇ ಮೋಡಿತ ಜಾಯೇ (೧೩.೧೨೮)*

ದೇಹಸ್ಮೃತಿಯ ತ್ರಾಣವನ್ನು ಮುರಿಯುತ್ತ ಹೋಗುತ್ತದೆ.

**ಜೋಗ, ಸೋಗು**

ಇದೊಂದು, ಕೋಶಕಾರರ ದೃಷ್ಟಿಯಿಂದ, ವಿಚಿತ್ರ ಶಬ್ದ ವರ್ತುಲ. ಸೋಗು, ಜೋಹ, ಚೋಹ ಇವೆಲ್ಲವೂ ಸಂಸ್ಕೃತ ಯೋಗ ಶಬ್ದದ ತದ್ಭವಗಳೆಂದು ಕಿಟೆಲ್ ಭಾವಿಸುತ್ತಾರೆ. ಆದರೆ ಯೋಗ ಶಬ್ದದ ಅರ್ಥ ಕೊಡುವಾಗ ಕನ್ನಡದ ಸೋಗು ಅಥವಾ ಚೋಹ ಶಬ್ದಗಳಿಗಿರುವ ಅರ್ಥ ಕೊಡುವುದಿಲ್ಲ! ಹಾಗಿದ್ದರೆ ಇವೆಂತಹ ತದ್ಭವಗಳು?

ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಸಂಸ್ಕೃತದ 'ಯೋಗ್ಯ' ವಿಶೇಷಣ 'ಜೋಗ' ಆಗಿದೆ. ಒಪ್ಪಬೇಕಾದ ಮಾತು. ಆದರೆ 'ಜೋಗಾವಣೇಜ್' ಈ ಧಾತು ಜೋಗ ನಾಮದಿಂದ (ಪ್ರಯೋಜಕದ ರೀತಿಯಲ್ಲಿ 'ಅವ', 'ಆವ' ಪ್ರತ್ಯಯ ಪತ್ತಿ) ಆದುದಾಗಿದೆ. ಇಂತಹ ಉದಾಹರಣೆಗಳು ಸಾಕಷ್ಟು. ಚೋಜದಿಂದ ಚೋಜವಣೇಜ್, ಗುಥರದಿಂದ ಗುಥರಣೇಜ್, ಜೋಹಾರದಿಂದ ಜೋಹಾರಣೇಜ್ ಇತ್ಯಾದಿ. ಇವುಗಳಿಗೆ ತುಳಪುಳೆ ನಾಮಧಾತು (ಕ್ರಿಯಾನಾಮಕ್ಕೆ ತದ್ವಿರುದ್ಧವಾಗಿ) ಎಂಬ ಶಬ್ದ ಬಳಸಿದ್ದಾರೆ.

ಈ 'ಜೋಗ' ಶಬ್ದ ಕನ್ನಡದ 'ಸೋಗು' ಶಬ್ದದಿಂದ ಹೋದುದಾಗಿದೆ. ಕನ್ನಡದಲ್ಲಿ ಜರಿ-ಸರಿ, ಜವಳಿ-ಸವಡಿ, ಜವಳು-ಸವಳು; ಜಾಟಿಗೆ-ಸಾಟಿಗೆ, ಜಟ್ಟಿಗ-ಶ್ರೇಷ್ಠಿಕ; ಮರಾಠಿಯಲ್ಲಿ ಜೇಠೀ-ಶ್ರೇಷ್ಠೀ, ಸುಪ್ತಿ-ಝೋಪ, ಝಿಜ-ಕ್ಷೀ ಹೀಗೆ ಆದ್ಯ 'ಜ' 'ಸ' ಆಗುವುದಾಗಲೀ 'ಸ' 'ಜ' ಆಗುವುದಾಗಲೀ ಎರಡೂ ಭಾಷೆಗಳಲ್ಲಿ ಹೊಸತಲ್ಲ.

ಜ್ಞಾನೇಶ್ವರೀಯಲ್ಲಿಯ ಜೋಗಾವಣೇಜ್ ಶಬ್ದದ ಪ್ರಯೋಗಗಳು

*ಆಲೋಜ್‌ಚು ಜೋ ನೇಣೇ ಅನಭಿಜ್ಞು ಜೋಗಾವಣೇಜ್ (೧೩.೩೬೩)*

ಯಾವನಿಗೆ ಚಿಂತೆ ಗೊತ್ತಿರುವುದಿಲ್ಲವೋ (ಯಾವನು) ಸೋಗು
ಮಾಡುವಲ್ಲಿ ಅನಭಿಜ್ಞನೋ-

*ವ್ಯಾಧಾಚೇಜ್ ಚಾರಾ ಘಾಲಣೇಜ್ ತೈಸೇಜ್ ಪ್ರಾಂಜಳ ಜೋಗಾವಣೇಜ್ (೧೩.೬೬೮)*

ಬೇಡರವನು (ಬೇಟೆಗಾಗಿ) ಕಾಳು ಹಾಕಿದಂತೆ ಸ್ಪಷ್ಟವಾಗಿ
ಸೋಗು ಹಾಕುವವನು.

*ಪೂಜಿತೇಜ್ ದೈವತೇಜ್ ಜೋಗಾಪೀ ಗುರುತೇಜ್ ಬೋಲೇಜ್ ಝಾಪ್‌ಕಪೀ (೧೩.೭೯೪)*

ದೈವತವನ್ನು ಪೂಜಿಸುವ ಸೋಗು ಮಾಡುತ್ತಾನೆ. ಗುರುವನ್ನು ಮಾತಿನಿಂದಲೇ ಮುಚ್ಚುತ್ತಾನೆ.

*ಸಾಚ ಆಣಿ ಚೋಖ ತೇಙ್ ಸ್ತ್ರೀಯೇಸೀ ಚಿ ಅಶೇಷ*
*ಏರೀ ವಿಷೇಙ್ ಜೋಗಾವಣೂಕ ತೇಙ್ ಹೀ ನಾಹಿಙ್ (೧೩.೭೯೮)*

ಸತ್ಯ ಹಾಗೂ ಪ್ರಾಮಾಣಿಕತೆ ಇವು ಸ್ತ್ರೀಯರ ಮಟ್ಟಿಗೆ ಮಾತ್ರ ಸಂಪೂರ್ಣ; ಇತರರ ಬಗ್ಗೆ ಸೋಗುತನ, ಅದು ಕೂಡ ಇಲ್ಲ!

*ಪಾಠಿಙ್ ಸೋಮವಾರು ಪಾವೇ ಆಣಿ ಬೇಲೇಙ್‌ಸಿ ಲಿಂಗಾ ಧಾವೇಙ್*
*ಐಸೇಙ್ ಏಕಲಾಚಿ ಆಘವೇಙ್ ಜೋಗಾವೀ ಜೋ (೧೩.೮೧೯)*

ಬಳಿಕ ಸೋಮವಾರ ಬಂದೊಡನೆ ಬಿಲ್ವಪತ್ರ (ಹಿಡಿದು) ಈಶ್ವರಲಿಂಗಕ್ಕೆ ಏರಿಸಲು ಓಡುತ್ತಾನೆ. ಹೀಗೆ ಒಬ್ಬನೇ ಎಲ್ಲ ಸೋಗುಗಳನ್ನು ಹಾಕುವನು.

**ಝಿರಪಣೇಙ್ ಸೀಱು-ಸಿಂಪಡಿಸು**

'ಸಿಂಪಡಿಸು' (ಸಿಙ್+ಪಡಿಸು) ಅರ್ಥದಲ್ಲಿಯ ಸೀಱು ಧಾತುವು ಚಂದ್ರಪ್ರಭ ಪುರಾಣದಲ್ಲಿ (೪.೪೦) ಬಳಸಲಾಗಿದೆ. 'ಜಿನುಗಾಗಿ ಹನಿಸು' ಅರ್ಥದಲ್ಲಿ 'ಸೀಱು' ಶಬ್ದವು ಝಿರಪಣೇಙ್ ಆಗಿ ಮರಾಠಿಯಲ್ಲಿ ಹೋಗಿದೆ. -ಅಪ, -ದಪ ಮೊದಲಾದ ಪ್ರತ್ಯಯಗಳು ಹತ್ತಿ ಹಳಗನ್ನಡದಲ್ಲಿ ವರ್ತಮಾನಕಾಲವಾಚಕ ರೂಪಗಳಾಗುವವಷ್ಟೇ? ಉದಾಹರಣೆಗೆ ಜಗುಳ್ದಪಂ (ಶಬ್ದಮಣಿದರ್ಪಣ ೫೪) ನೋಡಿದಪಂ (ಅದೇ ೮೩) ಬಂದಪುದು (ಅದೇ ೨೩೨). ಈ ಅಪ, -ದಪ ಪ್ರತ್ಯಯಗಳು -'ಪ' ಆಗಿ ಜ್ಞಾನೇಶ್ವರೀಯಲ್ಲಿ ಹೋದುದನ್ನೂ ಕಾಣುತ್ತೇವೆ. 'ಹ್ಮಣ' ದಿಂದ 'ಹ್ಮಣಿಪೇ' (ಅರ್ಥ ಪೇಳ್ವೆಂ) (೧-೪೭) 'ಶಿಕ್ಷ' ದಿಂದ ಶಿಕ್ಷಾಪಿಲಾ (೧.೯೫) ಜೀ (ಜಯಿಸು) ದಿಂದ ಜೀಙ್‌ಪೇ (೨.೭೫) ಇತ್ಯಾದಿ ಉದಾಹರಣೆಗಳು

ಹೀಗೆ 'ಸೀಱು'ದಿಂದ ಆದ ಶಬ್ದ 'ಝಿರಪ'.

ಇದು ಪ್ರಯೋಗ :

*ಆಶಾಢಿಚೇನಿ ಜಳೇಙ್ ಜೈಸಿಙ್ ಝಿರಪಾಙ್‌ತಿ ಮೌಳೇಙ್ (೧೩.೫೭೭)*

ಆಷಾಢದ ನೀರುಗಳಿಂದ (ಮಳೆಯಿಂದಾಗಿ) ಮುಳ್ಳುಗಳಿಂದ (ನೀರು) ಹನಿಯುವಂತೆ-

ಮರಾಠೀ ವ್ಯಾಖ್ಯಾನಕಾರರು 'ಮೌಳ' ಶಬ್ದಕ್ಕೆ ಪರ್ವತವೆಂದು ಅರ್ಥ ಹಚ್ಚಿ 'ಪರ್ವತಗಳಿಂದ' ಎಂದಿದ್ದಾರೆ. (ಏಕನಾಥರು ಜ್ಞಾನೇಶ್ವರಿಯನ್ನು ಸಂಸ್ಕರಿಸುವಾಗ ನಡುವೆ 'ಶೈಲಾಙ್‌ಚೇಙ್' ಶಬ್ದಹಾಕಿ 'ಶೈಲಾಙ್‌ಚೇಙ್‌ಮೌಳೇಙ್' ಎಂದಿದ್ದರಿಂದಲೂ ಹೀಗೆ ಅರ್ಥವಿಸಿರಬಹುದಾಗಿದೆ) ಆದರೆ ಉಪಮೇಯದದಲ್ಲಿ ಖಾಂಡೇಹೂನಿ ಲಾಳೀ (ವೃದ್ಧತ್ವದಲ್ಲಿ ಹಲ್ಲುಗಳಿಂದ ಸಿಡಿಯುವ ಜೊಲ್ಲು) ಎಂದಿದ್ದರಿಂದ ನಾನು 'ಮೌಳೇಙ್' ಯನ್ನು 'ಮುಳ್ಳು' ಎಂದೇ ಅರ್ಥವಿಸಿದ್ದೇನೆ.

**ಝುಳುಕ - ಸುಳಿ, ಆವರ್ತ**

'ಸುಳಿವ ಭಾವಂ' ಎಂಬುದಾಗಿ ಶಬ್ದಮಣಿದರ್ಪಣದಲ್ಲಿ ಹೇಳಲಾದ ಹಳಗನ್ನಡ ಶಬ್ದವು *ಸುಳಿಯೊಳಗಿರ್ದು ಬೆಟ್ಟಿ ಪೊಱಿ ಪೊಱಮ್ಮಿಸಂ* ಹೀಗೆ ಪಂಪಭಾರತದ (೧೧.೧೫೩) ದಲ್ಲಿ ಪ್ರಯುಕ್ತವಾಗಿದೆ. *ಪುಣ್ಯದೇವತಾದೂತನವೋಲ್ ಸುಳಿಗಾಳಿಯೊಡನೆ ಹರ್ಷದ ಮಳೆ ಬರೆ... (ಪಂಪರಾಮಾಯಣ ೯.೧೭)* ಹೀಗೆ 'ಗಾಳಿ' ಶಬ್ದಕ್ಕೆ ವಿಶೇಷಣವಾಗಿಯೂ 'ಸುಳಿ' ಶಬ್ದ ಬಳಸಲಾಗಿದೆ. 'ಸುಳಿ' 'ಸುಳಿ' ಶಬ್ದವು ಝುಳಕ ಆಗಿ ಮರಾಠಿಗೆ ಹೋಗಿದೆ. ಜ್ಞಾನೇಶ್ವರಿಯಲ್ಲಿ

*ಐಸಾ ರಜಾಚಿಯಾ ಝುಳುಕಾ ಝುಡಾಡಿತಾಜ್ (೧೫.೧೫೪)*

ಹೀಗೆ ರಜೋಗುಣದ ಸುಂಟರಗಾಳಿಯು ಜೋರಾಗಿ ಬೀಸಿದಾಗ-

*ಆಕಾಸೀಜ್ ಧೂಮಾಚೀ ರೇಖಾ ಉರಿಲೀ ಬಹುವಾ ಆಗಳಿಕಾ*
*ತೇ ಗಿಳೀ ಜೇವಿ ಝುಳಕಾ ವಾರೆಯಾಚಿಯಾ (೧೬.೧೯೨)*

ಆಕಾಶದಲ್ಲಿ ಮೂಡಿದ ದಟ್ಟವಾದ ಹೊಗೆಯ ಗೆರೆಯನ್ನು ಸುಂಟರಗಾಳಿಯು ನುಂಗುವಂತೆ.

*ಅಹಂಭಾವಾಚೀಜ್ ಓಝೀಜ್ ಸಾಂಡುನಿ ವಿಕಾರಾಂಚಿಯಾ ಝುಲುಳಿ ಚೂಕೌನಿ (೭.೯೫)*

ಅಹಂಕಾರದ ಭಾರವನ್ನು (ಒಜ್ಜೆಯನ್ನು) ಇಳುಹಿ, ವಿಕಾರದ ಸುಂಟರಗಾಳಿಯನ್ನು ತಪ್ಪಿಸಿ

ಇಲ್ಲಿಯವರೆಗೆ 'ಸುಂಟರಗಾಳಿ'ಯಾಗಿದ್ದ 'ಝುಳುಕ'ವು ಇನ್ನು ತೀಡುವ 'ಮೆಲುಗಾಳಿ' ಯಾಗಿದೆ.

*ಪವನು ಅತಿ ನಿರ್ಬಳು ಮಂದು ಝುಲ್ಲಕಾ (೬.೧೭೫)*

ಗಾಳಿಯ ಬಹುದುರ್ಬಲವಾಗಿ ಮಂದ ಸುಳಿಗಾಳಿಯಾಗಿದೆ.

**ಝೋಳಿ-ಜೋಳಿಗೆ ; ಖೋಳಿ-ಚೀಲ; ಝೋಳ-ಜೊಳ್ಳು**

ಬಟ್ಟೆ ಎನ್ನುವ ಅರ್ಥದಲ್ಲಿ ಕೋಳೆ ಶಬ್ದ ಪರಿಚಿತ, 'ಉಡುಗೊಳೆ' ಶಬ್ದವನ್ನು ಕೇಶಿರಾಜ ತನ್ನ ಶಬ್ದಮಣಿದರ್ಪಣದಲ್ಲಿ (ಸೂತ್ರ ೧೮೨) ಉದಾಹರಿಸುತ್ತಾನೆ.

ಈ **ಕೋಳೆ** ಶಬ್ದದಿಂದ ಒಂದಿಷ್ಟು ಅರ್ಥ ಬದಲಾವಣೆಯಾಗಿ ಮರಾಠಿಯಲ್ಲಿ ಬಂದ ಶಬ್ದ **ಖೋಳಿ**.

*ನಾ ತರಿ ಉಲ್ಬಾಚಿ ಖೋಳೀ ಗರ್ಭಸ್ಥಾಸೀ (೩.೨೫೫)*

ಗರ್ಭಕ್ಕೆ ಡಿಂಭದ ಚೀಲ.

*ಅಥವಾ ನಿಧಾನ ಹೇಜ್ ಪ್ರಕಟಲೇಜ್ ಹ್ಮಣೌನಿ ಖದಿರಾಂಗಾರ ಖೋಳೇಜ್ ಭರಿಲೇಜ್ (೯.೧೪೮)*

ಗುಪ್ತಧನವು ಪ್ರಕಟವಾಯಿತೆಂದು ಚೀಲದಲ್ಲಿ ಕೆಂಡ ತುಂಬಿಕೊಂಡಂತೆ.

ಇದಕ್ಕೆ ಸಮಾಂತರ ಪ್ರಯೋಗ ಹೀಗೆ-

ಹಳಗನ್ನಡದಲ್ಲಿ ಜವಳಿಗೆ ಬಟ್ಟೆಯೆಂದರ್ಥ. ಪ್ರಯೋಗ ನೋಡಿರಿ.

*ಬಣ್ಣದ ಕಣದ ಬಣ್ಣವಣ್ಣಿಗೆಯಜವಳಿಗಳನೆ (ಆದಿಪುರಾಣ ೪.೩೪೮)*

ಜವಳಿ ಶಬ್ದದಿಂದ ಮರಾಠಿಯಲ್ಲಿ ಬಂದ ಶಬ್ದ ಝೋಳಿ. ಅದರ ಪ್ರಯೋಗ ಇಂತು

*ಜೈಸೇಜ್ ಕಲ್ಪತರು ತಳವಟೀಜ್ ಬೈಸೋನಿ ಝೋಳಿಯೇ ಪಾಡೀಗಾಜ್‌ರೀ*
*ಮಗ ನಿರ್ದೈವೋ ನಿಗೆ ಕಿರೀಟೀ ದೈನ್ಯಕರುಜ್ (೯.೩೦೮)*

ಕಲ್ಪವೃಕ್ಷದ ಕೆಳಗೆ ಕುಳಿತು ಜೋಳಿಗೆಗೆ ಗಂಟು ಹಾಕುವನು. ಅರಸನೇ, ಬಳಿಕ (ಆ) ದುರ್ದೈವಿಯು ದೈನ್ಯಮಾಡಲು (ಬಿಕ್ಕೆ ಬೇಡಲು) ಹೊರಡುವನು. ಆದರಂತೆ-

ಝೋಳಿ (ಜೋಳಿಗೆ) ಶಬ್ದವು ಬಳಿಕ ಝೋಳ ಆಗಿಯೂ ಬಳಸಲಾಗಿದೆ.

*ತೇ ದೇಹ ಝೋಳು ಐಸೇಜ್ ಮಾನೂನಿ ಠೇಲಿ ಆಪಣಪೇಜ್*
*ಹೋಉನಿ ಜೈಸಾ ಮಠಾ ಗಗನಾಭರೌನಿ ಗಗನೀಚಿ ಅಥಿ (೮.೫೯)*

ಮಡಕೆಯು ಆಕಾಶವನ್ನು ತುಂಬಿಕೊಂಡು ಆಕಾಶದಲ್ಲಿಯೇ ಇರುವಂತೆ (ಅವನು) ಈ ದೇಹವು ಚೀಲವೆಂದು ಭಾವಿಸಿ ತನ್ನಲ್ಲೇ (ಆತ್ಮರೂಪದಲ್ಲೇ) ಆಗಿ ಉಳಿಯುವನು.

**ಟಿಕ ಟೀಕ, ಟಿಕ್ಕೆ**

ನನಗೆನಿಸಿದ ಮಟ್ಟಿಗೆ ಇದೊಂದು ಸ್ವಾರಸ್ಯಕರ ಶಬ್ದ ವಿಚಾರ. 'ಟಂಕ'ವೆಂದರೆ ಒಂದರ್ಥದಲ್ಲಿ 'ನಾಣ್ಯ'. ಇದರಿಂದಾಗಿಯೇ ಸಂಸ್ಕೃತದಲ್ಲಿ 'ಟಂಕಶಾಲಾ' ಶಬ್ದ ಹುಟ್ಟಿದ್ದು. ನಾಣ್ಯಗಳನ್ನು ಆಳರಸೇ ಮಾಡಿಸುತ್ತಿದ್ದರೆಂದಲ್ಲ. ಜನರು ಮಾಡಿದ ನಾಣ್ಯಗಳನ್ನು ಪರೀಕ್ಷಿಸಿ ಮುದ್ರೆಯೊತ್ತಿ ಕೊಡುವ ಕೆಲಸ ಟಂಕಸಾಲೆಯದು[13] (ಇಂಗ್ಲಿಷಿನಲ್ಲಿಯ to coin a new word ಮುಂತಾದ ಶಬ್ದ ಪ್ರಯೋಗಗಳನ್ನು ನೆನೆಸಿಕೊಳ್ಳಬಹುದು). ಆವಾಗ ಬೆಳ್ಳಿಯ ಬಂಗಾರದ ನಾಣ್ಯಗಳನ್ನು ಕಲ್ಲುಗಳ ಮೇಲೆ ಹೊಡೆದು ಸದ್ದು ಕೇಳಿ ಪರೀಕ್ಷಿಸುವ ಒಂದು ಪದ್ಧತಿ ಇದ್ದಿರಬೇಕು. ಬ್ರಿಟಿಶ್ ಭಾರತದಲ್ಲಿ ಸುಮಾರು ೧೯೪೦ ರವರೆಗೆ ಈ ಪದ್ಧತಿ ಇತ್ತು. ಆಗ ಆ ನಾಣ್ಯದಿಂದ ಹೊರಡುವ 'ಟಣ್, ಧ್ವನಿ 'ಟಂಕ'ಕ್ಕೆ ಮೂಲ. 'ಟಂಕಕ' ಎಂದರೆ ಸಂಸ್ಕೃತದಲ್ಲಿ ಮುದ್ರೆಯೊತ್ತಿದ ನಾಣ್ಯ.

---

13. ಈ ಕುರಿತಾದ ಜ್ಞಾನೇಶ್ವರಿಯಲ್ಲಿಯ ಒಂದು ಓವಿಯನ್ನು ಹೇಳಬೇಕು.
*ಪೈಜ್ ಭಾಂಗಾರ ಜರಿ ಪನ್ನರೇಜ್ ತರ್ಹಿಜ್ ರಾಜವಳೀಚಿಜ್ ಅಖರೇಜ್*
*ಲಾಹೇ ತ್ರೈ ಸರೇ ಜಿಯಾಪರೀಜ್ (೧೭.೩೨೦)*
ಅದರೆ ಬಂಗಾರವು ಪೊನ್ನೊರ (ಒರೆಗೆ ಹಚ್ಚಿದ ಪೊನ್ನು) ಯಾಗಿದ್ದರೂ, ರಾಜಮುದ್ರೆಯ ಅಕ್ಷರಗಳನ್ನು ಹೊಂದಿದಾಗಲೇ ಅದು ಚಲಿಸುವುದು, ಹಾಗೆ

ಇವಿರೊಳ್ ಕೂಡುವುದಿಲ್ಲಿ ಟಂಕಪರಸಂ ಕಮ್ಮೊಸ್ಪ ಟಂಕಂಗಳೊಳ್ ಎಂದಾಗಿ ಇದರ ಬಳಕೆ ಪಂಪಭಾರತದಲ್ಲಿ ಕಾಣುತ್ತೇವೆ. (೪.೨೨)

ಇನ್ನು ಜನರು ತಯಾರಿಸಿದ ಎಲ್ಲ ನಾಣ್ಯಗಳೂ ಎಲ್ಲಿ 'ಟಣ್' ಆಗುತ್ತವೆ? ಕೆಲವು 'ಟಕ್' ಕೂಡ ಆಗುತ್ತವೆ! ಇಂತಹ ನಾಣ್ಯಗಳನ್ನು ಚಲಾವಣೆಯಲ್ಲಿ ತರಲು ಜನ ಯತ್ನಿಸುತ್ತಿದ್ದರು.[14] Good money drives bad money away ಎಂಬುದೊಂದು ಪಾಶ್ಚಾತ್ಯ ಅರ್ಥಶಾಸ್ತ್ರದಲ್ಲಿಯ ಮೂಲ ತತ್ವವೂ ಇದರಿಂದಲೇ ಬಂದಿರಬೇಕು. ಹೀಗೆ 'ಟಕ್ಕು' 'ಠಕ್ಕು' ಶಬ್ದಕ್ಕೆ 'ಮೋಸ'ವೆಂದು ಅರ್ಥ ಬಂದಿತು. ಶಬ್ದಮಣಿದರ್ಪಣದಲ್ಲಿ ಠಕ್ಕಿಸಿದಂ (ಸೂತ್ರ ೨೫) ಎಂದು ಪ್ರಯೋಗ ಬರುತ್ತದೆ. ಬೇಜೆದೊಂದು ಬಗೆಗಿಕ್ಕಿದ ಠಕ್ಕೆ (ಪಂಪರಾಮಾಯಣ ೩.೩೮) ಎನ್ನುವಲ್ಲಿ ಈ ಠಕ್ಕಿನ ಬಳಕೆಯಾಗಿದೆ.

ಜ್ಞಾನೇಶ್ವರಿಯಲ್ಲಿಯ ಇವೆರಡೂ ಪ್ರಯೋಗಗಳು ಲಕ್ಷಣೀಯ:

*ಯಜ್ಞಮೂಢ ಠಕಿಲೇ ಯಾಗೀಜ್ (೧೬.೨೯೬ ಪಾಠಭೇದ)*
*ಯಜ್ಞದ ಹುಚ್ಚು ಇದ್ದವರು ಯಾಗಗಳಿಗೆ ಮೋಸ ಹೋದರು.*

ರಾಜವಾಡೇ ಪ್ರತಿಯಲ್ಲಿಯ ಪಾಠ ಹೀಗೆ : ಯಜ್ಞ ಮೂಢ ಮುಸಿಲೇಯಾಗೀಜ್ ಅರ್ಥ ಅದೇ. ಆದರೆ 'ಮುಸಿಲೇ' ರೂಪ ಕನ್ನಡದ 'ಮೋಸ'ದಿಂದ ಹೋಯಿತೇ ಅಥವಾ ಮೋಸಗೊಳಿಸು ಅರ್ಥದ ಸಂಸ್ಕೃತ ಧಾತು ಮುಷ್‌ದಿಂದ ಸಿದ್ಧವಾಯಿತೇ ಇದು ಸ್ಪಷ್ಟವಾಗುವುದಿಲ್ಲ.

---

14. ಈ ಬಗ್ಗೆಯೂ ಜ್ಞಾನೇಶ್ವರಿಯಲ್ಲಿ ಉಲ್ಲೇಖ ಬರುತ್ತದೆ. ಜನರು ನಾಣ್ಯ ಮಾಡುವಾಗ ಸೊಟ್ಟಾದುದರಿಂದಲೂ, ಕೊಂಕು ಇದ್ದುದರಿಂದಲೂ ಕೆಲ ನಾಣ್ಯಗಳು ನಡೆಯುತ್ತಿರಲಿಕ್ಕಿಲ್ಲ. ಹಳಗನ್ನಡದ 'ಕುಡು' (ಪ್ರದಾನೇ ವಕ್ರೇಚ - ಶಬ್ದಮಣಿದರ್ಪಣ ಧಾತುಪ್ರಕರಣ) ಶಬ್ದ ಮರಾಠಿಯಲ್ಲಿ 'ಕುಡಾ' ಆಗಿ ಹೋದ ಬಗ್ಗೆ ಬೇರೆಡೆ ಚರ್ಚಿಸಿದ್ದೇನೆ. ಇಂತಹ 'ಕುಡು' ನಾಣ್ಯದ ಬಗ್ಗೆ ಜ್ಞಾನೇಶ್ವರರು ಹೀಗೆ ಹೇಳುತ್ತಾರೆ :

*ಜೈಸೆಜ್ ಕಾಜ್ ಕುಡೇಜ್ ನಾಣೇಜ್ ಖರೇಯಾಚೇನಿ ಸಾರಿಖೇಪಣೇಜ್*
*ಡೋಳೇಯಾಂಚೇ ಹೀಜ್ ಪಾಹಾಣೇ ಸಂಶಇಜ್ ಘಾಲೀ (೪.೮೫)*
*ತಗಲು (ಕೊಂಕು) ನಾಣ್ಯವು ಚೊಕ್ಕ ನಾಣ್ಯದಂತೆ ಕಾಣುವುದರಿಂದ (ಬರಿ) ನೋಡುವುದು ಸಂದೇಹದಲ್ಲಿ ಹಾಕುತ್ತದೆ.*

'ಕೂಟ'ವೆಂದರೆ 'ಸುಳ್ಳು', ತಗಲು' ಎಂಬರ್ಥವೇನೋ ಸಂಸ್ಕೃತದಲ್ಲಿದೆ. ಆದರೆ ಈ 'ಕೂಟ' ಶಬ್ದವೇ ಕನ್ನಡದ 'ಕುಡು'ದಿಂದ ಸಂಸ್ಕೃತಕ್ಕೆ ಹೋಯಿತೆಂದು ಕಿಟೆಲ್ ಅಭಿಪ್ರಾಯಪಟ್ಟಿದ್ದಾರೆ. ಕುಡು > ಕೂಟ > ಖೋಟ

ಈ ಚರ್ಚೆಯನ್ನು ಇನ್ನಷ್ಟು ಬೆಳೆಸಬೇಕು. ಸಂಸ್ಕೃತದಲ್ಲಿ 'ಕ್ಷರ' ಧಾತುವಿಗೆ 'ಹರಿ' 'ಚಲಿಸು' ಎಂಬರ್ಥವೂ ಇದೆ. ಚೊಕ್ಕ ನಾಣ್ಯಗಳು ಸುಲಭವಾಗಿ 'ಚಲಿಸು'ವುದರಿಂದ ಅವು 'ಕ್ಷರ'ವಾದವು, 'ಖರೇ' ಆದವು. ಮೇಲಿನ ಓವಿಯಲ್ಲಿ 'ಖರೇ' ಶಬ್ದಕ್ಕೆ ನಾನು ಚೊಕ್ಕವೆಂದು ಅರ್ಥ ಹಚ್ಚಿರುವ ಕಾರಣವೂ ಅದೇ. ಪ್ರಾಕೃತದಲ್ಲಿಯಂತೆ ಮರಾಠಿಯಲ್ಲಿಯೂ ಸಂಸ್ಕೃತದ 'ಕ್ಷ', 'ಖ' ಆಗಿದೆ. ಉದಾಹರಣೆಗಳು ಕ್ಷಣ>ಖಣ, ಕ್ಷತ>ಖತ ಕ್ಷಾಂತಿ>ಖಾಂತಿ, ಕ್ಷಾರ>ಖಾರ ಇತ್ಯಾದಿ. ಆದರೆ ಮರಾಠೀ ಸಂಶೋಧಕರಿಗೆ 'ಖರೇ' ಶಬ್ದದ ವ್ಯುತ್ಪತ್ತಿ ಇನ್ನೂ ದೊರೆತಿಲ್ಲ.

'ಟಂಕ' (ಒಳ್ಳೆಯ ನಾಣ್ಯ, ಬಂಗಾರದ್ದು) ಹಳಗನ್ನಡದಲ್ಲೇ 'ಟಕ್ಕೆ' ಆಗಿದೆ. 'ಮಾಣಿಕಟಕ್ಕೆ' ಎಂದಾಗಿ ಶಬ್ದಮಣಿದರ್ಪಣದಲ್ಲಿ ಪ್ರಯೋಗವೂ ಬರುತ್ತದೆ. ಜ್ಞಾನೇಶ್ವರಿಯಲ್ಲಿ ಇದು 'ಟೀಕ' ಆಗಿ ಹೋಗಿದೆ. ಪ್ರಯೋಗಗಳು :

*ಚೊಖಟ ಟೀಕ ಭಾಂಗಾರ ಏಕವಟ ಘಾಲೂನು ಬಾಂಧಲೀ ಮೋಟಗಳಾಜೇವಿ (೧೭.೩೪೫)* (ಆಭೂಷಣವನ್ನು ಸಿದ್ಧಗೊಳಿಸದೆಯೆ) ಚೊಕ್ಕ ಟಿಕ್ಕೆ ಹಾಗೂ ಬಂಗಾರ ಹಾಕಿ ಮೊಟ್ಟೆ ಕಟ್ಟಿ ಕೊರಳಲ್ಲಿ ಹಾಕಿಕೊಂಡಂತೆ-

*ಪಾರ್ಥಾ ಸೋನೆಯಾಜ್ ಟೀಕ ಸೋನಾಜ್ ಚಿ ಲಾಗಲೀ ದೇಖ (೧೪.೩೮೦)*
*ಅರ್ಜುನನೇ ಬಂಗಾರದ ಟಿಕ್ಕೆಯು ಬಂಗಾರವನ್ನೇ ಸೇರಿದಂತಾಯಿತು ನೋಡು.*

**ಠೀ, ಠೀ, ಠೀವು, ಠೀರ್ಯು, ಠೀರಿಸು**

ಜ್ಞಾನೇಶ್ವರೀಕಾಲೀನ ಮರಾಠೀ ಭಾಷೆಯ ಬಗ್ಗೆ ಸಂಶೋಧನೆ ಕೈಗೊಂಡವರಿಗೆ ಇದೊಂದು ಆಹ್ವಾನಾತ್ಮಕ ಶಬ್ದ! ಹತ್ತಿರದ ಸಂಸ್ಕೃತ ಶಬ್ದ 'ಸ್ಥಿತಿ' ಯಿಂದ ಬಂದಿರಬಹುದೆಂದು ಹೇಳಿ ನುಣುಚಿಕೊಳ್ಳುವುದು ಸುಲಭ. 'ಸ್ಥಿತ'ದಿಂದ 'ಠಿಯ' ಆಗಿರುವ ಅಪಭ್ರಂಶದ ಶಬ್ದವೂ ಅದಕ್ಕೆ ಆಧಾರವೆನ್ನಬಹುದು. ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗಗಳನ್ನು ಮೊದಲು ಗಮನಿಸಬೇಕು.

*ಜೈಜ್ ಉಪಸಂಹರೌನಿ ಕೀಜೆಲ ಠೀ ತೈಜ್ ಮೀಚಿ ಆಹೇ (೭.೩೦ ಪಾಠಭೇದ)*
(ಸೃಷ್ಟಿಯನ್ನು) ಸಂಹರಿಸಿ ಠೀರಿಸಿದಾಗ ನಾನೇ ಇರುವೆ (ಉಳಿಯುವೆ)

*ಪಾಹಿಜ್ ಪರ್ಜನ್ಯಾಚಿಯಾ ಧಾರಾಜ್ ಲೇಖ ಹೋಈಲ ಧನುರ್ಧರಾ*
*ಕಾಜ್ ಪೃಥ್ವಿಚೇಯಾ ತೃಣಾಂಕುರಾಜ್ ಹೊಈಲ ಠೀ (೧೦.೨೭೬)*
ಧನುರ್ಧರನೇ, ಮಳೆಯ ಸೆಳಕುಗಳ ಲೆಕ್ಕವಾಗಬಹುದೇ, ಅಥವಾ ನೆಲದ ಮೇಲಿನ ಹುಲ್ಲೆಸಳುಗಳು ಠೀರಬಹುದೇ?

*ಪೂರ್ವಾಪರಾಜ್ ನದೀಜ್ ಸಮುದ್ರು ಚಿ ಠೀ (೧೫.೪೦೦)*
ಪೂರ್ವದ ಪಶ್ಚಿಮದ ನದಿಗಳೆಲ್ಲವೂ ಸಮುದ್ರದಲ್ಲಿಯೇ ಠೀರುತ್ತವೆ.

*ಐಸೀ ಜಡಾಜಡೇಜ್ ವ್ಯಾಪ್ತಿ ರೂಪ ಕರಿತಾಜ್ ಕೈವಲ್ಯಪತೀ*
*ಠೀ ಕೇಲೀ ನಿರುಪಹಿತೀಜ್ ಆಪುಲಾಜ್ ರೂಪಿಜ್ (೧೫.೪೮೯)*
ಹೀಗೆ ಕೈವಲ್ಯಪತಿಯು (ಶ್ರೀಕೃಷ್ಣನು) ಜಡ-ಅಜಡವಾದ ರೂಪಗಳಲ್ಲಿಯ ತನ್ನ ವ್ಯಾಪ್ತಿಯನ್ನು ಬಣ್ಣಿಸುತ್ತ ತನ್ನ ರೂಪದಲ್ಲಿಯ ಅ-ರೂಪ (ನಿರಾಕಾರ)ದಲ್ಲಿ ಠೀರಿಸಿದನು. (ಮುಗಿಸಿದನು)

*ಜೋ ಅಮೃತಾಸಿ ಠೀ ಠೇವೀ ತೋ ಕಾಂಜೀ ಜೈಸಾ ನ ಸೇವಿ*
*ತೈಸಾ ಸ್ವಸುಖಾನುಭವೀಜ್ ನ ಭೋಗೀ ರುದ್ಧೀ (೨.೩೭೩)*
ಯಾವನು (ಉಣ್ಣುವಾಗ) ಅಮೃತಕ್ಕೆ ಠೀರಿತು (ಸಾಕು)

> ಎನ್ನುತ್ತಾನೋ ಆವನು ಗಂಜಿಯನ್ನು ಹೇಗೆ ಸೇವಿಸುವದಿಲ್ಲವೋ, ಹಾಗೆ ಆತ್ಮಸುಖವನ್ನನುಭವಿಸಿದವನು ಋದ್ಧಿಯನ್ನು ಭೋಗಿಸುವುದಿಲ್ಲ.

ರಾಜವಾಡೇ, ದಾಂಡೇಕರರನ್ನೊಳಗೊಂಡು ಮರಾಠೀ ವ್ಯಾಖ್ಯಾನಕಾರರೆಲ್ಲರೂ ಈ ಓವಿಯಲ್ಲಿಯ 'ಠೀ ಠೇವ'ಕ್ಕೆ 'ಹೆಸರಿಡು' 'ದೋಷಹೊರಿಸು' ಎಂದು ಅರ್ಥ ಹಚ್ಚಿದ್ದಾರೆ. ಹಾಗಾದರೆ ಎರಡನೆಯ ಸಾಲಿನಲ್ಲಿಯ ನಿರೂಪಣೆಗೆ ಮೊದಲ ಸಾಲಿನಲ್ಲಿಯ ಉಪಮೆ ಅರ್ಥವನ್ನೇ ಕೊಡುವುದಿಲ್ಲ. 'ಆತ್ಮಸುಖವನ್ನನುಭವಿಸಿದವನು' ಎಂದು ಉಪಮಾನದಲ್ಲಿ ಸ್ಪಷ್ಟವಾಗಿ ಹೇಳುವಂತೆ ಉಪಮೆಯಲ್ಲಿ 'ತೃಪ್ತಿ'ಯ ಸಂದರ್ಭವೇ ಒದಗುವುದಿಲ್ಲ. ಅಮೃತವನ್ನು ಅವನು ಬೇಡವೆನ್ನುವುದು ದೋಷ-ದರ್ಶನದಿಂದಲ್ಲ. ತನ್ನ ತೃಪ್ತಿಯಿಂದ ಎನ್ನುವುದು ಸ್ಪಷ್ಟವಾಗಬೇಕು. 'ಠೀ'ಯಿಂದ ಆದ ಕ್ರಿಯಾ ರೂಪಗಳನ್ನು ನೋಡಬಹುದು.

*ಕರೀತಾಜ್ ಕಾಇ ಠೇಲೀಜ್ ಖೇದು ಕಾಇಸಾ (೨.೭)*

> ಮಾಡುವಾಗ ಏನು ಠೀರಿತು (ಕಡಿಮೆಯೆನಿಸಿತು)? ದುಃಖವು ಏಕೆ ಹೀಗೆ?

*ಯೇರಿ ಶರೀರಾಚಾಜ್ ಸಲೀಲೀಜ್ ಅಸತೇಪಣ ತೇ ಸಾಉಲೀ*
*ವಾಜ್‌ಚೂನಿ ಚಂದ್ರಿಕಾ ತೇ ಠೇಲೀ ಚಂದ್ರೀಜ್ ಚಿ ಆಹೇ (೮.೧೩೬)*

> ಶರೀರವೆಂಬ ನೀರಿನಲ್ಲಿ ಇಹೆನು (ನಾನು) ಎಂಬ (ಚಂದ್ರನ) ಪ್ರತಿಬಿಂಬವನ್ನು ತ್ಯಜಿಸಿದರೆ (ಪಾಠದಲ್ಲಿಯ ಅರ್ಧಾ-ನುಸ್ವಾರವನ್ನು ಲೇಖನ ದೋಷವೆಂದು ಕಡೆಗಣಿಸಿದರೆ ಆಗುವ ಸಾರ್ಥ ಅರ್ಥ, 'ಒದಿದರೆ'.') ಅದು ಚಂದ್ರನಲ್ಲಿಯೇ ಠೀರುವುದು.

ಶರೀರದಲ್ಲಿ 'ನಾನು' ಎಂಬುದು, ನೀರಿನಲ್ಲಿಯ ಚಂದ್ರನ ಪಡಿನೆಳಲಿನಂತೆ. ಅದನ್ನು ಅರಿತುಕೊಂಡರೆ ಪಡಿನೆಳಲು ಮಿಥ್ಯ, ಚಂದ್ರ ಸತ್ಯ (ಅಹಂ ಮಿಥ್ಯೆ ಪರಮಾತ್ಮ ಸತ್ಯ) ಇದು ಭಾವಾರ್ಥ.

ಈ ಎಲ್ಲ ಪ್ರಯೋಗಗಳನ್ನು ಗಮನಿಸಿದರೆ 'ಸ್ಥಿತ'ದಿಂದ 'ಠೀ' ಆಗಿರುವ ಸಾಧ್ಯತೆ ತೀರ ಕಡಿಮೆಯೆಂದು ಹೇಳಬಹುದು. ಇದಕ್ಕೆ ಬದಲಾಗಿ ಹಳಗನ್ನಡದಲ್ಲಿ ಇರಬಹುದಾದ 'ತೀ' ಶಬ್ದ ಹಾಗೂ ಅದರಿಂದುಂಟಾದ 'ತೀ+ಇರು=ತೀರು' 'ತೀ+ಉ'=ತೀವು ರೂಪಗಳು ಅರ್ಥದ ದೃಷ್ಟಿಯಿಂದ ಬಹಳ ಹತ್ತಿರವೆಂದು ಹೇಳಬೇಕು. ಈ ದೃಷ್ಟಿಯಿಂದ ತೀರ್ಚು ನಿಷ್ಪತ್ತೌ, ತೀವು ಪೂರಣೇ (ಎರಡೂ ಶಬ್ದಮಣಿದರ್ಪಣ ಧಾತುಪ್ರಕರಣ) ಈ ಶಬ್ದಗಳು ಲಕ್ಷಣೀಯವಾಗಿವೆ.

**ಡಾಣೇಜ್ ಆಡು (ಕ್ರಿ)**

ಆಡು ಧಾತುವಿಗೆ 'ನರ್ತನೇ' ಎಂದು ಕೇಶಿರಾಜ ಅರ್ಥ ಹೇಳುತ್ತಾನೆ. ಕ್ರೀಡಾಯಾಂ ಎಂದಿದ್ದರೆ ಚೆನ್ನಾಗಿತ್ತು.

*ಒಂದು ದಿವಸಂ ತೋಪಿನ ಬೇಂಟೆಯನಾಡಲಟ್ಟೆಯಿಂ ಪೋಗಿ (ಪಂಪಭಾರತ ೧.೧೧೦ವ)*

ಹೀಗೆ ಹಳಗನ್ನಡದಲ್ಲಿ ಅದರ ಬಳಕೆ ಬರುತ್ತದೆ.

ಈ 'ಆಡು' ಧಾತು 'ಆ' ಕಳೆದುಕೊಂಡು 'ಡಾ' ಆಗಿ 'ಜೂಜಾಡು', ಕವಡೆ ಆಡು' ಅರ್ಥಗಳಲ್ಲಿ ಜ್ಞಾನೇಶ್ವರೀಯಲ್ಲಿ ಮೂರು ಸಂದರ್ಭಗಳಲ್ಲಿ ಬಳಸಲಾಗಿದೆ.

*ಐಸೇಯಾ ಡಾಓ ಜೋ ಪಡೇ ತೋ ಚಿ ದ್ವೇಷು (೧೩.೧೨೬)*

(ಇಚ್ಛಿಸಿದ ಹಾಗೆ ಇಂದ್ರಿಯಗಳ ಆಮಿಷವು ಪೂರ್ತಿ-ಯಾಗದೆಯೆ) ಇಂತಹ (ಕವಡೆಯ) ಆಟ ಬಿದ್ದಾಗ ಅದೇ ದ್ವೇಷವು (ಇಂದ್ರಿಯಗಳು, ಮನಸ್ಸು ಬಯಸಿದ್ದೊಂದು, ಎಸೆದ ಕವಡೆಗಳು ಕೊಟ್ಟ 'ದಾನ'ವೇ ಇನ್ನೊಂದು, ಹೀಗಾದಾಗ ದ್ವೇಷವು ಹುಟ್ಟುತ್ತದೆಯೆಂದು ಭಾವ)

*ಹಾರಿ ಉಮಚಾವೇಯಾ ಜುಜ್‌ವಾರು ಯೇ ಡಾಯಾ (೧೩.೫೪೦)*

ಸೋತದ್ದನ್ನು ಉಚ್ಚಿಕೊಳ್ಳಲು (ಉಮಚು' ಕನ್ನಡವಿರಬಹುದು) ಜೂಜುಗಾರನು ಆಡಲು ಬರುತ್ತಾನೆ.

*ಮಿಯಾಜ್ ನಕ್ಷತ್ರೀಜ್ ಡಾಓ ಪಾಡಾವಾ ಮಗ ಚಂದ್ರು ಚೇಂಡುವಾಲಾಗಿ ಮಾಗಾವಾ (೧೧.೫೭೧)*

(ಕವಡೆಗಳಿಗೆ ಬದಲಾಗಿ) ನಾನು ನಕ್ಷತ್ರಗಳ ಆಟ ಒಗೆಯಬೇಕು. ಬಳಿಕ ಚೆಂಡಿಗಾಗಿ ಚಂದ್ರನನ್ನು ಬೇಡಬೇಕು.

ಶಬ್ದವು ಆದಿಯಲ್ಲಿಯ ಸ್ವರವನ್ನು ಕಳೆದುಕೊಳ್ಳುವ ರೀತಿ ಕನ್ನಡಕ್ಕೆ ಒಂದಿಷ್ಟು ಅಪರಿಚಿತ (ಆ)ಡಂಗುಟುಚು-ಕಣ್ಣುಮುಚ್ಚಾಲೆ ಹೀಗೆ ನನಗೆ ದೊರೆತ ಕನ್ನಡ ಶಬ್ದ ಒಂದೇ. ಪ್ರಾಕೃತ-ಮರಾಠಿಗಳಲ್ಲಿ ಇಂತಹ ಶಬ್ದಗಳು ಸಾಕಷ್ಟು ಇವೆ. ಸಂಸ್ಕೃತ ಉಪವಿಶದಿಂದ ಅಪಭ್ರಂಶ ಭಾಷೆಯಲ್ಲಾದ 'ಬಇಸ'ವಾಗಲೀ, ಅರ್ಧಮಾಗಧಿ-ಯಲ್ಲಾದ 'ಬಇಠ'ವಾಗಲೀ ಇವು ಪ್ರಾಕೃತದ ಉದಾಹರಣೆಗಳು. 'ಅಪಿ'ಯ ಜತೆಗೆ 'ಪಿ' 'ಅಪೂಪ'ದ ಜತೆಗೆ 'ಪೂಪ' ರೂಪಗಳು ಇಂಡೋಯುರೋಪಿಯನ್ ಕಾಲ-ದಿಂದಲೂ ದೊರೆಯುತ್ತವೆಯೆಂದು ವಾಕರನಾಗೆಲ್ ಹೇಳುತ್ತಾರೆ. ಸಂಸ್ಕೃತದ 'ಅಪಿ' ಪ್ರಾಕೃತೋದ್ಭವ ಭಾಷೆಗಳಲ್ಲಿ ಕೂಡ (ಹಿಂದೀ=ಭೀ ಮರಾಠೀ ಹೀ ಇತ್ಯಾದಿ) ತನ್ನ ಆದಿಸ್ವರ ಕಳೆದುಕೊಂಡಿದೆ. ಮರಾಠಿಯಲ್ಲಿಯ ಉದಾಹರಣೆಗಳಿವು.

ಅಧ್ಯವಸಾಯ-ಢವಸಾಉ; ಅನಂತರ-ನಂತರ; ಅಪೂಪ-ಮಡೀ, ಅಭ್ಯಂತರ-ಭೀತರ; ಅರಣ್ಯ-ರಾನ; ಅರಘಟ್ಟಿಕಾ-ರಾಹಾಟೀ; ಉಪರಿ-ವರಿ; ಉಪಾನಹ್-ವಾಹಾಣ; ಆಟೋಪ-ಟೋಪು;

ಕನ್ನಡದ ಅಡ್ಡಗಲ (ಜನಪದ 'ಅಡ್ಡಾಗಲ') -ಡಗಳ (ಜ್ಞಾನೇಶ್ವರೀ ೧೭.೧೨೬)

**ಡಾವೇ - ಜೇವಣೇ ; ಡಾವೇ - ಉಜವೇ ; ಎಡ-ಬಲ**

*ದಳಿತೇಂದ್ರಿವರನೆಗೆತ್ತವ ಕೈಯೊಳ್ (ಆದಿಪುರಾಣ ೮-೬೦)* ಇಲ್ಲಿ ಬರುವ 'ಸವ್ಯ' ಅರ್ಥದ 'ಎಡ' ಶಬ್ದ 'ಎಡೆ' (ಸ್ಥಳ, ಸ್ಥಾನ') ದಿಂದ ಬಂದಿರಬಹುದೇ, ಎಂದು ಕಿಟೆಲ್‌ರು ಶಂಕಿಸಿದ್ದಾರೆ.

ಇಲ್ಲಿ ಹೋಲಿಕೆಗಾಗಿ 'ಎಡಚು', 'ಎಡವಟ್ಟು', ಮತ್ತು 'ಎಡತಿ' ಶಬ್ದಗಳನ್ನು ಗಮನಿಸೋಣ. ಶಬ್ದಮಣಿದರ್ಪಣ (ಸೂತ್ರ ೨೧೯ ಪ್ರಯೋಗ) ದಲ್ಲಿ ಬರುವ 'ಎಡತಿ' ಶಬ್ದ 'ಎಡ'ದ ಸ್ತ್ರೀಲಿಂಗಿ. 'ಎಡತಿ'ಯ ಅರ್ಥ 'ಅಪ್ರಯೋಜಕ ಸ್ತ್ರೀ' ಎಂದು ಅವರೇ ತಾವು ಸಂಪಾದಿಸಿದ ಶಬ್ದಮಣಿದರ್ಪಣದಲ್ಲಿ (ಪುಟ ೨೪೪) ಹೇಳಿದ್ದಾರೆ. 'ಎಡತಿ' ಶಬ್ದ (ಇದಕ್ಕೆ ಎಡ್ಡತಿ ಎಂದೂ ರೂಪವೂ ಇದೆ). 'ಎಡ್ಡ' ದಿಂದ ಬಂದುದಾಗಿದೆ. ಈ ಶಬ್ದ 'ವೇಡ' ಆಗಿ ಮರಾಠಿಗೆ ಹೋಗಿದ್ದನ್ನು ನೋಡಬಹುದು.

*ಜೇಥ ವೇಡಾವತಿ ವೇದ (೧.೭೩)*

ಎಲ್ಲ ವೇದಗಳು ಹುಚ್ಚಾಗುವುವೋ-

*ಪರಿ ವೇಡಿವೇಮಾಜಿ ದಡೇ ಮಹಿಮೇಭೇಣ (೧೩.೧೯೦)*

(ವಾಚಸ್ಪತಿಯಂತಹ ಸರ್ವಜ್ಞತೆ ಇದ್ದರೂ) ಆ ಜ್ಞಾನಿಯು (ಜನ) ದೊಡ್ಡಸ್ತಿಕೆ ಕೊಡಬಹುದೆಂದು ಭೀತಿಯಿಂದ ಹುಚ್ಚುತನಲ್ಲಿ ಮರೆಮಾಚಿಕೊಳ್ಳುತ್ತಾನೆ.

ಹೀಗೆ ಎಡ್ಡ, ಎಡತಿ, ಎಡವಟ್ಟು, ಎಡಚು ಇತ್ಯಾದಿ ಶಬ್ದಗಳಲ್ಲಿಯ ಎಡಕ್ಕೆ 'ಹೀನ' 'ಅವಾಂಛನೀಯ' 'ಅಪ್ರಿಯ' ಎಂದರ್ಥಗಳನ್ನು ಗ್ರಹಿಸಬಹುದು. 'ಎಡಗೈ' ಯಲ್ಲಿ ಬರುವ 'ಎಡವೂ' 'ಹೀನ' ಎಂಬರ್ಥದಿಂದಲೇ.

ಹಳಗನ್ನಡದಿಂದಲೂ ಎಷ್ಟೋ 'ಎ'ಕಾರಾದಿ ಶಬ್ದಗಳಿಗೆ 'ಅ'ಕಾರ ಆದೇಶವಾಗಿದೆ. ಎನ್, ಅನ್, ಎನಿತು, ಅನಿತು, ಎಡಚು, ಅಡಚು ಇತ್ಯಾದಿ. ಹೀಗೆ ಹಳಗನ್ನಡ 'ಎಡ' 'ಅಡಾ' ವಾಗಿ 'ಅ' ಕಳೆದುಕೊಂಡು 'ಡಾವೇ' ಆಗಿ ಮರಾಠಿಗೆ ಹೋಗಿದೆ. ಹೀಗೆಯೇ ಕನ್ನಡದ 'ಆಡು' ಮರಾಠಿಗೆ 'ಡಾ' ಆದುದನ್ನು ಬೇರೆಡೆ ವಿವರಿಸಿದ್ದೇನೆ. ಕನ್ನಡದಿಂದ 'ಡಾವೇ' ಏನೋ ಬಂತು. 'ಬಲಗೈ'ಗೆ ಏನು ಮಾಡಬೇಕು? ಮಕ್ಕಳಿಗೆ ತಿಳಿಹೇಳುವ ಹಾಗೆ 'ಬಲಗೈ'ಗೆ ಮೊದಲು ಮರಾಠಿಯಲ್ಲಿ 'ಊಟದ (ಕೈ)' 'ಜೇವಣೇ' ಎಂಬ ಶಬ್ದವೇ ಒದಗಿತು. ಜ್ಞಾನೇಶ್ವರಿಯಲ್ಲಿ ಈ ಪ್ರಯೋಗ

*ಹಾಜ್ ಗಾ ಪಾಉಸೀಜ್ ಕಾಇ ಡಾವೇ ಜೇವಣೇಜ್ ಅಂಗ ಹೋಯೇ (೧೦.೨೯೦)*

ಹೌದಯ್ಯ, ಮಳೆಗೇನು ಎಡ ಬಲ ಮೈ(ಬದಿ)ಗಳು ಇರುತ್ತವೆಯೇ?

ಶಿಶುಪಾಳವಧದಲ್ಲಿ,

*ಡಾವೇ ಜೇವಣೇ ಘಾವಿ ಸಾಂಡಿತು*

ಎಡ ಬಲದ ಆಘಾತಗಳನ್ನು ತಪ್ಪಿಸುತ್ತ

ಆದರೆ ಲೀಳಾಚರಿತ್ರದಲ್ಲಿ ಮಾತ್ರ (ಪರಮೇಶ್ವರಪುರದಿಂದ ತಂದ ವಸ್ತ್ರದ ಲೀಳೆ) 'ಬಲ' ಕ್ಕೆ 'ಉಜವೇ'ಶಬ್ದ ಬಂದಿದೆ. ಈ ಬರೆಹ ಇದರಿಂದಾಗಿ ಪರಿಷ್ಕೃತವೆಂದು ಹೇಳದೆ ಗತ್ಯಂತರವಿಲ್ಲ.

*ಭವತ್ಪದ ಸರೋಜಮನಾಂ ಬಲಗೊಂಡು (೧೩.೧೫) ನೆಲಂ ಮೂರಿವಿಟ್ಟಂತೆ ಬಲವಕ್ಕದೊಳ್ ನಡೆಯೆ (೯.೯೫ ವ) ಮೂರು ಸೂಟ್ ಬಲವಂದು ಪೊಡವಟ್ಟು (೩.೫೮ವ)*

ಹೀಗೆ ಪಂಪಭಾರತದಲ್ಲಿ 'ಬಲ' ಶಬ್ದದ ಪ್ರಯೋಗ ದೊರೆಯುತ್ತವೆ. ಇಲ್ಲಿ ಒಂದು ಪ್ರದೇಶದ ಸುಸಂಸ್ಕೃತತೆ ಈ ಶಬ್ದದ ಮೂಲಕ ಕಾಣಸಿಕ್ಕುತ್ತದೆ. 'ಬಲ' ಬರಿ 'ಊಟ'ದ್ದಲ್ಲ!

*ಎಲ್ಲರಿಂಗಂ ಬಲ್ಲಂ (ಕವಿರಾಜಮಾರ್ಗ ೧೪.೧೬). ಎನಗೆ ಬಲ್ಲಿದರಾಗಲಾರ್ಪರೆ ಗಾವಿಲರ್ (ಶಬ್ದಮಣಿವರ್ಪಣ ಸೂತ್ರ ೧೦೮ ಪ್ರ) ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು (ಬಸವೇಶ್ವರರ ವಚನ)*

ಹೀಗೆ 'ಬಲ್' ಎಂದರೆ 'ತಿಳಿ' (ಬವರದೊಳೇಬಲ್ಲಂ -ಪಂಪಭಾರತ ೧೨.೩) ಧಾತುವಿನಿಂದ ಸಿದ್ಧವಾದ 'ಬಲ' ವಿಶೇಷಣ 'ಶ್ರೇಷ್ಠ' ಎಂಬರ್ಥವನ್ನು ಪಡೆಯಿತು. ಇದು ನಮ್ಮ 'ಬಲ'ಗೈಗೆ ಆಧಾರ. ಕನ್ನಡದಲ್ಲಿ 'ಬಲ'ಕ್ಕೆ ಗಟ್ಟಿ ಎಂದರ್ಥವೂ ಇದೆ. ಹೀಗೆ 'ಶ್ರೇಷ್ಠ', 'ಗಟ್ಟಿ', ಅರ್ಥದ ಸಂಸ್ಕೃತ ಶಬ್ದ 'ಉಚ್ಚ'. ಈ 'ಉಚ್ಚ'ದಿಂದ ಮರಾಠಿಯಲ್ಲಿ 'ಉಜು' ಶಬ್ದ ಸಿದ್ಧವಾಗಿದೆ. ಜ್ಞಾನೇಶ್ವರಿಯಲ್ಲಿಯ ಪ್ರಯೋಗಗಳು ಇಂತು.

*ಆತ್ಮಬೋಧಾಚೇನಿ ಉಜುಕಾರೇಜ್ (೬.೧೫೫)*

ಆತ್ಮಬೋಧದ ಉಚ್ಚವಾದ

*ಉಜೂ ಆಉಖ ತ್ಯೆಜ್ ಮಾರಿತೇಜ್ ಲೋಭು ಕರೀ (೧೫.೨೨)*

ಆಯುಷ್ಯ ಗಟ್ಟಿಯಾಗಿದ್ದರೆ ಕೊಲ್ಲಬಂದವನು ಪ್ರೀತಿಸುತ್ತಾನೆ.

ಇಲ್ಲಿ 'ಉಚ್ಚ'ಕ್ಕೆ ಒದಗಿದ 'ಬಲ', 'ಗಟ್ಟಿ' ಅರ್ಥ ಗಮನಾರ್ಹ.

*ಜ್ಞಾನಿಯಾಜ್ ತರಿಅಖಂಡು ಉಜೂ ಚಿ ಆಸಸಿ (೧೮೭.೪)*

ಜ್ಞಾನಿಗಳಲ್ಲಂತೂ (ಸದ್ಗುರುವಾದ ಗಣಪತಿಯೇ) ಅಖಂಡನೂ,

ಇದಿರು (ಮೋರೆಯವನೂ) ಇರುವಿ.

ಮೊದಲ ಸಾಲಿನಲ್ಲಿಯ 'ಅಜ್ಞಾನಿಗಳಿಗೆ ವಕ್ರತುಂಡ' (ಮೋರೆ ಹೊರಳಿಸಿದವ) ಇದರ ವಿರುದ್ಧವಾದ ಭಾವ ಇಲ್ಲಿದೆ. ಇಲ್ಲಿ ಮಾತ್ರ 'ಉಜೂ' ಸಂಸ್ಕೃತದ 'ಋಜು'ದಿಂದ ಬಂದಿರಬಹುದಾಗಿದೆ. (ತುಳಮಳೆಯವರ ವ್ಯುತ್ಪತ್ತಿ)

ಹೀಗೆ ಶ್ರೇಷ್ಠ, ಸರಳ, ಗಟ್ಟಿ ಅರ್ಥಗಳಲ್ಲಿಯ 'ಉಜು' ಶಬ್ದದಿಂದ 'ಅಪಸವ್ಯ' ಅರ್ಥದಲ್ಲಿಯ ಉಜವಾ ಶಬ್ದ ನಂತರ ಹುಟ್ಟಿಕೊಂಡಿದೆ.

**ತಾಡಾ ತಾಟೀ; ತಟ್ಟಿ, ಅಡ್ಡಿ**

'ಗತಿಸ್ತಂಭ'ವನ್ನು ಸೂಚಿಸುವ 'ತಱುಂಬು' ಈ ಹಳಗನ್ನಡ ಧಾತು, 'ತಱು' ಮೂಲದಿಂದ ಹುಟ್ಟಿರಬಹುದಾಗಿದೆ. ಇದರಿಂದಲೇ 'ಕ್ರಮದಿಂದೆ' ಅರ್ಥದಲ್ಲಿ 'ತಱುವಾಯಿಂ' (ಶಬ್ದಮಣಿದರ್ಪಣ ೭) ಶಬ್ದ ಸಿದ್ಧವಾಯಿತು. ಈ 'ತಱು' ದಿಂದಲೇ 'ತಡ', 'ತಡೆ', 'ತಡವು', 'ತಡಿಕೆ' ಮೊದಲಾಗಿ ಹಳಗನ್ನಡ ಶಬ್ದಗಳ ಹುಟ್ಟಿವೆ. ಇಂತಹದೇ ಇನ್ನೊಂದು ಶಬ್ದ 'ತಟ್ಟಿ'. ಇದು 'ತಾಂಟೀ' ಆಗಿ ಮರಾಠಿಯಲ್ಲಿ ಹೋಗಿದೆ. ಜ್ಞಾನೇಶ್ವರಿಯಲ್ಲಿಯ ಪ್ರಯೋಗ ಇಂತು.

*ಜೇಹಾಚ್‌ತೇಚ್ ಅಭ್ಯಾಸಾಚೀ ಘರಟೀ ಯಮನಿಯಮಾಚೀ ತಾಟೀ*
*ಜೇಚ್ ಮನಾತೇಚ್ ಯಯಾ ಮೂಠೀ ಧರುನಿ ಅಸತಿ (೨.೩೧೧)*

ಯಾರು ಅಭ್ಯಾಸದ ಗೂಡಿನಲ್ಲಿ (ಹಾಕಿ), ಯಮನಿಯಮಗಳ ಅಡ್ಡಿ (ತಟ್ಟಿ) ಹೊರಗಿರಿಸಿ ಮನಸ್ಸನ್ನು ಮುಷ್ಠಿಯಲ್ಲಿ ಹಿಡಿದಿಟ್ಟಿರುತ್ತಾರೋ-

*ತೈಸೇಚ್ ಗುಣಕಾರ್ಯಹೇಚ್ ಅಘವೇಚ್ ಆಪಣ ಚಿ ಆಹೇ*
*ಹ್ಮಣೌನಿ ಯೇಕ್ಕೆಕೇ ಸೋಹೇ ತಾಡಾತೋಡೀ (೧೪.೩೩೪)*

ಗುಣಗಳು ಮಾಡುವ ಕಾರ್ಯಗಳೆಲ್ಲವೂ ತಾನೇ (ತನ್ನವೇ) ಎಂದು ಭಾವಿಸಿ, ಒಂದೊಂದಾದ ಅಡೆತಡೆಗಳನ್ನು ಕಿತ್ತೆಸೆಯುವುದಿಲ್ಲ. (ಗುಣಕಾರ್ಯಗಳನ್ನು ಸ್ವೀಕರಿಸುತ್ತಾನೆ, ದ್ವೇಷಿಸುವುದಿಲ್ಲವೆಂದು ಭಾವಾರ್ಥ.)

**ತಾಟ, ತಟ್ಟೆ**

ಊಟದ ತಟ್ಟೆಯರ್ಥದಲ್ಲಿಯ 'ತಾಟು' ಶಬ್ದ ಮರಾಠಿಯಿಂದ ಕನ್ನಡಕ್ಕೆ ಬಂದುದೆಂದು ಕಿಟೆಲ್‌ರು ಭಾವಿಸಿದ್ದಾರೆ. ಆದರೆ ಮರಾಠಿಯಲ್ಲಿ ಈ ಶಬ್ದಕ್ಕೆ ಬೇರೆ ಉಪಪತ್ತಿ ಇಲ್ಲ. 'ತಾಡನ' ಅರ್ಥದಲ್ಲಿಯ ಹಳಗನ್ನಡದ 'ತಟ್ಟು' ಧಾತುವಿನಿಂದಾದ ನಾಮಪದ 'ತಟ್ಟೆ'. ಇದಕ್ಕೆ 'ಚಪ್ಪಟ್ಟೆ' ಎಂಬರ್ಥವೂ ಕನ್ನಡದಲ್ಲಿದೆ. 'ತಟ್ಟಿ' ಚಪ್ಪಟೆ ಮಾಡಿದ್ದೇ 'ತಟ್ಟೆ' ('ಕಟ್ಟಿ'ದ್ದು 'ಕಟ್ಟೆ' ಯಾದ ಹಾಗೆ) ಈ 'ತಟ್ಟೆ' ಮರಾಠಿಯಲ್ಲಿ 'ತಾಟ' ಆಗಿ ಹೋಗಿದೆ.

ಜ್ಞಾನೇಶ್ವರೀಯಲ್ಲಿಯ ಪ್ರಯೋಗವಿದು.

*ಬಾಳ ಬಾಪಾಚಿಯಾಚ್ ತಾಟೀಚ್ ರಿಗೇ ರಿಘೌನಿ ಬಾಪಾತೇಚ್ ಚಿ ಜೇವಉಜ್ ಲಾಗೇ*
*ಕಿಚ್ ತೋ ಸಂತೋಷಾಚೇನಿ ವೇಗೇಚ್ ಮುಖ ಓಡವೀ (೯.೧೫)*

ಮಗು ಅಪ್ಪನ ತಟ್ಟೆಗೆ ಹೋಗುತ್ತಾನೆ. ಹೋಗಿ ಅಪ್ಪನಿಗೇ ಉಣಿಸಹತ್ತುತ್ತಾನೆ. ಆಗ ಅವನು (ತಂದೆಯು) ಆನಂದದಿಂದ, ಅವಸರದಿಂದ ಬಾಯಿ ಒಡ್ಡುತ್ತಾನೆ.

ಹಳಗನ್ನಡ 'ಒಡ್ಡು' ಮರಾಠಿಯಲ್ಲಿ 'ಓಡ' ಆದದ್ದನ್ನು ಇಲ್ಲಿ ಗಮನಿಸಬಹುದು. ಶಬ್ದದಲ್ಲಿಯ ಮುಂದಿನ ಅಕ್ಷರವು ಒತ್ತಕ್ಷರ (ದ್ವಿತ್ವ) ವಾಗಿದ್ದರೆ ಅದನ್ನು ಒಂದೇ ಇಟ್ಟು ಹಿಂದಿನ ಅಕ್ಷರದ ಸ್ವರವನ್ನು ದೀರ್ಘಗೊಳಿಸುವುದು ಮರಾಠಿ ಭಾಷೆಯ ವೈಶಿಷ್ಟ್ಯಗಳಲ್ಲೊಂದಾಗಿದೆ. ಉದಾಹರಣೆಗೆ ಮೇಲ್ಕಾಣಿಸಿದ ತಾಟ, ಓಡಗಳಲ್ಲದೆ, ಪಟ್ಟಂಗಟ್ಟು (ಪಾಟುಬಾಂಧಣೇ) ಕಜ್ಜ (ಕಾಜ), ಸಜ್ಜು (ಸಾಜ), ಮಜ್ಜನ (ಮಾಜಣೇಜ್), ಬಣ್ಣಿಸು (ವಾನಣೇಜ್) ಸಣ್ಣ (ಸಾನ), ಒಕ್ಕು (ಓಕಣೇಜ್). ಕನ್ನಡ (ಕಾನಡಾ) ಇತ್ಯಾದಿ.

**ತಿಮಣೇಜ್-ತಣ್ಪು ((ತಣ್‌ದಿಂದ) ಹಸಿಮಾಡು, ನನಸು**

*ಅಲರಿಂ ತಣ್ಣೆಲರಿಂ ತುಂಬಿದ ತಿಳಿಗೊಳದಿನೆಸೆದ ಬನಮಂ ಪೊಕ್ಕಳ್ (ಪಂಪಭಾರತ ೫.೨) ಪಿಂಭಾತಪತ್ರಂ ಪುದಿದೆತ್ತಂ ತಣ್ಣೆಲ್ ಮಾಡುವುದು ಗಡಂ (ಅದೇ ೧೩.೯೮) ಸಂಭೋಗ ಲೊಭದಿನಡಂಗಿ ಕೊಡಿಬಾಡಿ ಕಾಡಿದ ಚಂದನಲತಾಮಂದಿರಮುಮನಾಕನಕ ಕದಳೀದಳ ಶ್ಯಾಮೇಕದಳಿದಳ ವೀಜನ ತಣ್ಗಾಳಿಯಿನನಂಗ ಕೇಳೀ ಪರಿಶ್ರಮರ್ಮನಾಜಿಸಿ (ಪಂಪರಾಮಾಯಣ .೧೨೦ ವ)* ಮೊದಲಾದ ಉದಾಹರಣೆಗಳಲ್ಲಿ ಬರುವ 'ತಣ್ಣೆಲರ್' 'ತಣ್ಣೆಲ್', 'ತಣ್ಗಾಳಿ' ಶಬ್ದಗಳಲ್ಲಿಯ 'ತಣ್' ಶಬ್ದದಿಂದ ಸಿದ್ಧವಾದ ಧಾತು ನಮಗೆ ಗ್ರಾಂಥಿಕ ರೂಪದಲ್ಲಿ ದೊರೆತಿಲ್ಲ. ಆದರೆ -'ಪು' ಪ್ರತ್ಯಯ ಹತ್ತಿ (ಉದಾಃ ಅಟಿಮ, ತಿರುಪು, ನೆರೆಪು ಇತ್ಯಾದಿ) 'ತಣ್ಪು'='ತಂಪು' ಧಾತು ಸಿದ್ಧವಾಗಿರಬಹುದಾಗಿದೆ. 'ತಣ್ಪು' ಧಾತು ಮರಾಠಿಗೆ 'ತಿಮ' ಆಗಿ ಹೋಗಿದೆ. (ಇದರಿಂದ ಇಂದಿನ ಮರಾಠಿಯಲ್ಲಾದ ವಿಶೇಷಣ 'ಚಿಂಬ') ಲೀಳಾಚರಿತ್ರದಲ್ಲಿಯ ಉದಾಹರಣೆಗಳು ಇಂತಿವೆ.

*ಏಕೇ ಗಂಗಾಳೇಜ್ ಆಂಗವಸಾ ತಿಮಿತೀ; ಶ್ರೀಮೂರ್ತಿ ಪ್ರಮಾರ್ಜೀತಿ (ಪೂ ೮)*
ಒಬ್ಬಳು ಗಂಗಾಳದಿಂದ ಮೈ ನನಸುತ್ತಿದ್ದಳು; (ಚಕ್ರಧರರ) ಶ್ರೀಮೂರ್ತಿಯನ್ನು ತೊಳೆಯುತ್ತಿದ್ದಳು.

ಚಕ್ರಧರರು ನಾಸಿಕ ಪಂಚವಟಿಯ ಬಳಿ ಗೋದಾವರಿ ನದಿ ದಾಟಿದ್ದಾರೆ.

*ತಿಮಲೀಜ್ ವಸ್ತ್ರೇ ಫೇಡಿಲೀಜ್; ಆಣಿ ಆಣಿಕೇಜ್ ವೇಢಿಲೀಜ್ (ಪೂ. ೧೦೨)*
ನೆನೆದ ಬಟ್ಟೆಗಳನ್ನು ಕಳೆದರು; ಮತ್ತು ಮತ್ತೆ (ಬೇರೆ) ಸುತ್ತಿಕೊಂಡರು.

**ಡುಕಣೇ ತೂಗು- ಅಲ್ಲಾಡಿಸು (ತಲೆ ಹಾಕು), ಡೂಜ್‌ಕ-ಡೂಕ, ಡುಕಣೇ-ಡೂಕ ಮಾಡು; ಡುಕಾ-ಸಮಾನ;**

**ಇಹಿಜ್ ಡುಕೇ = ಇಡುಕೇ-ಇಷ್ಟು; ಕಿಡುಕೇ-ಅಷ್ಟು;**

ಹಳಗನ್ನಡ ತೂಗು ಈ ಧಾತುವಿನಿಂದ ಮರಾಠಿಗೆ ಹೋಗಿ ಬೇರೆ ಬೇರೆ ಅರ್ಥ ಪಡೆದ ಡೂಕ ಶಬ್ದದ ಬೆಳವಣಿಗೆ ಸ್ವಾರಸ್ಯಕರ.

ತಲೆ ಹಾಕು, ತಲೆ ಅಲ್ಲಾಡಿಸು (ಹೌದೆನ್ನುವಂತೆ) ಅರ್ಥದಲ್ಲಿ :

*ಇನಿಸಂ ತಲೆದೂಗುವಸ್ತ್ರವೊಲ್ (ಪಂಪಭಾರತ ೩.೮೩)*
*ತಿಹೀಞ್ ವೇದಾಂಚಾ ಮಾಥಾ ತುಕೇ (೬.೩೦೫)*
ಮೂರೂ ವೇದಗಳ ತಲೆ ತೂಗಬೇಕು.
*ತೇಥೇಞ್ ಸಂಜಯೇಞ್ ಮಾಥಾ ತೂಕಿಲಾ (೬.೫೧೮)*
ಅಲ್ಲಿ ಸಂಜಯನ ತಲೆ ತೂಗಿತು.
*ಮಗ ಬೋಲೇ ತಞ್ವ ತಞ್ವ ಮಾಥಾ ತೂಕಿಜೆ (೧೧.೧೭)*
ನಂತರ ಮಾತನಾಡಿದಾಗ ಆಗಾಗ ತಲೆ ತೂಗುತ್ತೀರಿ.
*ತಞ್ವ ಶ್ವಾಸೌನಿ ಪಿರೇಞ್ ಮಾಥಾ ತುಕಪಿಲಾ (೧೮.೨೮೮)*
ಆಗ ಉಸಿರುಬಿಟ್ಟ ಇನ್ನೊಬ್ಬನ (ಅರ್ಜುನನ) ತಲೆ ತೂಗಿತು.

ಇನ್ನು, ತೂಗು (ತಕ್ಕಡಿಯಲ್ಲಿ) ಎನ್ನುವ ಅರ್ಥದಲ್ಲಿ :

*ಪರಾಕ್ರಮದಿನೆನ್ನನೆ ಭೂಪತಿ ತೂಗಿ ತೋರೆನೇ (ಪಂಪಭಾರತ ೧೦.೪೦)*
*ಪರಿ ಮಾಸಿಞ್ ತೂಞ್ಕಿತಾಞ್ ತೂಞ್ಕಾ ತೂಟಿ ನಾಹಿಞ್ (೬.೪೪೫)*
ಆದರೆ ನನ್ನೊಡನೆ ತೂಗಿದರೆ, ತೂಕದಲ್ಲಿ ಕಡಿಮೆ ಇಲ್ಲ.
*ತೂಞ್ಕೂನಿ ಘೇತಲೀಞ್ ಮೋತಿಯೇಞ್ ಜೈಸಿಞ್ (೧೮.೩೧)*
ಮುತ್ತುಗಳಂತೆ ತೂಗಿಕೊಂಡರು.
*ಮಿಾನಲೇನಿ ಕೀಡೆಞ್ ಜಞ್ವಜಞ್ವ ತೂಞ್ಕ ವಾಢೇ (೧೪.೧೪೦)*
ಕೀಳ ಕೂಡಿಸಿದಾಗಲೆಲ್ಲ ತೂಕ ಬೆಳೆದಂತೆ.
*ಐಸೇ ಏಕತೂಕೇಞ್ ಪಾಂಚಭೌತಿಕ ಪಡತಿ ಬೌಹಸ ಟಾಞ್ಕ (೭.೨೫)*
ಹೀಗೆ ಪಂಚಮಹಾಭೂತಗಳ ಒಂದೇ ತೂಕದ ಬಹಳಷ್ಟು ನಾಣ್ಯಗಳು ಬೀಳುತ್ತವೆ.
*ಸಮತೂಕೀಞ್ ಕಾಂಟಾಳೇಞ್ ಮಸೀಞ್ ಜಾಲೇ (೧೪.೫೧)*
ತಕ್ಕಡಿಯಲ್ಲಿ ನನ್ನ ಸಮತೂಕಕ್ಕೆ ತಲುಪಿದರು.

ಹೀಗೆ ತಲೆದೂಗಿ, ತಕ್ಕಡಿಯಲ್ಲಿ ತೂಗಿದನಂತರ ತೂಕ ಸರಿ, ಸಮಾನವೆಂಬ ಅಲಂಕಾರಿಕ ಅರ್ಥ ಪಡೆಯುತ್ತದೆ.

*ಊರ್ಧ್ವಮೂಳಾಸರಿಸೇ ನ ತುಕತಿ ಗಾ (೧೫.೨೦೨)*
ಊರ್ಧ್ವಮೂಲ (ಸಂಸಾರವೃಕ್ಷ) ಸಾಟಿಗೆ ಬರುವುದಿಲ್ಲಯ್ಯ
*ಮಗ ಮಾಝಿಯಾ ಸಂವಸಾರೀಞ್ ತೂಕಸೀ ಜಗೀಞ್ (೧೮.೧೪೯೬)*
ಬಳಿಕ ನನಗೆ ಸರಿಸಮನಾಗಿ ಸಾಟಿಯಾಗುತ್ತೀ.
*ನಾತರಿ ತೂಕೇ ಜೋ ಇಹಿಂಸಿಞ್ ತೋಹಿ ದೇಶು ಹೋ (೧೭.೨೭೦)*
ಇಲ್ಲದೆ ಹೋದರೆ ಇದಕ್ಕೆ ಸಮಸಾಟಿಯಾದ ದೇಶವಾದರೂ ಆದೀತು.

ಮುಂದೆ 'ಇಯೇಞ್ ತುಕೇಞ್ಞ್' 'ಈ ತೂಕದ' "ಇಷ್ಟು ತೂಕದ' ಬೆಳೆದು ಇತುಕೇಞ್=ಇಷ್ಟು. ತಿತುಕೇಞ್=ಅಷ್ಟು ಎಂದೆಲ್ಲ ಅರ್ಥ ಪಡೆಯುತ್ತವೆ.

*ಅರ್ಜುನು ಇತುಕೇಜ್ ಬೋಲಿಲಾ (೧.೧೭೪)*

ಅರ್ಜುನನು ಇಷ್ಟು ಹೇಳಿದನು.

*ಹೇಜ್‌ಆಜ್‌ಉಠ ಹಾತ ವೋಟಕೇಜ್ ಕಿಜ್ ಕೇವಡೇಜ್ ಪಾಜ್ ಕೇಜ್‌ತುಕೇಜ್ (೧೩.೧೩)*

ಮೂರೂವರೆ ಮೊಂಡು ಮೊಳದ ಇದು (ಈ ಶರೀರ) ಎಷ್ಟರದು. (ಕೇವಡೇಜ್, ಕೇತುಕೇಜ್ ಒಂದೇ ಅರ್ಥದಲ್ಲಿ ದ್ವಿರುಕ್ತಿಯಾಗಿ ಬಳಸಲಾಗಿವೆ)

*ಕಾಮ್ಯ ಕೀಜೇ ಜೇತುಕೇಜ್ ಕ್ರಿಯಾಜಾತ (೧೮.೫೯೯)*

ಕಾಮ್ಯವಿದ್ದಷ್ಟು ಕ್ರಿಯೆಯನ್ನು ಮಾಡುತ್ತಾರೆ.

*ತೈಸೆಜ್ ಧರ್ಮಜಾತ ಜೇತುಕೇಜ್ (೧೮.೭೨೩)*

ಧರ್ಮಕ್ಕೆ ಮಾನ್ಯವಿದ್ದಷ್ಟು

*ಇಯಾವೇರ್ಥಿಜ್ ಹೋಉ ಜೇತುಕೇಜ್ (೧.೨೬೫)*

ಇಲ್ಲಿಯವರೆಗೆ ಆದಷ್ಟು

*ತರಿ ತೇತುಕೇ ಹಿ ಕಾಇ ಚಾಲಿಜತಿ ಸಾಂಘ್ಯೆ ಮಜ (೨.೨೬೧)*

(ಸೂರ್ಯೋದಯವಾದೊಡನೆ ದಾರಿಗಳೆಲ್ಲ ಕಾಣಿಸುತ್ತವೆ) ಆದರೆ ಅವಷ್ಟನ್ನೆಲ್ಲ ನಡೆಯಲಾದೀತೇ, ನನಗೆ ಹೇಳ್ಳೆ.

ಇಲ್ಲಿಗೆ 'ತೂಕ'ದ ಪ್ರವಾಸ ಮುಗಿಯಲಿಲ್ಲ. ಇದರ ಸಂಸ್ಕೃತ ಸಮಾನಾರ್ಥವಾದ 'ತುಲಾ' ರೂಪದಲ್ಲಿ ಇದು ಮುಂದುವರೆದಿದೆ. ಇತುಕಾ, ತಿತುಕಾ, ಜೇತುಕಾದ ಬದಲು ಇತುಲಾ, ತೇತುಲಾ, ಜೇತುಲಾ ಆಗಿ ಪ್ರಯೋಗಿಸಲಾಗಿದೆ.

*ದೇಖೈಜ್ ಜೇತುಲಾಲೇಜ್ ಕರ್ಮ ನಿಫಜೇ ತೇತುಲಾಲೇಜ್ ಆದಿಪುರುಷೀಜ್ ಜರಿ ಅರ್ಪಿಜೇ (೨.೨೭೧)*

ನೋಡ್ಯೆ, ಎಷ್ಟೊಂದು ಕರ್ಮ ಹುಟ್ಟುವುದೋ ಅಷ್ಟನ್ನು ಆದಿಪುರುಷನಿಗೆ ಅರ್ಪಿಸಿದರೆ-

*ತರಿ ತೇತುಲೇ ಹೀ ಸಿದ್ಧಾಂತ (೧೮.೧೨೩೫)*

ಆದ್ದರಿಂದ ಅಷ್ಟೆಲ್ಲ ಸಿದ್ಧಾಂತಗಳನ್ನು

*ಹೇಜ್ ಏತುಲೇಜ್‌ಚ ನಾನಾಪರೀಜ್ (೧೮.೧೨೩೮)*

ಇದಿಷ್ಟನ್ನೇ ಬೇರೆ ಬೇರೆ ಪರಿಯಿಂದ

*ಜೋ ಇಯೇ ಗೀತೇಚಿಜ್ ಅಕ್ಷರೇಜ್ ಜೇತುಲೀಜ್ ಕರ್ಣದ್ವಾರೇಜ್*
*ಫೇ ತೇತುಲೀಜ್ ಹೋಜ್‌ತೀ ಪುರೇ ಅಶ್ವಮೇಧ ಕಿಜ್ (೧೮.೧೫೨೫)*

ಈ ಗೀತೆಯ ಅಕ್ಷರಗಳು ಅವೆಷ್ಟು ಕರ್ಣದ್ವಾರದಿಂದ ಪ್ರವೇಶಿಸುತ್ತವೆಯೋ (ಕಿವಿಯಿಂದ ಕೊಳ್ಳುತ್ತಾರೋ) ಅಷ್ಟೆಲ್ಲ ಪೂರ್ತಿ ಅಶ್ವಮೇಧಗಳಾಗುತ್ತವೆ.

*ದೇವಾ, ಹೇಜ್ ಇತುಲೇವೇರ್ಥೀಜ್ ಬೋಲಾವೇಜ್ ನ ಲಗೇ (೨.೩೦)*

ದೇವಾ, ಇದು ಇಷ್ಟರವರೆಗೆ ಹೇಳಬೇಕಾಗಿರಲಿಲ್ಲ.

**ತುರಂಬ ತುಱುಮ್ಬು (ನಾಮ) ತಲೆಕೂದಲಿನ ಗಂಟು**

**ತುರಂಬಣೇಜ್ ತುಱುಮ್ಬು (ಕ್ರಿಯಾಪದ) ಹೂಮುಡಿ**

*ಉಗರಿಸಿದವು ತುಱುಮ್ಬು (ಶಬ್ದಮಣಿದರ್ಪಣ ೨೪೮)*
*ತೋರ ಮಲ್ಲಿಗೆಯ ತುಱುಮ್ಬು... (ಪಂಪಭಾರತದ ೭.೮೭)*

ಹೀಗೆ ಹಳಗನ್ನಡದಲ್ಲಿ ನಾಮಪದ ಹಾಗೂ ಕ್ರಿಯಾಪದ ರೂಪಗಳಲ್ಲಿ ಬಳಸಲಾದ ತುಱಮ್ಬು ಶಬ್ದವು ಅವೇ ಅರ್ಥಗಳಲ್ಲಿ ಅದೇ ರೂಪದಲ್ಲಿ ಜ್ಞಾನೇಶ್ವರಿಯಲ್ಲಿ ಪ್ರಯುಕ್ತವಾದುದನ್ನು ಕಾಣಬಹುದಾಗಿದೆ.

*ಏವಂ ಓಂತತ್ಸದಾಕಾರ ಬ್ರಹ್ಮನಾಮ ತೇಜ್ ತ್ರಿಪ್ರಕಾರ*
*ಹೇ ಫೂಲ ತುರಂಬೀ ಸುಂದರ ಉಪನಿಷದಾತೇಜ್ (೧೭.೩೪೦)*

ಹೀಗೆ ಓಂ, ತತ್, ಸತ್ ಇವು ಬ್ರಹ್ಮನಾಮದ ಮೂರು ಪ್ರಕಾರಗಳು. ಈ ಹೂವು ಉಪನಿಷತ್ತಿನ ತುರುಬಿನಲ್ಲಿ ಸುಂದರ(ವಾಗಿ ಶೋಭಿಸುತ್ತದೆ)

*ಪರಿಮಳೇಜ್ ಕಾಇ ತುರುಂಬಾವೇ (೯.೧೧)*

(ಮೂರ್ತಿಮಂತವಾಗಿದ್ದ) ಪರಿಮಳವು ಏನು ಮುಡಿಯಬೇಕು?

*ಜೈಸಾ ಫುಲಾಚೇನಿ ಸಾಂಘಾತೇಜ್ ತಾಜ್‌ಘೂ ತುರಂಬೀಜೇ ಶ್ರೀಮಂತೇ (೧೮.೮೧೯)*

ಹೂವುಗಳ ಜತೆಯಲ್ಲಿ ಸಿರಿವಂತರು ನಾರನ್ನು ಮುಡಿಯುವಂತೆ

ಮುಕ್ತೇಶ್ವರನ ಸಭಾಪರ್ವದಲ್ಲಿಯೂ (೧೩.೬೨) ಈ ಪ್ರಯೋಗ ಬಂದಿದೆ.

*ಹೀ ಅಪಕೀರ್ತಿಜ್‌ಚೀ ಫುಲೇಜ್ ಕಾ ಮಸ್ತಕಿಜ್ ತುರಂಬಿಸೀ.*

ಈ ಅಪಕೀರ್ತಿಯ ಹೂಗಳನ್ನು ಅದೇಕೆ ತಲೆಯಲ್ಲಿ ಮುಡಿಯುತ್ತೀ?

**ತೂಪ, ತುಪ್ಪ**

*ಸಜ್ಜರಸದೆಣ್ಣೆಯ ತುಪ್ಪದ ಕಪ್ಪಿದೆಲ್ಲಮೆಮ್ಬುದೆ ಬಗೆದಲ್ಲಿ ನೋಡುವೊಡಂ* ಎಂಬುದಾಗಿ 'ತುಪ್ಪ' ಶಬ್ದದ ಬಳಕೆ ಪಂಪಭಾರತ (೩.೪) ದಲ್ಲಿ ಕಾಣುತ್ತೇವೆ. ಜ್ಞಾನೇಶ್ವರೀಯಲ್ಲಿಯ ತುಪ್ಪದ ಪ್ರಯೋಗ ಹೀಗೆ-

*ಕಾಸವಿಏಚೇನಿ ತೂಪೇಜ್ ರಾಯಾ ವೋಗರಿಲೇಜ್ ಜೈಸೇಜ್ (೧೫.೨೧೭)*

ಹೆಣ್ಣಾಮೆಯ ತುಪ್ಪದೊಡನೆ ಅರಸನಿಗೆ ಅನ್ನ ಬಡಿಸಿದಂತೆ-

*ಪಾಣಿಯಾಜ್‌ಹೂನಿ ಬೌಹೇಜ್ ತೂಪೀಜ್ ಗುಣು ಕೀರು ಆಹೇ (೧೮.೯೨೫)*

ನೀರಿಗಿಂತ ಬಹುಚೆನ್ನಾದ ಗುಣಗಳು ತುಪ್ಪದಲ್ಲಿ ಇವೆ.

*ತೇಥ ಉನ್ಹಾಳಾ ಆಗಿ ಪುರಾ ತೇಲಾತೂಪಾಚೇಯಾ ಘಾರಾ*
*ಲಾಗಲಾ ಆಣಿ ವಾರಾ ಸೂಟಲಾ ಜೈಸಾ (೧೬.೩೯೩)*

ಅಲ್ಲಿ (ಮೊದಲೇ) ಬೇಸಗೆ. ಎಣ್ಣೆ ತುಪ್ಪಗಳ ಇಡೀ ಕೋಠಾರಕ್ಕೆ ಬೆಂಕಿ ತಗುಲಿ ಮೇಲೆ ಗಾಳಿ ಬಿಟ್ಟಂತೆ.

**ಥೋರೇ ತೊಳೆ ಪ್ರವಾಹ, ಪೂರ**

*ತೊಱೆಯಂ ಪಾಯ್ದು ಎತ್ತಿ ಬಂದಂ (ಶಬ್ದಮಣಿದರ್ಪಣ ೭ಳ)* ಹೀಗೆ ಹಳಗನ್ನಡದಲ್ಲಿ ಬರುವ ತೊಱೆ ಶಬ್ದ ಅದೇ ಅರ್ಥದಲ್ಲಿ ಆದರೆ 'ಥೋರೇ' ಆಗಿ (ಮರಾಠಿಯಲ್ಲಿ ಹ್ರಸ್ವ ಎ, ಒ ಗಳಿಲ್ಲ) ಜ್ಞಾನೇಶ್ವರೀಯಲ್ಲಿ ಕಾಣಿಸಿಕೊಳ್ಳುತ್ತದೆ.

*ಪ್ರಮೇಯ ಮಹಾಪುರೇಜ್ ಮತಿಗಂಗಾ ಯೇ ಥೋರೇ*
*ತೈಸಾ ವರಿಷ ಉದಾರೇಜ್ ದೀಠಿವೇನಿ (೧ಳ.೨೨) (ಪಾಠಭೇದ)*

ಪ್ರತಿಪತ್-ಸಿದ್ಧಾಂತಗಳ ಮಹಾಪೂರದಿಂದಾಗಿ (ನನ್ನ) ಬುದ್ಧಿಯೆಂಬುವ ಗಂಗೆಗೂ ತೊರೆ ಬರಲಿ. ಹಾಗೆ ಭಗವಂತನೇ, (ನಿನ್ನ) ಉದಾರ ದೃಷ್ಟಿಯ ಮಳೆಗರೆ.

**ದಟಣೇಜ್, ದಡಪಣೇಜ್, ದಟ್ಟಯ್ಸು**

ಘನ, ಸಾಂದ್ರ ಅರ್ಥದಲ್ಲಿಯ 'ದಟ್ಟ' ಶಬ್ದದಿಂದ 'ದಟ್ಟಿದತ್ತು' (ಶಬ್ದಮಣಿಪದರ್ಪಣ ಸೂತ್ರ ೮೭) ವಿಶೇಷಣವಾಗಿದೆಯಷ್ಟೇ? ಇದು ಅದೇ ಅರ್ಥದಲ್ಲಿ ಧಾತುವಾಗಿ 'ದಟ' ರೂಪದಲ್ಲಿ, 'ಪ' ಪ್ರತ್ಯಯ ಹತ್ತಿ 'ಒತ್ತು' ಅರ್ಥದಲ್ಲಿ 'ದಡಪ' ರೂಪದಲ್ಲೂ ಮರಾಠಿಯಲ್ಲಿ ಹೋಗಿದೆ.

*ಮಗ ಮೇರೂ ಪಾಸೌನಿ ಥೋರೇಜ್ ದೇಹದುಃಖಾಚೇನಿ ಡೊಂಗರೇಜ್*
*ದಾಟಿಜೋ ಪಾಜ್ ವರಿ ಭಾರೇಜ್ ಚಿತ್ತ ನ ದಟೇ (೬.೩೬೮)*

ಬಳಿಕ, ಮೇರುವಿಗಿಂತ ದೊಡ್ಡದಾದ, ದುಃಖಪರ್ವತದಿಂದ (ಅವನ) ದೇಹವು ಒತ್ತಲ್ಪಟ್ಟರೂ (ಅವನ) ಚಿತ್ತವು ಒತ್ತಲಾಗುವುದಿಲ್ಲ.

*ಆಗಿ ದಡಪಿಲೇಯಾಜ್ ಧೂಜ್‌ವೇಜ್ ರ್ಹಾಇಜೇ ಕಾಇ (೧೮.೯೫೭)*

ಬೆಂಕಿಯನ್ನು ಒತ್ತಿದ ಬಳಿಕ ಹೊಗೆಯು ಉಳಿಯುವುದೇ?

**ದಾಂಡಿ ದಂಡಿಗೆ, ಸಾದಾಪಲ್ಲಕ್ಕಿ**

*ದಂಡಿಗೆಗೆ ವೇಣುವನಂಗಳುಂ... ಆ ಪಡೆಗೆ ನೆಱೆಯವೆನಿಸಿ (ಪಂಪಭಾರತ ೯.೧೦ಳ ವ) ದಂಡಿಗೆಯನೇಱುವಂ ನರವಾಹನ (ಮಂಗರಾಜ ನಿಘಂಟು ೨ಳ೭)* ಮೊದಲಾದ ಸಂದರ್ಭಗಳಲ್ಲಿ ಬರುವ 'ಸಾದಾ ಪಲ್ಲಕ್ಕಿ' ಅರ್ಥದ 'ದಂಡಿಗೆ' ಶಬ್ದ 'ದಾಂಡಿಪ' ಆಗಿ ಲೀಳಾಚರಿತ್ರದಲ್ಲಿ ಬಂದುದನ್ನು ನೋಡಬಹುದಾಗಿದೆ. ಜ್ಞಾನೇಶ್ವರಿಯಲ್ಲಿ ಮಾತ್ರ ಇದು 'ದಾಂಡೀ', 'ದಾಂಡೇ' ರೂಪದಲ್ಲಿದೆ. 'ತಕ್ಕಡಿಯ ಕೋಲು' ಹೀಗೆ ಮೂಲ ಸಂಕಲ್ಪನೆಯಿಂದ 'ಕಾವಡಿಯ ಕೋಲು' (ಎರಡೂ ಬದಿಗೆ ಜಡಗಳನ್ನಿಟ್ಟು ಹೆಗಲಮೇಲೆ ಹೊರುವ ಕೋಲು), ವಸ್ತು ಜಡವಾಗಿದ್ದರೆ ಅದನ್ನೇ (ಬುಟ್ಟಿಯಲ್ಲೋ ತೊಟ್ಟಿಲಿನಲ್ಲೋ) ಮಧ್ಯದಲ್ಲಿಟ್ಟು ಇಬ್ಬರು (ಬೊಯಿಗಳು) ಹೆಗಲು

ಕೊಟ್ಟು ಹೊರುವುದು ಹೀಗೆ ಅರ್ಥದ ಬೆಳವಣಿಗೆ ಆಗಿರಬಹುದಾಗಿದೆ. ಲೀಳಾಚರಿತ್ರದಲ್ಲಿಯ ಉದಾಹರಣೆಗಳು.

*ಕೇತುಲೇನಿ ಏಕೆ ಪರಿವಾರೆಸಿ ದಾಂಡಿಪವರಿ ಆರುಹಣ ಕರುನಿ ಬೀಜೇಜ್ ಕೀಲೇಜ್ (ಏಕಾಕ ೭)*

ಎಷ್ಟೋ ಒಂದು ಪರಿವಾರದೊಂದಿಗೆ ದಂಡಿಗೆಯ ಮೇಲೆ
ಆರೋಪಣ ಮಾಡಿ ಬಿಜಯಂ ಗೈಸಿದರು.

('ಬಹಳ' ಎನ್ನುವುದಕ್ಕಾಗಿ ನಾವು 'ಒಂದು' ಶಬ್ದವನ್ನು ಪ್ರತ್ಯಯದಂತೆ ಬಳಸುತ್ತೇವಷ್ಟೇ? ಇಂದಿನ ಭಾಷೆಯಲ್ಲಿಯ ಏಸೊಂದು ಏಣಸ್ಕಾಟ, ಕಾಸಿನ ಕುಣಸ್ಕಾಟ (ಅಂಬಿಕಾತನಯದತ್ತ) ವಾಗಲೀ ನೂಱೊಂದು ಪಿಂಡಮರುಣಾಕೀರ್ಣಂ (ಪಂಪಭಾರತ ೧.೧೩೦) ವಾಗಲೀ ಇದಕ್ಕೆ ಉದಾಹರಣೆಗಳು. 'ಒಂದು' ಸೇರಿಸುವ ರೂಢಿ ಮರಾಠಿಗೆ ಹೋದುದನ್ನು ಈ ಉದಾಹರಣೆಯಲ್ಲಿ ಕಾಣಬಹುದಾಗಿದೆ. ಇಂದಿಗೂ 'ಎಷ್ಟೊಂದು 'ಅರ್ಥದಲ್ಲಿ' 'ಕಿತ್ಯೇಕ' ಶಬ್ದ ಮರಾಠಿಯಲ್ಲಿ ರೂಢಿಯಲ್ಲಿದೆ)

*ದಾಂಡೀ ಡೋಳೇಕಾರ ಪಾಠವೀನ (ಏಕಾಕ -೩೦)*

ದಂಡಿಗೆ (ಹಾಗೂ) ಬೋಯಿಗಳನ್ನು ಕಳಿಸುತ್ತೇನೆ

*ದಾಂಡೀ ಕೇಲೀ; ಬಾಹೀರಬಾಹೀರೇ ಗೋಸಾವಿಯಾಪಾಸಿ ಆಲೇ (ಪೂರ್ವಾರ್ಧ ೯)*

ದಂಡಿಗೆ ಮಾಡಿದರು. ಹೊರಗಿಂದ ಹೊರಗೇ ಚಕ್ರಧರರ ಬಳಿಗೆ
ಬಂದರು.

ಇನ್ನು ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳು

*ತಿಹೀಜ್ ಭೂತೇಜ್ ಭಾಂಭಾವಲಿಜ್ ಹ್ಮಣೌನಿ ಸಂಸಾರಾಚೀಯಾ ಅಡವೀಜ್ ಮಾಝಿಜ್ ಪಡಿಲೀಜ್,*
*ಮಗಜೇಥಮಹಾದುಃಖಾಚೇ ಘೇತಲೀಜ್ ದಾಂಡೇವರಿ (೭.೧೬೬)*

ಸಂದರ್ಭಕ್ಕನುಗುಣವಾಗಿ ಇಲ್ಲಿ 'ಮಹಾದುಃಖ ಚಿ' ಪಾಠ ಇರಬೇಕೆಂದೆನಿಸುತ್ತದೆ.

ಇದರಿಂದಾಗಿ ಪ್ರಾಣಮಾತ್ರಗಳು ಗೊಂದಲಗೊಂಡವು; ಅಂತೆ ಸಂಸಾರದ ಅಡವಿಯಲ್ಲಿ ಬಿದ್ದವು. ಬಳಿಕ ಮಹಾದುಃಖವನ್ನೇ ದಂಡಿಗೆಯಲ್ಲಿ ಹೊತ್ತವು.

*ಜೋ ಮಾಥಾ ಚಿ ಪಾಲಾಣಿವೀ ಅಂಗಾ ಆವಗು ಘಾವಪೀ*
*ಮಮತ್ವಾಚೀ ಘೇವವೀ ಜಿಯೇ ದಾಂಡೀ (೧೮.೧೦೫೭)*

ಯಾವ (ಪರಿಗ್ರಹವು) ತಲೆಯನ್ನೇ ಪಲ್ಲಣವನ್ನಾಗಿ ಮಾಡಿ, ಅದರ ಮೇಲೆ ಎಲ್ಲ ಮೈಯನ್ನು ಹಾಕಿ (ದೇಹಾಹಂ ಬುದ್ಧಿಯಿಂದಾಗಿ ದೇಹವು ಮಸ್ತಕದಮೇಲೆ ಸವಾರಿ ಮಾಡುವುದೆಂದು ಭಾವಾರ್ಥ) (ಮತ್ರಮಿತ್ರಕಲತ್ರಾದಿ) ಮಮತ್ವದ ದಂಡಿಗೆಯನ್ನು ಹೊರಲು ಹಚ್ಚುವುದೋ-

**ದುಗಳ, ದುಗುಡ, ದುಃಖ, ಚಿಂತೆ**

ಹಳಗನ್ನಡದಲ್ಲಿ ದೊರೆಯದ ಆದರೆ ನಡುಗನ್ನಡದಲ್ಲಿ ಧಾರಾಳವಾಗಿ ಬಳಸಲಾದ 'ದುಗುಡ'ಶಬ್ದ 'ದುಗುಳ'ವಾಗಿ ಅದೇ ಅರ್ಥದಲ್ಲಿ ಒಮ್ಮೆ ಮಾತ್ರ ಜ್ಞಾನೇಶ್ವರಿಯಲ್ಲಿ ಕಾಣಿಸಿಕೊಂಡಿದೆ. ಅದೂ ದಾಂಡೇಕರರ ಪ್ರತಿಯಲ್ಲಿ.

*ಕಾಯ ಕೀಜತೀ ಚೇಇಲೇಪಣೇಂಜ್ ಸ್ವಪ್ನೀಂಜ್‌ಚೀಂಜ್ ತಿಯೇಂಜ್*
*ಬೋಲಣೇಂಜ್ ತೈಶೀ ಜಾಣ ತೇ ಕಾಹಾಣೀ ದುಗಳೀಚಿ ತೇ (೧೫.೨೧೮)*

ಎಚ್ಚತ್ತ ಬಳಿಕ ಕನಸಿನಲ್ಲಿ ಮಾತನಾಡಿದ್ದನ್ನು ತೆಗೆದುಕೊಂಡು ಏನು ಮಾಡಬೇಕಾಗಿದೆ? ಚಿಂತೆಯ ಕತೆಯೂ ಹೀಗೆಯೇ ಎಂದು ತಿಳಿ.

**ದುರುಡಿ-ದುರುಡಿ ಬುಟ್ಟಿ**

ಯಾವ ಹಳಗನ್ನಡ-ನಡುಗನ್ನಡ ಗ್ರಂಥಗಳಲ್ಲೂ ದೊರೆಯದ 'ದುರುಡಿ' ಶಬ್ದ ಒಂದು ಜಾನಪದ ಗೀತದಲ್ಲಿ ಬರುತ್ತದೆ.

*ಬೀಗುತೋಳ್ಯಾಕೆಂತ ಅಡಿಗಿಮನಿಯ ಕೊಟ್ಟೆ*
*ಬಾಸದ ದುರುಡಿ ಬಗಲಾಗ*
*ಬಾಸದ ದುರುಡಿ ಬಗಲಾಗ ಅವರಣ್ಣ*
*ನೀಡಾಕಿಲ್ಲೆಂದು ಕಸಗೊಂಡ*

ಈ ಹಾಡು ಎಷ್ಟು ಹಳೆಯದೋ, ಗೊತ್ತಿಲ್ಲ. ಆದರೆ ಅದೇ ಅರ್ಥದಲ್ಲಿಯ 'ದುರಡಿ' ಶಬ್ದ ಲೀಳಾಚರಿತ್ರದಲ್ಲಿ ಬರುತ್ತದೆ. ಮರಾಠೀ ಪಂಡಿತರಾರೂ ಈ ಶಬ್ದದ ವ್ಯುತ್ಪತ್ತಿಯ ಗೋಜಿಗೇ ಹೋಗಿಲ್ಲ! ತುಳುಪುಳೆಯವರು ಇದನ್ನು ತಮ್ಮ ಸಂಪಾದಿತ ಕೃತಿಯ ಕೊನೆಗಿನ ಶಬ್ದ ಕೋಶದಲ್ಲಿ ಕೊಟ್ಟಿಲ್ಲ. ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ಮಾತ್ರ ಇದು ಮರಾಠಿಯಿಂದ ಕನ್ನಡಕ್ಕೆ ಬಂದಿರಬಹುದೆಂದು ತರ್ಕಿಸಲಾಗಿದೆ. ಇದಿಷ್ಟು ದುರಡಿಯ ಕತೆ.

ಇಂದ್ರಭಟ್ಟನಿಗೆ ತಾನು ಚಕ್ರಧರರಿಗೆ ಉಂಡಿ ಮಾಡಿಸಿ 'ಒಳಗಿಸ'ಬೇಕೆಂದು ಬಯಕೆ. ಅದನ್ನವನು ಸಾಧೇಗೆ (ಯಲ್ಲಾಇಸಾಗೆ) ಹೇಳುತ್ತಾನೆ. ಆಕೆ ಉಂಡಿ ಕಟ್ಟಿ ಕೊಟ್ಟಿದ್ದಾಳೆ.

*ಮಗ ಲಾಡು ಬಾಂಧಲೇಂಜ್! ಮಗ ದುರಡಿಏ ಭರೂನಿ ಇಂದ್ರಭಟೇಂಜ್*
*ಗೋಸಾವೀಯಾಜ್ ಲಾಗೌನಿ ಆಣಿಲೇ (ಪೂರ್ವಾರ್ಧ ೧೯೬)*

ಬಳಿಕ ಉಂಡಿ ಕಟ್ಟಿದಳು. ನಂತರ ದುರುಡಿ ತುಂಬಿ ಇಂದ್ರಭಟ್ಟನು ಗೋಸಾವಿಯಬಳಿ[15] ತಂದನು.

---

15. ಶಬ್ದಶಃ ಅರ್ಥ 'ಗೋಸಾವಿಯ ಹತ್ತಿ'. ಉತ್ತರ ಕರ್ನಾಟಕದ 'ಹತಿಕ', ಪ್ರಮಾಣ ಸಾಹಿತ್ಯದಲ್ಲಿಯ 'ಹತ್ತಿರ' ಶಬ್ದಗಳನ್ನು ಪರಾಮರ್ಶಿಸಬೇಕು.

ಬೆಲ್ಲದ ಪಾಕ ಹೆಚ್ಚು ಕುದಿದು, ಉಂಡಿ ಒನಕೆಗೂ ಹಣಿಯಾರಿಲ್ಲ. ಆ ಮೋಜು ಬೇರೆ!

**ದುವಾಡ ದೋವಾಡ-ದೊಡ್ಡ ದುಟ್ಟ**

ಹೊಸಗನ್ನಡದಲ್ಲಿ ಇಷ್ಟೊಂದು ಪ್ರಮಾಣದಲ್ಲಿ ಬಳಸಲಾಗುವ 'ದೊಡ್ಡ' ಶಬ್ದ ಹಳಗನ್ನಡ ಗ್ರಂಥಗಳಲ್ಲಿ ದೊರೆಯುವುದಿಲ್ಲವೆಂದರೆ ಆಶ್ಚರ್ಯವಲ್ಲವೇ? ಆದರೆ ಇದರಿಂದಲೇ ಮರಾಠಿಗೆ ಹೋದ ಶಬ್ದ ದುವಾಡ, ದೋವಾಡ ಆಗಿ ಆವಾವ ಅರ್ಥಗಳನ್ನು ಗ್ರಹಿಸುತ್ತದೆಂಬುದು ಲಕ್ಷಣೀಯವಾದೀತು.

*ಹಾಜ್ ಗಾ ಮಾರ್ಗು ದೋವಾಡು ಹೋಐ ತರ್ಹಿಜ್ ನಿಸ್ತರತೀಲ ಪಾಐ (೧೮.೧೭೮)*

ಆಯ್ಯಾ, ದಾರಿಯು ಕಠಿಣ (ದುರ್ಗಮ, ದೂರದ ಎಂದರೂ
ಆಗಬಹುದು)ವಾದರೆ, ಅದನ್ನು ಕಾಲುಗಳು ನೋಡಿಕೊಳ್ಳುತ್ತವೆ.

*ಜೇಜ್ ಕರ್ಮ ಆರಂಭಾಚೀ ಕಡ ಸಾಜ್‌ವ ಏಕ ಹೋಯೇ ದುವಾಡ (೧೮.೧೮೩)*

ಯಾವ ಕರ್ಮದ ಆರಂಭವು ಒಂದಿಷ್ಟು ಕಷ್ಟಕರವಾದರೂ-

*ಗಾಈ ದೋವಾಡ ಸಿಂಗ (೧೮.೧೮೫)*

ಹಸುವಿನ ಅಡ್ಡತಿಡ್ಡ ಕೋಡುಗಳು

*ತೇಥ ದುವಾಡ ಪಣ ಕವಣಾಸಾಹೀಜ್ (೧. ೧೧೭)*

(ಮೊದಲೇ ಸಮುದ್ರವು) ಅದು ಯಾರಿಗೆ ದುಸ್ತರವಾಗಿಲ್ಲ?

*ಆಚರತಾಜ್ ಜರ್ಹಿಜ್ ದುವಾಡು (೩.೨೨೦)*

*ಆಚರಿಸುವುದಕ್ಕೆ ಕಠಿಣವಾಗಿದ್ದರೂ- (ಸ್ವಧರ್ಮವು)*

ತರಿ ದುವಾಳಿ ಕೋಣ್ಹಾ ನ ವ್ಹಾವೀ (೧೩.೨೭೬)
ಯಾರಿಗೂ ಕಷ್ಟವಾಗಿರಬಾರದು

ಹೀಗೆ 'ದುವಾಡ' ಶಬ್ದವು ವಿಶೇಷಣವಾಗಿದ್ದಲ್ಲಿ 'ಕ್ಲೇಶಕರ' ಎಂಬರ್ಥವನ್ನು ಕಾಣಬಹುದು. (ಇಂದಿಗೂ ಮರಾಠಿಯಲ್ಲಿ 'ದ್ವಾಡ' ಶಬ್ದಕ್ಕೆ 'ದುಷ್ಟ' 'ಹುಂಬ' ಎಂಬರ್ಥಗಳಿವೆ.) ಇದು ಕನ್ನಡದಲ್ಲಿಯ ತದ್ಭವ 'ದುಟ್ಟ' (ಸಂಸ್ಕೃತ 'ದುಷ್ಟ') ದಿಂದ ಸಿದ್ಧವಾಗಿರಬಹುದಾಗಿದೆ. (ಶಬ್ದಮಣಿದರ್ಪಣ ೨೯೮ ಪ್ರ.) ಅಥವಾ 'ದೊಡ್ಡ' ಶಬ್ದವು ಕೃದಂತವಾಗಿದ್ದಲ್ಲಿ ಅದು 'ದುರು' ಧಾತುವಿನಿಂದ ಸಿದ್ಧವಾಗಿರಬಹುದಾಗಿದೆ. ನಡುಗನ್ನಡದ 'ದುರುಳ' 'ದುರುಗುಟ್ಟು' ಶಬ್ದಗಳನ್ನು ನೆನೆಸಿಕೊಳ್ಳಬಹುದು. ಹೊಸಗನ್ನಡದ 'ದೊಡ್ಡ'ವು ಅರ್ಥಾಂತರ ಹೊಂದಿರಲು ಸಾಧ್ಯ.

**-ದೇ, -ಕೊಡು**

ಘೇ ದಂತೆಯೇ ದೇ ದಂತೆ ಕೂಡ ಸಹಾಯಕ ಕ್ರಿಯಾಪದವಾಗಿ ಹಿಂದಿನ ನಾಮ ಅಥವಾ ಕೃದಂತದ ಭಾವವನ್ನು ಕ್ರಿಯಾನ್ವಿತಗೊಳಿಸುತ್ತದೆ. ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳಿವು.

(ವೋ ದೇ = ಓ ಗೊಡು)

*ತೇಯಾಜ್ ವೋ ದೇ ನಾಮೇ ಜೇಣೇಜ್ ತೋ ಸಂಕೇತು ಹಾ (೧೭.೩೨೮)*

ಅವುಗಳಿಗೆ (ಆಜೀವಗಳಿಗೆ) ಯಾವ ಹೆಸರಿನಿಂದ (ಬ್ರಹ್ಮವು) ಓ ಗೊಡುತ್ತದೆಯೇ ಅದರ ಸಂಕೇತವಿದು.

*ತೇಣೇಜ್ ಆಳವಿಲೇನಿ ವೋ ದೇಜ್ ಬೋಲತಾ ಮಿಾಜ್ ಚಿ (೧೮.೧೧೪೬)*

ಅವನ ಕರೆಗೆ ಓ ಗೊಟ್ಟು ಮಾತನಾಡುವವನು ನಾನೇ.

*ನಾನಾ ನವಾ ಮೇಘು ಮಯೂರಾಜ್ ವೋ ದೇಜ್ತು ಪಾವೇ (೧೮.೧೫೧೦)*

ನವಿಲಿ(ನ ಕರೆ)ಗೆ ಓಗೊಟ್ಟು ಹೊಸಹೊಸಮೋಡಗಳು ಪ್ರಾಪ್ತವಾಗುತ್ತವೆ.

*ಮಗ ಚಿತ್ತ ದೇಓಜ್ ಲಾಗಲಾ ಬೋಲಾ ತೇಯಾ (೧೧.೪೫೦)*

ಬಳಿಕ ಅವನ ಮಾತಿನತ್ತ ಮನಸ್ಸು ಕೊಡ ತೊಡಗಿನು.

**ನ ಕೋ ಬೇಡ**

ಹಳಗನ್ನಡದ ಕೊಳ್ ಧಾತುವಿನ ಆಜ್ಞಾರ್ಥ ಮಧ್ಯಮಪುರುಷ ಏಕವಚನದ ರೂಪ ಕೋ ಚಂಪೂಗ್ರಂಥಗಳಲ್ಲಿ ನನಗೆ ಈ ರೂಪ ದೊರಕಲಿಲ್ಲವಾದರೂ ೧೨ನೆಯ ಶತಮಾನದ ಕೊನೆಯಲ್ಲಿ ರಚಿಸಲಾಗಿದೆಯೆಂದು ಪರಿಗಣಿಸಿದ ಹರಿಶ್ಚಂದ್ರ ಕಾವ್ಯಸಂಗ್ರಹದಲ್ಲಿ ಇದರ ಪ್ರಯೋಗ ದೊರೆತಿವೆ.

*ಶರಣವಿಮು ಮೇಲುಳ್ಳ ಸರ್ವಸ್ವವಿಮು ನೋಡಿಕೋ ಮಹಾಪುರುಷ ಎಂದು ಶರಧಿ ಪರಿವೃತ ಧರೆಯ ಸಿರಿಯ ಸೊಬಗಜ್ಞಾತವಾಸಕೆ ಪೋಗುತಿದೆ ಕೋ*

ಹಳಗನ್ನಡದ ಕೋ ರೂಪಕ್ಕೆ ನಿಷೇಧಾತ್ಮಕ ನ ಅವ್ಯಯ ಹತ್ತಿ ಮರಾಠಿಯಲ್ಲಿ ಬೇಡ ಅರ್ಥದಲ್ಲಿ ನ ಕೋ ಶಬ್ದಗಳು ಬಳಕೆಯಾಗಿವೆ. ಮುಂದೆ ಅದು ಒಂದೇ ಶಬ್ದವೆನ್ನುವ ರೀತಿಯಲ್ಲೂ ಪ್ರಯೋಗಿಸಿದ್ದನ್ನು ಕಾಣಬಹುದಾಗಿದೆ.

*ತಜ್ವ ನಕೋ ಹ್ಮಣೌನಿ ದೇವೇಜ್ ವಾರಿಲೇಜ್ ಮಾತೇಜ್ (೧೨.೨೨)*

ಆಗ ಬೇಡವೆಂದು ಭಗವಂತನು ನನ್ನನ್ನು ತಡೆದನು.

*ಹೇಜ್ ಕಾಹೀಜ್ ಚಿ ನೋಕೋ ಅಘವೇಜ್ ಜಾವೋಜ್ ದೇ ಶೂನ್ಯ (೧೨.೧೨೯)*

ಇದಾವುದೂ ಬೇಡ. ಎಲ್ಲವೂ ಶೂನ್ಯವಾಗಿ ಹೋಗಲಿ

*ಪರಿ ದರ್ಪಣಾಚೇನಿ ಆಧಾರೇಜ್ ಏಕಚಿ ಕರೂನಿ ದೂಸರೇಜ್ ಮುಖ ಪಾಂತಿ ಗಾವಾರೇಜ್ ತೈಸೇಜ್ ನಕೋ (೧೫.೨೪೩)*

ಕನ್ನಡಿಯ ಆಧಾರದಿಂದ ಒಂದರಿಂದ ಎರಡು ಮಾಡಿ ಗಾವಿಳರು ಮೋರೆ ನೋಡಿಕೊಳ್ಳುತ್ತಾರೆ. ಹಾಗೆ ಬೇಡ.

*ಹೇ ಬೋಲ ನಕೋ ಓಖಟೇಜ್ ಕಾನೀ ಲಾಉಜ್ (೧೮.೧೩೫)*

ಈ ಅಭದ್ರ ಮಾತು ಕಿವಿಯ ಮೇಲೆ ಹಾಕಿಕೊಳ್ಳಬೇಡ.

*ಹ್ಮಣೌನಿ ನಕೋ ಕವತಿಕ ಮುಮುಕ್ಷುಜ್ ಏಥ (೧೮.೧೦೫)*

ಅಂತೆಯೇ ಮುಮುಕ್ಷುವಿಗೆ ಇಲ್ಲಿ ಕೌತುಕ ಬೇಡ.

**ನಸುಧಾ, ನಸುಧೇ ಬರಿಯ ಏನಿಲ್ಲದ**

**ಸಹಿತ ಸಹ, ಸಹಿತ**

ಬಹುಶಃ ಪೂರ್ವಹಳಗನ್ನಡದಲ್ಲಿ ಇದ್ದಿರಬಹುದಾದ 'ಬಱು' (ಒಣಗು) ಎಂಬ ಧಾತುವಿನಿಂದ ಬಱ, ಬಱು ಎಂಬ ನಾಮಗಳು ಸಿದ್ಧವಾಗಿ ಹಳಗನ್ನಡದಲ್ಲಿ ಬಳಸಲ್ಪಟ್ಟಿವೆ. ಬಱಿ ಎಂಬ ವಿಶೇಷಣವೂ ಆಗಿದೆ.

*ಅಱಿಯೇಱು ಮಾರಿ ಪಸಟ್ಟೆ ಬಱಂ ಪೆಱವುಂ ಭಯಂಗಳಾಕುಲಿತೆಗಳಲ್ಲ (ಆದಿಪುರಾಣ ೧.೫೨) ತೋಳೋಳ್ ತುಳ್ಕಿ ಬಱಿದು ಮಾಟ್ಪೆನೋ (ಅದೇ ೧೨.೮೬) ತಮ್ಮ ಬಱುವಾತುಗಳೊಳ್ ಪುದಿದೆಗ್ಗರೆಯ್ದೆ (ಪಂಪಭಾರತ ೪.೯೫) ಬಾಡಿದ ಮೊಗಂ ಬಱಿತ ಬಾಯ್ ಸುರಿವ ನಯನಾಂಬು ಪಾಡಳಿದಮತಿ (ಹರಿಶ್ಚಂದ್ರ ಕಾವ್ಯಸಂಗ್ರಹ)*

ಉತ್ತರಕರ್ನಾಟಕದ ಜನಪದ ಭಾಷೆಯಲ್ಲಿ 'ಬಱುವು' ಎಂಬ ಶಬ್ದವಿದೆ. ನೆಲವು ಹಸಿಯಿದ್ದರೆ ಬಿತ್ತಲಾಸಲ್ಲ. ಅದಕ್ಕೆ 'ಬಱುವು' ಬರಬೇಕಾಗುತ್ತದೆ. ನೆಲ ತುಸು ಒಣಗಬೇಕು. ಆಗ ಕುಳ ಸರಾಗವಾಗಿ ಓಡುತ್ತದೆ!

ಅವರ ಹೊಲಗೆಲಸ ನೋಡಿದವರೆಲ್ಲ ಗಾಡಿ ಹೂಡಿ ಅಕ್ಕನಕೋಟೆಗೆ ಹೋದರು. ಸರಕಾರದ ಬೀಜ ತಂದರು. ಬರವಿಗಾಗಿ ಕೆಲವರು ಕಾಯ್ದರೆ ಉಳಿದವರು ಆಳು ಹಚ್ಚಿ ಕೈ ಬಿತ್ತಿಗೆ ಮಾಡಿಸಿದರು. (-ನೂರು ತಲೆ ಹತ್ತು ಕಾಲು ಪು. ೧೮೮)

ತುಸು ಅರ್ಥಾಂತರ ಹೊಂದಿ ಈ ಶಬ್ದ ಹಳಗನ್ನಡದಲ್ಲೇ 'ಬಱಿ' ಎಂದಾಗಿ 'ಏನಿಲ್ಲದ' 'ತೆರವಾದ' ಎಂಬರ್ಥ ಹೊಂದಿದ್ದನ್ನು ಕಾಣುತ್ತೇವೆ. *ಬಱಿದೆ ತಿನುತಿರ್ಪವಂ (ಶಬ್ದಮಣಿದರ್ಪಣ ಸೂತ್ರ ೩೩೦)* ಎಂಬುದಾಗಿ ಉದಾಹರಣೆಯನ್ನೂ ಹೇಳಬಹುದು.

'ಬರಿ' 'ಏನಿಲ್ಲದ' ಎಂಬರ್ಥದಲ್ಲಿ ಮರಾಠಿಯಲ್ಲಿ 'ನ+ಅಸುಧೇ' 'ನಸುಧೆ' ಶಬ್ದ ಸಿದ್ಧವಾಗಿ ಜ್ಞಾನೇಶ್ವರಿಯಲ್ಲಿ ಬಳಸಲಾಗಿದೆ.

*ಕೃಪಣಾಚೇ ಚಿತ್ತವೃತ್ತಿ ಜೈಸೀ ರೋಉನಿ ಘಾತಲೀ ಠೇವೆಯಾಪಾಸಿಜ್*
*ಮಗ ನಸುಧೇನಿ ದೇಹೇಸಿಜ್ ಆಪಣಪಾ ಅಸೇ (೧೧.೬೨೩)*

ಜಿಪುಣನು ಇಡುಗಂಟಿನಲ್ಲಿ (ತನ್ನ) ಚಿತ್ತವೃತ್ತಿಗಳನ್ನು ಹುಗಿದಿರಿಸಿ
ಬರಿ ದೇಹಮಾತ್ರನಾಗಿ ತಾನಿರುವಂತೆ.

*ಸಾಂಜವಣೀ ಟೇಜ್‌ಕೋಜ್ ನೇಜ್‌ದೀ ತೇ ಖುರಘೋಡೀ ನಸುಧೀ ಪೋಸೀ ಕವಣ (೧೩.೬೩೦)*

ಸಂಜೆಯ (ಹಾಲು ಹಿಂಡುವ) ಹೊತ್ತಿನಲ್ಲಿ (ತಳ) ಊರಲೂ
ಕೊಡದ ಬರಿ ಒದೆಗುಳಿಯಾದ ಆಕಳನ್ನು ಯಾರು
ಸಾಕಿಯಾರು?

*ತೇಯಾ ತೋಂಡಿಜ್ ಕಾಂಟಯಡೇಜ್ ಆಜ್‌ತು ನಸುದಿಜ್ ಹಾಡೇಜ್ (೧೩.೭೭೭)*

ಅವನ ಬಾಯಿಯಲ್ಲಿ ಮುಳ್ಳುಗಳು, ಒಳಗೆ ಬರಿ ಎಲವುಗಳು (ಕರುಳು, ಮನಸ್ಸು ಎಂಬುವು ಇಲ್ಲ)

*ಜ್ಞಾತೃಜ್ಞೇಯ ವಿಹೀನ ನಸುಧೇಜ್ ಚಿ ಜೇಜ್ ಜ್ಞಾನ (೧೫.೭೭)*

ಜ್ಞಾತೃ-ಜ್ಞೇಯ ಗಳಿಲ್ಲದ, ಯಾವುದು ಬರಿಯದೇ (ವಿಶುದ್ಧ) ಜ್ಞಾನವೋ-

*ಹೇಜ್ ಆಸೋ ಸೀಣು ನಸುದಾ ದೃಷ್ಟಾದೃಷ್ಟೀಜ್ (೧೭.೪೧೯)*

ಇದು ಇಹ (ದೃಷ್ಟ) ಪರ (ಅದೃಷ್ಟ) ಗಳಲ್ಲಿ ಬರಿಯ ದಣಿವಾಗುವುದು.

ಹೀಗೆ 'ನಸುಧಾ', 'ನಸುಧೇಜ್', 'ನಸುದಿ', 'ನಸುದಾ' ರೂಪಗಳು ಬರಿಯ, ಏನಿಲ್ಲದ ಅರ್ಥವನ್ನು ಹೊಂದಿ ಬಳಕೆಯಾದವು.

ಇದರ ವಿರುದ್ಧಾರ್ಥದ ಶಬ್ದ ಮೋಜಿನದು. ಸಹ, ಸಹಿತ ಅರ್ಥದ ಸಂಸ್ಕೃತ ಅಪಿ>ಪ್ರಾಕೃತ ಹಿ>ಮರಾಠಿ ಹೀ, ಇ ಜ್ಞಾನೇಶ್ವರಿಯಲ್ಲಿ ಹೆಜ್ಜೆಹೆಜ್ಜೆಗೆ ಬಳಸಲಾಗಿದೆ. ನಸುಧಾ>ನುಸತಾ ಆಗಿದೆಯಲ್ಲದೆ ವಿರುದ್ಧ ಅರ್ಥಕ್ಕಾಗಿ 'ನ' ತೆಗೆದು 'ಸುದ್ಧಾಜ್' ಆಗಿ ಹೊಸ ಮರಾಠಿಯಲ್ಲಿ ಬಳಸಲಾಗುತ್ತಿದೆ. ಈ 'ಸುದ್ಧಾಜ್' ಶಬ್ದದ ವ್ಯುತ್ಪತ್ತಿಯನ್ನು ಕೋಶಕಾರ ಕೃ.ಪಾಂ ಕುಲಕರ್ಣಿ ಅವರು 'ಸಾರ್ದ್ಧಂ' ಗೆ ಮುಟ್ಟಿಸಿದ್ದಾರೆ. 'ಅರ್ಧದೊಡನೆ', 'ಒಂದೂವರೆ' ಅರ್ಥದ ಈ ಶಬ್ದಕ್ಕೂ 'ಸುಧ್ಧಾಕ್ಕೂ' ಉಚ್ಚಾರ ಸಾಮಿಪ್ಯ ಬಿಟ್ಟರೆ ಅಜ-ಗಜಾಂತರ.

'ನಸುಧಾ' ದ ವಿರುದ್ಧಾರ್ಥಕ ಶಬ್ದವನ್ನು ನಾನಿಲ್ಲಿ ವಿವೇಚಿಸುವ ಪ್ರಮೇಯವಿರಲಿಲ್ಲ. ಆದರೆ ಜ್ಞಾನೇಶ್ವರಿಯಲ್ಲಿ ಬರದಿದ್ದರೂ 'ಸುಧಾ' 'ಸುದ್ಧಾ' ಶಬ್ದವು ಆಗ ಆಡುಮಾತಿನಲ್ಲಿ ಲಿಖಿತ ಭಾಷೆಯಲ್ಲಿ ಇದ್ದಿರಬಹುದೆನ್ನುವುದಕ್ಕೆ ಒಂದು ಪ್ರಯೋಗ ದೊರೆತಿದೆ.

'ಸುದ್ಧಾ' ಶಬ್ದ ಚತುರ್ಥಿಯ 'ಕೆ' ವಿಭಕ್ತಿಯೊಂದಿಗೆ ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿ 'ಸುದೀಕ' 'ಸತೀಕ' ಎಂದು ಬಳಕೆಯಲ್ಲಿದೆ[16] ಈ 'ಸತೀಕ' ಶಬ್ದ ಜ್ಞಾನೇಶ್ವರಿಯಲ್ಲಿ ಪ್ರಯಕ್ತವಾಗಿದೆ.!

*ಮೂಳ ಅಜ್ಞಾನ ತೇಜ್ ಚಿ ಲಟಿಕೇಜ್ ಮಾ ತಯಾಚೇಜ್ ಕಾಜ ಕೇತುಕೇಜ್ ಹ್ಮಣೌನಿ ಸಂಸಾರರುಜ್‌ಖು ಸತಿಕೇಜ್ ವಾಓ ಚಿ ವೈಜ್ (೧೫.೨೧೮)*

ಅಜ್ಞಾನವೇ ಮೂಲತಃ ಮಿಥ್ಯೆ. ಬಳಿಕ (ಜಗತ್ತಿನಲ್ಲಿ) ಅದರ ಕಾರ್ಯವೆಷ್ಟು? ಅಂತೆ ಸಂಸಾರವೃಕ್ಷವು ಕೂಡ ವ್ಯರ್ಥವೇ.

ದಾಂಡೇಕರರ ಆವೃತ್ತಿಯಲ್ಲಿ 'ಸತಿಕೆಜ್' ಶಬ್ದ 'ಸತ್ಯ ಕೇಜ್' ಎಂದಾಗಿದೆ. ಈ ಸಂದರ್ಭದಲ್ಲಿ ಜ್ಞಾನೇಶ್ವರರು ಸತ್ಯ-ಮಿಥ್ಯೆ ವಿವರಣೆ ನೀಡುತ್ತಿರುವುದರಿಂದಲೂ

---

16. ಮರಾಠಿ ಲೋಕಭಾಷೆಯಲ್ಲಿ ಈ ಶಬ್ದದ ರೂಪ 'ಸುದೀಕ'

'ಅಂತೆ ಸಂಸಾರವೃಕ್ಷವು' ಎಂದು ಶಬ್ದ ಪ್ರಯೋಗ ಬಂದಿರುವುದರಿಂದಲೂ 'ಸಕ್ಕೆ-ಕೇಜ್' ಪಾಠಭೇದ 'ಅಸಂಬದ್ಧ'ವಾಗಿದೆ.

**ನಾಗೋವಾ, ನಾಗಹ, ನಾಗಹ್ರದ ತೀರ್ಥ**

ನಾಗಹವೆಂದರೆ *ಗೋದಾವರಿಯೊಳೊಂದು ಮಡು* ಎಂದು ಕೇಶಿರಾಜನು ಹೇಳುತ್ತಾನೆ. (ಶಬ್ದಮಣಿದರ್ಪಣ ಪ್ರಯೋಗಸಾರ) ಇದು 'ನಾಗೋವಾ' ಆಗಿ ಮರಾಠಿಯಲ್ಲಿ, ಅದೂ ಗೋದಾವರಿಯ ದಕ್ಷಿಣ ತೀರಕ್ಕಿರುವ ನೇವಾಸೆಯಲ್ಲಿ (ಇದು ಪ್ರವರಾ ನದಿಯ ದಂಡೆಯ ಮೇಲಿದೆ) ಬರೆಯಲಾದ ಜ್ಞಾನೇಶ್ವರೀಯಲ್ಲಿ, ಹೋಗಿದೆ. ತ್ರ್ಯಂ. ಶಿಂ.ಭಾರದೇ ಅವರು ಜ್ಞಾನೇಶ್ವರೀ ಗ್ರಂಥ ಗೋದಾವರಿಯ ದಡದಲ್ಲೇ ಇರುವ ಆಪೇಗಾಂವದಲ್ಲಿ ಬರೆಯಲಾಯಿತೆಂದು ಭಾವಿಸುತ್ತಾರೆ. ಅದೇನೇ ಇದ್ದರೂ ಜ್ಞಾನೇಶ್ವರರೇ ಹೇಳುವಂತೆ *ಶ್ರೀ ಗೋದಾವರಿಚಾಜ್ ಕುಳೀಜ್ ದಕ್ಷಿಣಲೀಜ್ (೧೮.೧೭೮೧)* ಇದಂತೂ ಸರಿಯೇ. ಆದರೆ 'ಕೊಳ್ಳ' ಅರ್ಥದಲ್ಲಿಯ 'ಕುಳ್ಳಿ' (ಕುಟಿ) ಶಬ್ದವನ್ನು ಅವರು (ದಾಂಡೇಕರ, ಭಾರದೇ ಮೊದಲಾದವರು) ಗಮನಿಸದಿದ್ದುದು ಆಶ್ಚರ್ಯ.

ಚರ್ಚೆಯ ವಿಷಯ ಜ್ಞಾನೇಶ್ವರೀ ಬರೆದದ್ದು ನೇವಾಸೆಯಲ್ಲೋ (ಕುಳೀಜ್ ಶಬ್ದದಿಂದಾಗಿ ಇದಕ್ಕೆ ಒತ್ತು ದೊರೆತಿದೆ) ಅಥವಾ ಆಪೇಗಾಂವದಲ್ಲೋ ಇದಲ್ಲ. ಆದರೆ ಗೋದಾವರಿ ನದಿಯಲ್ಲಿಯ 'ನಾಗಹ' ಹೆಸರಿನ (ಸಂಸ್ಕೃತದಲ್ಲಿ ನಾಗಹ್ರದ) ಮಡುವನ್ನು ಮರಾಠೀ ಪಂಡಿತರು ಗಮನಿಸದೆ ಹೋದರು. ಸಂಬಂಧಪಟ್ಟ ಓವಿ ಹೀಗಿದೆ.

*ತೋ ಸುಖದುಃಖಾಚಾ ನಾಗೋವಾ ಜೇಥ ಉಗಾಣೋಜ್‌ಲಾಗೇ ದೇವಾ*
*ತೇಥ ದೋಹೀಜ್‌ಸಿ ಬರವಾ ಪಾಡು ಜೇ ಧರೀ (೧೩.೮)*

ಆ ಸುಖ-ದುಃಖದ ಮಡುವು ಎಲ್ಲಿ ಜೀವದ ಮೇಲೆ ಉಕ್ಕೇರಿ ಬರಹತ್ತುವುದೋ ಅಲ್ಲಿ ಅವೆರಡಕ್ಕಿಂತ ಶ್ರೇಷ್ಠವಾದ ಒಳಿತನ್ನು ಯಾವುದು ಹಿಡಿಯುವುದೋ (ಅದು ಬುದ್ಧಿ) (ಜೀವದ ಮೇಲೇರಿ ಬಂದ ಸುಖದುಃಖಗಳನ್ನು ತ್ಯಜಿಸಿ, ಅವೆರಡನ್ನೂ ಮಿಕ್ಕಿದ ಬುದ್ಧಿಯು)

ಇನ್ನು ದಾಂಡೇಕರ ಭಾಷ್ಯ;

ಸುಖದುಃಖಗಳ ಲೂಟಿಯ ಬಗ್ಗೆ ಅಂತಃಕರಣವು ಜೀವಕ್ಕೆ ಲಕ್ಷ್ಯ ಕೊಡಲು ಹೇಳುತ್ತದೆ. ಆಗ ಸುಖ ದುಃಖ ಇವುಗಳ ಬಗ್ಗೆ (ಇವುಗಳ ಒಳಿತು ಕೆಡಕುಗಳ ಬಗ್ಗೆ) ಸರಿಯಾದ ಆಯ್ಕೆಯನ್ನು ನಿಶ್ಚಿತಗೊಳಿಸುತ್ತದೆ. (ಅದು ಬುದ್ಧಿ)

**ನಿದ, ನೀದ, ನಿಧಿ ನಿದ್ದೆ**

ಕನ್ನಡದ ನಿದ್ದೆ ಶಬ್ದ (ಇದು ಸಂಸ್ಕೃತದ ನಿದ್ರಾ ಶಬ್ದದ ತದ್ಭವವಾಗಿದ್ದರೂ) ದಿಂದ ನಿದ, ನೀದ, ನಿಧಿ ಎಂದೆಲ್ಲ ರೂಪುಗಳಲ್ಲಿಯ ಮರಾಠಿ ಪ್ರಯೋಗಗಳನ್ನು ನೋಡಬೇಕು.

*ಅಜ್ಞಾನಾಚಿಯಾ ನೀದಾ (೧೪.೩೦೩)*

ಅಜ್ಞಾನದ ನಿದ್ದೆಯಲ್ಲಿ

*ತಜ್ವ ನೀದೇ ಕಾ ಅಂತು ಆಹೇ (೧೫.೨೨೦)*

ಆಗ ನಿದ್ದೆಗೆ ಕೊನೆ ಇದೆಯೇ?

*ನೀದೇಚೇನಿ ಆಧಾರೇಜ್ (೧೫.೩೦೮)*

ನಿದ್ದೆಯದೇ ಆಧಾರದಿಂದ

*ಜೈಸೇಜ್ ನಿದ್ರೈಲೇಯಾಜ್ ಜಾಗಿಜೇ (೧೫.೪೦೪)*

ಹೇಗೆ ನಿದ್ರಿಸುವವನ್ನು ಎಚ್ಚರಿಸುವದು-

*ಪರಿ ಭಿಂಗೋರಿ ನಿಧಿಯೇ ಪಡಿಲೀ ಗಮೇ ಭೂಮಿಸಿ ಜಡಲೀ (೧೫.೧೩೫)*

ಬುಗುರಿಗೆ ನಿದ್ದೆ ಹಿಡಿದಾಗ (ಅದು) ನೆಲಕ್ಕೆ ಅಂಟಿಕೊಂಡಂತೆ ಕಾಣುತ್ತದೆ.

ಇಲ್ಲಿ ಭಿಂಗೋರಿ ಶಬ್ದ ಕನ್ನಡದ ಬುಗುರಿಯಿಂದ ಮರಾಠಿಗೆ ಹೋದುದಷ್ಟೇ ಅಲ್ಲ, ಉತ್ತರ ಕರ್ನಾಟಕ ಆಡುಮಾತಿನಲ್ಲಿಯ 'ಬುಗುರಿಗೆ ನಿದ್ದೆ ಹಿಡಿಯುವುದು' ಈ ಕಲ್ಪನೆ ಕೂಡ ಜ್ಞಾನೇಶ್ವರಿಯಲ್ಲಿ ಸ್ಪಷ್ಟವಾಗಿದೆ. ಇದರ ಸಮಾನಾರ್ಥದ ಮರಾಠಿ ಶಬ್ದ ಪ್ರಯೋಗ ಇಂದು ಮಹಾರಾಷ್ಟ್ರದಲ್ಲಿ ಇಲ್ಲ.

**ನಿರ್ಘಾಜ್-ನೆಟೆ ಸಂಪೂರ್ಣ ಹೆಚ್ಚಾಗು**

'ಸಮಗ್ರ' 'ಪೆರ್ಚುಗೆಯಾಗು' ಅರ್ಥದಲ್ಲಿಯ 'ನೆಟೆ' ಶಬ್ದದ ಹಳಗನ್ನಡ ಪ್ರಯೋಗಗಳು ಹೀಗಿವೆ.

*ದೋಷಮುನಂತೆ ಗುಣಮುಮಂ ಕಿಟಿದರೊ್ ನೆಟೆಯೆ ಪೇೞ್ದಿನ್ (ಕವಿರಾಜಮಾರ್ಗ ೧.೧೩೭) ಅಂಗ ಮಹೀತಳ ವಿಭೂತಿಯಂ ನೆಟೆಯಿತ್ತಂ (ಪಂಪಭಾರತ ೨.೮೪) ಮೆಯ್ಗರೆಯಲ್ ಪಾಂಡವರ್ಗೆ ನೆಟೆದುವು ಬರಿಸಂ (ಶಬ್ದಮಣಿದರ್ಪಣ ಸೂತ್ರ ೭೧)* ಈ ನೆಟೆ ಶಬ್ದವು 'ನಿರ್ಘಾಜ್' ಆಗಿ 'ಸಂಪೂರ್ಣ' ಅರ್ಥದಲ್ಲಿ ಅವ್ಯಯದಂತೆ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ.

*ನಾತರಿ ಅಧೋಕಥೀಜ್ ಠೇಲೇಜ್ ಕಾಜ್ ನಿರ್ಘಾಜ್ ಕರಪೌನಿ ಗೇಲೇಜ್ (೧೭.೧೫೫)*

ಇಲ್ಲದಿದ್ದರೆ (ಅನ್ನವು) ಅರ್ಧಕುದಿಸಿ ಆಯಿತು ಅಥವಾ ಸಂಪೂರ್ಣ ಹೊತ್ತಿ ಹೋಯಿತು.

ಇಲ್ಲಿ ಕನ್ನಡದ 'ಕರ್ಪು' (ನಾಮಪದ) ಕ್ರಿಯಾಪದವಾಗಿ 'ಕರಪೌನಿ' ಆದುದನ್ನು ಗಮನಿಸಬೇಕು.

*ತೇಜ್ ಫಳಿಜ್ ತಜ್ವ ಸೋಫ ನಿರ್ಘಾಜ್ ಜಾಯೇ (೧೭.೨೪೮)*

ಆದು (ಆ ರಾಜನ ತಪಸ್ಸು) ಕೊನೆಗೆ ಸಂಪೂರ್ಣ ವ್ಯರ್ಥವಾಗಿ ಹೋಗುವುದು.

'ನೆಟೆ' ಶಬ್ದದಿಂದಲೇ 'ಪೂರ್ಣತ್ವ' ಅರ್ಥದಲ್ಲಿ ಆದ 'ನಿರ್ವಾಳಾ' ಶಬ್ದ

ಜ್ಞಾನೇಶ್ವರಿಯಲ್ಲಿ ಬಳಸಲಾದ ಸಂದರ್ಭಗಳು ಇವು:

*ವಿರೂಢಲೇಯಾಜ್ ಜೋಸ್ತಲಾ ಕಣಸಾಂಚಾ ನಿರ್ವಾಳಾ (೧೪.೧೨೫)*

ಬಿತ್ತಿದ ಜೋಳಕ್ಕೆ (ಜೋಳದ ಕಾಳುಗಳಿಗೆ) ತೆನೆಗಳು ಪೂರ್ಣತ್ವವು. (ಬೀಜ ಏರ್ಚಾಯಿತೋ, ಧಾನ್ಯ ಬೆಳೆಯಿತೋ ಕಂಡೇ ಕಾಣುತ್ತದೆ)

*ಐಸೇನ ಕರಿತಾಜ್ ಉಭಾರಾ ಪನ್ಹರಾ ಅಧ್ಯಾಯ ತೇ ಪನ್ಹರಾ*
*ಭೂಮಿ ನಿರ್ವಾಳಲೇಯಾ ಪುರಾ ಪ್ರಾಸಾದು ಜಾಲಾ (೧೮.೩೯)*

ಹೀಗೆ ಮಾಡುತ್ತ ಹದಿನೈದನೆಯ ಅಧ್ಯಾಯವು ಆ ಹಂದರವನ್ನು ಕಟ್ಟಿತು. ಪೂರ್ಣತ್ವಹೊಂದಿದ (ಇಲ್ಲಿ ಭಾವಾರ್ಥಗಟ್ಟಿಯಾದ) ಭೂಮಿಯ ಮೇಲೆ ಪ್ರಾಸಾದವು ಸಿದ್ಧವಾಯಿತು.

ಇಲ್ಲಿ 'ಹಂದರ' ಅರ್ಥದಲ್ಲಿಯ ಹಳಗನ್ನಡ 'ಪಂದರು' ಶಬ್ದವು (ಉದಾಹರಣೆ: ಪಂಪಭಾರತದಲ್ಲಿ ಸಸೆಯ ಪಂದರುಮಂ ತಳಿರಕಾವಣಂಗಳುಮಂ ೫.೪೭ ವ) 'ಪನ್ಹರಾ' ಆದುದನ್ನು ಮನಗಾಣಬಹುದು. 'ಪನ್ಹರಾ' ಶಬ್ದದ ಮೇಲೆ (ಒಂದು ಅರ್ಥ 'ಹದಿನೈದು' ಇನ್ನೊಂದು ಅರ್ಥ 'ಹಂದರ') ಮಾಡಿದ ಶ್ಲೇಷಾಲಂಕಾರವು ಮರಾಠೀ ವ್ಯಾಖ್ಯಾನಕಾರರ ತಲೆಯ ಮೇಲಿಂದ ಹೋಗಿದೆ.

ಮೇಲ್ಕಾಣಿಸಿದ ಓವಿಯಲ್ಲಿಯ ಭೂಮಿ ನಿರ್ವಾಳಲೇಯಾಜ್‌ವನ್ನು 'ಭೂಮಿಯನ್ನು ಪೂರ್ಣಶುದ್ಧಗೊಳಿಸಿ' ಎಂದು ಅರ್ಥವಿಸಬಹುದಾಗಿದೆ. ಹೀಗೆ ನೆಜಿ-ನಿರ್ನಾಜ್-ನಿರ್ವಾಳ (ಧಾತು) ಕ್ಕೆ 'ಶುದ್ಧಗೊಳಿಸು' ಎಂಬ ಅರ್ಥವೂ ಒದಗಿತು. ಅದನ್ನು ಸ್ಪಷ್ಟ ಪಡಿಸುವ ಓವಿಗಳಿವು:

*ಪ್ರೇಮಾಚೇನಿ ಭಾಂಗಾರೇಜ್ ನಿರ್ವಾಳೂನಿ ನೇಪುರೇಜ್*
*ಲೇವಉಜ್ ಸುಕುಮಾರೇಜ್ ಪದೇಜ್ ತಿಯೇಜ್ (೧೫.೪)*

ಪ್ರೇಮಸ್ವರೂಪ ಬಂಗಾರವನ್ನು ಶುದ್ಧಗೊಳಿಸಿ (ಮಾಡಿದ) ನೂಪುರಗಳನ್ನು (ಶ್ರೀಗುರುವಿನ) ಕೋಮಲ ಪಾದಗಳಲ್ಲಿ ತೊಡಿಸೋಣ.

ಇಲ್ಲಿ ಇನ್ನೊಂದು ಸ್ವಾರಸ್ಯ. ಸಂಸ್ಕೃತ 'ನೂಪುರ' ಶಬ್ದದ ಕನ್ನಡ ತದ್ಭವ 'ನೇವುರ' ವಷ್ಟೇ? (ಪ್ರಯೋಗಕ್ಕಾಗಿ ಗಿರಿಜಾಕಲ್ಯಾಣ ೩.೧೧೮, ೪.೧೯ ನೋಡಬಹುದು) ಕನ್ನಡಕ್ಕೆ ವಿಶಿಷ್ಟವಾದ ತದ್ಭವ 'ನೇಪುರ' ವಾಗಿ - ಅಥವಾ ನೂಪುರ, ನೇಪುರ, ನೇವುರ ಹೀಗೆ ಶಬ್ದದ ಬೆಳವಣಿಗೆಯೆಂದು ಭಾವಿಸಿದರೆ ಹಳಗನ್ನಡದಲ್ಲಿರಬಹುದಾದ 'ನೇಪುರ' ಶಬ್ದವು ಜ್ಞಾನೇಶ್ವರಿಯಲ್ಲಿ ಕಾಣಿಸಿಕೊಂಡಿದೆ. ಜ್ಞಾನೇಶ್ವರೀಯನ್ನು 'ಶುದ್ಧ' ಮಾಡುವಾಗ ಏಕನಾಥರು 'ನೇಪುರೇಜ್' ವನ್ನು 'ನೂಪುರೇಜ್' ಎಂದು ಮತ್ತೆ ಸಂಸ್ಕೃತಕ್ಕೆ ಒಯ್ದಿದ್ದಾರೆ. ಆ ಮಾತು ಬೇರೆ.

*ನಾ ತರಿ ಸಂಧ್ಯಾರಾಗಿಚೇ ರಂಗ ಕಾಢುನಿ ವಳಿಲೇಜ್ ತೇ ಆಂಗ*
*ಕಿಜ್ ಅಂತರ್ಜ್ಯೋತಿಚೇಜ್ ಲಿಂಗ ನಿರ್ವಾಳಿಲೇಜ್ (೬.೨೫೪)*

ಇಲ್ಲದೆಹೋದರೆ, ಸಂಧ್ಯಾರಾಗದ ಬಣ್ಣವನ್ನು ತೆಗೆದು ಅವನ (ಆ ಸಾಧಕನ) ಮೈಗೆ ಬಳಿದಿದೆಯೇ, ಇಲ್ಲವೆ ಅಂತರ್ ಜ್ಯೋತಿಯ ಲಿಂಗ ಶುದ್ಧಮಾಡಿತೇ (ಎನ್ನುವಂತೆ ಅವನ ಮೈಕಾಂತಿ ಕಂಗೊಳಿಸುತ್ತದೆ.)

ಈ ಓವಿಯಲ್ಲಿ 'ಸಮ್ಮಾರ್ಜನ' 'ಲೇಪಿಸು' ಅರ್ಥದಲ್ಲಿಯ ಹಳಗನ್ನಡದ 'ಬಳಿ' ಧಾತುವು ಮರಾಠಿಯಲ್ಲಿ 'ವಳಿ' ಆದುದನ್ನು ಗುರುತಿಸಬಹುದಾಗಿದೆ.

'ನಿರ್ವಾಳ' ಧಾತು ಒಂದೆಡೆ 'ನಿರೋಳ'ವೂ ಆಗಿದೆ.

*ಜೇಣ್ ಸಾತ್ವಿಕಾಚೇನಿ ವಡವೇಣ್ ಗೇಲೇಣ್ ಅಧ್ಯಾತ್ಮಿಕ ಖರವೇಣ್*
*ಸಾಹಾಜೇಣ್ ನಿರೋಳಲೇ ವಾಫೇ ಚತುರ ಚಿತ್ತಾಚೇ (೬.೪೮೭)*

ಸಾತ್ವಿಕದ ಒಡ್ಡು ಹಾಕಿ, ಅಧ್ಯಾತ್ಮದಿಂದ (ನೆಲ) ಕಡಿದು ಹದಮಾಡಿ, ಸಹಜವಾದ ಚತುರಚಿತ್ತದ ಮಡಿಗಳನ್ನು ಶುದ್ಧಗೊಳಿಸಿತು.

**ನೂಕ ನೂಂಕು ನುಗಿಸು**

ನುಗಿಸು ಅರ್ಥದಲ್ಲಿಯ ನೂಂಕು ಧಾತುವಿನ ಹಳಗನ್ನಡ ಪ್ರಯೋಗ ಇಂತಿದೆ.

ಮಹಾರಥರ ತಿನ್ತಿಣಿಗಂ ಪಿಡಿದೆನ್ತು ನೂಂಕುವೆಂ (ಪಂಪಭಾರತ ೧೧.೯೦) ನೂಂಕು > ನೂಕು ಆಗಿ *ಪಾದದಿಂ ಕಪಿದ ಕಸವಂ ನೂಕಲೊಡನೆ (ಬಸವಪುರಾಣ ೨೪.೫೯)* ಎಂದು ಯೋಜಿಸಲಾಗಿದೆ.

ಅದೇ ಅರ್ಥದಲ್ಲಿಯ ಜ್ಞಾನೇಶ್ವರಿಯಲ್ಲಿಯ ಏಕಮಾತ್ರ ಪ್ರಯೋಗ ಇಂತಿದೆ.

*ಆಂಗಭಾರೇ ಸೂಟಲಾ ಧೋಂಡಾ ಆಪಾ ನೂಕೌನಿಯಾಣ್ ಖಾಂಡಾ*
*ವರಿಪಡಲೇಯಾಣ್ ರಗಡಾ ಕರೀ ಜೈಸಾ (೧೭.೨೫೯)*

ತನ್ನ ಮೈಭಾರದಿಂದ (ಗುಡ್ಡದ ತುದಿಯಿಂದ) ಸಡಿಲಾಗಿ ಬಿಟ್ಟ ಬಂಡೆಗಲ್ಲು ಸಣ್ಣಕಲ್ಲುಗಳನ್ನು ನೂಕುತ್ತ ಯಾರಮೇಲೆ ಬೀಳುತ್ತದೆಯೋ ಅವರನ್ನು ನುಚ್ಚು ಮಾಡುವಂತೆ-

ಹಳಗನ್ನಡದಲ್ಲಿಯ 'ನುಚ್ಚು' ಶಬ್ದವು 'ನೂಕು' ಧಾತುವಿನಿಂದ ಸಾಧಿತವಾಗಿದೆಯೆಂಬುದನ್ನು ಇಲ್ಲಿ ಲಕ್ಷಿಸಬಹುದಾಗಿದೆ!

**ನೇಟಕೇ ನೆಟ್ಟಗೆ**

'ಸಂಸ್ಥಾಪನ' ಅರ್ಥದಲ್ಲಿಯ 'ನಡು' ಈ ಹಳಗನ್ನಡ ಧಾತುವಿನಿಂದಾದ 'ಪರಿಸ್ಫುಟ' (ಶಬ್ದಮಣಿದರ್ಪಣ ಸೂತ್ರ ೩೧೫) ಅರ್ಥದಲ್ಲಿಯ ವಿಶೇಷಣ 'ನೆಟ್ಟಗೆ'. ಇದು 'ನೇಟಕಾ' ಆಗಿ ಜ್ಞಾನೇಶ್ವರಿಯಲ್ಲಿ ಹೀಗೆ ಬಳಸಲಾಗಿದೆ.

*ತೇಣೇಣ್ ಫಳಕಾಮುಕೇಣ್ ಯಥಾವಿಧಿ ನೇಟಕೇಣ್*
*ಕಾಮ್ಯಕೇಜೇ ಜೇತುಕೇಣ್ ಕ್ರಿಯಾಜಾತ (೧೮.೫೯೯)*

ಫಲಾಪೇಕ್ಷೆಯಿಂದ ಮಾಡತಕ್ಕವನಂತೆ (ಅವನು) ಯಥಾ-
ಶಾಸ್ತ್ರವಾಗಿ, ಚೆನ್ನಾಗಿ, ಕಾಮ್ಯಕರ್ಮಗಳೆಷ್ಟಿವೆಯೋ (ಅಷ್ಟನ್ನೆಲ್ಲ)
ಮಾಡುತ್ತಾನೆ.

'ನೆಡು' ಧಾತುವು 'ನೇಪಟ' ಆಗಿಯೂ ಪ್ರಯುಕ್ತವಾಗಿದೆ.

*ಉಂಚೌನಿ ಲೋಟಲೀಜ್ ಕಾಮೇಜ್ ನೇಪಟಿತ ಕ್ರೋಧಾಚಿಯೇ ಧೂಮೀ (೧೬.೩೩೯)*

ಎತ್ತರದಲ್ಲಿದ್ದ ಕಾಮದಿಂದ ನೂಕಲ್ಪಟ್ಟಾಗ, ಕ್ರೋಧದಲ್ಲಿ
ಧುಮ್ಮಿಕ್ಕಿ ನೆಟ್ಟು-

ಕನ್ನಡದ 'ದುಮ್ಮಿಕ್ಕು'ವಿನಲ್ಲಿಯ 'ದುಮ್' 'ಧೂಮ್' ಆದದ್ದನ್ನು ಇಲ್ಲಿ ಕಾಣಬಹುದಾಗಿದೆ.

**ಪಡಪ ಪಡೆವು, ಸಿದ್ಧಿ**

*ಕಡು ತಪದಿಂದೆ ನಿನ್ನ ಪಡೆಪಾವುದೋ ಗಾವಿಲ (ಪಂಪಭಾರತ ೭.೯೩)* ಹೀಗೆ ಹಳಗನ್ನಡದಲ್ಲಿ ಬರುವ 'ಪಡೆವು' ಶಬ್ದ ಪಡಪ ಆಗಿ ಜ್ಞಾನೇಶ್ವರಿಯಲ್ಲಿ ಬಳಸಿರುವುದನ್ನು ಕಾಣಬಹುದು.

*ಚಾತುರ್ಯ ಹ್ಮಣೇ ಹೇಜ್ ಪಡಪ ಜೋಡಲೀಜ್ ಆಹ್ಮಾಜ್ (೧೦.೪೫)*
ನಮಗೆ ಈ ಸಿದ್ಧಿ ಲಭಿಸಿತೆಂದು ಚಾತುರ್ಯ ಹೇಳುವುದು.
*ಪಿಕಾವೇಯಾ ಆಪಣಾಪೇಜ್ ಅಂಗಹೀನ ಪಡಪೇಜ್ ಜಿಯಾ ಪರೀಜ್ (೧೭.೨೪೫)*
ತುಂಬಿದ ಮಾರುಕಟ್ಟೆಯಲ್ಲಿ ಅಪಂಗನು ಲಾಭ ಪಡೆದಂತೆ.

ಕೆಲವು ಪ್ರತಿಗಳಲ್ಲಿ 'ಅಂಗನಾಹೀನ' ಎಂದು ಪಾಠಭೇದವೂ ಇದೆ.

ತನ್ನನ್ನೇ ಮಾರಿಕೊಳ್ಳಲು ಸಿದ್ಧಳಾದ ಹೀನ ಸ್ತ್ರೀಯ ಪರಿ.

**ಪಡಿಘನೇಜ್ - ಪಡೆಗುಂ ಹೊಂದುವುದು**

ಕನ್ನಡದಲ್ಲಿ ಕರ್ಮಣಿ ಅರ್ಥದಲ್ಲಿ ಬರುವ ಸಂಯುಕ್ತ ಕ್ರಿಯಾಪದದಲ್ಲಿಯ ಪಡೆಗುಂ ರೂಪ (ಉದಾ. *ಪೇಟಿಲ್ ಪಡೆಗುಂ ಶಬ್ದಮಣಿದರ್ಪಣ – ಸೂತ್ರ ೧೧ ಪ್ರಯೋಗಿಸ ಪಡೆಗುಂ ಸೂತ್ರ ೧೨೦*) ಮರಾಠಿಯಲ್ಲಿ ಅದೇ ಅರ್ಥದಲ್ಲಿ ಸ್ವತಂತ್ರ ಧಾತುವಿನಂತೆ ಪ್ರಯೋಗಿಸಲಾಗಿದೆ.

*ತೈಸೇ ಚಿ ನಾನಾ ರೋಗ ಪಡಿಘಾಂತಿ ಪುಢಾಜ್ ಅಂಗ (೧೩.೫೮೭)*
ಹಾಗೆಯೇ ತರತರದ ರೋಗಗಳು ಮುಂದೆ ಮೈವೆತ್ತುವವು.
*ಯೇ ಮತಮುಗುತಕಿಜ್ ಪಢಿಗಾಇಲೀಜ್ ಆಣಿಕಿಜ್ (೧೩.೫೨)*
ಈ ಮತ-ಮುತ್ತುಗಳು ಮತ್ತೆ ಪ್ರಕಟವಾದವು.

**ಪಡಿಘಾ - ಪಡಿಗ ಉಗುಳು ಪಾತ್ರೆ**

ಪ್ರತಿಗ್ರಹ ಅಥವಾ ಪತತ್‌ಗ್ರಹ ಸಂಸ್ಕೃತ ಶಬ್ದದಿಂದ ಹಳಗನ್ನಡಕ್ಕೆ ತದ್ಭವವಾಗಿ ಬಂದ ಪಡಿಗ ಶಬ್ದ ಅದೇ ಉಗುಳುಪಾತ್ರೆ ಅರ್ಥದಲ್ಲಿ ಮರಾಠಿಗೆ ಹೋಗಿದೆ.

ಹಳಗನ್ನಡದ ಪ್ರಯೋಗ ಇಂತು ಮೊಗಸಾಲೆಯೊಳಿಟ್ಟ ಪೊನ್ನ *ಪಡಿಗಂಗಳೊಳಂ (ಪಂಪಭಾರತ ೪.೪೩ ವ)*

ಜ್ಞಾನೇಶ್ವರಿಯಲ್ಲಿ:

*ಸಾಂಡಿಲೇ ತೋ ಸೇಪಾಳಾ ಪಡಿಘಾ ಮೊಚಿ (೧೩.೪೧೮)*
(ಗುರುಗಳು) ಚೆಲ್ಲಿದ ಉಗುಳು ಹಿಡಿಯುವ ಉಗುಳು ಪಾತ್ರೆ ನಾನೇ.



ಈ ಓವಿ ರಾಜವಾಡೆ ಪ್ರತಿಯಲ್ಲಿಲ್ಲ.

*ಉಭೂನಿ ಕರತಳೇಜ್ ಪಡಿಘಾಯೇ ಕಪೋಳೇಜ್ (೧೪.೧೮೪)*
ಪಡಿಗದಂತಂಗೈಗಳನ್ನೆತ್ತಿ ಗಲ್ಲಗಳನ್ನು ಹಿಡಿಯುವನು.

**ಪನ್ನರೇ, ಪಂಧರೇ, ಪೊನ್ನೊರೆ, ಒರೆಗೆ ಹಚ್ಚಿದ ಶುದ್ಧ ಬಂಗಾರ ಸಾಡೇ ಪಂಧರೇ ಪೊನ್ನೊರೆಗೆ ಸಾಟಿಯಾದ (ಬಂಗಾರ)**

ಜ್ಞಾನೇಶ್ವರೀಯಲ್ಲಿಯೂ ಆ ಕಾಲದ ಇತರ ಗ್ರಂಥಗಳಲ್ಲಿಯೂ ದೃಷ್ಟಾಂತ ಹೇಳುವಾಗ ಬಂಗಾರಕ್ಕಾಗಿ ಬಳಸಲಾದ ಶಬ್ದಗಳು ಮೂರು. ಪನ್ನರೇ (ಪಂಧರೇ), ಸಾಡೇ ಪಂಧರೇ ಹಾಗೂ ಸೋಳೇ.

(ಪಂಧರೇ ಎಂದರೆ ಹದಿನೈದು ಎಂದೂ ಅರ್ಥ. ರಾಜವಾಡೇ ಆವೃತ್ತಿಯಲ್ಲಿ *ತರಿ ಅಧ್ಯಾಯೀಜ್ ಪನ್ನರಾವಾಜ್ (೧೬.೪೧)* ಅಂದರೆ ಹದಿನೈದನೆಯ ಅಧ್ಯಾಯದಲ್ಲಿ ಎಂದು ಪಾಠವಿದ್ದರೆ ಸೋನೋಪಂತ ದಾಂಡೇಕರರು ಸಂಪಾದಿಸಿದ ಆವೃತ್ತಿಯಲ್ಲಿ *ತರೀ ಅಧ್ಯಾಯೀಜ್ ಪಂಧರಾವಾಜ್* ಎಂದು ಪಾಠಭೇದವಿದೆ. ಪನ್ನರೇ=ಪಂಧರೇ=ಹದಿನೈದು ಶಬ್ದಗಳು ಜ್ಞಾನೇಶ್ವರೀಯ ಸಂಶೋಧಕ, ಅಭ್ಯಾಸಕರಲ್ಲಿ ದೊಡ್ಡ ಗೊಂದಲವನ್ನೇ ಎಬ್ಬಿಸಿವೆ. ಬಂಗಾರಕ್ಕೂ ಪಂಧರೆಗೂ ಸಂಬಂಧ ಹೇಗೆ ಹಚ್ಚುವುದು? ದಾತೇ-ಕರ್ವೇ ಕೋಶ ಮೊದಲ್ಗೊಂಡು ಸೋನೋಪಂತ ದಾಂಡೇಕರರವರೆಗೆ ಎಲ್ಲರೂ ಪನ್ನರೇ ಎಂದರೆ ಹದಿನೈದು ರೂಪಾಯಿ ದರದ ಬಂಗಾರ (ಎಷ್ಟು ತೂಕ ಕೇಳಬೇಡಿರಿ), ಸಾಡೇ ಪಂಧರೇ ಎಂದರೆ ಹದಿನೈದೂವರೆ ರೂಪಾಯಿ ದರದ ಬಂಗಾರ ಹಾಗೂ ಸೋಳೇ ಎಂದರೆ ಹದಿನಾರು ರೂಪಾಯಿ ದರದ ಬಂಗಾರ ಎಂದು (ಅನ್) ಅರ್ಥ ಹಚ್ಚಿದ್ದಾರೆ!

ಒರೆಗೆ ಹಚ್ಚಿದ ಬಂಗಾರ ಎಂಬರ್ಥದಲ್ಲಿ ಹಳಗನ್ನಡದಲ್ಲಿ ಪೊನ್ನೊರೆ ಹಾಗೂ ಪೊನ್ನೊಱೆ ಹೀಗೆ ಎರಡು ಶಬ್ದಗಳ ಪ್ರಯೋಗಗಳು ಗೋಚರವಾಗುತ್ತವೆ.

ಪೊನ್ನೊರಗೆ ಅನ್ಯದೀಪಂ ಎಖಿಪಂತಿರ ಮಾಣಿಕ್ಯ ಪ್ರದೀಪಮೇನ್ ಎರಗುಗುಮೇ?
(ಪಂಪ ರಾಮಾಯಣ ೯.೧೮೦)
ಮಾಣಿಕವೆ ಮೌಕ್ತಿಕವೆ ಮತ್
ಪ್ರಾಣವೆ ಪೊನ್ನೊಜೆಯು ಪರುಷವೆ ಮುಕ್ತಿಯು
ನಿರ್ಮಾಣವೇ ಎನುತುಂ ಮೂರ್ಧ್ನಾ
ಘ್ರಾಣಂ ಬೆರಸಗಲಪ್ಪಿದಂ ಗಿರಿರಾಜಂ (ಗಿರಿಜಾಕಲ್ಯಾಣ ೩.೧೧೦)

ಜ್ಞಾನೇಶ್ವರೀಯಲ್ಲಿ ಬರುವ ಈ ಉದಾಹರಣೆಗಳನ್ನು ನೋಡಬೇಕು.

ಜೈಸಾ ಕಿಡಾಳಾಚಾ ದೋಖು ಜಾಯೇ ತರಿ ಪನ್ಹರೇಜ್ ತೇಜ್ ಚಿ ಹೋಯೇ
(೬.೮೨)

ಕೀಟದ ದೋಷವು ಹೋದ ಹಾಗೆ ಅದೇ
ಪೊನ್ನೊರೆಯಾಗುವುದು.

ಪನ್ಹರೇಯಾಚೀ ಚೊಖಡೀ ಪೋಟಿ ಜೈಸೀ (೬.೨೨೪)

ಚೊಕ್ಕ ಪೊನ್ನೊರೆಯ ಸುತ್ತಿನಂತೆ

ಪರಿ ಪನ್ಹರೇಜ್ ಕೀಡಾಸಿ ಮಿಳತ ಕಾಇಸಕೇಜ್ ಸವ್ಹ (೮.೩೭)

ಆದರೆ ಪೊನ್ನೊರೆಗೆ ಕೀಟ ಕೂಡಿಸಿದರೆ ಹೀನವಲ್ಲವೇ?

ತರ್ಹಿಜ್ ತೇಜ್ ಪನ್ಹರೇಪಣ ನ ಮೈಳೇ (೮.೩೮)

ಆದ್ದರಿಂದ ಆ ಪೊನ್ನೊರೆತನವು ಕಳೆಯಬಾರದಿದ್ದರೆ

ಸಾಡಪಂಧರೇಯಾ ಆಣಿ ಕಸವಟಿಣೇ (೧೦.೧೫)

ಸಾಟಿ ಪೊನ್ನೊರೆ ಹಾಗೂ ಒರೆಗಲ್ಲಿನ ಪರೀಕ್ಷೆ (ಇದರಲ್ಲಿ
ಅರ್ಥವೇನಿದೆ)

ಏಕೇಜ್ ತಾತಲೇಜ್ ಸಾಡಪನ್ಹರೇಜ್ (೧೧.೧೩೨)

ಕಾಸಿದ ಸಾಟಿಪೊನ್ನೊರೆಯಂತೆ ಒಂದು (ರೂಪ)

ಕಾ ಮೊನಲೇನಿ ಕೀಡೇಜ್ ಜಜ್ವ ಜಜ್ವ ತೂಜ್ಕ ವಾಢೇ
ತಜ್ವ ತಜ್ವ ಸೋನೇಜ್ ಪಡೇ ಪಾಂಚಿಕಾಜ್ ಕಸೀಜ್ (೧೪.೧೪೦)

ಕೀಟ ಕೂಡಿಸಿದಂತೆ ತೂಕ ಬೆಳೆಯುತ್ತದೆ (ಆದರೆ) ಬಂಗಾರದ
ಗುಣ ಹೀನವಾಗುತ್ತದೆ.

ಸಾಡ ಪನ್ಹರಾಜ್ ಮಿಸಳಾವೇಜ್ ತರಿ ಪನ್ಹರೇಜ್ ಚಿ ಜೇಪಿಜ್ ಹೋಆವೇಜ್
(೧೫.೫೩೩)

(ಪೊನ್ನೊರೆಯಲ್ಲಿ) ಸಾಟ ಪೊನ್ನೊರೆ ಕೂಡಿಸಿದರೆ
ಪೊನ್ನೊರೆಯೇ ಆಗುವಂತೆ

ಕಾಜ್ ಮಿಾನಲೇನಿ ಕೀಡಾಳೇ ವಾನಿಭೇದಾಸಿ ಏ ಸೋಳೇಜ್ (೧೫.೩೦೯)

ಕೀಟ ಕೂಡಿಸಿದರೂ ವಾಣಿಭೇದದಿಂದ ಬಂಗಾರ (ಸೋನೇ)
ಎನ್ನುತ್ತಾರೆ.

ಕಾಜ್ ಕೀಡಾಚಿಯೇ ಪುಟಿಜ್ ಪಡಿಲೇಜ್ ಸೋನೇ ಕಿರೀಟೇ
ಘೇತಲೇಯಾಜ್ ಸೋಳೇಜ್ಸಾಠಿಜ್ ನಾಗವೀ ನಾಜ್ (೧೭.೫೪)

*ಕೀಟಿವನ್ನು ಕರಗಿಸುವ ಮಟದಲ್ಲಿ ಬಂಗಾರ ಬಿದ್ದು (ಮಿಶ್ರಿತವಾದರೆ) ಅದನ್ನು ಬಂಗಾರ (ಸೋಳೇಜ್) ಸಮಾನವೆಂದು ಹಿಡಿಯಲಾಗುವುದಿಲ್ಲ.*

**ಪರಿಯಳ-ಪರಿಯಣ ಪರಿಯಾಣ, ಹರಿವಾಣ**

*ಪರೆದ ತಟಿಗೆಲೆಯೆ ಪರಿಯಣಮಾಗೆ (ಪಂಪಭಾರತ ೬.೨೮) ಲತಾಸಂಕುಳಮೆನೆ ಸುವರ್ಣ್ನಮಯ ಪರಿಯಣಮಂ ಭಕ್ಷ್ಯೋಪದಂಶ ಚರು ವಿಳಸನಮಂ (ಪಂಪರಾಮಾಯಣ ೧೬.೯೧)* ಹೀಗೆ 'ಹರಿವಾಣ', 'ತಟ್ಟೆ' ಅರ್ಥದಲ್ಲಿಯ 'ಪರಿಯಣ' ಶಬ್ದದ ಬಳಕೆಯನ್ನು ಹಳಗನ್ನಡದಲ್ಲಿ ಕಾಣುತ್ತೇವೆ. ಇದು 'ಪರಿಯಳ'ವಾಗಿ (ಈ ರೂಪದಲ್ಲಿ ಅದು ಚಂದ್ರಪ್ರಭ ಪುರಾಣದಲ್ಲಿ ೬.೮೬ ವಚನ ಪ್ರಯುಕ್ತವಾಗಿದೆ) ಮರಾಠಿಗೆ ಹೋಗಿದೆ.

ಲೀಳಾಚರಿತ್ರದಲ್ಲಿಯ ಪ್ರಯೋಗಗಳು

*ಮಗ ಯೇಕೇಜ್ ಪರಿಯಳೀಜ್ ಪೂಜಾದ್ರವ್ಯೇಜ್; ಏಕು ಅನಾಚಾ; ಆಲೀ (ಪೂರ್ವಾರ್ಧ ೯೫೬)*

ಬಳಿಕ ಒಂದು ಹರಿವಾಣದಲ್ಲಿ ಪೂಜಾದ್ರವ್ಯ : ಒಂದು ಅನ್ನದ್ದು: ಬಂದಳು.

*ತಜ್‌ವ ದೇವತೇಸಿ ಪರಿಯೇಳು ಆಲಾ (ಪೂ. ೬೯)*

ಆಗ (ಅಣಕಯ್ಯನ) ದೇವತೆಗೆಂದು (ಪ್ರಸಾದದ) ಹರಿವಾಣ ಬಂದಿತು.

*ತುಮ್ಹಾಜ್ ದೀಸವಡೀ ಅನಕೈಯೇ ಜಾ: ತುಮ್ಹಾಜ್ ಪರಿಯೇಳು ಯೇಇಲ. (ಪೂ. ೬೨)*

ನೀವು ದಿನಾಲು ಅಣಕಯ್ಯಕ್ಕೆ ಹೋಗಿರಿ : ನಿಮಗೆ ಹರಿವಾಣ ಬರುವುದು.

**ಪರಿವಡಿ- ಪರಿಪಿಡಿ, ಕ್ರಮ**

*ಮರುಕುತ್ಸಪುರೂರವರಿಂದಮಿನ್ನೆಗಂ ಪರಿವಿಡಿಯಿಂದೆ ಬಂದ* ಎಂಬುದಾಗಿ ಪಂಪಭಾರತದಲ್ಲಿ 'ಪರಿವಿಡಿ' ಶಬ್ದದ ಪ್ರಯೋಗವಾಗಿದೆ. ಇದೇ 'ಕ್ರಮ' ಅರ್ಥದಲ್ಲಿ 'ಪರಿವಡಿ' (ಪರಿವಿಡಿ) ಯಾಗಿ ಈ ಶಬ್ದ ಮರಾಠಿಗೆ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು:

*ಹೇ ಕಲ್ಪನಾ ಘೇ ಸಾಂಡೀ ತೇಜ್‌ನಾಹಿಜ್ ಇಯೇ ಪರಿವಡಿ (೬.೨೯೦)*

(ಮನೋನಿಗ್ರಹ, ಪ್ರಾಣಾಯಮ, ಧ್ಯಾನಧಾರಣ ಇವು ಇಲ್ಲಿ ಸಲ್ಲುವುದಿಲ್ಲ) ಇವುಗಳ ಕಲ್ಪನೆಯನ್ನು ಬಿಟ್ಟು 'ಕೊಡು', ಅವು ಇಲ್ಲಿ ಕ್ರಮವಲ್ಲ.

ಸಾಂಡೀ ಘೇ = ಬಿಟ್ಟು ಕೊಡು' ಪ್ರಯೋಗವನ್ನೂ ಗಮನಿಸಬೇಕು.

*ಕ್ಷೀರಸಾಗರೀಚಿ ಗೋಡೀ ಮಾಜಿ ಬಹುತ ಥಡಿಯೇ ಥೋಡಿ*

*ಹೇಜ್ ನಾಹಿಜ್ ತೇಯಾ ಪರವಡೀ ಪೂರ್ಣ ಜೇ ಗಾ (೧೩.೯೧೧)*

ಕ್ಷೀರಸಮುದ್ರದ ಸಿಹಿತನವು ಮಧ್ಯದಲ್ಲಿ ಹೆಚ್ಚು ದಡದಲ್ಲಿ ಕಡಿಮೆ ಹೀಗೆ ಅದರ ಕ್ರಮವಲ್ಲ. ಅಯ್ಯಾ, ಅದು ಪೂರ್ಣ.

**ಪಹುಡಣೇಜ್ ಪವಡಿಸು ಅಡ್ಡಾಗು, ಮಲಗು**

ರಾಜಮಂದಿರಮಂ ಪೊಕ್ಕು ತನ್ನ ಪವಡಿಸುವ ಮಾಡಕ್ಕೆವಂದು (ಪಂಪ ಭಾರತ ೪.೧೧೦) ಹೀಗೆ ಹಳಗನ್ನಡದಲ್ಲಿ 'ಪವಡಿಸು' ಧಾತುವಿನ ಪ್ರಯೋಗ ದೊರೆಯುತ್ತದೆ. ಈ 'ಇಸು' ಪ್ರತ್ಯಯಾಂತ ಧಾತುವಿನ ಮೂಲ ನನಗೆ ಸಿಗಲಿಲ್ಲ.[17] ಈ ಶಬ್ದ 'ಪಹುಡಣೇಜ್' ಆಗಿ ಮರಾಠಿಗೆ ಹೋಗಿದೆ. ಅದರ ಮೂಲ 'ಪ್ರಸುಪ್ತ' ಇರಬಹುದೇನೋ, ಎಂದು ಅವರಿಗೂ ಅನುಮಾನ.

ಜ್ಞಾನೇಶ್ವರಿಯಲ್ಲಿಯ ಪ್ರಯೋಗಗಳಿವು.

*ಜೋ ಆತ್ಮಬೋಧಾಚೇಯಾ ಓವರಾಜ್ ಪವಢಲಾ ಅಸೇ (೬.೬೨)*

ಯಾವನು ಆತ್ಮಜ್ಞಾನದ ಕೋಣೆಯಲ್ಲಿ ಅಡ್ಡಾಗಿರುವನೋ-

*ಪೈಜ್ ಸ್ವಪ್ನೀಜ್ ಸೇಜಾರು ದೇಖಿಜೇ ಮಗ ಪಹುಡಣೇ ಜೈಸೇಜ್ ಕೀಜೇ (೧೫.೪೫೭)*

ಕನಸಿನಲ್ಲಿ ಹಾಸಿಗೆ ನೋಡುವುದು. ಬಳಿಕ (ಅಲ್ಲೇ) ಅಡ್ಡಾಗುವುದು ಮಾಡಿದಂತೆ-

*ಪೈಜ್ ಮಾಯಾಪುರಿಜ್ ಪಹುಡಿಜೇ ತೇಣೇಜ್ ಹಿಜ್ ಬೋಲೇಜ್ (೧೫.೪೫೭)*
(ಆ ಪುರುಷನು)

ಮಾಯಾನಗರಿಯಲ್ಲಿ ಅಡ್ಡಾಗುತ್ತಾನೆ. ಆಮಾತಿನಿಂದಲೇ (ಅಂತೆಯೇ)

'ಮಾತನಾಡುವ' ಕ್ರಿಯೆಯಿಲ್ಲದಿದ್ದರೂ 'ಅನ್' ಧಾತುವನ್ನು ನಾವು ಬಳಸಿ 'ಆ ಕಾರಣಕ್ಕಾಗಿ' ಎನ್ನುವ ಅರ್ಥದಲ್ಲಿ 'ಅಂತೆಯೇ', 'ಅಂತೆ' ಇವುಗಳನ್ನು ಎಷ್ಟು ಸುಲಭವಾಗಿ ಬಳಸುತ್ತೇವೆ! ಮರಾಠಿಯಲ್ಲಿ ಇದು 'ಮ್ಹಣೌನಿ' ಆಗಿ ಹೋಗಿದ್ದನ್ನು ಬೇರೆಡೆ ವಿವರಿಸಿದ್ದೇನೆ. ಇಲ್ಲಿ ಕನ್ನಡದ ವಾಕ್ಪ್ರಯೋಗ ಬೇರೆ ಶಬ್ದಗಳಲ್ಲಿ ಬಂದದ್ದನ್ನು ಕಾಣಬಹುದಾಗಿದೆ. ಬೋಲ=ಮಾತು; ತೇ ಬೋಲ=ಆ ಮಾತು. ಇದರ ತೃತೀಯಾ ವಿಭಕ್ತಿ. ನಡುವೆ ಒತ್ತುಕೊಡುವ ಹಿಜ್ (ಅಪಿ, ಕೂಡ)

ತೇಣೇಜ್ ಹಿಜ್ ಬೋಲೇಜ್ = ಆ ಮಾತಿನಿಂದಲೇ, ಅಂತೆಯೇ (ಆ ಕಾರಣಕ್ಕಾಗಿಯೇ ಅರ್ಥದಲ್ಲಿ)

---

17. ಕುಕ್ಷಿ ಅರ್ಥದಲ್ಲಿಯ 'ಪೊಡೆ' ಶಬ್ದಕ್ಕೆ 'ಇಸು' ಪ್ರತ್ಯಯ ಹತ್ತಿ ಹಳಗನ್ನಡದ ಪವಡಿಸು ಧಾತು ಸಿದ್ಧವಾಗಿರಬಹುದಾಗಿದೆ. ಆದರೆ ಶಬ್ದದ ಬಗ್ಗೆ ಚರ್ಚೆ ಪರಾಮರ್ಶಿಸಬೇಕು.

**ಪಹುಡಣೇಜ್ ಪವಡಿಸು ಮಲಗು**

ಪಂಪಭಾರತದಲ್ಲಿ ಬರುವ ಪ್ರಯೋಗಗಳು ಈ ರೀತಿಯಾಗಿವೆ.

*ಪವಡಿಸುವ ಮಾಡಕ್ಕೆ ನನಸೆಂದು ಬಗೆದು ಮಂಗಳ ಪಾಠಕ ರವಂಗಳೊಳ್ (೪.೧೧೦ವ) ಪವಡಿಸುವ ಮಾಡಕ್ಕೆ ಪ್ರತಪತ್ತಿಗಳಿಂ ವಿಸರ್ಜಿಸಿ ಕಣ್ಣ ಪಾಪಯಂತೆ ತೊಟಿಲೆ (೪.೯೯ವ) ಪವಡಿಸಿದ ಅನಂತನೊಸೆದು ಉಪ್ಪವಡಿಸಿ ತನ್ನೆರಡು ಮಡಿಯಂ ಒತ್ತುತ್ತಿರ್ದ (೯.೧೧)*

ಹಳಗನ್ನಡದಲ್ಲಿಯ 'ಪವಡಿಸು' ಶಬ್ದ ಮರಾಠಿಯಲ್ಲಿ 'ಪಹುಡ' ಆಗಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ. ತುಳಮಳೆಯವರು ಈ ಶಬ್ದ ಸಂಸ್ಕೃತದ 'ಪ್ರಸುಪ್ತ'ದಿಂದ ಬಂದಿರಬಹುದೇ ಎಂದು ಶಂಕಿಸಿದ್ದಾರೆ.[18] ಇದು ಸರಿಯಲ್ಲ. 'ಪ್ರಕರ್ಷೇಣ ಸುಪ್ತ' ದ ಬಳಕೆ ವಿಶ್ರಾಂತಿಗಾಗಿ 'ಅಡ್ಡಾ'ಗುವ ಕ್ರಿಯೆಗೆ ಹೊಂದುವುದಿಲ್ಲ. ಇಂದಿಗೂ ಮರಾಠಿಯಲ್ಲಿ 'ಅಡ್ಡಾಗುವುದ'ಕ್ಕೆ 'ಆಡವೇ ಪೋಣೇಜ್ ಎಂದೂ ಪವಡಿಸು > ಪಹುಡಣೇ > ಪಡಣೇ ಎಂದೂ ಪ್ರಯೋಗಗಳಿವೆ. ಹಳಗನ್ನಡದಲ್ಲಿ 'ಪೊಡೆ' ಎಂದರೆ ಹೊಟ್ಟೆ, ಕುಕ್ಷಿ, (ಶಬ್ದಮಣಿದರ್ಪಣ ಧಾ.) ಇದರಿಂದಾದ ಧಾತು 'ಪೊಡೆಯಿಸು' > 'ಪವಡಿಸು' (ಸಂಸ್ಕೃತದಲ್ಲಿಯ 'ವಾಮಕುಕ್ಷಿ ಶಬ್ದಪ್ರಯೋಗವನ್ನು ಸ್ಮರಿಸಿಕೊಳ್ಳಬಹುದು)

ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು:

*ರಿಗೌನಿಯಾಜ್ ಶಯನೀಜ್ ಸರಿಸಾ ಪಹುಡೇಜ್ (೧೧.೫೪೫)*

ಹಾಸುಗೆಯ ಮೇಲೆ ಹೋಗಿ ಜತೆಗೆ ಒರಗುತ್ತಿದ್ದೆ.

*ಜರಿ ಪವಡಲಾ ಹೋಯೇ ದೈವಾಜ್‌ಚಾ (೮.೬)*

(ಯಾವನೋ ಒಬ್ಬ) ದೈವುಳ್ಳವನು ಮಲಗಿದ್ದರೂ

*ರಾಓ ಪೌಢಲೇಯಾ ಸುಖೇಜ್ ಜೈಸಾ ದೇಶಿಚಾ ವ್ಯಾಪಾರು ನ ಠಕೇ (೮.೧೮೩)*

ರಾಜನು ಸುಖವಾಗಿ ಮಲಗಿದನೆಂದು ದೇಶದ ವ್ಯವಹಾರ
ನಿಂತು ಹೋಗುವುದಿಲ್ಲ, ಹಾಗೆ

ಜ್ಞಾನೇಶ್ವರಿಯಲ್ಲಿಯ ಈ ಓವಿ ನೋಡಬೇಕು.

*ಪರಿ ಪಹುರಣೇಜ್ ಜೇ ದುಹಿಲೇಜ್ ತೇಜ್ ಗೋರುಜ್ ನ ದುಭೇ*
*ವಿಯಾಲೇಜ್ ಕಾಜ್ ಉಭೇ ಸೇತ ಚಾರಿಲೇಜ್ ಪೀಕಾವೇಯಾ ನುರೇ (೧೭.೨೪೨)*

ಒಂಬತ್ತು ಸಾವಿರಕ್ಕೂ ಮಿಕ್ಕಿದ ಓವಿಗಳಲ್ಲಿ ಬರುವ ನೂರಾರು ದೃಷ್ಟಾಂತಗಳಲ್ಲಿ ಇವು ಎರಡು:

ಆದರೆ "ಪಹುರಣೇಜ್" ಕರೆದ ಆವು ಈದಬಳಿಕವು ಹಾಲು ಕೊಡುವುದಿಲ್ಲ.

---

18. ಯಾದವಕಾಲೀನ ಮರಾಠೀ ಭಾಷಾ ಪು. ೧೫೩

ಬೆಳೆದ ಹೊಲವನ್ನು ಮೇಯಿಸಿದ ಬಳಿಕ ಒಕ್ಕಲು ಮಾಡುವುದಕ್ಕೆ ಏನೂ ಉಳಿಯುವುದಿಲ್ಲ.

ಇಲ್ಲಿ 'ಪಹುರಣೇಜ್' ಇದು ಕಬ್ಬಿಣದ ಕಡಲೆ. ಇದೊಂದು ಪ್ರಕಾರದ ಹುಳು. ಇದು ಕಚ್ಚಿದರೆ ಕೆಚ್ಚಲು ಒಣಗುತ್ತದೆ ಎಂಬುದಾಗಿ ದಾಂಡೇಕರ ಮೊದಲಾದವರು ಅರ್ಥೈಸಿದ್ದಾರೆ. ಇನ್ನೊಂದು ಈಯುವವರೆಗೂ ಹಾಲು ಕೊಡುವ ಹಸು ಪಹುರಣೇ ಎಂದು ದಾತೇ ಅರ್ಥ ಹೇಳಿದ್ದಾರೆ. ಇವೆರಡೂ ಅವೈಜ್ಞಾನಿಕ, ಸತ್ಯಕ್ಕೆ ದೂರ. ಸತ್ಯವನ್ನು ಸಹಜವಾಗಿ ಹೇಳುವ, ಡಂಭಾಚಾರವನ್ನು ಕಟುವಾಗಿ ಟೀಕಿಸುವ ಜ್ಞಾನೇಶ್ವರರು ವೈಜ್ಞಾನಿಕ ದೃಷ್ಟಾಂತಗಳನ್ನು ಕೊಡುವಲ್ಲಿ ಭಾರತೀಯ ಕವಿಗಳಲ್ಲಿ ಮೊದಲಿಗರೆಂದು ಹೇಳಬೇಕಾಗುತ್ತದೆ. ಈ ಉದಾಹರಣೆಗಳನ್ನು ಪರಾಮರ್ಶಿಸಬೇಕು.

೧. ಉದಯಾಸ್ತಗಳಲ್ಲಿ ಸೂರ್ಯನು ಚಲಿಸುವುದಿಲ್ಲ. (ಪೃಥ್ವಿಯು ಚಲಿಸುತ್ತದೆ)

೨. ಕಿವಿಗಿಂತ ದೃಷ್ಟಿ ಮೊದಲು ಕೆಲಸ ಕೊಡುತ್ತದೆ. (ಧ್ವನಿಗಿಂತ ಪ್ರಕಾಶದ ವೇಗ ಹೆಚ್ಚು) (೭.೨೦೧)

೩. ರವಿ ಚಲಿಸುವುದಿಲ್ಲ. ಲೋಕವು ಚಲಿಸುತ್ತದೆ (೮.೧೮೫)

೪. ಪರ್ವತಗಳು ಮೋಡಗಳನ್ನು ತಡೆಯುತ್ತವೆ (೧೦.೫೨)

೫. ಈ ಭೂಗೋಲವು 'ಪರಮಾಣು'ವಿನಲ್ಲಿ ಅಡಕವಾಗಿದೆ (೧೦.೬೯)

೬. ದ್ರಾಕ್ಷಿ ಬಳ್ಳಿಯ ಬುಡದಲ್ಲಿ ಹಾಲು ಎರೆದರೆ ಹಣ್ಣು ಸಿಹಿಯಾಗುತ್ತವೆ (೧೮.೫೯೩)

೭. ನಾಲಗೆಯಿಂದಲೇ ನಾನಾತರದ ರೋಗಗಳು (೧೮.೭೯೩)

ದ್ರಾಕ್ಷಿಬಳ್ಳಿಯ ದೃಷ್ಟಾಂತ ಸಿದ್ಧವಾಗಬೇಕಿದೆ. (ಇಂದಿಗೂ ನಾವು ಕರಿಬೇವಿನ ಬುಡದಲ್ಲಿ ಹುಳಿಮೊಸರು ಮಜ್ಜಿಗೆ ಹಾಕುತ್ತೇವಲ್ಲ?)

ಹೀಗಿರುವಾಗ ಜ್ಞಾನೇಶ್ವರರು ಅ-ವೈಜ್ಞಾನಿಕವಾದ 'ಹುಳದ (ಪಹುರಣೇ' ಹಾವುರಾಣಿ ಅಲ್ಲ, ಹಾವೂ ಅಲ್ಲ!) ದೃಷ್ಟಾಂತವನ್ನಾಗಲೀ, ತುಂಬುಗಬ್ಬದ ಹಸುವಿನ ಹಾಲು ಕರೆದಾಗ, ಮುಂದೆ ಅದು ಈದ ಬಳಿಕ ಕೆಚ್ಚಲು ಒಣಗುವ ಕಲ್ಪನೆಯಾಗಲೀ ಮನಸ್ಸಿಗೆ ಒಪ್ಪುವಂತಹವಲ್ಲ.

ನನಗೆ ಎನಿಸುವ ಮಟ್ಟಿಗೆ 'ಪಹುರಣೇಜ್' ಇದು 'ಪಹುಡಣೇಜ್'ಯ ಅಪಪಾಠವಿರಬೇಕು. ಮರಾಠಿಯಲ್ಲಿ ಡ ಮತ್ತು ರ ಇವುಗಳ ಬರೆವಣಿಗೆ ಹತ್ತಿರದ್ದು. 'ಪಹುಡಣೇಜ್' ಎಂದರೆ 'ಒರಗಿದ' 'ಒರಗಿಸಿ'. ಕೊಟ್ಟಿಗೆಯಲ್ಲಿ ಹಸುವನ್ನು ಒರಗಿಸಿ ಹಾಲು ಕರೆದಾಗ, ಅಲ್ಲಿಯ ಕೊಚ್ಚೆಯಲ್ಲಿಯ ಸೂಕ್ಷ್ಮಜಂತು (ಬಾಕ್ಟೀರಿಯಾ)ಗಳ ಸಂಸರ್ಗದಿಂದ ಮಾತ್ರ ಕೆಚ್ಚಲು ಪೂರ್ಣವಾಗಿ ಬತ್ತಿಹೋಗಲು ಸಾಧ್ಯವೆಂದು ವೈಜ್ಞಾನಿಕ ಅಭಿಪ್ರಾಯವಾಗಿದೆ.

**ಪಾಉಡ- ಪಾವುಡ, ಕಾಣಿಕೆ**

ಕಾಣಿಕೆ ಅರ್ಥದಲ್ಲಿಯ 'ಪಾವುಡ' ಶಬ್ದದ ಬಳಕೆ ಇಂತು: ಬನ್ದುವು ಪಾವುಡಂ ನೃಪತಿಗೆಂಬುದುಂ *(ಕವಿರಾಜಮಾರ್ಗ ೧.೧೧೮)* ಅದೇ ಅರ್ಥದಲ್ಲಿ ಇದು ಮರಾಠಿಯಲ್ಲೂ ಬಳಸಲಾಗಿದೆ.

*ನವರಸದೀಪಿಚಾ ಪಾಉಡು ಲಾಭೇ (೧೦.೭)*

ನವರಸದೀಪದ ಕಾಣಿಕೆ ದೊರೆಯುತ್ತದೆ.

*ವಿಡಾ ಪಾಉಡ ಭೀತರಾಜ್ ದೇಉನಿ (೧೮.೪೬)*

ವೀಳ್ಯ-ಕಾಣಿಕೆಗಳನ್ನು ಒಳಗೆ ಕೊಟ್ಟು-

**ಪಾಂಗು- ಪಂಗು ಹಂಗು ಋಣೀಭಾವ ಸಾಮ್ಯ, ಸದೃಶ, ಹಾಗೆ**

**ಪಾಂಗೋರಾ - ಹಾಗೆ, ಅಂತೆ**

'ಹೆಳವ' ಅರ್ಥದ ಸಂಸ್ಕೃತ 'ಪಂಗು' ಶಬ್ದದಿಂದ ಮರಾಠಿಯಲ್ಲಿ 'ಪಾಂಗು' ಶಬ್ದ ಸಿದ್ಧವಾಯಿತೆಂದು ತುಳಪುಳೆಯವರು ಹೇಳಿದ್ದು[19] ಅವರು ಬರಿಯ ಉಚ್ಚಾರ ಸಾಮ್ಯ ನೋಡಿದ್ದಾರೆಂದು ಭಾವಿಸಿ ಬಿಡುವುದು ಒಳ್ಳೆಯದು.

ಹಳಗನ್ನಡದ ಈ ಪ್ರಯೋಗ ನೋಡಬೇಕು.

*'ಸಾಮ್ಯ': ಪೀನಂ ಪವೆಯದೆ ಪಾಂಗಜೆದು ದೋಷಮಂ ಪಿಂಗಿಸಿ (ಕವಿರಾಜಮಾರ್ಗ ೧.೪೪)*

*'ಋಣ' : ಜವನೆಂಬಜಿಕೆಯ ಪಗೆವಂಗದೆಂತು ಪಂಗಿಗನಪ್ಪೆಂ (ಆದಿಪುರಾಣ ೪.೭೭)*

ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳಿವು.

*ಜೇಥ ವೈರಾಗ್ಯಾಚಾ ಪಾಂಗು ಫೀಟೇ ವಿವೇಕಾಚಾ ಹೀ ಸೋಸು ತೂಟೇ (೪.೧೬೨)*

ಎಲ್ಲಿ ವೈರಾಗ್ಯದ ಹಂಗು ಕಳೆಯುವುದೋ, (ಎಲ್ಲಿ) ವಿವೇಕದ ಹಂಬಲ ಕೂಡ ಕಡಿಯುವುದೋ-

(ತುಳಪುಳೆಯವರು 'ಸೋಸು' ಶಬ್ದವನ್ನು ಸಂಸ್ಕೃತ 'ಶೋಷ' ದಿಂದ ಉತ್ಪಾದಿಸುತ್ತಾರೆ. ಇನ್ನೊಂದು ಉಚ್ಚಾರ ಸಾಮ್ಯ! ಇಂದಿಗೂ ಮರಾಠಿಯಲ್ಲಿ ಬಳಕೆಯಲ್ಲಿರುವ 'ಸೋಸ' ಶಬ್ದಕ್ಕೆ ಕನ್ನಡದ 'ಸೊಗಸು' ಶಬ್ದ ಅರ್ಥದ ದೃಷ್ಟಿಯಿಂದಲೂ ತೀರ ಹತ್ತಿರವಾದದ್ದು)

*ಪರಿ ನ ಸಕೇ ಕರೂಜ್ ಪಾಂಗು ಯೋಗ್ಯತೇಚಾ (೬.೩೩೩)*

(ನೀನು ಹೇಳಿದ ಮಾತಿನ) ಯೋಗ್ಯತೆಯ ಹಾಗೆ (ನನ್ನಿಂದ) ಮಾಡಲು ಸಾಧ್ಯವಾಗದು.

*ಐಸಾ ಪಾಂಗೀಜ್ ವಡೀಲ ವ್ಯವಸಾಯ ಗಾ (೧೪.೧೬೪)*

ಇಂತಹ ಹಂಗಿನಿಂದ ದೊಡ್ಡ ವ್ಯವಸಾಯ (ಕ್ಕೆ ಕೈಹಾಕುವನು)

19. ಯಾದವಕಾಲೀನ ಮರಾಠೀ ಭಾಷಾ ಪು. ೧೨೮

*ತರಿ ಮಹದಹಂಕಾರಾಲಾಗೋನಿ ಧನುರ್ಧರಾ ತೃಣಾಂತೀಃ ಪಾಂಗೋನಾವೇಷ್ಟಿಜ್ ಪೈಜ್‌ಗಾ (೧೫.೪೪೫)*

> ಮಹತ್ ಅಹಂಕಾರದಿಂದ ಹಿಡಿದು (ಲಾಗ ಧಾತು ಪತ್ತು, ತಗುಲ್ ಜತೆಗೆ ಹಿಡಿ ಅರ್ಥವನ್ನು ಸೂಚಿಸುವುದನ್ನು ಗಮನಿಸ-ಬೇಕು) ಅರ್ಜುನನೇ, ಹುಲ್ಲುಕಡ್ಡಿಯ ತುದಿಯಂತಹದರವರೆಗೆ-

**ಪಾಟಕುಳಿ-ಬೆನ್ನು+ಕುಳಿರ್**

'ಋಜು' ಎಂದರೆ 'ಸರಳ'ವಾಗಿರುವುದು. 'ಋಜುಭೇದ' ಅರ್ಥದಲ್ಲಿಯ (ಅಂದರೆ ವಕ್ರವಾಗಿರುವುದು, ಬಗ್ಗುವುದು ಇತ್ಯಾದಿ) 'ಕುಳಿರ್' ಧಾತು, ಈಗ ಬಳಕೆಯಲ್ಲಿರುವ 'ಕೂಡ್ರು' ಧಾತುವಿನ ಮೂಲ. ಭೂತಕಾಲವಾಚಕ ಕೃದಂತವಾದ 'ಕುಳಿತು' ಶಬ್ದವನ್ನು ನಾವು ಬಳಸುತ್ತೇವೆ. ಇದೂ ಅಲ್ಲದೆ 'ಕುಳಿತುಕೊಳ್ಳಿರಿ' ಎಂದು ಹೇಳುವುದನ್ನು 'ಕುಳ್ಳಿರಿ' ಎಂದೂ ಪ್ರಯೋಗಿಸುತ್ತೇವೆ.

*ಕುಲವೃದ್ಧರುಂ ಕುಂತಿಗಾಂಧಾರಿಗಳಂವೆರಸು ಬಂದು ಕುಳ್ಳಿರೆ* ಎಂದು ಪಂಪನು ಹೇಳುವಾಗ (ಪಂಪಭಾರತ ೨.೬೬ವ) ಆಗಲೀ, *ಪಱು ಗೋಲೊಳ್ ಕುಳ್ಳಿರ್ದಂ* ಎಂದು ಕೇಶಿರಾಜನು ಉದಾಹರಣೆ ಕೊಡುವಲ್ಲಾಗಲೀ (ಶಬ್ದಮಣಿದರ್ಪಣ ಸೂತ್ರ ೧೪೪) ನಮಗೆ 'ಕುಳಿ+ಇರ್' ಹೀಗೆ ಈ ಧಾತುವಿನ ಘಟಕಗಳು ಸ್ಪಷ್ಟವಾಗುತ್ತವೆ.

'ಕುಳಿ' ಶಬ್ದ ಸ್ವತಂತ್ರವಾಗಿ ಇಂದಿನ ಆಡುಮಾತಿನಲ್ಲಾಗಲೀ, ಅಂದಿನ ಹಳಗನ್ನಡದ ಗ್ರಂಥಗಳಲ್ಲಾಗಲೀ ದೊರೆಯುವುದಿಲ್ಲ. ಆದರೆ ಆ ಕಾಲದಲ್ಲಿ 'ಕುಳಿ' ಶಬ್ದ ರೂಢಿಯಲ್ಲಿದ್ದಿರಬಹುದಾಗಿದೆ. ಅದು ನಮಗೆ ಲೀಳಾಚರಿತ್ರದಲ್ಲಿ ಕಾಣಸಿಕೊಂಡಿದೆ. ಮರಾಠಿಯಲ್ಲಿ 'ಪಾಠ' ಎಂದ 'ಬೆನ್ನು'. 'ಬೆನ್ನಮೇಲೆ ಕುಳಿತು' ಎನ್ನುವ ಅರ್ಥದಲ್ಲಿ ಪಾಠ+ಕುಳೀ', ಪಾಟಕುಳಿ ಆಗಿದೆ. (ಇಂದಿನ ಮರಾಠಿಯಲ್ಲಿ ಕೂಡ ಅದು 'ಪಾಟಕುಳೀ' 'ಪಾಠಂಗಳೀ' ರೂಪಗಳಲ್ಲಿ ಪ್ರಚಾರದಲ್ಲಿದೆ).

ಪ್ರಸಂಗ ಹೀಗೆ. ಚಾರಠಾಣೇ ಊರಿನ ಸಾಧೇ (ಯಲ್ಹಾಇಸಾ ಎಂದೂ ಈಕೆಯ ಹೆಸರು. ಕನ್ನಡದ 'ಎಲ್ಲವ್ವ' ಎಷ್ಟು ದೂರ ಮುಟ್ಟಿದ್ದಾಳಲ್ಲವೇ?) ಚಕ್ರಧರರನ್ನು ಕಾಣುವ ಹಂಬಲದಿಂದ ದಾದೋಸ, ಮಹದಾಯಿಸೇ ಮಾಇಬಾಇಸಾ ಅವರೊಡನೆ ಊರೂರು ತಿರುಗುತ್ತ ನಡೆದಿದ್ದಾಳೆ. ಮಾಇಬಾಇಸಾ ನಡುವೆ ಸೋತು ಸುಣ್ಣವಾಗಿದ್ದಾಳೆ. ಕೊನೆಯ ಒಂದಿಷ್ಟು ಅಂತರ ಆಕೆಗೆ ನಡೆಯಲು ಆಗಿಲ್ಲ. ಮಿಕ್ಕವರೆಲ್ಲ ಮುಂದೆ ಹೋಗಿ ಚಕ್ರಧರರ ದರ್ಶನ ಪಡೆಯುತ್ತಾರೆ. ವಸ್ತುಸ್ಥಿತಿ ಅವರಿಗೆ ತಿಳಿದಾಗ ಅವರು ಭಕ್ತನೊಬ್ಬನಿಗೆ ಆಜ್ಞಾಪಿಸುತ್ತಾರೆ.

*'ಮಾರ್ತಂಡಾಃ ಸೋಭಾಗಾತೇ ಪಾಟಕೂಳಿಯೇ ಘಾಲುನಿ ಆಣಾ'*

> 'ಮಾರ್ತಂಡಃ ಮಾಇಬಾಸಾಳನ್ನು ಬೆನ್ನಮೇಲೆ ಕುಳ್ಳಿರಿಸಿಕೊಂಡು ತನ್ನಿರಿ.'

**ಪಾಡ ಪಡು**

ಹಳಗನ್ನಡದಲ್ಲಿ 'ಪಾಡು' ಶಬ್ದ ಅನೇಕ ಅರ್ಥಗಳಲ್ಲಿ ಬಳಸಲಾಗಿದೆ. ಮರಾಠಿಗೆ ಹೋದ ಈ ಶಬ್ದ ಅವುಗಳಲ್ಲಿಯ ಸಾಕಷ್ಟು ಅರ್ಥಗಳನ್ನು ಬಿಂಬಿಸಿದೆ. ಈ ಉದಾಹರಣೆಗಳನ್ನು ಪರಿಶೀಲಿಸಬೇಕು.

ಪಾಡು - ಸಾಮ್ಯ, ಸದೃಶ:

*ವಕ್ತೃತ್ವ ಗೋಡಪಣೇಜ್ ಅಮೃತೇಜ್ ಪಾರು ಹ್ಮಣೇ (೧೩.೩)*
ಮಾತುಗಾರಿಕೆಯು ಸಿಹಿತನದಲ್ಲಿ ಅಮೃತಕ್ಕೆ ಸದೃಶವೆನಿಸುವುದು.

*ತೇಣೇಜ್ ಪಾಡೇಜ್ ದೇಹೀಜ್ ಆಹೇ ಹೇ ಸೇ ಚಿ ನಾಹಿಜ್ (೧೩.೫೩೨)*
(ಮೇಲಿನ ದೃಷ್ಟಾಂತಗಳು) ಅವುಗಳಂತೆ, ತಾನು ದೇಹಿಯಾಗಿದ್ದೇನೆಂಬ ಅರಿವೂ ಇಲ್ಲ.

ಅಪಾಡು-ಸಾಟಿಇಲ್ಲದ

*ಅಪಾಡು ನಭಾ ಅಭಾಳಾ ರವೀ ಆಣಿ ಮೃಗಜಳಾ (೧೩.೧೧೨೦)*
ಆಕಾಶ ಹಾಗೂ ಮೋಡ, ರವಿ ಹಾಗೂ ಮೃಗಜಲ ಇವು ಸಾಟಿಯಾಗುವುದಿಲ್ಲ.

*ಓಇಚಲೀಜ್ ಅಪಾಡೇಜ್ ದೀಸತಸೇ (೧.೧೧೯)*
(ಕೌರವರ ಸೈನ್ಯದೆದುರು ಕಡಿಮೆಯಿದ್ದ ಪಾಂಡವಸೈನ್ಯವು) ಒಂದಿಷ್ಟು ಸಾಟಿ ಇಲ್ಲದ್ದೆಂದು ಕಾಣುತ್ತದೆ.

ಪಾಡು-ಯೋಗ್ಯತೆ

*ಪಾಡೇಜ್‌ವಿಣ ಅನುಸರೇಜ್ ಭ್ರಮಲಾ ಜೈಸಾ (೧.೧೮೭)*
ಬುದ್ಧಿ ಭ್ರಮಣೆಯಾದವನು (ಕಾಮುಕನಂತೆ) ಯೋಗ್ಯತೆ ಇಲ್ಲದವಳನ್ನು ಅನುಸರಿಸುತ್ತಾನೆ.

ಅಪಾಡು-ಅಯೋಗ್ಯ

*ಸಿಂಹಾಸಿ ಝೋಂಬೇ ಕೋಲ್ಹಾ ಐಸಾ ಅಪಾಡು ಆಥಿ ಕಾ ಜಾಲಾ (೨.೧೭)*
ನರಿ ಸಿಂಹದ ಮೈಮೇಲೇರಿ ಹೋಗುವಂತಹ ಅಯೋಗ್ಯ (ಘಟನೆ) ಆಗುವದುಂಟೇ?

ಪಾಡು-ಒಳ್ಳೆಯದು

*ಡೋಳಾಜ್‌ವಿಣ ಮೋತಿಯೇಜ್ ಘೇಜ್‌ತಾಜ್ ಪಾಡು ಮಿಳೇ ವಿಪಾಯೇಜ್ (೧೮.೭೧೮)*
ಎಜ್ಜು ಇಲ್ಲದ ಮುತ್ತು ಕೊಂಡರೆ ಅದು ಒಳ್ಳೆಯದಿರುವ ಸಾಧ್ಯತೆ ಕಡಿಮೆಯೇ.

(ಬೆಜ್ಜ ಕೊರೆಯುವಾಗ ಮುತ್ತು ಹಾಳಾಗುವ ಸಂಭವ ಹೆಚ್ಚು.
ಆದಕ್ಕೆ ಕಣ್ಣಿದ್ದ ಮುತ್ತೇ ಲೇಸು.)

**ಪಾಂಪರಾ- ಪಾಮ್ಬ+ಅರ್ ಶೂರ, ವೀರ**

ಈ ಪ್ರಯೋಗವನ್ನು ಹೇಳುವ ಮೊದಲು ಒಂದು ಪೌರಾಣಿಕ ಸಂದರ್ಭ ವಿವರಿಸುವುದು ಸೂಕ್ತ. ಬ್ರಹ್ಮ ಶಿವ ವಿಷ್ಣುಗಳಲ್ಲಿ ಯಾರು ಶ್ರೇಷ್ಠರು ಎಂಬುದನ್ನು ನಿರ್ಣಯಿಸಲು ಸಾಧ್ಯವಾಗದಾಗ, ಋಷಿಗಳು ಭೃಗು ಮುನಿಯನ್ನು ಅವರನ್ನು ಪರೀಕ್ಷಿಸಲೋಸುಗ ಕಳಿಸಿದರು. ಭೃಗು ಹೋದಾಗ ಬ್ರಹ್ಮ ಅವರನ್ನು ಸರಿಯಾಗಿ ಸ್ವಾಗತಿಸಲಿಲ್ಲ. 'ಜನರಾರೂ ನಿನ್ನನ್ನು ಗುಡಿಕಟ್ಟಿ ಪೂಜಿಸುವುದಿಲ್ಲ' ಎಂದು ಶಾಪವಾಯಿತು ಬ್ರಹ್ಮನಿಗೆ. ಶಿವನೋ ಶಯ್ಯಾಗೃಹ ಬಿಟ್ಟು ಹೊರಗೆ ಬರಲಿಲ್ಲ. 'ಜನರು ನಿನ್ನ ಬದಲಾಗಿ ಲಿಂಗವನ್ನೇ ಪೂಜಿಸುವರು' ಎಂದು ಭೃಗು ಶಾಪವಿತ್ತರು. ನಾರಾಯಣ ಮಲಗಿದ್ದ. ಭೃಗು ಅವನ ಎದೆಯ ಮೇಲೆ ಕಾಲಿನಿಂದ ಒದ್ದರು. ವಿಷ್ಣುವಿಗೆ ಎಚ್ಚರಾಯಿತು. ಅವನು ಎದ್ದು ಭೃಗುವಿನ ಕಾಲು ಹಿಡಿದು ಮೆದುವಾಗಿ ತೀಡತೊಡಗಿದ. 'ಗುರುವೇ, ಬಹಳ ನೋವಾಯಿತೇ?' ಎಂದು ಕೇಳಿದ. ಅದರಿಂದಾಗಿ ವಿಷ್ಣು ಶ್ರೇಷ್ಠನೆನಿಸಿಕೊಂಡ. ಇದಿಷ್ಟು ಕತೆ. ಜ್ಞಾನೇಶ್ವರೀಯಲ್ಲಿ ಇದನ್ನು ಕುರಿತು ಉಲ್ಲೇಖ ಬರುತ್ತದೆ.

*ಜೇಣೇಜ್ ಉರೀಜ್ ಹಾಲಾಸಿ ಪಾಂಪರಾ ತೇಯಾಚೇ ವಿನಟ ವಾಹಾಸೀ ದಾತಾರಾ (೧೧.೧೦೫)*

ಅನ್ವಯ ಹೇಳುವ ಮೊದಲು ಎರಡು ಶಬ್ದಗಳ ವಿಚಾರ. ಮೊದಲನೆಯದಾಗಿ ಹಾಲಾಸಿ=ಹಾಲಾ+ಅಸಿ=ಹಾಯ್‌ಲಾ+ಅಸಿ. ಇಲ್ಲಿ ಬರುವ ಹಾಯ್ (ಹಳಗನ್ನಡ ಪಾಯ್) ಗೆ ದಾಟು, ಲಂಘನವೆಂದಷ್ಟೇ ಅರ್ಥ. ಸಂಸ್ಕೃತದ 'ಪಾದ' ಮರಾಠಿಯಲ್ಲಿ 'ಪಾಯ'ವಾಗಿದೆ. ಇದರಿಂದ ಕ್ರಿಯಾಪದ 'ಪಾಯಾಲಾ' ಎನ್ನುವುದು ಹೆಚ್ಚು ಸಮರ್ಪಕವಾದೀತು. ಆದರೆ ಪ=ಹ ಮಾತ್ರ ಕನ್ನಡದ ಪ್ರಭಾವ. 'ವಿನಟ'ಕ್ಕೆ ಅರ್ಥ ಹತ್ತುವುದಿಲ್ಲ. ಪಾಠಭೇದವಾದ 'ಚರಣ' ಶಬ್ದ ಸ್ವೀಕರಿಸುವುದು ಇಷ್ಟವಾದೀತು. ಇನ್ನು ಅನ್ವಯ.

ಯಾರು (ನಿನ್ನನ್ನು) ಎದೆಯಲ್ಲಿ ಒದ್ದರೋ, ಎಲೆ ವೀರಶ್ರೇಷ್ಠನೇ, ದಾತಾರನೇ, ಅವನ ಚರಣವನ್ನೇ (ಚರಣದ ಗುರುತನ್ನೇ) ಧರಿಸಿರುವೆ. ಇಲ್ಲಿ ಬರುವ ಹಳಗನ್ನಡ ಶಬ್ದ 'ಪಾಮ್ಬ' ('ವೀರವಡೆದಂ' ಇತಿ ಚತುರಾಸ್ಯ ನಿಘಂಟು) ಮರಾಠೀ ಪಂಡಿತರಿಗೆ ಗೊತ್ತಾಗದ್ದರಿಂದ, ಕೃಷ್ಣನನ್ನುದ್ದೇಶಿಸಿ ಅರ್ಜುನನು 'ಪಾಂಪರಾ' ಎಂದದ್ದು ಅವರಿಗೆ ಅರ್ಥವಾಗಿಲ್ಲ. ಸಂದರ್ಭದ ಮೇಲಿಂದ ಪಾಂಪರ=ಒದೆತ. ಹಾ (ಣಿತ) ಲಾಸಿ = ಹೊಡೆಸಿಕೊಂಡನು ಎಂದವರು ಅನ್ವಯ ಹಚ್ಚಿದ್ದಾರೆ.

**ಪುಢುತೀಜ್ ಪುಢಾಜ್, ಪುಢೇಜ್, ಪುಡೇ - ಮುನ್ನ, ಮುಂದೆ**

*ಮುನ್ನಿನ ದಿವಸದೊಳಗಣ (ಪಂಪಭಾರತ ೩.೪೭)*
*ಮುನ್ನನ್ತೆ ಮೇಗಣ್ಣಡದರ್ಗಾಗಳ್ (ಆದಿಪುರಾಣ ೭.೫೭)*

ಹೀಗೆ ಮುನ್ನ ಶಬ್ದವು ಭೂತಕಾಲವಾಚಕ ವಿಶೇಷಣವಾಗಿದೆ.

*ಜಯಶ್ರೀಯೆ ಮುನ್ನಟ್ಟಿದೆಕ್ಕಾವಳಿಯೆಮ್ಬನ್ತಿರ್ದುದಂ (ಆದಿಪುರಾಣ ೧.೭೬)*

ಇಲ್ಲಿ ಅದು ಸ್ಥಿತಿವಾಚಕ ವಿಶೇಷಣ.

*ಇನ್ನೃಸಂ ಗಿರಿಶನಂ ಸರ್ವಸ್ವಸುಂ ಕೊಣ್ಡು ಮುನ್ನುಟಿವರ್ (ಶಬ್ದಮಣಿದರ್ಪಣ ಸೂತ್ರ ೭೫)*

ಇಲ್ಲಿ ಭವಿಷ್ಯತ್‌ಕಾಲವಾಚಕ ಕ್ರಿಯಾವಿಶೇಷಣ.

ಸಂಸ್ಕೃತದ ಪುರಸ್ ಶಬ್ದದಿಂದ ಸಿದ್ಧವಾದ ಮರಾಠಿಯಲ್ಲಿಯ ಪುಢಾಜ್, ಪುಢೇಜ್, ಪುಡೇ ರೂಪಗಳೂ ಮೇಲಿನ ಮುನ್ನ, ಮುಂದೆಯ ಅರ್ಥಗಳಲ್ಲಿ ಬಳಸಲಾಗಿವೆ. ಆದರೆ ಸಂಸ್ಕೃತದ ಪುರಸ್ ಶಬ್ದಕ್ಕೆ ಇರುವ ಅರ್ಥಗಳು ಮೊದಲು, ಇದಿರು, ಇಷ್ಟೇ. ಭವಿಷ್ಯತ್‌ಕಾಲವಾಚಕ ಅರ್ಥ ಪುರಸ್ ಶಬ್ದದಲ್ಲಿ ಅಭಿಪ್ರೇತವಿಲ್ಲ. ಹಳಗನ್ನಡದ ಮುನ್ನ ಶಬ್ದವು ಭೂತ-ಭವಿಷ್ಯತ್‌ಕಾಲಗಳೆರಡನ್ನು ಸೂಚಿಸುವುದರಿಂದ ಅನುಕರಣವಾಗಿ ಈ ಮರಾಠಿ ಶಬ್ದಗಳು ಭವಿಷ್ಯಕಾಲವನ್ನು ಸೂಚಿಸುತ್ತವೆ. ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳು

*ತೈಸಾ ಪುಡುತೀಜ್ ಪುಡುತೇಜ್ ತೋಚಿ ಮಿಯಾಜ್ ವಂದಿಲಾ ಶ್ರೀಗುರುಚಿ (೧.೨೭)*

ಆದರಂತೆ ಮುಂದೆ ಮುಂದೆ ನಾನು ಅದೇ ಶ್ರೀಗುರುವನ್ನು ವಂದಿಸಿದೆ.

*ಉಪೇಗು ಕೇಲಾ ತೋಹಾ ಪುಡುತೀಜ್ ನಿರೂಪಮು ಜೀ (೧೮.೧೭೭೦)*

ಉಪಯೋಗಿಸಿದ್ದು ಮುಂದೆ ಅನುಪಮವಾಯಿತು.

*ಪುಡುತೀಜ್ ಪುಡುತೀಜ್ ಪುಡುತೀಜ್ ಇಯಾ ಗ್ರಂಥ ಪುಣ್ಯಸಂಪತ್ತೀ (೧೮.೧೭೮೮)*

ಮುಂದೆ ಮುಂದೆ ಈ ಗ್ರಂಥದ ಪುಣ್ಯ ಸಂಪತ್ತಿಯು (ಆಗಲಿ-)

**ಪುರಣೀಜ್ ಪೂಟ್ ಹೂಳು ಹುಗಿ**

'ಆಚ್ಛಾದನ' ಅರ್ಥದಲ್ಲಿಯ 'ಪೊಟ್' ಧಾತು ಹಳಗನ್ನಡದಲ್ಲಿ ಹೀಗೆ ಬಳಸಲಾಗಿದೆ.

*ಆದರ್ಥಮಂ ಪೊಟ್ಟು ಮಿಳ್ಮಿಳ ನೋಡುತ್ತುಂ (ಆದಿಪುರಾಣ ೨.೧೫)*

*ಮಸಿಯಿಂದಂ ಜಗಮೆಲ್ಲಮಂ ದಿಟಿಸುತಂ ಮುಂ ಪೊಟ್ಟದನೋ (ಪಂಪಭಾರತ ೪.೪೯)*

ಈ ಧಾತು 'ಪುರ' ಆಗಿ ಮರಾಠಿಯಲ್ಲಿ ಹೋಗಿದೆ. ಲೀಳಾಚರಿತ್ರದಲ್ಲಿಯ ಪ್ರಸಂಗ, ಪ್ರಯೋಗ ಹೀಗೆ-

ಬ್ರಹ್ಮಸಾನು ಎನ್ನುವನೊಬ್ಬ ಚಕ್ರಧರರಿಗೆ ವೀಳ್ಯದಲ್ಲಿ ವಿಷ ಹಾಕುತ್ತಾನೆ. ಎಲೆ ಅಡಕೆ ತಿನಿಸಿದ ಬಳಿಕ ಅವನು ಹೋಗುತ್ತಾನೆ. ಚಕ್ರಧರರು ವೀಳ್ಯಮೂರ್ತಿ

ತಿನ್ನುವವರಲ್ಲ. ಎಂಜಲನ್ನು ಪ್ರಸಾದವಾಗಿ ಕೊಡುವ ರೂಢಿ ಅವರದು. ಭಾಗವತರು ಎಂಜಲು ಬೇಡುತ್ತಾರೆ. ಚಕ್ರಧರರು ಕೊಡುವುದಿಲ್ಲ. ನಾಗೂಬಾಯಿಗೆ ಹೇಳುತ್ತಾರೆ.

*'ಬಾಇ: ಹೇ ತಾಂಬೂಳ ಮರಾ: ಅವಘಾ ಉಗಾಳು ಹೀರವಾ ಜಾಲಾ (ಪೂರ್ವಾರ್ಧ ೬೧)*

'ಅವ್ವಾ: ಈ ತಾಂಬೂಲ ಹುಗಿಯಿರಿ: ಎಲ್ಲ ಉಗುಳು ಹಸಿರಾಗಿತ್ತು.

**ಪೇಣಾ-ಪೇಣೇಜ್ ಪಯಣ ಪ್ರಯಾಣ**

ಸಂಸ್ಕೃತ 'ಪ್ರಯಾಣ' ಶಬ್ದದ ತದ್ಭವವಾದ 'ಪಯಣ'ವು (ಶಬ್ದಮಣಿದರ್ಪಣ ಸೂತ್ರ ೨೮೭) *ತಂಕ ಮೊಗದೆ ಪಯಣಂ ಪೋಗಿ* ಎಂಬುದಾಗಿ ಪಂಪಭಾರತದಲ್ಲಿ (೩.೮೩) ಬಳಸಲಾಗಿದೆ.

ಮೂಲಶಬ್ದವು ಸಂಸ್ಕೃತದ್ದೇ ಆಗಿದ್ದರೂ ಕನ್ನಡ ಪಯಣ' 'ಪೇಣಾ', 'ಪೇಣೇಜ್' ಆಗಿ ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾದುದನ್ನು ಕಾಣುತ್ತೇವೆ. ಸಂಸ್ಕೃತ ಯಾ ದಿಂದ ಹುಟ್ಟಿದ ಯಾನ, ಪ್ರಯಾಣ ಶಬ್ದಗಳು ಗತಿಯನ್ನಷ್ಟೇ ಸೂಚಿಸುತ್ತವೆ. ಆದರೆ ಹಳಗನ್ನಡದ ಕೆಲ ಕವಿಗಳು ಬಳಸಿದ ಪ್ರಯಾಣ ಶಬ್ದದ ಅರ್ಥ ತಂಗುವುದನ್ನು ಸೂಚಿಸುತ್ತದೆ. ಉದಾಹರಣೆ :

*ಅಂತವರಿರ್ವರುಂ ಕತಿಪಯ ಪ್ರಯಾಣಂಗಳಿಂ ಸೂರ್ಯಮಿತ್ರ*
*ಭವನದ್ವಾರಮಂ ಪೊಕ್ಕು (ಶಾಂತಿನಾಥ ಕವಿಯ ಸುಕುಮಾರಚರಿತೆ)*

ಮರಾಠಿಯಲ್ಲೂ ಪೇಣಾ ಶಬ್ದವು ಕೆಲಸಂದರ್ಭಗಳಲ್ಲಿ ತಂಗುವುದನ್ನು ಸೂಚಿಸುತ್ತದೆ. ಪ್ರ-ಯಾಣ, ಪ್ರ-ವಾಸ ಶಬ್ದಗಳಲ್ಲಿಯ ಅಂತರ ಇಂದು ಸ್ಪಷ್ಟವಿಲ್ಲ. ಅಂದೂ ಅಸ್ಪಷ್ಟವಾಗಿಯೇ ಇತ್ತೇನೋ?

*ಪಾಹೇಚಾಜ್ ಪೇಣಾಜ್ ಪಾಟವಧಾಜ್ ತಜ್ವ ಆಜೇಚಿ ಹೋಇಜೇ ಸಾವಧಾಜ್*
*ಜೇಉ ನ ನಿಗತಾಜ್ ಓಖಿದಾ ಧಾಜ್ವಿಜೇ ಜೇವಿ (೧೩.೫೪೬)*

ನಾಳಿನ ಪ್ರವಾಸ ಹಾದಿ ಹೊಡೆಯುವವರದು; ಆದಕ್ಕಾಗಿ ಇಂದೇ ಸಾವಧನಾಗುವುದು. ಜೀವ ಹೋಗುವ ಮುನ್ನ(ವೇ) ಔಷಧಕ್ಕಾಗಿ ಓಡಾಡಿದಂತೆ.

*ಐಸಿಯಾ ಏಯಾ ವಾಟಾ ಇಹಿಜ್ ಚಿ ಪೇಣಾ ಸುಭಟಾ*
*ಶಾಂತಿಚಾ ಮಾಜಿವಟಾ ಟಾಕಿಲಾ ಜೇಣೇಜ್ (೧೨.೧೪೨)*

ಇಂತಹ ದಾರಿಯಿಂದ, ಅರ್ಜುನನೇ, ಇದೇ ಪ್ರವಾಸದಿಂದ ಯಾವನು ಶಾಂತಿಯ ಮಧ್ಯಭಾಗಕ್ಕೆ ತಲುಪಿದನೋ-

*ತಥ್ಥೀಜ್ ತೇಯಾಜ್ ಜೇಥ ಜಾಣೇಜ್ ತೇಥಿಚೇಜ್ ಪಹಿಲೇಜ್ ಪೇಣೇಜ್*
*ತೇ ಪಾಹುನು ಯೇ ದಾರುಣೇಜ್ ನವ್ಹಜ್ತಿ ದು:ಖೇಜ್ (೧೬.೪೧೧)*

ಆದ್ದರಿಂದ ಅವರಿಗೆ (ಆ ಅಸುರರಿಗೆ) ಎಲ್ಲಿ ಹೋಗು-

ವದಿದೆಯೋ, ಅಲ್ಲಿಯ ಇದು ಮೊದಲ ಪಯಣವು. ಅದನ್ನು
ಕಂಡಾಗ ಈ (ಇತರ) ದುಃಖಗಳು (ಅಷ್ಟು) ದಾರುಣವಲ್ಲ.

**ಪೇಂಧಾ, ಪೆಣ್ಣ**

ಈ 'ಪೆಣ್ಣ' ಶಬ್ದ ಸಾಕಷ್ಟು ಕುತೂಹಲ ಕೆರಳಿಸುವಂತಹದು. *ತಂಡ ತಂಡದೆ ನೆರೆದಿರ್ದ ಪೆಂಡವಾಸದೊಳ್ಪೆಂಡಿರಂ ಕಂಡು (ಪಂಪಭಾರತ ೪.೮೪)* ಎನ್ನುವಲ್ಲಿ ಕಿಟೆಲ್ಲರು 'ಪೆಂಡವಾಸ'ಕ್ಕೆ 'ರಾಣಿವಾಸ'ವೆಂದು ಅರ್ಥ ಕೊಟ್ಟಿದ್ದಾರೆ. 'ಪೆಂಡ' ಶಬ್ದದ ಅರ್ಥ 'ಹುಡುಗಿ' 'ಸ್ತ್ರೀ' 'ಪತ್ನಿ' ಎಂದಾಗುವುದಾದರೆ ಅದಕ್ಕೆ ಸ್ತ್ರೀಲಿಂಗದರ್ಶಕ 'ತಿ' ಪ್ರತ್ಯಯ (ನೋಡಿರಿ, ಶಬ್ದಮಣಿದರ್ಪಣ ಸೂತ್ರ ೨೯೯) ಹತ್ತಿ 'ಪೆಂಡತಿ' ಆಗುವುದು ಏಕೆ? ಗೌಡದಿಂದ ಗೌಡತಿ, ಪೊಲೆಯದಿಂದ ಪೊಲತಿ, ಚಲುವದಿಂದ ಚಲುವತಿ ಏನೋ ಸರಿಯೇ. ಆದರೆ 'ಪೆಂಡ'ವೆಂದರೆ 'ಗಂಡ' 'ಗಂಡಸು' ಎಂಬರ್ಥವಂತೂ ಅಲ್ಲವೇ ಅಲ್ಲ. ಹಾಗಿದ್ದರೆ ಈ 'ತಿ' ಪ್ರತ್ಯಯದ ಪ್ರಯೋಜನವೇನು? (ಅಥವಾ ಕೆಲಕಡೆಗೆ 'ಪೆಂಡಿ' ಎಂಬ ಪ್ರಯೋಗವೂ ಇದೆ. *ಎನ್ನಿರಿಕಾಳಗಮನುಳಿದು ಪೆಂಡಿರ್ಗಾಳಗಮಂ ಮಾಳ್ಪೆ-ಪಂಪರಾಮಾಯಣ ೧೩.೧೩೮)* ಈ ದೃಷ್ಟಿಯಿಂದ ಜ್ಞಾನೇಶ್ವರೀಯಲ್ಲಿಯ 'ಪೇಂಧಾ' ಶಬ್ದ ಪ್ರಯೋಗದ, ಹಿಂದಿನ, ಮುಂದಿನ ಓವಿಗಳನ್ನು ಓದುವುದು ಇಷ್ಟವಾದೀತು.

*ಪ್ರಕೃತಿ ಪುರುಷಾಂಚೇ ಕುಳವಾಡೀ ಸಾಂಘಿತಾಜ್ ದೇಖೈಜ್ ಅಸಂಘಡೀ*
*ಜೇ ಅಬುಲೀ ಜೋಡೀ ಆಮುಲಾ ಖಾಯೇ (೧೩.೯೭೨) (ಪಾಠಭೇದಃಅಂಬುಲೀ)*
*ಸುಖದುಃಖೇಜ್ ಜಜ್‌ವವೇರ್ಥಿಜ್ ನಿಫಜತಿ ಸಾಚೋಕಾರಿಜ್*
*ತಜ್‌ವ ಪ್ರಕೃತಿ ಉದ್ಯಮು ಕರೀ ಮಗ ಪುರುಷು ಭೋಗೀ (೧೩.೯೭೩)*
*ಆಮುಲೇಯಾ ಆಬುಲಿಯೇ ಸಂಗತಿ ನಾ ಸೋಯೇ*
*ಕಾಜ್ ಆಬುಲೀ ಜಗ ವಿಯೇ ಚೋಜ ಆಇಕಾಜ್ (೧೩.೯೭೪')*
*ಅನಂಗು ಹಾ ಪೇಂಧಾ ನಿಕವಡಾ ನಸುಧಾ*
*ಜೇಣುರ್ಜ ಅತಿವೃದ್ಧಾಪಾಸೌನಿ ವೃದ್ಧು (೧೩.೯೭೫)*
*ತೇಯಾ ಆಡಿನಾಜ್‌ವ ಪುರುಷು ಏರ್ಥವಿಜ್ ಸ್ತ್ರೀ ನಾ ನಪುಂಸಕು*
*ಹೇ ಏಕ ಹೀ ನ್ಹವೇ ಲೋಕು ಪ್ರಕೃತೀ ತವ (೧೩.೯೭೬)*

ಮರಾಠೀ ಭಾಷ್ಯಕಾರರು ಕೊಡುವ ಅರ್ಥ ಹೀಗೆ:

ಪ್ರಕೃತಿ-ಪುರುಷರ ವ್ಯವಹಾರವು ಅಘಟಿತವಾದದ್ದು. ಏಕೆಂದರೆ ಈ ವ್ಯವಹಾರದಲ್ಲಿ ಹೆಂಡತಿ ಗಳಿಸುತ್ತಾಳೆ. ಗಂಡ ಕೂತು ಉಣ್ಣುತ್ತಾನೆ.
ಸುಖದುಃಖಗಳು ನಿಜವಾಗಿಯೂ ಉತ್ಪನ್ನಗೊಂಡಾಗ ಪ್ರಕೃತಿ ಉದ್ಯೋಗರತಳಾಗುತ್ತಾಳೆ. ಬಳಿಕ ಪುರುಷನು ಅದನ್ನು ಭೋಗಿಸುತ್ತಾನೆ.
ಪ್ರಕೃತಿ ಪುರುಷರಿಗೆ ಗಂಡಹೆಂಡಿರ ಸಂಬಂಧವೂ ಇಲ್ಲ.

> ಪರಿಚಯವೂ ಇಲ್ಲ. ಆದರೆ ಹೆಂಡತಿ ಜಗತ್ತನ್ನು ಪ್ರಸವಿಸುತ್ತಾಳೆ. ಈ ಸೋಜಿಗ ಕೇಳು.
> ಏಕೆಂದರೆ ಅವನು (ಪುರುಷ) ಅಂಗಹೀನ (ನಿರಾಕಾರ). ಹೆಳವ, ದ್ರವ್ಯಹೀನ ಒಬ್ಬಂಟಿಗ, ಹಳಬ, ಅತಿಮುದುಕರಿಗಿಂತ ಮುದುಕ. ಅವನ ಅರ್ಧ ಹೆಸರು ಪುರುಷ. ವಸ್ತುತಃ ಅವನು ಸ್ತ್ರೀ ಅಲ್ಲ. ನಪುಂಸಕನೂ ಅಲ್ಲ. ಅಥವಾ ಹೀಗೆಯೇ ಎಂದು ನಿಶ್ಚಿತವಾಗಿ ಹೇಳಲೂ ಆಗುವುದಿಲ್ಲ.

ಈ ವ್ಯಾಖ್ಯಾನದಲ್ಲಿ ಬಂದ ಮಹತ್ವದ ಶಬ್ದಗಳನ್ನು ಅರ್ಥಯಿಸಿದ್ದು ಈ ರೀತಿಯಾಗಿ: ಆಂಬುಲಿ-ಹೆಂಡತಿ. ಆಮುಲಾ-ಗಂಡ. ವೇಂಧಾ-ಹೆಳವ ಇವಕ್ಕೆ ಯಾವ ಆಧಾರವೂ ಇಲ್ಲ. ಈ ಸಂದರ್ಭದಲ್ಲಿ ಹಳಗನ್ನಡದಲ್ಲಿಯ 'ಅಮ್ಮ' ಶಬ್ದ ನೋಡಬಹುದು. *ನಿಮ್ಮಮ್ಮಂ ಬಿಸುಡಲ್ವೇಳ್ದನಪ್ಪೊಡೆ (ವಡ್ಡಾರಾಧನೆ ೧೩.೧೫) ಇದಲ್ತಿದರಿಮ್ಮಸುಮೆನ್ನನಾಮ್ಪುದೇ (ಪಂಪಭಾರತ ೧೧.೭೩)* ಇವುಗಳಲ್ಲಿ 'ಅಮ್ಮ' ಶಬ್ದವು 'ತಂದೆ' ಎಂದರ್ಥದಲ್ಲಿ ಬಳಸಲಾಗಿದೆ. ಇಂದಿಗೂ 'ತಾಯಿ' ಎಂದರ್ಥದಲ್ಲಿ ಬಳಸಲಾಗುವ ಅಮ್ಮ ಶಬ್ದಕ್ಕೆ ಆಗಲೂ 'ತಾಯಿ' ಎಂಬರ್ಥವಿತ್ತು. (ಶಬ್ದಮಣಿದರ್ಪಣ ಸೂತ್ರ ೧೩೨) ಇದೇ 'ಅಮ್ಮ' ಶಬ್ದ 'ತಾಯಿ' 'ತಂದೆ' ಅರ್ಥಗಳಲ್ಲಿ ಮರಾಠಿಗೆ ಹೋಗಿದೆಯೆಂದು ನನ್ನ ಅನಿಸಿಕೆ. ಲಿಂಗಭೇದ ಸೂಚಿಸುವುದಕ್ಕಾಗಿ ಇತರ ವಿಶೇಷಣಗಳಲ್ಲಿಯಂತೆ (ಉದಾ:ಚಾಂಗಲಾ-ಚಾಂಗಲೀ ಆಗಳಾ-ಆಗಳೀ, ಧಾಕಲಾ-ಧಾಕಲೀ ಇತ್ಯಾದಿ) ಲಾ-ಲೀ ಪ್ರತ್ಯಯಗಳನ್ನು ಹಚ್ಚಲಾಗಿದೆ. ಹೀಗೆ ಆಂಬುಲೀ ಅಂದರೆ 'ತಾಯಿ', ಆಂಬುಲಾ (ಆಮುಲಾ) ಎಂದರೆ 'ತಂದೆ', ಇಂತು ಶಬ್ದಗಳು ಸಿದ್ಧವಾಗಿವೆ.

ಇನ್ನು 'ವೇಂಧಾ' ಶಬ್ದವಿಚಾರ. 'ಅನಂಗು ಹಾ ವೇಂಧಾ'. ಇದರಲ್ಲಿ 'ಹೆಣ್ಣು' ಅರ್ಥದ 'ವೇಂಧಾ' ಶಬ್ದ ಪುಲ್ಲಿಂಗೀ, 'ಏರ್ಹವೀ ಸ್ತ್ರೀ ನಾ ನಪುಂಸಕು' ಅಂದರೆ 'ಹೆಣ್ಣು' ಹೆಣ್ಣಲ್ಲ, ನಪುಂಸಕವೂ ಅಲ್ಲ. ಗಂಡಂತೂ ಅಲ್ಲವೇ ಅಲ್ಲ! ಎಂದು ಅನಿಸಬಹುದಾದರೂ 'ಏರ್ಹವೀ' ಶಬ್ದ ಇಲ್ಲಿ ಮಹತ್ವ ಪಡೆಯುತ್ತದೆ. ಈ ಶಬ್ದದ ಅರ್ಥ 'ಇಲ್ಲದಿದ್ದರೆ' (ಜ್ಞಾ. ೬.೩೯೨) 'ಹಾಗೆ ನೋಡಿದರೆ' (ಜ್ಞಾ.೧೩೯೬೬).

ಹೀಗಾಗಿ 'ಪೆಂಡ' ಶಬ್ದಕ್ಕಾಗಿ ಉಳಿಯುವ ಅರ್ಥ ಒಂದೇ. ಅದೆಂದರೆ ಪೆಂಡ ಅಂದರೆ ಗಂಡಸು. ಹೀಗಾಗಿ 'ಅನಂಗು ಹಾ ವೇಂಧಾ'ಗೆ ಈ ಪುರುಷನು ನಿರಾಕಾರನು ಎಂದೇ ಅರ್ಥ ಹಚ್ಚುವುದು ಸಮಂಜಸವಾಗುತ್ತದೆ.

**ಪೋಟ, ಪೊಟ್ಟೆ, ಪೊಡೆ, ಹೊಟ್ಟೆ**

'ಕುಕ್ಷಿ' ಅರ್ಥದಲ್ಲಿಯ 'ಪೊಡೆ' ಶಬ್ದ 'ಪೊಟ್ಟೆ' ಯಾಗಿಯೂ ಹಳಗನ್ನಡದಲ್ಲಿ ಬಳಸಲಾಗಿದೆ. ಇದರಿಂದ ಸಿದ್ಧವಾದ ಒಂದು ಹಳಗನ್ನಡ ಶಬ್ದ 'ಪವಡಿಸು'. ವಾಮಕುಕ್ಷಿಯನ್ನು ಸೂಚಿಸುವ ಈ ಶಬ್ದ 'ಪಹುಡಣೇಜ್' ಆದುದನ್ನು ಬೇರೆತ ವಿವರಿಸಿದ್ದೇನೆ. ಇನ್ನೊಂದು, 'ಪೊಡಮಡು' 'ಪೊಡವಡು'. ಇದಕ್ಕೆ 'ಕೈಜೋಡಿಸಿ

ನಮಸ್ಕರಿಸು' ಎಂದಾಗಿ ಮರಿಯಪ್ಪ ಭಟ್ಟನವರು ಅರ್ಥ ಹಚ್ಚಿದ್ದಾರೆ. ಇದನ್ನು ಅವರು ಬಹುಶಃ ಪೊಡ (ದ್ಭ)ದಿಂದ ಸಾಧಿಸಿರಬೇಕು. ಬಂದು ಪೊಡೆವಟ್ಟು *ಕಂಡಿಂತೆಂದಂ ಪಂಪಭಾರತ (೫.೩೭)* ಬೇಟೆಯ ಸಂದರ್ಭದಲ್ಲಿ ಬೇಡನೊಬ್ಬ ಅರ್ಜುನನ್ನು ಕಂಡ ಪ್ರಸಂಗವಿದು. ಆದುದರಿಂದ 'ಪೊಡೆ'ಯನ್ನು ನೆಲಕ್ಕೆ ಹಚ್ಚಿದ (ಪ್ರಣಿಪಾತ) ನಮಸ್ಕಾರ ಅರ್ಥದಲ್ಲಿ 'ಪೊಡೆವಡು' ಶಬ್ದ ಬಳಸಿರಬೇಕೆಂದು ನನ್ನ ಅನಿಸಿಕೆಯಾಗಿದೆ.

'ಪೊಡೆ' ಶಬ್ದ 'ಪೊಟ್ಟೆ'ಯಾಗಿ ಮುಂದೆ 'ಪೋಟ' ಆಗಿ ಮರಾಠಿಗೆ ಹೋಗಿದೆ. ಜ್ಞಾನೇಶ್ವರೀಯಲ್ಲಿ ಉದಾಹರಣೆಗಳು.

*ಚಂದ್ರ ದೇಖೌನಿ ಪೋಟೀಜ್ ಜಳೇಜ್ ಕೋಲ್ಹಾ ಜೈಸಾ (೧೬.೨೩೬)*
*ಶಬ್ದಶಃಅರ್ಥ.*

ಚಂದ್ರನನ್ನು ನೋಡಿ ನರಿಯು ಹೊಟ್ಟೆಯಲ್ಲಿ ಸುಟ್ಟಂತೆ.

ಚಂದ್ರನಲ್ಲಿಯ ಕುಂದು ಮೊಲದ ಆಕಾರದ್ದೆಂದು ಅವನಿಗೆ 'ಶಶಾಂಕ' ಎಂದು ಹೆಸರು. ಆ ಮೊಲ ನರಿಯ 'ಬೇಟೆ'. ಅದು ದೊರೆಯದುದಕ್ಕೆ ನರಿಗೆ 'ಪೋಟೀಜ್ ಜಳೇಜ್'. 'ಹೊಟ್ಟೆಕಿಚ್ಚು' ಕನ್ನಡದ ಈ ಪಡೆನುಡಿಯನ್ನು ಜ್ಞಾನೇಶ್ವರರು ಅರ್ಥಪೂರ್ಣವಾಗಿ ಬಳಸಿದುದನ್ನು ಗಮನಿಸಬೇಕು.

*ಜೈಸೇ ಪೋಟ ಪೋಸಿ ಸುಣೇಜ್ (೧೩.೬೭೮)*

ನಾಯಿಯು ಹೊಟ್ಟೆ ಹೊರೆಯುವಂತೆ.

*ಪರಿ ನಿವಟಲೇಯಾಚೇಜ್ ಜೈಸೇಜ್ ಪೋಟ ನ ದುಖೇ (೮.೧೫೦)*

ನೀವಿದ ಬಳಿಕ ಹೊಟ್ಟೆ ನೋಯುವುದಿಲ್ಲ ಹಾಗೆ-

*ಕೆಸ್ಸೆಗಳನೊಯ್ಯನೆ ನೀವುವ (ಪಂಪಭಾರತ ೩.೭೭)* ಎನ್ನುವಲ್ಲಿ ಬರುವ 'ನೀವು' ಶಬ್ದ 'ನಿವಟಣೇ' ಆಗಿ ಹೋದದ್ದನ್ನು ಗಮನಿಸದ ಮರಾಠಿ ಪಂಡಿತರು ಈ ಸಾಲಿನ ಅರ್ಥವನ್ನು 'ಸತ್ತಬಳಿಕ ಹೊಟ್ಟೆ ನೋಯುವುದಿಲ್ಲ'' ಎಂದು ಹಚ್ಚಿದ್ದಾರೆ!

**ಪೋಫಳ ಫೋಡನಾ, ಅಡಕೊತ್ತು**

ಅಡಕೆ ಒಡೆಯುವುದಕ್ಕೆ ಬೇಕಾಗುವ ಸಾಧನ 'ಅಡಕೊತ್ತು'. ಇದು 'ಅಡಕೆ+ಒತ್ತು' ಹೀಗೆ ಸಿದ್ಧವಾಗಿರಬಹುದೇನೋ ಎಂದು ಕಿಟೆಲ್ ಶಂಕಿಸಿದ್ದಾರೆ. ಸರಿಯಾದ ಶಬ್ದಸಿದ್ಧಿ 'ಅಡಕೆ+ಕೊತ್ತು' ಎಂದಿರಬೇಕೆಂಬುದನ್ನು ರೂಪಾಂತರಗೊಳಿಸಿ ಲೀಳಾಚರಿತ್ರದಲ್ಲಿ ಬಳಸಲಾದ 'ಪೋಫಳ ಫೋಡನಾ' ಶಬ್ದ ಸ್ಪಷ್ಟಗೊಳಿಸುತ್ತದೆ. ಅಡಕೆಗೆ ಮರಾಠೀ ಶಬ್ದ ಪೋಫಳ (ಪೂಗೀಫಳದಿಂದ). 'ಪೋಫಳಫೋಡನಾ'ದ ಪ್ರಯೋಗಗಳು ಹೀಗೆ. (ಲೀಳಾಚರಿತ್ರದಲ್ಲಿ)

*ಬಾಇಸೀಜ್ ಮ್ಹಣಿತಲೇಜ್: 'ಬಾಬಾ ವೇಚಾವೇಯಾಜ್ ಕಾಜ್‌ಹೀಚಿ ನಾಹೀಜ್; ಸರ್ವಜ್ಞೇ ಮ್ಹಣಿತಲೇಜ್; ಪೋಫಳ ಫೋಡನಾ ಗಾಹಾಣ ಠೇವಾಃ (ಪೂರ್ವಾರ್ಧ ೩೮)*

ನಾಗೂಬಾಯಿ ಹೇಳಿದಳು : 'ಅಪ್ಪಾ, ಪೆಟ್ಟಿಕ್ಕೆ ಏನೂ ಇಲ್ಲ.
ಚಕ್ರಧರಂದರು ಅಡಕೊತ್ತು ಅಡವು ಇಡಿರಿ:

ಮೇಲಿನ ಪ್ರಸಂಗ ಅಷ್ಟಿ ಊರಲ್ಲಿ ಆಯಿತು. ಮುಂದೆ ಡೋಂಪೇ ಗ್ರಾಮದಲ್ಲೂ ಇದೇ ಕತೆ.!

*ಮಗ ಪೋಫಳ ಫೋಡನಾ ಗಾಹಾಣ ಠೇವಿಲಾ : ವೇಜು ಆಣಿಲಾ; ಉಪಾಹಾರು ನಿಫಜವಿಲಾ : ಆರೋಗಣಾ ಜಾಲೀ (ಪೂರ್ವಾರ್ಧ ೮೭)*

ಬಳಿಕ ಅಡಕೊತ್ತು ಅಡವಿಟ್ಟರು; ವೆಚ್ಚ (ಕ್ಯಾಗಿ ಹಣ) ತಂದರು.
ಉಪಾಹಾರ ಬೇಯಿಸಿದರು : ಆರೋಗಣೆಯಾಯಿತು.

**ಫೇಡಣೇಜ್ - ವೇಱು-ಪೀಱು-ಕಳೆ ಕಳಚು**

'ವಿಕೀರ್ಯೇ' ವಿಕೀರ್ಯವೆಂದು ಚೆಲ್ಲೂದು' ಎಂಬುದಾಗಿ ಕೇಶಿರಾಜನು ಅರ್ಥೈಸುವ 'ಪೇಱು', 'ಪೀಱು' ಧಾತು, ನಾವು ನಡುಗನ್ನಡ ಹೊಸಗನ್ನಡದಲ್ಲಿ ಬಿಟ್ಟ ಒಂದು ಒಳ್ಳೆಯ ಶಬ್ದ. ಇದರಿಂದಾದ ಪೆಱ (ಹೆರ), ಪೆಡ ಶಬ್ದಕ್ಕೆ ಹಿಂದಿನ, ಭಿನ್ನ, ಬೇರೆ ಅರ್ಥಗಳನ್ನು ಕಲ್ಪಿಸಿ, ಅವನ್ನು ಮಾತ್ರ ಉಳಿಸಿಕೊಂಡಿದ್ದೇವೆ. *ನರನೆಂಬಾತಂ ಪೆಱನಲ್ಲ, ಈತನಾಗಲ್ವೇೞ್ಕು (ಶಬ್ದಮಣಿದರ್ಪಣ ಸೂತ್ರ ೧೬೩) ಇವಂ ಪೆಱನೆಂದಱವನೆರ್ದೆ ಪಡಿದೆಱಪಿನಂ (ಪಂಪರಾಮಾಯಣ ೧೦.೮)* ಇತ್ಯಾದಿಯಾಗಿ ನಮಗೆ ಹಳಗನ್ನಡದಲ್ಲಿಯ 'ಪೆಱ' ಶಬ್ದದ ಉದಾಹರಣೆಗಳು ದೊರೆಯುತ್ತವೆ.

ಈ 'ಪೇಱು' ಧಾತು ಮರಾಠಿಯಲ್ಲಿ 'ಫೇಡ' ಆಗಿ ಲೀಳಾಚರಿತ್ರ ಜ್ಞಾನೇಶ್ವರೀಗಳಲ್ಲಿ ಬಳಸಲಾಗಿದೆ. ಇಂದಿಗೂ ರೂಢಿಯಲ್ಲಿದೆ. ಮರಾಠೀ ಪಂಡಿತರು ಈ ಧಾತುವನ್ನು ಸಂಸ್ಕೃತದ 'ಸ್ಫಿಟ್' ದಿಂದ ಸಾಧಿಸಲು ಯತ್ನಿಸಿದರು. ಇವುಗಳಲ್ಲಿ ಉಚ್ಚಾರ ಸಾದೃಶ್ಯವಿದೆ, ಅಷ್ಟೇ. 'ಸ್ಫಿಟ್'ದ ಅರ್ಥ ಹಿಂಸಿಸು, ತಿರಸ್ಕರಿಸು, ಪ್ರೀತಿಸು ಮತ್ತು ಮುಚ್ಚು ಎಂದು ಕೋಶಕಾರ ಅಷ್ಟೇ ಹೇಳುತ್ತಾರೆ. ಮರಾಠಿಯಲ್ಲಿಯ ಪ್ರಯೋಗಗಳು:

ಜ್ಞಾನೇಶ್ವರಿಯಲ್ಲಿ

*ಜೋ ದೃಷ್ಟಿಸವೇಜ್‌ಚಿ ವಿಷ ಫೇಡೀ (೨.೭೨)*

ಯಾವನು ದೃಷ್ಟಿಯಿಂದಲೇ ವಿಷ ಕಳೆಯುತ್ತಾನೋ (ಆ ಶ್ರೀಹರಿಯು)

'ಫೇಡ' ಭೂತಕಾಲದಲ್ಲಿ ಫೀಟ್, ಫಿಟ ಆಗುತ್ತದೆ. ಇಲ್ಲಿ ನೋಡಿರಿ.

*ತೇಯಾ ಅನಾಹತಾಚೇನಿ ಮೇಘೇಜ್ ಮಗ ಆಕಾಶ ದುಮುದುಮೂಜ್
ಲಾಗೇ ತಜ್‌ವ ಬ್ರಹ್ಮಸ್ಥಾನೀಚೇಜ್ ಬೇಗೇಜ್ ಫೀಟೇ ಸಾಹಾಜೇಜ್ (೬.೨೭೯)*

ಆ ಅನಾಹತದ ಮೋಡಗಳಿಂದ ಆಕಾಶವು ಗದ್ದರಿಸ-ತೊಡಗುತ್ತದೆ. ಆಗ ಬ್ರಹ್ಮಸ್ಥಾನದಲ್ಲಿಯ ಬೇಗೆಯು ಸುಲಭವಾಗಿ ಕಳೆಯುತ್ತದೆ (ಆರುತ್ತದೆ.)

ಇಲ್ಲಿ ಬಳಸಿದ 'ಬೇಗೆ' ಕನ್ನಡ ಶಬ್ದ. ಘೋರ ಕಾಂತಾರಮನೊಂದು ಬೇಗೆ ಪರಿವಂತು ಎಂದು ಪಂಪಭಾರತದಲ್ಲಿ (೮.೯೮) ಪ್ರಯೋಗ ಬರುತ್ತದೆ. 'ಬೇಗೆ'ಯ ಅರ್ಥ ತಿಳಿಯದೆ, ದಾಂಡೇಕರರು ಅದನ್ನು 'ಬೀಗ'ಕ್ಕೆ ಹಚ್ಚಿ ಬ್ರಹ್ಮಸ್ಥಾನದ ದ್ವಾರವು ತನ್ನಿಂದತಾನೇ ತೆರೆದುಕೊಳ್ಳುತ್ತದೆ ಎಂದು ವಾಖ್ಯಾನಿಸಿದ್ದಾರೆ!

*ಹೇಜ್ ಅಂತರೌನಿ ಜರಿ ಫೀಟಲೇ (೩.೨೬೫)*

ಇವು (ಇಂದ್ರಿಯಗಳು) ಅಂತಃಕರಣದಿಂದ ಕಳೆದುವೆಂದರೆ-

*ತರಿ ಫೀಟೋ ಕರ್ಮಾಚಾ ಪಾಂಗು (೧೮.೯೮)*

ಕರ್ಮದ ಹಂಗು ಕಡಿಯಲೆಂದು-

*ನ ಫೇಡಿತಾಜ್ ರಿಣ ಜೈಸೇಜ್ ವೋಸಂಡೀ ನಾ (೧೮.೧೦೨)*

ಸಾಲ ಕಳೆಯದೆ ಬಿಡುಗಡೆಯಿಲ್ಲ ಹಾಗೆ-

*ಕಾಳೇಗೋರೇಪಣ ಧೂತಲೇಜ್ ಫಿಟೋ ನೇಣೇ (೧೮.೧೦೧)*

ಕರಿಬಿಳಿತನಗಳನ್ನು (ಮೈಬಣ್ಣಗಳನ್ನು) ತೊಳೆದು ಕಳೆಯಲಾಗುವುದಿಲ್ಲ.

ಲೀಳಾಚರಿತ್ರದಲ್ಲಿ:

*ಮಾರ್ಗೀ ನದೀ ಉತರತಾಜ್ ಉಪಾಹಾನೌ ಫೇಡಿಲೀಯಾ (ಏಕಾಕ ೭೩)*

ದಾರಿಯಲ್ಲಿ ನದಿ ದಾಟುವಾಗ ಪಾದತ್ರಾಣಗಳನ್ನು ಕಳಚಿದರು.

ಸಂಸ್ಕೃತದಲ್ಲಿ 'ಉಪಾನಹ್' ಇದು ಸ್ತ್ರೀಲಿಂಗಿ ಶಬ್ದ. ಅದರ ದ್ವಿತೀಯಾ ದ್ವಿವಚನ ರೂಪ 'ಉಪಾನಹೌ'ಎಂಬುದೇನೋ ನಿಜ. ಆದರೆ ಮರಾಠಿಯಲ್ಲಿ ದ್ವಿವಚನವಿಲ್ಲದ್ದರಿಂದ ಇಲ್ಲಿ 'ಉಪಾಹಾನೌ' ರೂಪವನ್ನು 'ಉಪಾಹಾನವ' ಎಂದಾಗಿ ಕನ್ನಡದ ದ್ವಿತಿಯಾಭಾವದ ಷಷ್ಠಿಯ ರೂಪವೆಂದು ಭಾವಿಸುವುದೇ ಸರಿಯಾದೀತು.

*ತೇಥಃ ಗೋಪಾಳ ಆಲೇ; ಏರೂ ಏ : ಆಪೂಲಿಯಾ ವಾಹಾಣ ಫೇಡಿಃ*

ಅಲ್ಲಿ; ದನಗಾಹಿಗಳು ಬಂದರು; ಯಾರಾರೋ ಬಂದರು; ತಮ್ಮ ಪಾದತ್ರಾಣ ಕಳಚಿದರು.

**ಫೂಟಣೇಜ್ ಫುಟಣೇಜ್ ಒಡೆ**

ಹಳಗನ್ನಡದಲ್ಲಿ ಒಡೆ ಧಾತು ಹೆಚ್ಚಾಗಿ ಸ್ಫೋಟನ ಅರ್ಥದಲ್ಲಿ ಬಳಸಲಾಗಿದೆ. ಬಡಿಯೋಳ್ ನಿಜತನಯನ ತಲೆಯೊಡೆಪಿನೆಗಂ ಬಡಿದ ಕಾರಣಂ ಕೊಣ್ಣುಯ್ವರ್ (ಆದಿಪುರಾಣ ೫.೨೦) ಇದೊಂದು ಉದಾಹರಣೆ. ಸಸ್ಯಗಳಲ್ಲಿ ಕುಡಿ, ಟೊಂಗೆ, ಟಿಸಿಲು, ಮೊಗ್ಗೆ, ಬೇರುಗಳು ಹೊಸತಾಗಿ ಮೂಡಿದಾಗ ಅಲ್ಲೂ ಒಡೆ ಧಾತು ಬಳಸಲಾಗಿದೆ. ಹಿಳ್ಳಿ ಒಡೆದು ಬೆಳೆವ ತೃಣಧಾನ್ಯಂಗಳು ಎಂಬುದಾಗಿ ನಚಿರಾಚಿಯದಲ್ಲಿ ಈ ಬಗ್ಗೆ ಉದಾಹರಣೆ ದೊರೆಯುತ್ತದೆ.

ಮರಾಠಿಯಲ್ಲಿ ಕೂಡ ಸ್ಫುಟ್ (ಸಂ) ಧಾತುವಿನಿಂದ ಫುಟ ಧಾತು ಸಿದ್ಧವಾಗಿದೆ. ಇದಕ್ಕೂ ಸರ್ವೇಸಾಮಾನ್ಯವಾಗಿ ಸ್ಫೋಟನದ್ದೇ ಅರ್ಥ. ಆದರೆ

ಜ್ಞಾನೇಶ್ವರೀಯಲ್ಲಿಯ ಪ್ರಯೋಗ ಮಾತ್ರ ಕುಡಿ ಒಡೆ ಅರ್ಥದಲ್ಲಿ.

*ತೋ ಶಿವಣಾ ಅಧೋಮುಖು ಡಿರುಫುಟೇ (೧೫.೯೪)*

ಅದಕ್ಕೆ ಮೂರಲೆಗಳ ಕೆಳಮೋರೆಯ ಟೊಂಗೆ ಒಡೆಯುತ್ತದೆ.

*ದೇಹಾಂಕುರಿಜ್ ಬಹುವಿಜ್ ಫುಟೇ (೧೫.೧೩೧)*

ಅನೇಕ ದೇಹಾಂಕುರಗಳು ಒಡೆಯುತ್ತವೆ.

*ತಿಯಾ ಆಡಫುಟತೀ ಫಳಿಜ್ ಸ್ವರ್ಗಾದಿಕಿಜ್ (೧೫.೧೯೧)*

ಅದಕ್ಕ ಸ್ವರ್ಗಾದಿ ಫಲಗಳಿಂದ (ಯುಕ್ತವಾದ) (ಟೊಂಗೆಗಳು)
ಅಡ್ಡ ಒಡೆಯುತ್ತವೆ.

*ನೇಣೋಜ್ ಕೈಸೇಜ್ ವಸಂತಸಂಗೇಜ್ ಆವಚಿತಿಜ್ ಝಾಡಾಂಚಿಜ್ ಅಂಗೇಜ್ ಫುಟತಿ (೧೮.೧೫)*

ವಸಂತಋತು ಬಂದೊಡನೆ ಒಮ್ಮೆಲೆ ಗಿಡಗಳಿಗೆ ಅದು ಹೇಗೆ
ಕುಡಿಗಳು ಒಡೆಯುತ್ತವೆಯೋ, ತಿಳಿಯದು.

**ಬಗೆ-ಬಗೆ, ಪದ್ಧತಿ, ರೀತಿ**

*ಪಸರಿಸಿದಾ ಬಗೆ ಮನದೊಳ್ ಪೊಸತಾಗೆ (ಕವಿರಾಜಮಾರ್ಗ ೧. ೧೨) ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದು (ಪಂಪಭಾರತ ೧.೮)*

ಹೀಗೆ 'ರೀತಿ', 'ಪದ್ಧತಿ' ಅರ್ಥದಲ್ಲಿ 'ಬಗೆ' ಶಬ್ದವು ಹಳಗನ್ನಡದಲ್ಲಿ ಪ್ರಯುಕ್ತವಾಗಿದೆ.

ಹಳಗನ್ನಡದ ಈ ಶಬ್ದವನ್ನು ಯಾವ ಮಾರ್ಪಾಟೂ ಇಲ್ಲದೆ ಬೇರೆ ಬೇರೆ ಅರ್ಥಗಳಲ್ಲಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ.

*ಪರಿ ತೇಜ್ ಯೇಕ ಬಗ ಥೋಡೇಜ್ (೧೧.೩೯೯)*

ಇದೊಂದು ರೀತಿಯಿಂದ ಸ್ವಲ್ಪವೇ (ಆಯಿತು).

*ತೈಸಾ ಸೈನ್ಯಾಚಾ ಏಯಾ ಬಗಾ (೧೧.೪೬೩)*

ಆದರಂತೆ ಸೈನ್ಯದ ಈ ಪ್ರಕಾರವನ್ನು-

*ಜಾಣಿಜೇ ಆಚರತೇನಿ ಬಗೆಜ್ (೧೩.೨೪೩)*

ಆಚರಿಸುವ ರೀತಿಯಿಂದ ತಿಳಿಯುತ್ತದೆ.

*ಜ್ಞಾತೇಯಾ ಜ್ಞೇಯಾ ದೋಘಾಜ್ ತೋ ನಾಂದಣುಕೇಚಾ ಬಗಾಮಾಜಿ (೧೮.೪೬೬)*

ಜ್ಞಾತಾ ಜ್ಞೇಯ ಇವೆರಡರ ಸಂಬಂಧದ ರೀತಿಯಲ್ಲಿ-

*ತೇ ನಿಸ್ತರೇ ಲಗಬಗಾ ಖಳಾಳಾಂಚೀ (೧೪.೩೫೦)*

ಅದು (ಗಂಗಾನದಿಯು) ಖಳಖಳಪ್ರವಾಹವನ್ನು ಲಗುಬಗೆ-
ಯಿಂದ ಮುಗಿಸಿತು.

*ಖಳಾಳಾಂಚೇಯಾಜ್ ಲಗಬಗಿಜ್ ಫೇಡೌನಿ (೧೫.೩೫೪)*

ಖಳಖಳ ಪ್ರವಾಹದ ಲಗುಬಗೆಯನ್ನು ಕಳೆದು-

*ರವೀ ದೂಜೇಪಣ ಆಲೇಜ್ ತೋಯಬಗೇಜ್ (೧೫.೩೦೬)*
ನೀರಿನೊಡನೆ ಸಂಬಂಧದಿಂದಾಗಿ ರವಿಗೆ ಎರಡನೆಯ ರೂಪು ಬಂದಿತು.
*ಆಣಿಕ ವೈಜ್ ದೈವಬಗೇಜ್ ದೇಖತಿ ಸಾಂಖ್ಯಯೋಗೇಜ್ (೧೩.೧೦೩೪)*
ಕೆಲವರು ದೈವವಶಾತ್ ಸಾಂಖ್ಯಯೋಗದಿಂದ (ಆತ್ಮನನ್ನು) ಕಾಣುತ್ತಾರೆ.
*ಸಂತೇಜ್ ಚಿ ಕರ್ಮೇಜ್ ಚಾಂಗೇಜ್ ಚಾಲೀಲಿಜ್ ಅಧಿಕಾರಬಗೇಜ್ (೧೭.೩೫೮)*
ಒಳ್ಳೆಯ ಕರ್ಮಗಳು (ತಮ್ಮ ತಮ್ಮ) ಅಧಿಕಾರದ ರೀತಿಯಲ್ಲಿ ನಡೆಯುತ್ತಿದ್ದರೂ-
*ಕಾಜ್ ಗಂಗಾಯಮುನಾ ಉದಕ ವೋಘಬಗೇಜ್ ವೇಗಳೀಕ (೧೮.೫೧)*
ಗಂಗಾ ಯಮುನಾ (ನದಿಗಳ) ನೀರುಗಳು ಪ್ರವಾಹದ ರೀತಿಯಲ್ಲಿ ಬೇರೆಯಾಗಿಯೂ
*ಫೇಟಿಜ್ ಜಾಜ್‌ತಾಜ್ ಬೋಲಬಗೇ (೧೮.೭೬೬)*
ಶಬ್ದ (ರೂಪ)ದ ಪದ್ಧತಿಯಿಂದ ತೆಗೆದುಕೊಳ್ಳಲು ಹೋದರೆ-

**ಬರವ, ಬರವಜ್‌ಟ, ಬರಂ ಚೆನ್ನಾದುದು**

ಸಂಸ್ಕೃತ ವ ಕಾರಾದಿ ಶಬ್ದಗಳು ಮರಾಠಿಯಲ್ಲಿ ಬರುವಾಗ 'ಕೆಲವೆಡೆ ಮಾತ್ರ' ಬ ಕಾರಾದಿಯಾಗುತ್ತವೆಯೆಂದು ಹೇಳಿದ ತುಳಪುಳೆಯವರು ಬರಜ್‌ವ, ಬಲ್ಲಾಳ, ಬನಕರ, ಬಾವೀ, ಬಾಸೀ, ಬಾಸಟು ಮತ್ತು ಬೀಜೇ ಹೀಗೆ ಎಂಟು ಉದಾಹರಣೆಗಳನ್ನು ಮಾತ್ರ ಕೊಡುತ್ತಾರೆ.[20] ಇದು ಸರಿಯಲ್ಲ. ಇವೆಲ್ಲ ಶಬ್ದಗಳು-ಸಂಸ್ಕೃತದಿಂದ ಕನ್ನಡಕ್ಕೆ ಕೆಲವು ತದ್ಭವವಾಗಿ ಬಂದಿದ್ದರೂ-ಕನ್ನಡದಿಂದಲೇ ಮರಾಠಿಗೆ ಹೋಗಿವೆ. ವ > ಬ ಇದು ಮರಾಠೀ ಶಬ್ದಸಿದ್ಧಿಯ ನಿಯಮಗಳಲ್ಲಿ ಕೂಡ್ರುವದಿಲ್ಲ.

ಸಂಸ್ಕೃತದ 'ವರಂ' ಹಳಗನ್ನಡದಲ್ಲಿ 'ಬರಂ' ಆದುದನ್ನು ಈ ಉದಾಹರಣೆ ಸ್ಪಷ್ಟಪಡಿಸುತ್ತದೆ. ಜಸಮಾ ಪಾಂಡುರಮಾದುದಾ ನೃಪರೊಳಾರಾ ಪಾಂಡುರಾಜಂ *ಬರಂ (ಪಂಪಭಾರತ ೧.೧೧೦)*

ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳಿವು

*ಸಾಹಿತ್ಯಾಚಿಯಾ ಬರವಾ (೬.೧೩)* ಒಳ್ಳೆಯ ಸಾಹಿತ್ಯದ್ದು.
*ಆಪುಲಿಯೇ ಬರವೇ ಆಪಣಚಿ ರಿಘುತಿ ಜೀವೇಜ್ (೧೬.೩೭೮)*
ತಮ್ಮ ಒಳ್ಳೆಯತನದಿಂದ ತಾವೇ ಮನಸ್ಸಿನಲ್ಲಿ ಸಂತುಷ್ಟರಾಗಿ (ಇದು ವ್ಯಾಖ್ಯಾನಕಾರರ ಅರ್ಥ)
ತಮ್ಮದೇ ಒಳ್ಳೆಯದೆಂದು ತಾವೇ ಮನಸ್ಸಿನಲ್ಲಿ ಸಂತುಷ್ಟರಾಗಿ (ಇದು ನಾನು ಹಚ್ಚಿದ ಅರ್ಥ)

20. ಯಾದವಕಾಲೀನ ಮರಾಠೀ ಭಾಷಾ ಪು. ೧೭೧

ಮುಂದಿನ ಸಾಲು ಹೀಗೆ :

(ಉಳಿದೆಲ್ಲವನ್ನು ಹುಲ್ಲಿಗಿಂತ ಕಡೆಯೆಂದು ಭಾವಿಸುತ್ತಾರೆ.)

*ಜೇಜ್ ಏಸೇಜ್ ಮಾನೇಜ್ ಬರವಜ್‌ಟ (೬.೧೭೧)*

ಇಂತು ಯಾವುದು ಚೆನ್ನಾದುದೆಂದೆನಿಸುವುದೋ-

*ಮಗ ಅಳಂಕಾರೀಜ್ ಬರವೇಪಣ (೧.೪೪)*

ಬಳಿಕ ಅಲಂಕಾರ (ರೂಪ)ದಲ್ಲಿ ಸೌಂದರ್ಯವನ್ನು

*ತೇಯಾ ಪಾಸೌನಿ ಹೇಜ್ ಬರವೇಜ್ (೧.೨೬೪)*

ಅದಕ್ಕಿಂತ ಇದು ಒಳ್ಳೆಯದು

ಇದಿಷ್ಟು ವಿವೇಚನೆ 'ಬರಜ್‌ವ'ದ ಬಗ್ಗೆ ಸಾಕು. 'ಬಲ್ಲಾಳ' ಇದು 'ಬಲ್ಲಿತ್ತು ಆಳ' ದಿಂದಾದ ಹಳಗನ್ನಡ ಶಬ್ದ. *ಈ ಗಿರಿದುರ್ಗಮಂ ದಾಂಟಿ ಬಂದ ಬಲ್ಲಾಳ್ ದಿವ್ಯಪ್ರಭಾವನಕ್ಕುಂ (ಆದಿಪುರಾಣ ೧೩.೫೭ವ)* ಇದು ಅದರ ಉದಾಹರಣೆ. ವನದ ಕನ್ನಡ ತದ್ಭವ 'ಬನ'. *ಮುನಿಪೀತರಾಗನೆಂದು ಬನಮಂ ಸಾರ್ತಕ್ಕುಂ (ಕವಿರಾಜಮಾರ್ಗ ೧.೭೯)* ಇದು ಅದರ ಪ್ರಯೋಗ. ಸಂಸ್ಕೃತದ ವಾಪಿ ಕನ್ನಡದ ಬಾವಿ. *ರಸರಸದ ಬಾವಿ ಮನೆಮನೆಗೆ ಬೇಟಿ (ಪಂಪಭಾರತ ೪.೧೦)* ಹೀಗೆ ಕನ್ನಡದ ಉದಾಹರಣೆ. 'ಬಾಸೀ' ಮರಾಠೀ ಶಬ್ದವು ಸಂಸ್ಕೃತ 'ವತ್ಸ'ದ ಮರಾಠಿ ರೂಪವೆಂದು ಹೇಳಲಾಗಿದೆ. ಇದು ಸರಿಯೆನಿಸುವುದಿಲ್ಲ. ಸಂಸ್ಕೃತ 'ವತ್ಸ'ದಿಂದ ಮರಾಠಿಯಲ್ಲಿ 'ವಾಸು'ವಾಗಿ ಕನ್ನಡ 'ರು' ಪ್ರತ್ಯಯ ಹತ್ತಿ 'ವಾಸುರು' ಆಗಿದೆ. ಭಾಸ್ಕರಭಟ್ಟನ 'ವತ್ಸಹರಣ'ದಲ್ಲಿ ಇದೇ ರೂಪ ಉಪಯೋಗಿಸಲಾಗಿದೆ. ಇನ್ನು ದೃಷ್ಟಾಂತ ಪಾಠದಲ್ಲಿ 'ಮಗಳು' ಅರ್ಥದಲ್ಲಿ 'ಬಾಸೀ' ಶಬ್ದ ಬಳಸಿದ್ದರೆ ಅದು ಕನ್ನಡದ ಅಪವಾದಾತ್ಮಕ ಪ್ರಭಾವವೆಂದೇ ಹೇಳಬೇಕು. 'ಬೀಜೇ' ಶಬ್ದವನ್ನು ಮರಾಠೀ ಪಂಡಿತರ 'ವ್ರಜನ' ದಿಂದ ವ್ಯುತ್ಪಾದಿಸುತ್ತಾರೆ. ಇದು ಒಂದು ದುರಾಗ್ರಹ. 'ಕನ್ನಡದ 'ಬಿಜಯಂ ಗೈ' ಶಬ್ದ ಮರಾಠಿಯಲ್ಲಿ 'ಬೀಜೇ ಕರಣೇ' ಎಂದಾಗಿ ಜ್ಞಾನೇಶ್ವರಿಯಲ್ಲೂ ಲೀಳಾಚರಿತ್ರದಲ್ಲೂ ಇತರ ಮಹಾನುಭಾವೀಯ ಗ್ರಂಥಗಳಲ್ಲೂ ಸಾಕಷ್ಟು ಸಂದರ್ಭಗಳಲ್ಲಿ ಬಳಸಲಾಗಿದೆ.

**ಬರಡ, ಬಜಿದು ಒಣ ವ್ಯರ್ಥ**

'ಶೋಷಣೇ' ಅರ್ಥದಲ್ಲಿಯ ಪೂರ್ವ ಹಳಗನ್ನಡದಲ್ಲಿ ಧಾತುವಾಗಿರ-ಬಹುದಾದ 'ಬಜ್'ದಿಂದ 'ಬಜಿದು' ಭಾವವಾಚಕ ನಾಮಪದವಾಗಿಯೂ, ವಿಶೇಷಣವಾಗಿಯೂ ಬಂದಿರಬಹುದೆಂದು ಮೊದಲೇ ಚರ್ಚಿಸಿದ್ದೇನೆ. 'ಬಜಿದು' ಕೂಡ 'ಒಣ' ಅರ್ಥದಲ್ಲಿ ಕ್ರಿಯಾವಿಶೇಷಣವಾಗಿ ಬಳಸಲಾಗಿದೆ.

*ತೊಳೊಳ್ ತುಳ್ಕಿ ಬಜಿದು ಮಾಜ್ಪನೊ (ಆದಿಪುರಾಣ ೧೨.೮೬)*

ಹೀಗೆ ಇದಕ್ಕೆ ಹಳಗನ್ನಡದಲ್ಲಿ ಉದಾಹರಣೆಯೂ ಇದೆ.

ಜ್ಞಾನೇಶ್ವರಿಯಲ್ಲಿಯ ಉದಾಹರಣೆಗಳಿವು.

*ಬರಡ ಕಿಜ್ ಪೀಕೇ ಕವಣಾಚೇಜ್ ಹೇಜ್ (೧೩.೧೩)*

ಈ ಕ್ಷೇತ್ರವು, ಹೊಲವು (ಬರಡೋ), ಬೆಳೆಯುವುದೋ ಯಾರದಿದು?

*ನಪುಂಸಕೇಜ್ ಬರಡೇಜ್ ರಾನೇಜ್ ಕೇಲೀಜ್ (೧೩.೪೮)*

ಆಡವಿಗಳನ್ನು ನಪುಂಸಕ ಹಾಗೂ ಬರಡು ಮಾಡಿದರು.

*ಮಗ ತೋಯಬುದ್ಧಿ ಬರಡೀತೇಜ್ ಟಾಕೂನಿ ಏಜ್ತಿ (೫.೧೧೦)*

(ನೀರಡಿಸಿದ ಹುಲ್ಲೆಗಳು) ನೀರಿದೆಯೆಂಬ ಭ್ರಮೆಯಿಂದ ಬರಡು ಭೂಮಿಗೆ ಬರುತ್ತವೆ.

**ಬರಳಣೇಜ್ ಒಱಲ್**

'ವೇದನ ಧ್ವನಿ' ಅರ್ಥದಲ್ಲಿಯ ಹಳಗನ್ನಡ ಧಾತು 'ಬಱಲ್' ಬರಳ' ಆಗಿ ಮರಾಠಿಗೆ ಹೋಗಿದೆ. ಇವು ಜ್ಞಾನೇಶ್ವರಿಯಲ್ಲಿಯ ಪ್ರಯೋಗಗಳು.

*ಮಾರೆಝೇಜ್ ಅತಿಶಯೇಜ್ ಮನ ವ್ಯಾಕುಳ ಹೋಜ್ತಸೇ ವಾಚಾ ಬರಳ (೧.೨೦೬)*

ನನ್ನ ಮನಸ್ಸು ಬಹಳ ವ್ಯಾಕುಲವಾಗಿದೆ. ಮಾತು ಒರಲಿದಂತಾಗುತ್ತಿದೆ.

*ದೇಖಾಜ್ ಮಂತ್ರಜ್ಞು ಬರಳು ಜಾಯೇ ತೇಥ ಕಾಜ್ ಜೈಸಾ ಸಂಚಾರು ಹೋಯೇ (೧.೧೯೦)*

ನೋಡ್ಯೆ, ಮಾಂತ್ರಿಕನು (ಮಂತ್ರ ಹೇಳುವ ಬದಲು) ಒರಲುತ್ತ ಹೋದರೆ ಅಲ್ಲಿ, ಅವನಲ್ಲಿಯೇ (ಭೂತದ) ಸಂಚಾರವಾಗುತ್ತದೆ.

*ಹೇ ಯಜ್ಞೋಪಕರಣ ಸಕಳ ನೇಣತ ಸಾಂತೇ ಬರಳ*
*ಅಹಂಬುದ್ಧೀ ಕೇವಳ ಭೋಗೂಜ್ ಪಾಹಾಜ್ತಿ (೩.೧೨೮)*

ಈ ಯಜ್ಞೋಪಕರಣಗಳು ಎಲ್ಲವೂ ಅರಿಯದೆ ಒರಲವು ಅಹಂಬುದ್ಧಿಯಿಂದ (ದೇಹಾತ್ಮ-ಭಾವದಿಂದ) ಬರಿ ಭೋಗಿಸಲು ನೋಡುತ್ತಾರೆ.

**ಬಾಗಣೇಜ್, ಬಾಗು, ಬಗ್ಗು**

'ನಮ್ರತ್ವೇ' ಅರ್ಥದ 'ಬಾಗು' ಧಾತುವನ್ನು ಕೇಶಿರಾಜನು ಹೇಳುತ್ತಾನೆ. *ಅವುದು ಬಾಗಿದುದುಮಧಿಕಂ ಬಸನಂ (ಕವಿರಾಜಮಾರ್ಗ ೨.೧೫೦)* ಹೀಗೆ ಹಳಗನ್ನಡದ ಪ್ರಯೋಗವೂ ಇದೆ.

ಈ ಧಾತು ಜ್ಞಾನೇಶ್ವರಿಯಲ್ಲಿ ಇದೇ ಅರ್ಥದಲ್ಲಿ ಒಮ್ಮೆ ಮಾತ್ರ ಬಳಸಲಾಗಿದೆ.

ಜೀವನದ ಕ್ಷಣ ಭಂಗುರತ್ವದ ಬಗ್ಗೆ ಹೇಳುವಾಗ ಜ್ಞಾನೇಶ್ವರರು ವರ್ಣಿಸುವುದು.

*ಮುಷ್ಟಿ ಲಾಗೇ ವಿಘರೋಜ್ ಕಾಂತಿ ಪಾಹೇ ವಿಸರೋಜ್*
*ಮಾಥಾ ಆದರಿ ಸಿರೋಜ್ ಬಾಗಿ ಬಳ (೧೩.೭೫೫)*

(ಶರೀರದ) ದಪ್ಪತನವು ಕರಗಹತ್ತುತ್ತದೆ. ಕಾಂತಿಯು ಕುಂದಲು ನೋಡುತ್ತದೆ. ತಲೆ ಅದರುತ್ತದೆ, ಶಿರಸ್ಸು ಬಹಳ ಬಾಗುತ್ತದೆ.

ಬಾಗು, ಬ(ಹ)ಳ ಶಬ್ದಗಳ ಅರ್ಥ ಹೊಳೆಯದೆ, ಸಿರೋಜ್ ಶಬ್ದವನ್ನು ಕೈಬಿಟ್ಟು, ಕನ್ನಡದ 'ಅದುರು' ಶಬ್ದದಿಂದ 'ಆದರಿ'ಯನ್ನು ಗುರುತಿಸದೆ 'ಬಾಗಿಬಳ'ಕ್ಕೆ 'ಕಂಪ'ಎಂದು ಅರ್ಥಕೊಟ್ಟು ಭಾಷ್ಯಕಾರರು ಈ ಓವಿಯ ಅನ್ವಯ ಹಚ್ಚಿದ್ದಾರೆ.

**ಬಾಂಬಳ ಬಂಬಲ್, ದಟ್ಟ, ಬಹುಲ, ದೊಡ್ಡ, ಸಮೂಹ**

'ಬಂಬಲ್' ಶಬ್ದದ ಹಳಗನ್ನಡದಲ್ಲಿಯ ಬಳಕೆ ಹೀಗಿದೆ. *ಕರಗಿ ಸುರಿವರಗಿ ಸುರಿಯ ಬಂಬಲ್‌ಗಳಂ ಪೊಸೆದು ಬಿದಿರ್ದು ಕಳೆದು (ಪಂಪಭಾರತ ೩.೭ವ) ಮೆಲ್ಲನೆ ತಡಿಯಂ ಸಾರ್ಚಿದಪುವಿದಱ ಬಂಬಲ್‌ದೆರೆಗಳ್ (ಅದೇ ೫.೫೫)*

ಈ ಶಬ್ದ ಇವೇ ಅರ್ಥಗಳಲ್ಲಿ 'ಬಾಂಬಳ' ಆಗಿ ಮರಾಠಿಗೆ ಹೋದದನ್ನು ಜ್ಞಾನೇಶ್ವರೀಯಲ್ಲಿ ಹೀಗೆ ನೋಡಬಹುದು.

*ತೇಥ ಬಾಂಬಳ ಪಡೇ ಅಭಿನವ ವಿಕಾರಾಂಚೇಜ್ (೧೫.೧೦೦)*

ಅಲ್ಲಿ ಹೊಸಹೊಸ ವಿಕಾರಗಳು ದಟ್ಟವಾಗಿ ಹಬ್ಬುತ್ತವೆ.

*ಡಿರಿಯಾ ರಿಗತಿ ನಿಮಿಷೇಜ್ ಬಾಂಬಳ್ಯೆಜತಿ (೧೫.೧೮೪)*

ಟಿಸಿಲುಗಳು ಒಡೆಯುತ್ತವೆ. ನಿಮಿಷದಲ್ಲಿ ದಟ್ಟಗೊಳ್ಳುತ್ತವೆ.

*ಪೈಜ್ ಬಾಂಬಳ್ಯೆಲಾ ಚೌಮೇರ್ಥೀಜ್ (೧೫.೫೭ ಪಾಠಭೇದ)*

ನಾಲ್ಕೂ ಮೇರೆಗಳಿಗೆ ಒತ್ತೊತ್ತಾಗಿ ಹಬ್ಬಿದೆ.

**ಬಾಬುಳಿ ಬೊಬ್ಬುಳಿ ನೀರಮೇಲಿನ ಗುಳ್ಳೆ**

*ನೆಗೆಯೆ ಪೊದಟ್ಟಿ ಬೊಬ್ಬುಳಿಕೆಗಳ್ ನೆಗೆವನ್ನೆರಮುಂ ಕೆಲಕ್ಕೆ ನೀರುಗಿಯೆ (ಪಂಪಭಾರತ ೧೩.೮೨)* ಎಂದಾಗಿ ಬರುವ ಹಳಗನ್ನಡ ಬೊಬ್ಬುಳಿ ಶಬ್ದ ಮರಾಠಿಯಲ್ಲಿ ಅದೇ ಅರ್ಥದಲ್ಲಿ ಬಾಬುಳಿ ಎಂದಾಗಿ ಹೋಗಿದೆ. ಸಂದರ್ಭ ನೋಡಿಕೊಂಡು ಮರಾಠಿ ಪಂಡಿತರು ಅದಕ್ಕೆ ಹಾವಸೆ ಎಂದು ಅರ್ಥ ಕಟ್ಟಿದ್ದಾರೆ, ಅಷ್ಟೇ!

ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗ ಪರಿಶೀಲಿಸಬೇಕು.

*ಉದಕೀಜ್ ಜಾಲೀ ಬಾಬುಳೀ ಉದಕಾತೇಜ್ ಚಿ ಜೈಸೀ ಝಾಂಕೋಳೀ (೭.೫೯)*

ನೀರಿನಲ್ಲಾದ ಬೊಬ್ಬುಳಿ ನೀರನ್ನೇ ಮುಚ್ಚುವಂತೆ-

*ಕರೂನಿ ಬಾಬುಳಿಯೇಚೀ ಬೂಂಥಿ ಜಳೇಜ್ ಜಿಯೇಜ್ ರಾತಿ*
*ತೇಯಾಂಚೀ ವಾಜ್‌ಸ ಪಾಹಾತೀ ಹಂಸ ಕಾಈ (೧೩.೩೨೪)*

ಯಾವ ನೀರುಗಳು ಬೊಬ್ಬುಳಿಗಳ ಮುಸುಕು ಹಾಕಿಕೊಂಡಿರುತ್ತವೆಯೋ, ಅವುಗಳತ್ತ ಹಂಸಗಳು ನೋಡುವವೇ?

**ಬಾವನ ಬಾವನ್ನ ಚಂದನ**

ಮೂಲ ಮರಾಠಿಯದೇ ಇರಬಹುದೇನೋ ಎನ್ನಿಸುವ ಈ 'ಬಾವನ್ನ' ಶಬ್ದದ ಸಿದ್ಧಿ ಒಂದಿಷ್ಟು ಕುತೂಹಲಕಾರಕ. ಜ್ಞಾನೇಶ್ವರಿಯಲ್ಲೂ ಈ ಶಬ್ದ 'ಬಾವನ' ಆಗಿ ಬಳಸಲಾಗಿದೆ. ಆದರೆ ಸಿದ್ಧಿಯ ಬಗ್ಗೆ ಮರಾಠಿ ಪಂಡಿತರಾರೂ ತಲೆಕೆಡಿಸಿಕೊಂಡಿಲ್ಲ. ಹೀಗಾಗಿ ಹಳಗನ್ನಡದಲ್ಲೇ ಶೋಧಿಸಬೇಕಾಯಿತು.

'ಸರ್ಪೇಷ್ಟಮ್' (ಸರ್ಪಕ್ಕೆ ಇಷ್ಟವಾದದ್ದು) ಎಂದು ಚಂದನಕ್ಕೆ ಒಂದು ಸಂಸ್ಕೃತ ಪ್ರತಿಶಬ್ದ. ಹಳಗನ್ನಡದಲ್ಲಿಯ 'ಪಾವ' + 'ಅನ್ನ' ಹೀಗೆರಡು ಶಬ್ದಗಳು ಕೂಡಿ 'ಪಾವನ್ನ'ವಾಯಿತು. 'ಬಾವನ್ನ'ವೆಂದು ವಚನ ಸಾಹಿತ್ಯದಲ್ಲಿ ಮೂಡಿತು.

*ಪಾವುಗಳು ಕೊಳಿಸಿ ಮಹಾಗ್ರಾವಮನುಜಿವಡಸಿ (ಪಂಪಭಾರತ ೨.೩೨)* ಇದು ಪಾವು ಶಬ್ದದ ಹಳಗನ್ನಡ ಪ್ರಯೋಗ. 'ಇಷ್ಟ' ಎನ್ನುವ ಅರ್ಥದಲ್ಲಿಯ 'ಅನ್ನ' ಶಬ್ದಕ್ಕೆ ಈ ಪ್ರಯೋಗಗಳು.

*ಪುರೋಚನನೆಂಬ ತನ್ನ ಮನದನ್ನನಪ್ಪ ಪೆರ್ಗಡೆಯೊಳ್ (ಪಂಪಭಾರತ ೨.೯೨)* *ಮನದನ್ನೆ-ಮನದನ್ನಳ್*

ಜ್ಞಾನೇಶ್ವರೀಯಲ್ಲಿ ಬಾವನ ಶಬ್ದದ ಪ್ರಯೋಗಗಳು ಹೀಗೆ:

*ತರಿ ಫಳ ಉದ್ದೇಶೇಜ್ ಸಾಂಡಿಲಿಯಾ ವಾಢತಿ ಜೇವಿ ಸರಳಿಯಾ*
ಶಾಖಾ ಕಾ ಚಂದನಾಚೇಯಾ ಬಾವನೇಯಾಜ್ (೧೮.೬೨೮)
ಆದ್ದರಿಂದ ಫಲದ (ಹಣ್ಣಿನ) ಉದ್ದೇಶವನ್ನು ತ್ಯಜಿಸಿ ಬಾವನ ಚಂದನದ ಟೊಂಗೆಗಳು ಸರಳವಾಗಿ ಬೆಳೆಯುವಂತೆ.
*ಕಾಜ್ ಬಾವನೆಯಾಜ್ ಆಣಿ ಘೂರೇಜ್ (೧೮.೧೨೪೭)*
(ಬೆಂಕಿಯು ಕಬಳಿಸಿದಾಗ) ಬಾವನೆಯ ಹಾಗೂ ಬೆಳ್ಳುಚಿಯ (ಅಂತರ ಕಡಿಯುತ್ತದೆ.)

'ಬಾವನ' ಶಬ್ದದ ಮೇಲೆ ಒಂದೆಡೆ ಜ್ಞಾನೇಶ್ವರರು ಶ್ಲೇಷ ಮಾಡಿದ್ದಾರೆ. ದುರ್ದೈವದಿಂದ ಅದು ಮರಾಠೀ ವಾಖ್ಯಾನಕಾರರ ತಲೆಯ ಮೇಲಿಂದ ಹೋಗಿದೆ. ಆ ಓವಿ ಹೀಗೆ.

*ಆಗಾ ಬಾವನಾ ವರ್ಣಾಜ್ ಪರೌತಾ ಕೋಣ್ಹೇಜ್ ಮಂತ್ರು ಆಹೇ ಪಾಂಡುಸುತಾ*
*ಕಾಜ್ ಬಾವನಾ ಹಿಜ್ ಸುಚ್ಚಾರಿತಾಜ್ ಜೀಉ ಆಥಿ (೧೮.೩೭೧)*

ಇದಕ್ಕೆ ದಾಂಡೇಕರರ ಅನ್ವಯ ಹೀಗೆ.

> ಅರ್ಜುನನೇ, ೫೨ ಅಕ್ಷರಗಳನ್ನು ಮೀರಿ ಯಾವ ಮಂತ್ರವಿದೆ?
> ಹಾಗೂ ೫೨ ಅಕ್ಷರಗಳ ಉಚ್ಚಾರವನ್ನು ಮಾಡದೆ ಯಾವ ಮನುಷ್ಯನಾದರೂ ಇದ್ದಾನೇನು?

ಸ್ವರ ೧೪, ವರ್ಗ ೨೫, ಅವರ್ಗ ೯ ಹಾಗೂ ಯೋಗವಾಹ ೪ ಹೀಗೆ ಸಂಸ್ಕೃತದಲ್ಲಿಯ ೫೨ ಅಕ್ಷರಗಳು ಮರಾಠಿಯಲ್ಲೂ ಇವೆ. ಇವುಗಳನ್ನು ಬಿಟ್ಟು

ಯಾವ ಉಚ್ಚಾರವನ್ನೂ - ಮಂತ್ರೋಚ್ಚಾರವನ್ನೂ ಮಾಡಲಾಗದೆಂದು ಶಬ್ದಶಃ ಅರ್ಥ ಹೇಳಿಯಾಯಿತು. ಈ ಓವಿಯಲ್ಲಿ ನನಗೆ ಕಾಣುವ ಶ್ಲೇಷಗಳು ಹೀಗೆ;

ಮೊದಲನೆಯದಾಗಿ, ಪಾವ+ಅನ್ನ ಶೇಷನಿಗೆ ಪ್ರಿಯವಾದವ, ನಾರಾಯಣ. ಹೀಗೆ ಓವಿಯ ಮೊದಲ ಸಾಲಿನ ಅನ್ವಯಃ 'ಹರಿ' ವರ್ಣಕ್ಕಿಂತ ಶ್ರೇಷ್ಠವಾದ ಮಂತ್ರವಾವುದು?

ಜ್ಞಾನೇಶ್ವರರು ತಮ್ಮದೇ ಒಂದು ಚಿಕ್ಕ ಕೃತಿ 'ಹರಿಪಾಠ'ದಲ್ಲಿ ಇಂತು ಹೇಳಿದ್ದಾರೆ.

*ಹರೀಮುಖೇ ಮ್ಹಣಾ, ಹರೀಮುಖೇ ಮ್ಹಣಾ ಪುಣ್ಯಾಚೀ ಗಣನಾ ಕೋಣ ಕರೀ?*

ಬಾಯಿಯಿಂದ ಹರಿ ಹೇಳಿರಿ, ಬಾಯಿಯಿಂದ ಹರಿ ಹೇಳಿರಿ
(ಆಗ) ಪುಣ್ಯದ ಲೆಕ್ಕ ಮಾಡುವವರಾರು?

ಇನ್ನು ಎರಡನೆಯದು. ಇಲ್ಲೂ ಬಾವನ=ಚಂದನ, ಶ್ರೀಗಂಧ. ಆದರೆ ವರ್ಣಮ್ = ಸುವಾಸಿಕ ಕೇಶರೀ ಬಣ್ಣ. ಜ್ಞಾನೇಶ್ವರರು ಪ್ರತಿಪಾದಿಸಿದ ಭಕ್ತಿ ಪಂಥದಲ್ಲಿ ಮಂತ್ರ (ವಿಶೇಷತಃ ಜಪಕ್ಕಾಗಿ) ವೆಂದರೆ 'ನಾಮ'. ಹೀಗಾಗಿ ಓವಿಯ ಮೊದಲ ಸಾಲಿನ ಅನ್ವಯಃ *ಶ್ರೀಗಂಧದ ಬಣ್ಣ (ಲೇಪ)ಕ್ಕಿಂತ ಶ್ರೇಷ್ಠವಾದ* 'ನಾಮ' ವಿಲ್ಲ. ಇಲ್ಲಿ 'ನಾಮ'ವೆಂದರೆ ಶ್ರೀಕೃಷ್ಣ ಭಕ್ತಿ ಪಂಥದಲ್ಲಿ ಭಾರತದಲ್ಲಿ ಎಲ್ಲೆಡೆ ರೂಢಿಯಲ್ಲಿರುವ 'ಗೂಟನಾಮ' (ಹಣೆಯ ಮೇಲಿನದು). ಜ್ಞಾನೇಶ್ವರೀಯಲ್ಲಿಯ ಈ ಸಂದರ್ಭ ನೋಡಿರಿ.

*ಆಣಿ ಕಾಮ್ಯ ಕರ್ಮಾಕಡೇ ನ ಪರತೇಚಿ ತೇಕಡೇ ತೇಥ ಚಂದನಾಚೇ ಖೋಡೇ ನ ಲೇಚಿ ತೋ (೧೮.೮೯೪)*

ಮತ್ತು, ಕಾಮ್ಯ ಕರ್ಮಗಳತ್ತ ಅವನು ಹೊರಳುವುದಿಲ್ಲ.
(ಕರ್ಮಫಲಗಳಲ್ಲಿ ಅನಾಸಕ್ತನಾಗಿದ್ದಾನೆ.)
ಆಗ ಅವನು ಚಂದನದ ಕೊರಡನ್ನು ಧರಿಸಬೇಕಾಗಿಲ್ಲ.
(ಶ್ರೀಗಂಧವನ್ನು ಲೇಪಿಸಿಕೊಳ್ಳುವುದಿಲ್ಲ)

**ಬಿಢಾರ - ಬೀಡು ಬಿಡಾರ**

ಮನೆ, ಸ್ಥಳ ಅರ್ಥದಲ್ಲಿಯ ಹಳಗನ್ನಡ ಶಬ್ದ 'ಬೀಡು'. ಹೀಗೆ ಪ್ರಯುಕ್ತವಾಗಿದೆ. *ತೋಡುಂ ಬೀಡುಂ ಕಾಣ್ಬುದು (ಪಂಪರಾಮಾಯಣ ೯.೬೩) ಪೊಟಲಂ ಪುಗಿಸೆ ಪೊಕ್ಕು ಬೀಡನೆಲ್ಲಿ ಬಿಡುವಮನೆ (ಪಂಪಭಾರತ ೩.೨ ವ)* ಸಂಸ್ಕೃತದ 'ಆಗಾರ'ದ ತದ್ಭವ 'ಆರ' ಹೀಗೆ 'ಬೀಡಾರ' ಶಬ್ದವು ಸಿದ್ಧವಾಯಿತು. ಮರಾಠಿಯಲ್ಲಿ ಇದು 'ಬಿಢಾರ'ವಾಗಿ ಹೋಗಿದೆ. ಪ್ರಯೋಗಗಳು.

ಜ್ಞಾನೇಶ್ವರೀಯಲ್ಲಿ:

*ವಾಯುಸಿ ಯೇಕೇ ಠಾಯ್‌ಇಚ್ ಬಿಢಾರ ಜೈಸೇಚ್ ನಾಹಿಚ್ (೧೨.೨೦೦)*

ಗಾಳಿಗೆ ಒಂದು ಸ್ಥಾನದಲ್ಲಿ ಮನೆ ಇಲ್ಲದಿರುವಂತೆ-

*ಉಖಿತಾ ಜೈತಾ ಬಿಢಾರೀಙ್ ಬೈಸವಿಲಾ ಆಸೇ (೧೩.೫೯೨)*

ಮನೆಯಲ್ಲಿ ಕೂಡ್ರಿಸಿಕೊಂಡ ಹಾದಿಹೋಕನಂತೆ-

ಲೀಳಾಚರಿತ್ರದಲ್ಲಿ

*ಮಹಾದಾಯೀಸೀಙ್ ಬೀಢಾರೀಙ್ ಮ್ಹಣಿತಲೇ (ಏಕಾಕ ೪)*

ಮಹದಾಯಿಗೆ ಮನೆಯಲ್ಲಿ ಹೇಳಿದರು

*ಬಾ ಮೂನಿದೆಯಾ ಹೇಙ್ ಥೋರ ನಗರಃ ಏಥ ತುಮ್ಹಿ ಚುಕಾಲಃ*
*ಬಿಢಾರಾಸಿ ಜಾವೋಙ್ ಯಾ (ಏಕಾಕ ೭೫)*

ಅಪ್ಪಾ, ಮುನಿದೇವಾ, ಇದು ದೊಡ್ಡ ಊರುಃ ಇಲ್ಲಿ ನೀವು
(ದಾರಿ) ತಪ್ಪಬಹುದುಃ ಮನೆಗೆ ಹೋಗುವಾ.

*ಆಮಚೇ ಮುನಿದೇವ ಏಥ ನ ಏತಿ ಕಿಙ್ಃ ಕಾಲಿ ಬೀಢಾರೀಙ್ ನ ಯಾಚಿಃ (ಪೂರ್ವಾರ್ಧ ೧)*

ನಮ್ಮ ಮುನಿದೇವ ಇಲ್ಲಿ ಬರುವುದಿಲ್ಲವೇಃ ನಿನ್ನೆ ಬಿಡಾರಕ್ಕೆ
ಬರಲೇ ಇಲ್ಲ.ಃ

**ಬಿರಡೇಙ್ ಬಿಜಡೆ ಕುಣಿಕೆ**

ಇಂದಿಗೂ ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ರೂಢಿಯಲ್ಲಿರುವ ಹಳಗನ್ನಡ ಶಬ್ದ ಬಿರಡಿ (ಗುಂಡಿ, ಕುಣಿಕೆ, ಬಟನ್ ಅರ್ಥದಲ್ಲಿ). ಜ್ಞಾನೇಶ್ವರಿಯಲ್ಲಿ ಅದೇ ವಿಶಿಷ್ಟ ಅರ್ಥದಲ್ಲಿ ಬಳಸಲಾದುದು ಸ್ವಾರಸ್ಯಕರವಾಗಿದೆ.

ಈಗಿನ ನೈಲಾನ್ ಬಟನ್‌ಗಳ ಪೂರ್ವದಲ್ಲಿ ತಗಡಿನ, ನೂಲಿನ ಗುಂಡಿಗಳಿದ್ದುದನ್ನು ನೋಡಿರಬಹುದು. ತೊಡುಗೆಗಳ ಮುಂಭಾಗದಲ್ಲಿ ಮಾಡಿದ ಕಚ್ಚು (ಬಟನ್ ಹೋಲ್)· ಗಳಲ್ಲಿ ಇವುಗಳನ್ನು ಸಿಗಿಸಲಾಗುತ್ತಿತ್ತು. ಹೊಲಿಗೆಯ ತೊಡುಗೆಗಳಿರದಿದ್ದ, ಮುಸಲ್ಮಾನರ ಆಡಳಿತದ ಪೂರ್ವದ, ಕಾಲದಲ್ಲಿ ಬಿಜಡೆಗಳ ಪ್ರಯೋಜನವೇನು? ದನಕರುಗಳನ್ನು ಕೊಟ್ಟಿಗೆಗಳಲ್ಲಿ ಗೂಟಕ್ಕೆ ಕಟ್ಟುವಾಗ ಒಂದು ತುದಿಗೆ ಗಂಟು (ಕುಣಿಕೆ) ಇನ್ನೊಂದು ತುದಿಗೆ ಕೊಕ್ಕೆ (ಲೂಪ್) ಇರುವ ಹಗ್ಗ (ಕಣ್ಣಿ) ಬಳಸುತ್ತಾರೆ. ಕೊಕ್ಕೆಯಲ್ಲಿಂದ ಕುಣಿಕೆ ತೆಗೆದರೆ ಕೊರಳ ಹಗ್ಗ ಬಿಚ್ಚಿದಂತೆ. ಜ್ಞಾನೇಶ್ವರೀಯಲ್ಲಿಯ ಈ ಬಿಜಡೆ ಶಬ್ದದ ಪ್ರಯೋಗ ಸಾರ್ಥವಾಗಿದೆ.

*ವಾಙ್‌ಸರುವಾಙ್ ಲಾವಿಲೇಙ್ ದಾವೇಙ್ ಜೈಸೇಙ್ (೧೩.೩೭೭)*
*ಮ್ಹಣೇ ಕೈಙ್ ಹೇಙ್ ಬಿರಡೇಙ್ ಫೀಟೈಲ ಕೈಙ್ ತೋ ಸ್ವಾಮಿ ಭೇಟೈಲ (೧೩.೩೭೮)*

ಕರುವನ್ನು ಕಣ್ಣಿಹಚ್ಚಿ ಕಟ್ಟಿದಂತೆ.
ಈ ಕುಣಿಕೆ ಹೇಗೆ ಬಿಚ್ಚೀತು? ಆ ಸ್ವಾಮಿ ಹೇಗೆ ದೊರೆತಾನು?

**ಬಿಙ್‌ವಡು, ಬೆಳವೂಲ**

ಉತ್ತರ ಕರ್ನಾಟಕದ ಫಲವತ್ತಾದ ಭೂಮಿಯ ಹೆಸರಾದ ಬೆಳವಲ,

ಬಿಜ್‌ವಡು ಆಗಿ ಜ್ಞಾನೇಶ್ವರಿಯಲ್ಲಿ ಕಾಣಿಸಿಕೊಂಡಿದೆ. ಒಮ್ಮೆಯೇ ಬರುವ ಈ ಶಬ್ದಕ್ಕೆ ಬೀಜಪೋಷಕ ನೆಲವೆಂದು ಅರ್ಥವನ್ನೇನೋ ಮರಾಠಿ ಪಂಡಿತರು ಕೊಟ್ಟಿದ್ದಾರೆ. ಆದರೆ ಅದಕ್ಕೆ ವ್ಯುತ್ಪತ್ತಿ ಇಲ್ಲ.

*ಕೃಷ್ಣವಾಕ್ಯಬೀಜಾ ನಿವಾಡು ಆಣಿ ಸಂಜಯೋ ಸಾತ್ವಿಕಾಚಾ ಬಿಜ್‌ವಡು*
*ಮ್ಹಣೌನಿ ಸವಯಾಜ್ ಚಿ ಹೋಇಲ ಸುರವಾಡು ಪ್ರಮೇಯಪಿಕಾಚಾ (೯.೫೨೮)*
ಶ್ರೀಕೃಷ್ಣನ ಮಾತುಗಳೆಂದರೆ ಅವು ಬೀಜಗಳು. ಸಂಜಯ (ನೋ) ಸಾತ್ವಿಕವಾದ ಬೆಳವಲವು. ಅಂತೆಯೇ ಪ್ರತಿಪಾದಿತ ಸಿದ್ಧಾಂತಗಳ ಬೆಳೆಯು ತಡವಿಲ್ಲದೆ ಹುಲುಸಾಗುವುದು.

**ಬೀಕ, ಬೀಗು, ಆನಂದಿಸು, ಆನಂದ ಸೊಕ್ಕು**

'ಹರ್ಷಭಾವ' ಅರ್ಥದಲ್ಲಿಯ ಹಳಗನ್ನಡ ಧಾತು 'ಬೀಗು' 'ಬೀಕ' ಆಗಿ ಧಾತುರೂಪದಲ್ಲಿಯೂ ನಾಮಪದವಾಗಿಯೂ ಜ್ಞಾನೇಶ್ವರೀಯಲ್ಲಿ ಹೋದುದನ್ನು ಹೀಗೆ ಕಾಣಬಹುದಾಗಿದೆ.

*ಸತ್ರೀಜ್ ಅನ್ನ ಜಾಲೇಜ್ ಕಾಜ್ ಸಾಮಾನ್ಯಾಬೀಕ ಅಲೇಜ್ (೧೩.೬೯೯)*
ಛತ್ರದಲ್ಲಿ ಅನ್ನವಾದಾಗ (ಅಡುಗೆಯಾದಾಗ) ಜನಸಾಮಾನ್ಯರಿಗೆ ಆನಂದವಾಗುತ್ತದೆ.
*ವೇಧೇಜ್ ಪರಿಮಳಾಚೇಜ್ ಬೀಕ ಮೋಡೇ ಜೇಯಾಚೇನಿ (೬.೧೫)*
(ನನ್ನ ಮರಾಠಿ ಭಾಷೆಯಲ್ಲಿಯ ನಿರೂಪಣೆಯು) ವೇಧಿಸಿದಾಗ ಪರಿಮಳದ ಸೊಕ್ಕು ಮುರಿಯುತ್ತದೆ.

ಸೊಕ್ಕು 'ಮುರಿ' ಅರ್ಥದಲ್ಲಿಯ ಬೀಕ 'ಮೋಡೆ' ಪ್ರಯೋಗ ಗಮನಾರ್ಹ.

*ಗುಣಾ ಸಗುಣಪಣಾಚೇ ಬೀಕ ಬಹುವಸ ಪಿಥೇಜ್ (೧.೩೮)*
ಗುಣಗಳಲ್ಲಿ ಇಲ್ಲಿ ಬಹಳಷ್ಟು ಸಾಕಾರತೆಯ ಆನಂದವು
*ತೇ ದಾಸೀಪಣಾಚೇನಿ ಬಿಕೇಜ್ ತೃಷ್ಣಾ ಜಿವಿ (೩.೨೪೩)*
ಈ (ಕಾಮಕ್ರೋಧಗಳ) ದಾಸಿಯಾಗಿ ತೃಷ್ಣೆ ಆನಂದದಿಂದ ಬಾಳುತ್ತಿದೆ.

**ಬೀದೀ- ಬೀದಿ-ಓಣಿ**

ಸಂಸ್ಕೃತದ 'ವೀಥಿ' ಶಬ್ದದಿಂದ ತದ್ಭವವಾಗಿ ಕನ್ನಡಕ್ಕೆ ಬಂದ ಶಬ್ದ 'ಬೀದಿ'. ಈ ಶಬ್ದ 'ಬೀದಿ' ಆಗಿ ಮರಾಠಿಯಲ್ಲಿ ಹೋಗಿದೆ. ಇದು ಕನ್ನಡದ್ದೇ ಏಕೆ? ಸಂಸ್ಕೃತದಿಂದಲೋ ಅಥವಾ ಪ್ರಾಕೃತದಿಂದಲೋ, ಇದು ಮರಾಠಿಗೆ ಏಕೆ ಹೋಗಿರಬಾರದು.?

ಸಂಸ್ಕೃತದ 'ವ' ಕನ್ನಡಕ್ಕೆ ಬರುವಾಗ 'ಬ' ಆಗಿದೆ. ಉದಾಹರಣೆಗಳು ಸಾಕಷ್ಟು : ಬಂಜೆ, ಬಟ್ಟಲು, ಬಟ್ಟೆ, ಬಡ್ಡಿ, ಬಣ್ಣ, ಬಸ, ಬಸವ, ಬಳೆ, ಬಳ್ಳಿ, ಬಿಜ್ಜೆ, ಬಿಜಯಂ ಗೈ. ಬಿತ್ತರ, ಬಿನ್ನಹ ಹೀಗೆ ಇನ್ನೂ ಎಷ್ಟೋ. ಮರಾಠಿಯಲ್ಲಿ 'ವ' ದಿಂದ

'ಬ' ಆಗುವುದಿಲ್ಲ. ಉತ್ತರಭಾರತದ ಭಾಷೆಗಳಲ್ಲಿ ಅವು 'ಬ' ಆದದ್ದುಂಟು. ಉದಾಹರಣೆಗೆ ಬಚ್ಚ (ವತ್ಸ) ಬಾಜ್‌ಕ (ವಕ್ರ), ಬೇಬಸ್ (ವಿವಶ), ಬಾಜಾ (ವಾದ್ಯ), ಬಿಸ್ತರ (ವಿಸ್ತಾರ) ಇತ್ಯಾದಿ. ಆದರೆ ಆ ಭಾಷೆಗಳಲ್ಲಿ 'ಬೀದಿ' ಶಬ್ದ ಎಲ್ಲೂ ಬಳಕೆಯಾಗಿಲ್ಲ.

ಹಳಗನ್ನಡದಲ್ಲಿಯ ಪ್ರಯೋಗವೊಂದು ಹೀಗೆ. *ಬೀದಿಗಳೊಳ್ ವಿಳಾಸರೊಪ್ಪೆನಿಸಿ ತೊ ಟಿಲ್ವ ಪಾಂಡವರ ಪೋಗಿಸೊಳುನ್ತೆ (ಪಂಪಭಾರತ ೨.೯೪)*

ಜ್ಞಾನೇಶ್ವರೀಯಲ್ಲಿಯ ಬಳಕೆ ಇಂತಿವೆ.

*ಇಂದ್ರಿಯಾಜ್‌ಚಾಜ್ ರಾಜಬೀದಿಜ್ ಆಹಂಮತಿಚಾ ಜಲ್ಪವಾದಿ*
*ವಿಕಾರಾಂತರಾಚಿ ಮಾಂದೀ ಮೇಳವಿತಾತಿ (೭.೧೦೩)*

ಇಂದ್ರಿಯಗಳ (ಊರಿನ) ರಾಜಬೀದಿಗಳಲ್ಲಿ ತಾನು (ತನ್ನದು) ಎಂದು ಬಡಬಡಿಸುವವರು ಬೇರೆ ಬೇರೆ ವಿಕಾರಗಳ ಮಂದಿಯನ್ನು ಗುಂಪುಗೂಡಿಸುತ್ತಾರೆ.

*ಪ್ರವೃತ್ತೀಚಿಯೇ ರಾಜಬೀದಿ (೧೮.೧೦೬೩)*

ಪ್ರವೃತ್ತಿ ರೂಪದ ರಾಜಮಾರ್ಗದಲ್ಲಿ

*ಪರಿ ಗಂಗೇಚಾಜ್ ಸಂಬಂಧೀಜ್ ಬೀದಿ ಆಣಿ ಮಹಾನದಿ ಐಕ್ಯತೇವಿ (೧೮.೧೨೪೬)*

ಗಂಗೆಯನ್ನು ಸಂಧಿಸಿದೊಡನೆ ಬೀದಿ (ಯಿಂದ ಹರಿದು ಬಂದ ನೀರು). ಮಹಾನದಿಗಳು ಒಂದಾಗುವಂತೆ-

**ಬೇಚಳ - ಬೆಚ್ಚಳ, ಗೊಂದಲ**

'ವಿಮೋಹ' ಅರ್ಥದಲ್ಲಿ 'ಬೆಚ್ಚಳಿಸು' ಈ ಹಳಗನ್ನಡ ಧಾತುವನ್ನು ಕೇಶಿರಾಜನು ಕೊಡುತ್ತಾನೆ. ಆದರೆ ಅದಕ್ಕೆ ಮೂಲವಿರಬಹುದಾದ 'ಬೆಚ್ಚಳ' ನಾಮಪದವನ್ನು ಕಿಟೆಲ್‌ರೂ ಉಲ್ಲೇಖಿಸುವುದಿಲ್ಲ. 'ಗೊಂದಲ' 'ಅಕ್ರಮ' ಇತ್ಯಾದಿ ಅರ್ಥಗಳಲ್ಲಿಯ ಬೆಚ್ಚಳ ನಾಮಪದದ ಪ್ರಯೋಗ ಹಳಗನ್ನಡದ ಕೃತಿಗಳಲ್ಲಿ ದೊರಕಿರಲಿಕ್ಕೂ ಇಲ್ಲ. ಜ್ಞಾನೇಶ್ವರಿಯಲ್ಲಿ ಮಾತ್ರ ದೊರೆಯುತ್ತದೆ!

*ಐಸೇಜ್ ಭವದ್ರುಮಾಚೇಜ್ ಮೂಳ ಹೇಜ್ ಊರ್ಧ್ವಿಜ್ ಕರೀ ಬಳ*
*ಮಗ ಆಣಿಯಾಜ್‌ಚೇ ಬೇಚಳ ಅಧೀಜ್ ಚ ದಾವೀ (೧೫.೯೨)*

ಹೀಗೆ ಸಂಸಾರ ವೃಕ್ಷದ ಮೂಲವು ಮೇಲ್ಗಡೆ (ಬ್ರಹ್ಮನಲ್ಲಿ) ಗಟ್ಟಿಯಾಗಿ ಹಿಡಿದುಕೊಂಡಾಗ, ಎಲೆಯ ತುದಿಗಳು ಅಕ್ರಮವಾಗಿ (ಸಿಕ್ಕಸಿಕ್ಕಹಾಗೆ) ಕಾಣಿಸಿಕೊಳ್ಳುತ್ತವೆ.

**ಬೆಂಬಳ- ಬೆಂಬಲ**

*ನಿನ್ನ ಕೆಳೆಯಂ ಬಂದಪ್ಪನಾತಂಗೆ ಬೆಂಬಲಮಿನ್ನೀಂ ನಿನಗಾತಂ (ಪಂಪಭಾರತ ೪.೩೩)* ಹೀಗೆ ಹಳಗನ್ನಡದಲ್ಲಿ ಬರುವ 'ಬೆಂಬಲ' ಶಬ್ದವು 'ಬೇಂಬಳ' ವಾಗಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ.

*ತೇಣೇಜ್ ಬೆಂಬಳ ಹಾತು ಗೇಲಾ ಗಾಂಡೀವಾಚಾ (೧.೧೯೭ ಪಾಠಭೇದ)*

ಆಗ ಗಾಂಡೀವ (ಧನುಷ್ಯ)ವನ್ನು ಓಡಿದ ಕೈಯು ಬೆಂಬಲವು ಹೋಯಿತು.

**ಬೇಳೇ- ಬೇಲಿ**

*ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ ಕಾಪಬೇಲಿಯುಂ ಮಾರ್ಕಾಪನವೆಯುಲುಂ (ಪಂಪಭಾರತ ೫.೬೧)* ಹೀಗೆ ಹಳಗನ್ನಡದಲ್ಲಿ 'ಬೇಲಿ' ಶಬ್ದದ ಪ್ರಯೋಗ ದೊರಕುತ್ತದೆ. 'ಬೇಲಿ' ಶಬ್ದ'ಬೇಳೇ' ಆಗಿ ಮರಾಠಿಗೆ ಹೋಗಿದೆ. ಇದು ಜ್ಞಾನೇಶ್ವರಿಯಲ್ಲಿಯ ಪ್ರಯೋಗ.

*ಮಗ ದೇಹಾಚೇಜ್ ಬೇಳೇಜ್ ಓಲಾಂಡೂನಿ ಯೇಕೇಜ್‌ವೇಳೇಜ್ (೧೪.೫೧)*

ಬಳಿಕ ದೇಹದ ಬೇಲಿಯನ್ನು ಒಮ್ಮೆಲೆ ದಾಟಿ.

**ಬೊಟ-ಬಟ್ಟು, ಬೆರಳು**

**ಅಬೋಟ- ಅರಬೆಟ್ಟು, ತಿಲಕ, ಚಂದನ**

ಕನ್ನಡದ 'ಬಟ್ಟು' ಶಬ್ದ ಮರಾಠಿಯ 'ಬೋಟ'ದಿಂದ ಬಂದಿರಬಹುದೆಂದು ಕಿಟೆಲ್ ಭಾವಿಸಿದ್ದಾರೆ. ವಸ್ತುತಃ 'ಬಟ್ಟು' ಇದು ಮೂಲ ಕನ್ನಡ ಶಬ್ದವೇ. 'ನಖ ಖನನ' ಅರ್ಥದಲ್ಲಿಯ 'ಬೆರಂಟು' ಹಳಗನ್ನಡ ಧಾತುವೇ ಇದಕ್ಕೆ ಆಧಾರ. ಬೆರಂಟು-ಬೆರಂಟು-ಬೆಟ್ಟು, ಬೊಟ್ಟು ಹೀಗೆ ಬೆಳೆದ ಶಬ್ದ 'ಬೋಟ' ಆಗಿ ಮರಾಠಿಯಲ್ಲಿ ಹೋಗಿದೆ.

ಬಟ್ಟಿನಿಂದ ಹಣೆಗೆ ಹಚ್ಚಿಕೊಂಡ ತಿಲಕ, ಗಂಧಗಳಿಗೂ 'ಬಟ್ಟು' ಎಂದೇ ಹೇಳಲಾಗುತ್ತದೆ. ಮರಾಠಿಯಲ್ಲೂ ಇದೇ ಅರ್ಥವಿದೆ. ಜ್ಞಾನೇಶ್ವರಿಯಲ್ಲಿಯ ಈ ಬಳಕೆ ಪರಿಶೀಲಿಸಬೇಕು.

*ರೂಪಸಾ ಉದ್ಯೆಲೇಜ್ ಕುಷ್ಠ ಸಂಭಾವಿತಾ ಕೂಟಿಜೇಜ್ ಬೋಟ*
*ತೇಯಾ ಲಾಜಾ ಪ್ರಾಣಸಂಕಟ ಹೋಯೇ ಜೈಸೇಜ್ (೧೬.೧೭೭)*

ಸುಸ್ವರೂಪನಾದವನಿಗೆ ಕುಷ್ಠರೋಗ ಬಂದರೆ, ಸಜ್ಜನನಿಗೆ ಆರೋಪದ 'ಬೊಟ್ಟು' (ಕಳಂಕ) ತಗುಲಿದರೆ, ಅವನಿಗೆ ಲಜ್ಜೆಯಿಂದ ಪ್ರಾಣಸಂಕಟವಾದ ಹಾಗೆ-

ಇವಲ್ಲದೆ ಜ್ಞಾನೇಶ್ವರೀಯಲ್ಲಿ 'ಅಬೋಟವೆಂದು ಶಬ್ದ ಪ್ರಯೋಗ ಬಂದಿದೆ. ಸಂದರ್ಭದ ಮೇಲಿಂದ ಇದರ ಅರ್ಥ 'ಅರ್ಧ ಬಟ್ಟು' 'ಅರ್ಧ ತಿಲಕ' ಎಂದಾಗುತ್ತದೆ. ಗಣಪತಿಗಾಗಲೀ, ಶ್ರೀವಿಠ್ಠಲನಿಗಾಗಲೀ, ಚಂದ್ರಾಕಾರದ ಅರ್ಧ ತಿಲಕ ಹಚ್ಚುವ ರೂಢಿ ಮಹಾರಾಷ್ಟ್ರದಲ್ಲಿದೆ. ಇನ್ನು 'ಅರ್ಧ'ವು 'ಅ' ಹೇಗೆ ಆಗಿರಬಹುದು?

ಭಾರತೀಯ ಆರ್ಯ ಭಾಷೆಗಳಲ್ಲಿಯ ಸಂಖ್ಯಾ ಪದ್ಧತಿ, ಪರಿಮಾಣದ ಕಲ್ಪನೆ ಸಂಸ್ಕೃತದಿಂದಲೇ ಬಂದಿತು. ಉದಾಹರಣೆಗೆ 'ಇಪತ್ತೊಂಬತ್ತು' ಎನ್ನಬೇಕಿದ್ದರೆ

'ಒಂದು ಕಡಿಮೆ ಮೂವತ್ತು' (ಏಕೋನ ತ್ರಿಂಶತಿ-ಸಂಸ್ಕೃತದಲ್ಲಿ) ಮರಾಠಿಯಲ್ಲಿ ಏಕೋಣ ತೀಸ ಆಗುತ್ತದೆ. 'ಐದೂವರೆ' ಎನ್ನುವುದಾದರೆ (ಸಂಸ್ಕೃತದಲ್ಲಿ ಸಾರ್ಧ ಪಂಚ) ಮರಾಠಿಯಲ್ಲಿ 'ಸಾಡೇ ಪಾಜ್‌ಚ' ಎನ್ನುತ್ತೇವೆ. ನಾಲ್ಕುಕಾಲು (ಸಂಸ್ಕೃತದಲ್ಲಿ ಸಪಾದ ಚತುರ್) ಮರಾಠಿಯಲ್ಲಿ 'ಸವ್ವಾಚಾರ' ಆಗುತ್ತದೆ. 'ಮೂರೂ ಮುಕ್ಕಾಲು' ಎಂದರೆ 'ಕಾಲು ಕಡಿಮೆ ನಾಲ್ಕು' (ಸಂಸ್ಕೃತದಲ್ಲಿ ಪಾದೋನ ಚತುರ್) ಇದಕ್ಕೆ ಮರಾಠಿಯಲ್ಲಿ ಪಾವಣೇ ಚಾರ ಎನ್ನಬೇಕು. ಇದಕ್ಕೆ ಮರಾಠಿಯಲ್ಲಿ ಮೂರು ಅಪವಾದಗಳು. (ಇತರ ಭಾರತೀಯ ಆರ್ಯಭಾಷೆಗಳಲ್ಲೂ ಇವು ಇವೆ.) ಒಂದೂವರೆ ರೂಪಾಯಿ ಎಂದು ಸಂಸ್ಕೃತದಲ್ಲಿ ಹೇಳಬೇಕಾದರೆ 'ಸಾರ್ಧ ರೂಪ್ಯಕಮ್' ಎನ್ನುತ್ತಾರೆ. (ಸಾರ್ಧೈಕ ಎನ್ನಬೇಕಾಗಿಲ್ಲ) ಇದೇ ರೀತಿಯಾಗಿ 'ಸಾರ್ಧದ್ವಿ' ಹಾಗೂ 'ಸಾರ್ಧತ್ರಿ'. ಆದರೆ ಮರಾಠಿಯಲ್ಲಿ ಇವು ಕ್ರಮಶಃ ದೀಡ, ಅಡೀಚ, ಆವುಠ (ಇಂದು ಇದು ಸಾಡೇತೀನ ಆಗಿದೆ. ಆ ಮಾತು ಬೇರೆ). ಮೂರೂವರೆ ಅರ್ಥದಲ್ಲಿಯ 'ಆವುಠ' ಶಬ್ದ ಬಸವೇಶ್ವರರ ವಚನಗಳಲ್ಲಿ, ಇತರ ವಚನ ಸಾಹಿತ್ಯದಲ್ಲೂ ಕಾಣಸಿಗುತ್ತದೆ. ಒಂದಿಷ್ಟು ವಿಷಯಾಂತರವೆನಿಸಬಹುದಾದರೂ ಈ ದೀಡ, ಅಡೀಚ ಹಾಗೂ ಆಜ್‌ವುಠ ಶಬ್ದಗಳ ವ್ಯುತ್ಪತ್ತಿಯತ್ತ ಗಮನ ಹರಿಸಬೇಕು. ಮರಾಠೀ ಪಂಡಿತರು 'ದೀಢ' ಶಬ್ದದ ವ್ಯುತ್ಪತ್ತಿಯನ್ನು 'ದ್ವಿ-ಅರ್ಧ'ದಿಂದಲೂ, 'ಅಢೈಚ'ವನ್ನು 'ಅರ್ಧ ತೃತೀಯ' ದಿಂದಲೂ 'ಆಉಠ'ವನ್ನು 'ಅರ್ಧ-ಚತುರ್ಥ'ದಿಂದಲೂ ಸಾಧಿಸಿದ್ದಾರೆ[21]. ಇವುಗಳಲ್ಲಿ ಅರ್ಥಕ್ಕೂ ರಚನೆಗೂ ಯಾವ ಸಂಬಂಧವನ್ನು ಕಲ್ಪಿಸುವಂತಿಲ್ಲ. ಮೊದಲನೆಯದಾಗಿ ಸಂಖ್ಯಾವಾಚಕ ಶಬ್ದಗಳು ತ್ರೀ ಹಾಗೂ ಚತುರ್ (ತೃತೀಯಾ ಹಾಗೂ ಚತುರ್ಥ ಇವು ವಿಶೇಷಣಗಳು). ಇವುಗಳಲ್ಲಿಯ, ಇರಬಹುದಾದ, 'ಊನ' ಶಬ್ದ ಲೋಪವಾಗಿದೆಯೇ? 'ದ್ವಿ ಅರ್ಧ' ದ ಅರ್ಥವೇನು?

ಈ ಕುರಿತು ನನ್ನ ಅಭಿಪ್ರಾಯ ಹೀಗೆಃ

ಒಂದೂವರೆ - ಸಂ ತ್ರಿ+ಅರ್ಧ-ತ್ರ್ಯರ್ಧ-ಮರಾಠೀ ದೀಢ ದೀಡ.
ಎರಡೂವರೆ - ಸಂ. ಅರ್ಧಪಂಚ- ಮರಾಠೀ ಅಢೈಜ್‌ಚ ಅಡೀಚ
ಮೂರೂವರೆ - ಸಂ. ಅರ್ಧ ಸಪ್ತ - ಮರಾಠಿ ಅಢಉಠ್ಠ ಅವುಠ್ಠ, ಆವುಠ.

(ಸಂಸ್ಕೃತದಲ್ಲಿ ತ್ರಿಶತ ಎನ್ನುವುದಕ್ಕೆ ಶತತ್ರಯವೆಂದೂ ಎನ್ನುತ್ತಾರೆಂಬುದನ್ನು ಲಕ್ಷ್ಯಕ್ಕೆ ತೆಗೆದುಕೊಂಡರೆ ಪಂಚ ಅರ್ಧ, ಸಪ್ತ ಅರ್ಧಗಳು ಅರ್ಧಪಂಚ, ಅರ್ಧ ಸಪ್ತಗಳಾಗುವ ಬಗ್ಗೆ ಸಂಶಯ ಬೇಡ)

ಇನ್ನೂ ಒಂದಿಷ್ಟು ವಿಷಯಾಂತರವನ್ನು ಹರಿಬಿಟ್ಟರೆ, ನಮಗೆ ಸ್ಪಷ್ಟವಾಗುವ ಸಂಗತಿಯೆಂದರೆ ಸಪ್ತ=ಊಠ=ಏಳು (ಸಂಖ್ಯೆ). ಸಪ್ತಾಹ (ಏಳು ದಿನಗಳ ವಾರ) ಕ್ಕೆ ಇಂದು ಮರಾಠಿಯಲ್ಲಿ ಹೇಳುವ 'ಆಠವಡಾ' ಮೂಲತಃ' 'ಊಠವಡಾ'. (ಏಳು ದಿನಗಳ ವಾರದಲ್ಲಿ ಆಠದ ಎಂಟರ ಕೆಲಸವೇನು?) ಇನ್ನು ಸಂಸ್ಕೃತದ ಉತ್ತಿಷ್ಠ ಅರ್ಥದಲ್ಲಿಯ ಕನ್ನಡದ 'ಏಳು'ದಿಂದ ಮರಾಠಿಯಲ್ಲಿ 'ಊಠ' ಧಾತು ಸಿದ್ಧವಾಯಿತೆಂದು ಯಾರಾದರೂ ಭಾವಿಸಿದರೆ ಅದನ್ನು ಅಲ್ಲಗಳೆಯುವಂತಿಲ್ಲ!

---

21. ಯಾದವಕಾಲೀನ ಮರಾಠೀ ಭಾಷಾ ಶಂ. ಗೋ. ತುಳಪುಳೆ ಪು. ೨೭೨

ಇಷ್ಟೆಲ್ಲ ವಿವೇಚಿಸುವ ಪ್ರಯೋಜನವೆಂದರೆ ಸಂಸ್ಕೃತದ 'ಅರ್ಧ' ಮರಾಠಿಯಲ್ಲಿ 'ಅ' ಆಗಿ ಹೋಗಿದೆ. ಆದುದರಿಂದ 'ಅಬೋಟ' ಎಂದರೆ 'ಅರ್ಧಬಟ್ಟು' ಅರ್ಧ ಚಂದ್ರಾಕಾರದ ತಿಲಕ. ಜ್ಞಾನೇಶ್ವರೀಯಲ್ಲಿ ಈ ಪ್ರಯೋಗ.

*ಅನನ್ಯೋದಕ ಧುವಟ ವಾಸನಾ ಚೇ ತಸ್ಕಿಷ್ಟ*
*ತೇ ಲಾಗಲಿಜ್‌ಸೇ ಅಬೋಟ ಚಂದನಾಚೇಜ್ (೧೫.೩)*

> ಶ್ರೀಗುರುವಿನಲ್ಲಿ ನಿಷ್ಠೆಯುಳ್ಳ (ನಮ್ಮ) ಭಾವನೆಯು ಅವರ ಭಕ್ತಿಯಲ್ಲಿ ಮಿಂದು ಶುದ್ಧವಾದದ್ದು. ಅದೇ (ಆ ಪಾದಾರವಿಂದಗಳಿಗೆ) ಹಚ್ಚಿದ ಚಂದನದ ಅರ್ಧ ಚಂದ್ರಾಕಾರದ ತಿಲಕ.

*ಜಾತತೇನ ಪ್ರಸಂಗೇಜ್ ಸ್ತ್ರೀದೇಹ ಸಿವಣೇಜ್. ಅಂಗೇಜ್*
*ತೇಥೌನಿ ದೇಹ ಆವಘೇಜ್ ಅಬೋಟೇ ಕೀಜೇ (೧೭.೨೧೦)*

> ಜನನ ಪ್ರಸಂಗದಲ್ಲಿ ಮಾತ್ರ ಅವನ ಮೈ ಸ್ತ್ರೀದೇಹವನ್ನು ಸ್ಪರ್ಶಿಸಿತು. ಅಲ್ಲಿಂದ ಅವನ ದೇಹವೆಲ್ಲವೂ ಅರ್ಧ ಚಂದ್ರಾಕಾರದ ತಿಲಕ (ಚಂದನ ಚರ್ಚಿತ) ಮಯಮಾಡುವುದು.

**ಬೋಡಿಕಾ ಬೋಟಿ, ಬೋಳ**

*ಮುಂಜ ಕಟ್ಟಟಂ ಗುಂಡಿಗೆ ಬೋಳಮಂತೆ ಮಣಿವಂತಮಿಪೀಕ್ಷಣ ಸಾಖ್ಯ ಪೇತುವೇ ಕಂಡೊಡೆ ಬಾಲೆಯರ್* ಎಂದಾಗಿ 'ಬೋಳ್' ಶಬ್ದದ ಪ್ರಯೋಗ ಪಂಪರಾಮಾಯಣದಲ್ಲಿ (೪.೮೧) ಬರುತ್ತದೆ. *ಭಕ್ತರ ಕಂಡರೆ ಬೋಳರಪ್ಪಿರಯ್ಯಾ* ಎಂದೂ ಬಸವೇಶ್ವರರು ಹೇಳುತ್ತಾರೆ. (ವಚನ ೧೦೩) 'ಬೋಳ' ಶಬ್ದ 'ಬೋಡ' ಆಗಿ ಮರಾಠಿಯಲ್ಲಿ ಹೋಗಿದೆ. ಅದಕ್ಕೆ ಸಂಸ್ಕೃತದಿಂದ ಬಂದ 'ಕ' ಪ್ರತ್ಯಯ ಹತ್ತಿ (ಬಾಲ-ಬಾಲಕ, ಕರಂಡ-ಕರಂಡಕ ಇತ್ಯಾದಿ) ಪುಲ್ಲಿಂಗದ 'ಆ'ಕಾರದೊಡನೆ 'ಬೋಡಕಾ' ಬೋಡಿಕಾ' ಶಬ್ದ ಸಿದ್ಧವಾಗಿದೆ.

ಪ್ರಸಂಗ ಲೀಳಾಚರಿತ್ರದಲ್ಲಿಯದು. ಮುನ್ನದಿನ ಭಿಕ್ಷೆಗೆ ಹೋದ ಚಾಂಗದೇವ ಭಟ ಊರಿಗೆ ಹೋಗಿದ್ದಾನೆ. ಆವನ ಆವಳಿ ತಮ್ಮ ನಾಥೋಬಾ ಊರಿನಿಂದ ಬಂದವನು ಆಂದು ಭಿಕ್ಷೆಗೆ ಹೋಗಿದ್ದಾನೆ.

*ಪಾಣೀವಘಾಜ್ ಬಾಇಲೀಜ್ ದೇಖಿಲೀಜ್ 'ಆವೋ ಆವೋ ಮಾಯಿ;*
*ಕಾಲಿಚಾ ಬಟಿಕು ಬೋಡಿಕಾಜ್ ಕೀಜ್ ; ಆಜೀಚಿ ಏವಢೇಜ್ ಕೇಶ' (ಪೂರ್ವಾರ್ಧ ೧೦೮)*

> (ಗೋದಾವರಿ ನದಿಯಲ್ಲಿ) ನೀರು ತುಂಬುತ್ತಿದ್ದ ಹೆಂಗಸು ನೋಡಿದಳು.:
> 'ಆಯ್ ಆಯ್ ತಾಯೀ; ನಿನ್ನಿನ ಹುಡುಗ ಬೋಳು (ತಲೆಯವ) ನಿದ್ದನಲ್ಲ; ಇಂದು ಇಷ್ಟು ಕೂದಲು;

**ಬೊನೇಁ ಭಾಣೇಁ ಬೋನ ಅನ್ನ, ನೈವೇದ್ಯ**

*ಎತ್ತಿದ ಬೋನದೊಳ್ ಕಲ್ಯಾಣಾಮೃತಾಹಾರಮನಾರೋಗಿಸಿ (ಪಂಪಭಾರತ ೩.೭೯ವ)* ಎಂದು ಹಳಗನ್ನಡದಲ್ಲಿ ಬರುವ ಬೋನ ಶಬ್ದದ ಅರ್ಥ ಅನ್ನ, ಆಹಾರ. ವಚನ ಸಾಹಿತ್ಯದಲ್ಲಿಯೂ ಅದೇ ಅರ್ಥದಲ್ಲಿ ಬಳಸಲಾದ ಈ ಶಬ್ದ *(ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಮ್ಬರಯ್ಯ)* ಇಂದಿಗೂ ಉತ್ತರ ಕರ್ನಾಟಕದ ಆಡುಮಾತಿನಲ್ಲಿ ಬಾನ ಎಂದಾಗಿ ಉಳಿದಿದೆ. ಇವೆರಡೂ ರೂಪಗಳು ಜ್ಞಾನೇಶ್ವರೀಯಲ್ಲಿ ಕಾಣಸಿಕೊಳ್ಳುತ್ತವೆ. ಕನ್ನಡದ ಪ್ರಭಾವವನ್ನು ಒಪ್ಪಲೊಲ್ಲದ ತುಳಮುಳೆಯವರು ಭೋಜನ>ಬೋನ. ಭಾಜನ>ಭಾಣ ಎಂದು ಸಾಧಿಸಲೆತ್ನಿಸಿದ್ದಾರೆ. ಪ್ರಾಕೃತದಲ್ಲಿ ಶಬ್ದ ಸಿದ್ಧಿಯಾಗುವಾಗ ಜ ಲುಕ್ ಆಗಿ ಸ್ವರವಾಯಿತೆಂದರೂ, ಈ ಸ್ವರ ಲೋಪ ಮಾಡಬಾರದೆಂದೂ[22] ಇವುಗಳ ಸಂಧಿ ಮಾಡಬಾರದೆಂದೂ ಹೇಮಚಂದ್ರನು ಹೇಳಿದುದನ್ನು ಅವರು ಪ್ರಾಯಶಃ ಮರೆತಿದ್ದಾರೆ. ಆದರಂತೆ ಭೋಜನ>ಭೋಅಣ ಆಗುವುದು ಬೇಡವೇ?

ಜ್ಞಾನೇಶ್ವರಿಯಲ್ಲಿಯ ಪ್ರಯೋಗಗಳು ಇಂತಿವೆ.

*ಬುದ್ಧಿಚೇನಿ ಶಾಕೇಁ ಹಾತಬೋನೇಁ ನೀಕೇಁ (೬.೨೮೨)*

ಬುದ್ಧಿಯ ಶಾಕ (ತರಕಾರಿ)ಯೊಡನೆ ಕೈಬೋನ (ನೈವೇದ್ಯ) ಚೆನ್ನಾಗಿ ಇಟ್ಟು-

*ಜೇವ್ಹಣಾರಾಚಿಯಾ ರುಚೀ ನಿಪ್ಪತ್ತಿ ಕೀಁ ಬೋನೆಯಾಁಚೀ (೧೭.೧೨೦)*

ಉಣ್ಣುವವನ ರುಚಿಗೆ ತಕ್ಕಂತೆ ಅನ್ನ ಮಾಡಲಾಗುತ್ತದೆ.

*ಜೇಁ ಸಕಳ ರೋಗಾಁಸಿ ಭಾಣೇಁ ವಾಢಲೇಁ ಆಹೇ (೮.೧೪೧)*

ಯಾವುದು ಸಕಲ ರೋಗಗಳಿಗೆ ಅನ್ನವನ್ನು ಬಡಿಸಿದೆಯೋ-

*ನ ಧಾಁತಾಁ ನ ಲೋಟಿಜೇ ಭಾಣೇಁ ಜೇವಿ (೧೮.೧೪೯)*

ತೃಪ್ತಿ ಹೊಂದದೆ ಅನ್ನವನ್ನು ಸರಿಸಬಾರದು, ಆದರಂತೆ.

**ಬೋಹಣೇವಿ-ಬೋಹಣಿಗೆ ದಿನದ ಮೊದಲ ಮಾರಾಟ, ಬೋಣಿಗೆ**

ಸಂಸ್ಕೃತದಲ್ಲಿ 'ಕೊಳ್ಳು', 'ಮಾರು' 'ವಿನಿಮಯಿಸು' ಅರ್ಥದಲ್ಲಿ 'ಪಣ್' ಎಂಬ ಧಾತುವಿದೆ. ಇದರಿಂದ 'ಪಣನ' (ಕೊಳ್ಳುವದು, ಮಾರುವದು marketing), ಪಣ್ಯ (ಮಾರಾಟಕ್ಕಿರುವ, ಉದಾಹರಣೆ ಪಣ್ಯಾಂಗನೆ=ಸೂಳೆ), ಆಪಣ (ಅಂಗಡಿ, ಮಾರುಕಟ್ಟೆ), ವಿಪಣ (ಮಾರಾಟ) ಮುಂತಾದ ಶಬ್ದಗಳು ಹುಟ್ಟಿಕೊಂಡಿವೆ.

ಈ 'ಪಣ' ಶಬ್ದಕ್ಕೆ ಹಳಗನ್ನಡ 'ಮುಂ' ಶಬ್ದ ಆದಿಯಲ್ಲಿ ಹತ್ತಿದಾಗ ಆಗುವ 'ಮುಂಪಣ.' ಶಬ್ದದ ಅರ್ಥ 'ಮೊದಲ ಮಾರಾಟ' 'ಮೊದಲ ವ್ಯವಹಾರ'.

---

22. ನಿಷೇಧಾತ್ಮಕವಾದ, ನ ಕಾರದ ಮುಂದೆ ಬರುವ ಸ್ವರಾದಿ ಶಬ್ದಗಳೊಡನೆ ಆಗುವ, ಕನ್ನಡದಿಂದ ಎರವಲು ಪಡೆದ, ಸ್ವರಲೋಪಸಂಧಿ ಬಿಟ್ಟರೆ ಮರಾಠಿಯಲ್ಲಿ ತನ್ನದೇ ಆದ ಸಂಧಿ ಪ್ರಕಾರವಿಲ್ಲ, ಇದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

'ಮುಂದು' ಅರ್ಥದ 'ಮುಂ' ಶಬ್ದದೊಡನೆ ಮುಂಗಡ, ಮುಂಗಾರು, ಮುಂಗುರುಳು, ಮುಂಗೈ, ಮುಂಗೋಪಿ ಇತ್ಯಾದಿಯಾಗಿ ಅನೇಕ ಶಬ್ದಗಳು ಕನ್ನಡದಲ್ಲಿ ಸಿದ್ಧವಾಗಿವೆ.

ಈ 'ಮುಂಪಣ'ದಿಂದ ಮುಪ್ಪಣ, ಮೊಪ್ಪಣ ಬೋಂಪಣ ಹೀಗೆ ಶಬ್ದ ಬೆಳೆದಿರಬಹುದಾಗಿದೆ. ಇವಾವ ಶಬ್ದಗಳ ಪ್ರಯೋಗಗಳೂ ನಮಗೆ ಹಳಗನ್ನಡ ಕೃತಿಗಳಲ್ಲಿ ದೊರೆತಿಲ್ಲವೆಂದು ಇಲ್ಲಿ ಸ್ಪಷ್ಟಪಡಿಸಬೇಕು.

ಇನ್ನು 'ಮ' ದಿಂದ 'ಬ' ರೂಪಾಂತರ ಕನ್ನಡದಲ್ಲಿ ಆದಿಯಲ್ಲಾಗುವುದಿಲ್ಲ. ಮರಾಠಿಯಲ್ಲೂ ಅಪರೂಪ. ಕನ್ನಡದ 'ಮರಡಿ' ಮರಾಠಿಯಲ್ಲಿ 'ಬರಡಿ'ಯಾಗಿ ಜ್ಞಾನೇಶ್ವರಿಗೆ ಹೋಗಿದೆ. ಮಾತ್ರ>ಮಾಯ>ಬಾಯ>ಬಾಯೀ ಹೀಗೂ ಒಂದು ಸಿದ್ಧಿ. 'ಬೋಂಹಣಿವ' ಶಬ್ದದ ಪ್ರಯೋಗ ಜ್ಞಾನೇಶ್ವರೀಯಲ್ಲಿ ಹೀಗೆ.

*ಸುಷುಮ್ನೇತೇನಿ ತೋಂಡೇಜ್ ಗಿಳಿಜೇ ಪ್ರಾಣಾಪಾನಾಚೇ ಲೋಂಥೇಜ್*
*ಬೋಂಹಣೇವ ಚಿ ಏವಡೇಜ್ ಭಾರೀ ಜೇಥ (೧೮.೭೮೧)*

> ಸುಷುಮ್ನಾ (ನಾಡಿಯ) ಬಾಯಿಯಿಂದ ಪ್ರಾಣ ಅಪಾನ (ವಾಯುಗಳ) ಪ್ರವಾಹಗಳನ್ನು ನುಂಗುವುದು. ಇಲ್ಲಿ ಬೋಣಿಗೆಯೇ (ಮೊದಲ ವ್ಯವಹಾರವೇ) ಇಷ್ಟು ದೊಡ್ಡದು.

**ಬೋಂಹರೀ ಬೋಂಹಿಲೀ, ಮೊಜಿ ಹೊರೆ**

*ಧರಿತ್ರಿಗ ಪೊಜೆಯೆನಿಪಂ ರಾಜ ನಾಮಧಾರಕನಲ್ತೇ (ಪಂಪರಾಮಾಯಣ ೪.೪೧) ಕಡುಪೆಂಪಿನ ಪೊಜೆಗೆ ನೀವು ಮೊದಲಿಗರಾದಿರ್ (ಪಂಪಭಾರತ ೬.೧೨)* ಹೀಗೆ ಪಳಗನ್ನಡದಲ್ಲಿ ಪೊಜೆ ಶಬ್ದ ಬಳಸಲಾಗಿದೆ. ಇದು ಜ್ಞಾನೇಶ್ವರೀಯಲ್ಲಿ 'ಬೋಂಹರೀ' ಬೋಂಹಿಲೀ ಆಗಿ ಹೋಗಿದೆ.

*ನಾನಾ ವನಾಮಾಝಿ ಬೋಂಹರೀ ಕಡಸಣೇ ಜೇವಿ ನ ಕರೀ*
*ಕಾ ಜಿಜ್ತ ಮೇಲೇಜ್ ನ ವಿಚಾರೀ ಬೈಸತಾಜ್ ಮಾಸೀ (೧೮.೫೫೨)*

> ಬೇರೆ ಬೇರೆ ಕಾಡುಗಳಲ್ಲಿ (ಆಲಿದು, ಉರವಲು ಕಟ್ಟಿಗೆ) ಹೊರೆ ಮಾಡುವವನು (ಇದು ಇರಲಿ, ಆದು ಬೇಡವೆಂದು) ಆಯ್ಕೆ ಮಾಡುವುದಿಲ್ಲ. ನೊಣ (ತಾನು) ಕೂಡ್ರುವ ಮುನ್ನ (ಆ ಜೀವ) ಜೀವಂತವಾಗಿದೆಯೇ, ಸತ್ತಿದೆಯೇ ಯೋಚಿಸುವುದಿಲ್ಲ.

*ತೇಹ್ವಾಜ್ ಪ್ರತ್ಯಾಹಾರೇಜ್ ಖ್ಯಾತಿ ಕೇಲೀ ವಿಕಾರಾಂಚೇಜ್ ಸಪಿಲೇಜ್ ಬೋಂಹಿಲೀಜ್ ಇಂದ್ರಿಯೇಜ್ ಬಾಂಧೌನಿ ಆಣಿಲೀಜ್ ಹೃದಯಾ ಆಜ್ತು (೬.೨೧೪)*

> ಆಗ ಪ್ರತ್ಯಾಹಾರವು ಹೆಸರು ಗಳಿಸಿತು. ವಿಕಾರಗಳ ಹೊರೆಯನ್ನು ಮುಗಿಸಿತು. ಇಂದ್ರಿಯಗಳನ್ನು ಕಟ್ಟಿ ಹೃದಯದಲ್ಲಿ (ಹೃದಯದ ಆಳವಿನಲ್ಲಿ) ತಂದಿತು.

ಹೊರು (ಶಿರೋಧಾರಣ') ಅರ್ಥದಲ್ಲಿಯ ಹಳಗನ್ನಡದ ಪೊಜ್ ಧಾತು ಕೂಡ 'ವೋಽಇರ್' ಆಗಿ ಪ್ರಯೋಗಿಸಲಾಗಿದೆ.

*ಜೈಸೇಜ್ ಸಾಚಾ ರೂಪಾ ಆಡ ಘಾಲೂನಿ ವಿಸರಾಜೇ ಕವಾಡ*
*ಮಗ ಸ್ವಪ್ನೀಚೇಜ್ ಕಾಬಾಡ ವೋಽಇರೀ ನಿದ್ರಾ (೧೮.೫೩೭)*

ಜಾಗೃತಿಯಲ್ಲಿ ರೂಪವನ್ನು ಮರೆಗೆ ಮಾಡಿ, ವಿಸ್ಮೃತಿಯ ಕದವನ್ನಿಕ್ಕಿ, ನಿದ್ದೆಯು ಕನಸಿನ ಹೊರೆಯನ್ನು ಹೊರುತ್ತದೆ.

**ಬೋಳಣೇಜ್, ಬೋಳಾವಣೇಜ್ ಓಲೈಸು ಸೇವೆಮಾಡು**

ಕನ್ನಡದ ಓಲೈಸು, ಓಲಯಿಸು, ಓಲಗಿಸು ಶಬ್ದಗಳು ಕಿಟೆಲ್‌ರಿಗೆ ಅನ್ಯಭಾಷೆಯಿಂದ ಬಂದಿರಬಹುದೆನ್ನಿಸಿವೆ. ಇವಕ್ಕೆ ಮೂಲವಾದ 'ಓಲಗ' ಶಬ್ದ ತಮಿಳು 'ಓಲಕ್ಕ' ದಿಂದ ಬಂದುದಾಗಿದೆ ಎಂದು ಅವರ ಅಭಿಪ್ರಾಯ. ಆದರೆ ಹಳಗನ್ನಡದ 'ಒಣರ್' ಧಾತುವಿನಿಂದ ಬಂದ ಕನ್ನಡದ್ದೇ 'ಓರು' ಧಾತುವಿಗೆ 'ವಿಚಾರ ವಿನಿಮಯಮಾಡು' ಎಂಬರ್ಥವಿದೆ. ಹೀಗೆ 'ಓಲಗ' ಶಬ್ದ ಕನ್ನಡದ್ದೇ. ಇದರಿಂದಾದ 'ಓಲಗಿಸು'. 'ಓಲಯಿಸು' ಧಾತುಗಳೂ ಕನ್ನಡವೇ. ಈ 'ಓಲಯಿಸು' ಮರಾಠಿಯಲ್ಲಿ ಬೋಳಣೇಜ್ ಬೋಳಾವಣೇಜ್ ಆಗಿ ಜ್ಞಾನೇಶ್ವರೀಯಲ್ಲಿ ಬಳಸಿದುದನ್ನು ನೋಡಬಹುದು.

*ಜೇ ಮುಮುಕ್ಷಾ ಮಾರ್ಗ ಬೋಳಾವೀ ಮೋಹೋ ರಾತ್ರಿಚೀ ಧರ್ಮದಿವೀ (೧೬.೬೪)*

ಯಾವುದು (ಜ್ಞಾನವು) ಮೋಕ್ಷಾರ್ಥಿಗಳಿಗೆ ದಾರಿ (ತೋರಿ) ಸೇವೆ ಮಾಡುವುದೋ,
ಮೋಹಮಯವಾದ ರಾತ್ರಿಯಲ್ಲಿ ಧರ್ಮದೀಪವಾಗುವುದೋ-

*ಅಂಧಾರಿಜ್ ಅಭಂಗು ದಿವಾ ಆಡವಿಜ್ ಸಮರ್ಥು ಬೋಳಾವಾ*
*ತೈಸಾ ಪ್ರಣವು ಜಾಣಾವಾ ಕರ್ಮಾರಂಭೀಜ್ (೧೭.೩೫೬)*

ಕತ್ತಲೆಯಲ್ಲಿ ಆರದ ದೀಪವು, ಅಡವಿಯಲ್ಲಿ ಗಟ್ಟಿಗನಾದ ಓಲೆಕಾರನು ಹಾಗೆ ಕರ್ಮದ ಆರಂಭದಲ್ಲಿ ಪ್ರಣವ ಮಂತ್ರವೆಂದು ತಿಳಿ.

ಕನ್ನಡದಲ್ಲೂ 'ಬೋಳಯಿಸು' ಎಂಬುದಾಗಿ ಧಾತುವಿದೆ. ಬೋಳಯಿಸು ಎಂದೊಪಸುನಯವಲ್ಲಿ (ನಚಿರಾಜೀಯ). ಇದನ್ನು ಕಿಟೆಲ್‌ರು ಪರಭಾಷಿಕವೆಂದು ಭಾವಿಸಿದ್ದಾರೆ. ಕನ್ನಡದ್ದೇ 'ಓಲೈಸು' ಇದು 'ಬೋಳಯಿಸು' ಆದುದು ಸ್ಪಷ್ಟವಿದೆ. ಕಿಟೆಲ್‌ರು ಇದು ಮರಾಠಿಯ ಭುಲವಣೇಜ್ (ಮೋಹಕ್ಕೆ ಒಳಪಡಿಸು) ಅಥವಾ ಭೋಲಾ (ಮುಗ್ಧ) ದಿಂದ ಬಂದಿರಬಹುದೆಂಬುದು ಸರಿಯಲ್ಲ. ಮರಾಠೀ ಬೋಳಣೇಜ್', 'ಬೋಳಾವಣೇಜ್' ಗಾಗಲೀ ಕನ್ನಡದ 'ಬೋಳಯಿಸು' ಗಾಗಲೀ ಈ ಅರ್ಥ ಇಲ್ಲ.

**ಭಾಂಗಾರ ಬಂಗಾರ**

ವಾಮನ ಶಿವರಾಮ ಆಪಟೆಯವರು ಸಂಪಾದಿಸಿದ ಸಂಸ್ಕೃತ ಇಂಗ್ಲೀಷು ಕೋಶ ಬಹಳ ಅಭ್ಯಾಸಪೂರ್ಣವಾದುದು. ಕಿಟೆಲ್ಲರು ತಮ್ಮ ಕನ್ನಡ ಇಂಗ್ಲೀಷು ಕೋಶಕ್ಕೆ, ಅದರಲ್ಲಿ ಬರುವ ಸಂಸ್ಕೃತ ಶಬ್ದಗಳಿಗೆ ಆಪಟೆಯವರ ಕೋಶವನ್ನೇ ಆಧಾರಭೂತವನ್ನಾಗಿ ಇಟ್ಟುಕೊಂಡಿದ್ದಾರೆ.

ಕನ್ನಡದ 'ಬಂಗಾರ' ಶಬ್ದವನ್ನು ಸಂಸ್ಕೃತದ 'ಭೃಂಗಾರ'ದ ತದ್ಭವವೆಂದು ಕಿಟೆಲ್ಲರು ಕೊಟ್ಟಿದ್ದರಿಂದ ಈ ಮಾತು ಹೇಳಬೇಕಾಯಿತು. ಇನ್ನು 'ಭೃಂಗಾರ'ದ ವಿಚಾರ. ಆಪಟೇ ಕಿಟೆಲ್ಲರು ಹೇಳುವಂತೆ 'ಭೃಂಗಾರ'ದ ಮಹತ್ವದ ಅರ್ಥ 'ಸುವರ್ಣಪಾತ್ರೆ'. ಅದೂ ಅಂತಿಂತಹದಲ್ಲ. ಸೊಂಡೆಯ ಗಿಂಡಿಯಂತಿರುವ (ಬಡುಕಾದ ಸೊಂಡೆಯ ಕಿಟ್ಟಲಿ ಅಥವಾ ಸುರಯಿಯಂತಹ ಮದ್ಯಪಾತ್ರೆ ಆಕಾರದ) ಒಂದು ಪಾತ್ರೆ. *ಶಿಶಿರಸುರಭಿಸಲಿಲ ಪೂರ್ಣೋಯಂ ಭೃಂಗಾರಃ (ವೇಣಿಸಂಹಾರ ೬)* ತಂಪಾದ ಆಹ್ಲಾದಕರ ನೀರಿನಿಂದ ತುಂಬಿದ ಭೃಂಗಾರವಿದು. ಹಾಲು, ನೀರು ಹುಯ್ಯಲು, ತೀರ್ಥಕೊಡಲು ಅನುಕೂಲವಾದ ಇಂತಹಚೊಂಬು ರಾಜ್ಯಾಭಿಷೇಕ ಮದುವೆಗಳಲ್ಲಿ ಬಳಸಲಾಗುತ್ತಿತ್ತು. (ನೋಡಿರಿ ಚಂದ್ರಪ್ರಭ ಪುರಾಣ ೬.೫೨)

'ಭೃಂಗ'ವೆಂದರೆ 'ತುಂಬಿ' ಅಷ್ಟೇ ಅಲ್ಲ. ಜಾತಕ, ಸಾರಂಗ ಜಾತಿಯ ಪಕ್ಷಿಗಳಿಗೂ ಅದು ನಾಮಾಭಿದಾನ. 'ಭೃಂಗಾರ'ವೆಂದರೆ ಅದರ ಗೂಡು. ಪಾತ್ರೆಯ ಆಕಾರ ಆ ಗೂಡನ್ನೇ ಹೋಲುವುದರಿಂದ ಅದಕ್ಕೆ 'ಭೃಂಗಾರ'ವೆಂದಿರಬೇಕು. ಆ ವಿಚಾರ ಇಲ್ಲಿ ಅಪ್ರಸ್ತುತ.

ಆಪಟೇಯವರೇ ಕೊಟ್ಟಂತೆ 'ಭೃಂಗಾರ'ದ ಅರ್ಥ 'ಬಂಗಾರ'ವಲ್ಲ. 'ಭೃಂಗಾರಗ'ದ ಅರ್ಥ ಬಂಗಾರ. 'ಭೃಂಗಾರ'ಕ್ಕೆ ಬೇಕಿರುವ ಅರ್ಥದಲ್ಲಿಯ 'ಭೃಂಗಾರಗ'ದ ಸಂದರ್ಭ ಕಿಟೆಲ್ಲರ ಕಣ್‌ತಪ್ಪಿ ಹೋಗಿರಬಹುದಾಗಿದೆ. ಆರ್ ಶಬ್ದಕ್ಕೆ ಕೂಡಿರು, ಒಂದಾಗಿರು ಎಂಬರ್ಥಗಳನ್ನು ಕಿಟೆಲ್‌ರು ಕೊಡುತ್ತಾರೆ. ಬಂಗಾರದ ಗಟ್ಟಿ, ಅಲಂಕಾರ ಮಾಡದೆ ಇದ್ದ ಬಂಗಾರ ಎನ್ನುವ ಅರ್ಥದಲ್ಲಿ ಪೊನ್+ಆರ್>ಪೊನ್ನಾರ್>ಬಂಗಾರವಾಯಿತೆಂದು ನನ್ನ ಅನಿಸಿಕೆಯಾಗಿದೆ. ಈ ಅರ್ಥದಲ್ಲಿಯ ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು ಗಮನಾರ್ಹ:

*ತರ್ಹೀಜ್ ಘಡಲೀಜ್ ಏಕೇಜ್ ಚಿ ಭಾಂಗಾರೇಜ್ ಪರಬ್ರಹ್ಮೇಜ್ (೬.೯೮)*
ಆದರೂ, ಒಂದೇ ಪರಬ್ರಹ್ಮವೆಂಬ ಬಂಗಾರದಿಂದ ಮಾಡಿದುದಾಗಿವೆ.

*ಕಾಜ್ ಬೀಜ ಚಿ ಜಾಲೀಜ್ ತರು ಅಥವಾ ಭಾಂಗಾರ ತೇಜ್ ಅಳಂಕಾರು (೯.೬೪)*
ಬೀಜವೇ ವೃಕ್ಷವಾದಂತೆ ಇಲ್ಲವೆ ಬಂಗಾರವೇ ಅಲಂಕಾರವಾದಂತೆ

*ಪ್ರೇಮಾಚೇನಿ ಭಾಂಗಾರೇಜ್ ನಿರ್ವಾಳೂನಿ ನೇವ್ರೇಜ್ (೧೫.೦೪)*
ಪ್ರೇಮದ (ಪ್ರೇಮವೆಂಬ) ಬಂಗಾರವನ್ನು ಶುದ್ಧಮಾಡಿ

(ತಯಾರಿಸಿದ) ನೂಪುರಗಳನ್ನು (ಸದ್ಗುರುವಿನ ಸುಕುಮಾರ ಕಾಲುಗಳಲ್ಲಿ ಹಾಕುವಾ)

*ಭಾಂಗಾರಾ ಪರೌತೇಜ್ ಕಾಹೀಜ್ ಲೇಣೇಜ್ ಗುಂಜಭರಿ ಹೀ ನಾಹಿಜ್ (೧೮.೧೧೮೩)*

ಬಂಗಾರವನ್ನುಳಿದು ಆಭೂಷಣವು ಒಂದು ಗುಂಜಿಯಷ್ಟೂ ಇಲ್ಲ (ಎಂಬುದನ್ನು ಕರಗಿಸಿ ನೋಡಬೇಕು. ಹಾಗೆ)

ತುಳಪುಳೆಯವರು 'ಭಾಂಗಾರ' ಶಬ್ದವು ಒಂದೆಡೆ ಕೊಂಕಣಿಯಿಂದ ಬಂದಿದೆಯೆಂದೂ ಇನ್ನೊಂದೆಡೆ ಕನ್ನಡದಿಂದ ಬಂದಿದೆಯೆಂದೂ ಹೇಳುತ್ತಾರೆ.[23]

**ಭಾಡಿ-ಬಡ್ಡಿ ಸೂಳೆ**

ದಕ್ಷಿಣ ಕರ್ನಾಟಕದ ಜನಪದ ಭಾಷೆಯಲ್ಲಿ ಬಳಕೆಯಲ್ಲಿರುವ 'ಸೂಳೆ' ಅರ್ಥದ 'ಬಡ್ಡಿ', ಉತ್ತರ ಕರ್ನಾಟಕದ 'ಬೋಟಿ' ಒಂದೇ ಮೂಲದವು. (ಹಳಗನ್ನಡದ ಬಱಡು=ಬೋಟಿ). ಸಂತಾನಾರ್ಥವಾಗಿ ಅಲ್ಲ ಎಂಬುದನ್ನು ಗ್ರಹಿಸಿದರೆ ಬಱಡು = ಬಱಡಿ = ಬಡ್ಡಿ ಹೀಗೆ ಬೆಳವಣಿಗೆ ಅರ್ಥವಾಗಬಹುದು.

ಈ 'ಬಡ್ಡಿ' ಶಬ್ದ ಜ್ಞಾನೇಶ್ವರೀಯಲ್ಲಿ 'ಭಾಡಿ'ಯಾಗಿ ಹೋಗಿದೆ.

ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ (ಭಗವದ್ಗೀತೆ ೯.೨೧)

ಇದನ್ನು ವ್ಯಾಖ್ಯಾನಿಸುವಾಗ ಜ್ಞಾನೇಶ್ವರರು ಕೊಡುವ ದೃಷ್ಟಾಂತ ಹೀಗೆ-

*ಜೈಸಾ ಭಾಡಿಚಾ ಕವಡಾ ವೇಚೇ ಮಗ ದಾರ ಹೀ ಚೇಜ್‌ಪೂಜ್ ನ್ಯೆಯೇ ತೇಯಾಚೇ*

*ಐಸೇ ಲಾಜಿರವಾಣೇ ದೀಕ್ಷಿತಾಚೇಜ್ ಕಾಇ ಸಾಂಘೋ (೯.೩೨೬)*

ಸೂಳೆಯ ಕವಡೆ (ಹಣ) ವೆಚ್ಚಮಾಡಿ (ಮುಗಿಸಿ) ದ ಬಳಿಕ ಅವಳ ಕದವನ್ನೂ ತಟ್ಟಲು ಬರುವುದಿಲ್ಲ. ಇಂತಹ ನಾಚಿಕೆಯಿಲ್ಲದ ದೀಕ್ಷಿತರದು ಏನು ಹೇಳುವುದು?

ಸಂಸ್ಕೃತ 'ಭಾಟಿ' ಶಬ್ದಕ್ಕೆ ವೇಶ್ಯೆಯ ಗಳಿಕೆಯೆಂಬರ್ಥವನ್ನೇನ್ನೋ ಆಪಟೆ ಕೊಡುತ್ತಾರೆ. ಆದರೆ ಕರ್ನಾಟಕ ಮಹಾರಾಷ್ಟ್ರಗಳಲ್ಲಿಯ ಇದನ್ನು ಕುರಿತಾದ ಅಪಶಬ್ದಗಳ ಬೆಳವಣಿಗೆಯನ್ನು (ಭಾಡ್ಯಾ, ಭಡವಾ, ಭಾಡಖಾವ್) ಗಮನಿಸಿದರೆ ಇದು ಶುದ್ಧ 'ದೇಶ್ಯ'ವೆನಿಸುತ್ತದೆ.

**ಭೇಂಡು-ಬೆಂಡು ಪೇಂಡವಳಾ ಬೆಂಡು, ಬೆಂಡಿನ ಅಲಂಕಾರ**

ಆಡುಮಾತಿನಲ್ಲಿ ಸಾಕಷ್ಟು ಬಳಕೆಯಲ್ಲಿರುವ, ಹಳಗನ್ನಡದಲ್ಲಿ ಪ್ರಯೋಗಗಳು ದೊರೆಯದಿದ್ದರೂ ನಡುಗನ್ನಡದಲ್ಲಿ ದೊರೆಯುವ 'ಬೆಂಡು' ಶಬ್ದ ಅದೇ ಅರ್ಥದಲ್ಲಿ ಜ್ಞಾನೇಶ್ವರಿಯಲ್ಲಿ ಕಾಣಿಸಿಕೊಂಡಿದೆ.

---

23. ಯಾದವಕಾಲೀನ ಮರಾಠೀ ಭಾಷಾ ಪುಟ ೯೧ ಹಾಗೂ ೧೦೫

*ಕೋರಡಾ ನಾ ಪೋಲಾ ಉಪೇಗಾ ಅಥಿ ಗೇಲಾ*
*ತೋ ವಾಢೌನಿ ಮೋಡಲಾ ಭೇಂಡು ಜೈಸಾ (೧೮.೫೭೩)*

ಅದು ಒಣದಿರಲಿ, ಹಸಿಯದಿರಲಿ, ಬಳಕೆಗೆ ಬರಲಾರದ ಬೆಂಡು
ಬೆಳೆದು ಮುರಿದು ಹೋದಂತೆ-

ಅದೇ ಅರ್ಥದಲ್ಲಿ 'ಪೇಂಡವಳಾ' ಶಬ್ದ ಎರಡು ಸಲ ಪ್ರಯುಕ್ತವಾಗಿದೆ. ಈ ಶಬ್ದಕ್ಕೆ ಬೇರೆ ವ್ಯುತ್ಪತ್ತಿ ದೊರೆಯದ್ದರಿಂದಲೂ ಕನ್ನಡದ 'ಬೆಂಡು' ಶಬ್ದಕ್ಕೆ ತೀರ ಹತ್ತಿರವಾಗಿದ್ದರಿಂದಲೂ 'ಪೆಂಡು' ಶಬ್ದವೇ ಮೂಲವಿರಬಹುದೇ?

*ನಾಹೀಜ್ ಪಾಪಾಚಾ ಕಾಂಟಾಳಾ ನೇಜ್‌ದೀ ಪುಣ್ಯಾಸಿ ಜೀವಾಳಾ*
*ಲಾಜೇಚಾ ಪೇಂಡವಳಾ ಖಿಣೌನಿ ಘಾಲೀ (೧೩.೭೭೪)*

ಪಾಪದ ಬಗ್ಗೆ ಬೇಸರವಿಲ್ಲ. ಪುಣ್ಯದ ಬಗ್ಗೆ ಪ್ರೇಮವಿಲ್ಲ.
ಲಜ್ಜೆಯ ಬೆಂಡನ್ನು ಅಗೆದೊಗೆದಿದ್ದಾನೆ.

*ತರಿ ಹೇ ಗಂಧರ್ವ ನಗರೀಚೇ ಉಮಾಳೇ ಜಾಣ ಮೋಕಳೀಚೇ ಪೇಂಡವಳೇ*
*ಆಗಾ ಚಿತ್ರೀಚೀಜ್ ಫಳೇಜ್ ವೀರ ಹೇ ದೇಖೈ (೧೧.೪೫೯ ಪಾಠಭೇದ)*

ಈ ವೀರರು ಗಂಧರ್ವನಗರಿಯ ಪ್ರವಾಹವಿದ್ದಂತೆ. ಪೊಳ್ಳು
ಬೆಂಡಿನ ಅಲಂಕಾರವಿದ್ದಂತೆ. ಅಯ್ಯಾ, ಮಣ್ಣಿನಿಂದ ಮಾಡಿದ
ಹಣ್ಣುಗಳಿದ್ದಂತೆ, ನೋಡೈ.

ಒಂದೇ ಸಂದರ್ಭದಲ್ಲಿ ಬರುವ 'ಪೇಂದಳಿ' ಶಬ್ದವನ್ನು 'ಬೆಂಡು' ಎಂದು ಅರ್ಥೈಸಿ ಒಂದು ಓವಿಯ ಅನ್ವಯ ಹೀಗೆ ಹಚ್ಚಿದ್ದೇನೆ.

*ಕಾಜ್ ಆಪುಲಾಜ್ ಗರಳ ಜ್ವಾಳೀಜ್ ಜಾಳೀಜ್ ತೇಯಾಜ್ ಅಂಗಾಚೀಜ್*
*ಪೇಂವಳಿಜ್‌ತೇ ಸರ್ಪಚಿ ಕರೀಜ್‌ಬೀಳೀಜ್ ನಿರುಂಧಲಾಜ್ (೧೬.೪೦೮)*

ತನ್ನ ವಿಷದ ಜ್ವಾಲೆಗಳಿಂದ (ಇತರ ಜೀವಜಂತುಗಳ ಈ ಸಂದರ್ಭ ಮೊದಲಿನ ಓವಿಗಳಲ್ಲಿ ಬಂದಿದೆ) ಅವುಗಳ ಮೈಯ ಬೆಂಡನ್ನು ಸುಡುವ, ಬಿಲದಲ್ಲಿ ವಾಸಿಸುವ, ಹಾವನ್ನು ಮಾಡುತ್ತೇನೆ.

ಮರಾಠಿ ಭಾಷ್ಯಕಾರರು 'ಪೇಂದಳಿ'ಗೆ 'ಸಿಂಬೆ' ಅರ್ಥ ಹಚ್ಚಿದ್ದಾರಲ್ಲದೆ ಸರ್ಪವು ತನ್ನದೇ ಮೈಯನ್ನು ಸುಟ್ಟುಕೊಳ್ಳುವುದೆಂದು ಅನ್ವಯ ಹಚ್ಚಿದ್ದಾರೆ.

**-ಮ, -ಬ**

ಶಬ್ದಗಳ ಆದಿಯಲ್ಲಿರುವ ಸ್ಪರ್ಶ ಹಾಗೂ ಅನುನಾಸಿಕ ವ್ಯಂಜನಗಳು (ಅನ್ಯಭಾಷೆಯಿಂದ) ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಬರುವಾಗ ಅವಿಕೃತವಾಗಿ ಉಳಿಯುತ್ತವೆಯೆಂದು ಮರಾಠಿ ಪಂಡಿತರು ಭಾವಿಸಿದ್ದಾರೆ. ಜ್ಞಾನೇಶ್ವರೀ ಕಾಲವೆಂಬುದು ಅಭ್ಯಾಸಕ್ಕಾಗಿ ಕಲ್ಪಿಸಿದ ಒಂದು ಕಾಲಮಿತಿಯೇ ವಿನಾ ಅದು ಭಾಷೆಯ ಪ್ರಕಾರವಾಗಲಾರದು. ಅಲ್ಲದೆ ಸಂಸ್ಕೃತ ಮೂಲವಾದ ಭಾರತೀಯ ಆರ್ಯ ಭಾಷೆಗಳ ಬೆಳವಣಿಗೆಗಳಲ್ಲಿ ಸೂಕ್ಷ್ಮ ಅಂತರವಿದ್ದರೂ ಸ್ಥೂಲವಾದ ಸಿದ್ಧಾಂತಗಳನ್ನು ಮನ್ನಿಸಲೇಬೇಕಾಗುತ್ತದೆ. ಭಾಷಾ ಕುಟುಂಬಕ್ಕೆ ಇದು ಆವಶ್ಯಕವೂ ಹೌದು.

ಇನ್ನು ಮೇಲ್ಕಾಣಿಸಿದ ಸಿದ್ಧಾಂತ ಎಷ್ಟರಮಟ್ಟಿಗೆ ಗಟ್ಟಿ ತಳಹದಿ ಹೊಂದಿದೆ-ಯೆಂಬುದನ್ನು ನೋಡಬೇಕು. ಈ ದಿಸೆಯಲ್ಲಿ ಕೆಲವು ಶಬ್ದಗಳು

ಮೊರಡು >ಮರಡು >ಬರಡ

*ಎಱಗುವ ಮಱೆ ಕವಡಿ ಬರ್ಪ ತೊಟಿ ಬೆಟ್ಟು ತೆವರ್ ಮೊರಡುವ ಜಲಧಿಗಳನೆ (ಆದಿಪುರಾಣ ೬.೬೨)* ಎಂಬುದಾಗಿ ಹಳಗನ್ನಡವಲ್ಲಿಯು ಪ್ರಯೋಗ. ಇದು 'ಬರಡ' ಆಗಿ ಜ್ಞಾನೇಶ್ವರೀಯಲ್ಲಿ ಹೀಗೆ ಬಂದಿದೆ.

*ಬರಡ ಕಿಜ್ ಪೀಕೇ ಕವಣಾಚೀ ಹೇಜ್ (೧೩.೧೩)*

(ಇದು) ಬರಡು (ಭೂಮಿಯೇ) ಅಥವಾ ಬೆಳೆಯುವ (ಭೂಮಿಯೇ) ಯಾರದಿದು?

(ಹಳಗನ್ನಡದ 'ಬಱಡು' ಶಬ್ದದೊಡನೆ ಹೋಲಿಸಬೇಕು)

ಮುಣ್ >ಮುಣ್ಡ್ >ಬುಡ್

ಮುಟುಗು ನಿಮಗ್ನೇ ಎಂದು ಕೇಶಿರಾಜನು ಹೇಳಿರುವ ಹಳಗನ್ನಡದ ಧಾತುವಿಗೆ ಮುಣ್ (ಅಥವಾ ಮುಟ್) ಎಂಬ ಧಾತು ಮೂಲವಿರಬಹುದಾಗಿದೆ. ಕಿಟೆಲ್‌ರು ಇದಕ್ಕೆ ಸಮಾಂತರವೆಂದು ಹೇಳಿರುವ ಸಂಸ್ಕೃತದ 'ಮುಂಡ್' ಧಾತುವೂ ಇದರಿಂದಲೇ ಹುಟ್ಟಿರಬಹುದಾಗಿದೆ. ಈ 'ಮುಣ್' ಮರಾಠಿಯಲ್ಲಿ 'ಬುಡ' ಆಗಿ ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾಗಿದೆ. (ಹಿಂದಿಯಲ್ಲಿ ಡೂಬ')

*ಅಜ್ಞಾನ ಪಂಕೀ ಬುಡಾಲೇ (೩.೧೯೩)*

ಅಜ್ಞಾನದ ಕೆಸರಿನಲ್ಲಿ ಮುಳುಗಿದರು.

ಆದಿ 'ಮ' ವು 'ಬ' ಆದ ಬಗ್ಗೆ ಇನ್ನೂ ಕೆಲವು ಉದಾಹರಣೆಗಳು.

*ಮಾತೃ (ಸಂ) - ಮಾಯ (ಅಪ) - ಬಾಯ, ಬಾಈ (ಮರಾಠಿ) -ಮಾಜ್ (ಹಿಂದೀ) - ಬಾ (ಗುಜ) ಮಹಿಷ (ಸಂ) - ಮಹಿಸಿ (ಅಪ) - ಮ್ಹೈಸ (ಮರಾಠಿ) - ಭೈಜ್‌ಸ (ಹಿಂದೀ) ಮಾಠ (ಮರಾಠಿ) ಆರ್ಥ ಹರವಿ ಬಾಜ್‌ಠ (ಮರಾಠಿ)*
*ಮಡಂಗು (ಹಳಗನ್ನಡ) - ಬಾಳಗ (ಮರಾಠಿ) ಮಂಡೂಕ (ಸಂ) - ಬೆಡೂಕ (ಮರಾಠಿ) - ಮೇಥಕ (ಹಿಂದೀ) ಮುಲಗಾ (ಮರಾಠೀ) - ಬುರಗೋ (ಕೊಂಕಣಿ)*

*'ಮ' ದಿಂದ 'ವ'*

*ಮೇರೆ (ಕನ್ನಡ) - ಮೇರ (ಅಪ) - ವೇರ್ಹಿಜ್ (ಮರಾಠಿ)*

*ವ ದಿಂದ ಮ - ವ ದಿಂದ ಬ*

*ವರಮ್ (ಸಂ) - ಬರೇಜ್ (ಮರಾಠಿ) - ಮರೇ (ಕೊಂಕಣಿ) ಬರೋ (ಕೊಂಕಣಿ)*

ಬ ದಿಂದ ಮ

*ಭಣ (ಸಂ) - ಮ್ಹಣ (ಮರಾಠಿ)*

ಇವೆಲ್ಲ ರೂಪಗಳನ್ನು ಪರಿಶೀಲಿಸಲಾಗಿ 'ಮೊರಡು'ದಿಂದ 'ಬರಡ', 'ಮುಣ್'ದಿಂದ 'ಬುಡ' ಶಬ್ದಗಳು ಸಿದ್ಧವಾದದ್ದು ಸ್ಪಷ್ಟವಾಗಬಹುದು.

**ಮಗ-ಮಗ, ಹಿಂದೆ, ಬಳಿಕ**

**ಮಾಗಾ-ಮಗ, ಹಿಂದುಗಡೆ**

ಹಳಗನ್ನಡದಲ್ಲಿ 'ನಿವರ್ತನೇ' ಅರ್ಥದಲ್ಲಿ 'ಮಗುಟ್' ಧಾತುವಿದೆ. ಮಗುಟ್ಟುಂ ಮತ್ತಿನ ಮಾತಂ ನೆಗೆಟ್ದೆರೆ ಪೇಟ್ಪಾಗಳಕುಂ (ಕವಿರಾಜಮಾರ್ಗ ೩.೨೦೧) ಮಗುಟ್ಟಿ ಗೆಲ್ದಿಂ ಬಳಿಯಂ ಮುದುಗಣ್ಣಳ್ ಮಗುಟೆ (ಪಂಪಭಾರತ ೭೩ ವ) ಮಗುಟ್ಟಿ ಬಂದು ಚಕ್ರಪೂಜೆಯು ನಿರ್ವರ್ತಿಸಿ (ಆದಿ ಪುರಾಣ ೫.೩ ವ)

'ಹಿಂದಿರುಗು' ಅರ್ಥದಲ್ಲಿಯ ಈ ಧಾತುವಿಗೆ (ಮಗ+ಉಟ್)[23] 'ಹಿಂದೆ' ಎಂಬರ್ಥದ 'ಮಗ' ಶಬ್ದ ಮೂಲವಿರಬಹುದಾಗಿದೆ. ಇದರಿಂದಲೇ ಕನ್ನಡದಲ್ಲಿ 'ಮಗಬು' 'ಮಗ್ಗಲ್' 'ಮಗ್ಗು' ಶಬ್ದಗಳು ಬಂದಿರಬಹುದಾಗಿವೆ.

'ತದನಂತರ', 'ಬಳಿಕ' ಅರ್ಥದಲ್ಲಿಯ 'ಮಗ' ಮರಾಠಿ ಶಬ್ದದ ಬಳಕೆಯ ಬಾಹುಲ್ಯವನ್ನು ಹೇಳುವುದಾದರೆ, ಜ್ಞಾನೇಶ್ವರೀಯಲ್ಲಿ 'ಮಗ' ಶಬ್ದದಿಂದಲೇ ಆರಂಭವಾಗುವ ಓವಿಗಳ ಸಂಖ್ಯೆ ೨೫೮! ಓವಿಗಳ ನಡುವೆ ಬರುವ ಪ್ರಯೋಗ ಲೆಕ್ಕಕ್ಕಿಲ್ಲ. ಇದು ಕೆಲವೆಡೆ 'ಮಾ' ಆಗಿದೆ. 'ಮಾಗಾಜ್' ಕೂಡ ಆಗಿದೆ. ಒಂದೆರಡು ಉದಾಹರಣೆಗಳು :

ಮಗ ಮ್ಹಣತಲೇಜ್ ಸ್ವಾಮಿ (೧೦.೧೬)
　　ಬಳಿಕ ಸ್ವಾಮಿ (ಶ್ರೀಗುರು) ಹೇಳಿದರು
ಮಾ ಆತ್ಮೇಯಾಜ್ ವಿವಥಿಯಾ ಪ್ರಿಯಾ ವಾಲಭ್ಯೆಲಾ ಜೋ ಧನಂಜಯಾ
ದೇಹಾಚಿ ಸೀದತಾ ತೇಯಾ ಖೇದು ಹೋಇಲ (೧೮.೬೪೦)
　　ಬಳಿಕ ಆತ್ಮದಷ್ಟೇ (ತನ್ನಷ್ಟೇ) ಪ್ರಿಯವಾದ ವಲ್ಲಭೆಗೆ,
　　ಅರ್ಜುನನೇ, (ಸತಿಹೋಗುವಾಗ) ದೇಹವು ಸುಟ್ಟು
　　ಕರಕಾಗುವುದರಿಂದ ದುಃಖವಾದೀತೇ?

ಈ ಓವಿಯಲ್ಲಿ 'ದೇಹಾಚಿ' ಗಿಂತ 'ದೇಹಚಿ' ಪಾಠಬೇದವು ಸಮರ್ಪಕವಾಗಿದೆ. ಮೇಲಿನ ಓವಿಗಿಂತ ಮುನ್ನ 'ಸತಿ' ಹೋಗುವ ಸಂದರ್ಭ ಬಂದಿದೆ. ಅದೇ ದೃಷ್ಟಾಂತವನ್ನು ಇಲ್ಲಿ ಜ್ಞಾನೇಶ್ವರರು ಮುಂದುವರೆಸಿದ್ದಾರೆ.

ಅಜನ ಪದ್ಮವಿಷ್ಟರದೆಸಳಸ್ತರೆ ಸೀದುವು (ಪಂಪಭಾರತ ೧೦.೩೬) ಎನ್ನುವಲ್ಲಿ ಬರುವ ಹಳಗನ್ನಡ ಧಾತು 'ಸೀ' (ಸುಟ್ಟು ಕರುಕಾಗು) ಇದರ ಪರಿಚಯವಿಲ್ಲದ್ದರಿಂದ ವ್ಯಾಖ್ಯಾನಕಾರರು ಈ ಓವಿಯ ಅರ್ಥವನ್ನೇ ಇಡಿಯಾಗಿ ತಿರುಚಿದ್ದಾರೆ. ಇರಲಿ.

---

23. 'ಹಿಂದಿರುಗು' ಎಂಬ ಅರ್ಥದಲ್ಲಿ 'ಮಗುಳ್' ಎಂದು 'ಳ' ಕಾರಾಂತವಾಗಿಯೂ, 'ಸಂತೋಷಿಸು' ಎಂಬರ್ಥದಲ್ಲಿ 'ಮಗುಟ್' ಎಂದು 'ಟ್' ಕಾರಾಂತವಾಗಿಯೂ ಬಳಸುವುದು ಸೂಕ್ತವೆಂದು ಬಿ. ಎಂ. ಶ್ರೀಕಂಠಯ್ಯನವರು ಸಲಹೆ ಕೊಟ್ಟಿದ್ದಾರೆ. ಯೋಗ್ಯವೇ. ಇದು ಇಲ್ಲಿ ಬರುವ 'ಉಳ್' 'ಉಟ್' ಅರ್ಥಭೇದಗಳಿಂದ ಸ್ಪಷ್ಟವಾಗಬೇಕು. (ನೋಡಿರಿ : ಆದಿಪುರಾಣ ಸಂಗ್ರಹ ಎಲ್. ಗುಂಡಪ್ಪ ಪು. ೮೨.೮೩)

ಕಾಲನಿರ್ದೇಶದಲ್ಲಿ ಕನ್ನಡದಲ್ಲಿ 'ಹಿಂದೆ' ಶಬ್ದ 'ಅನಂತರ'ವೆಂದೂ ಸೂಚಿಸುತ್ತದೆ. 'ಪೂರ್ವದಲ್ಲಿ' ಎಂದೂ ಹೇಳುತ್ತದೆ. ಮೋಜೆಂದರೆ ಇವೆರಡೂ ಅರ್ಥಗಳಲ್ಲಿ ಇದು ಮರಾಠಿಯಲ್ಲಿ ಬಳಸಲಾಗಿದೆ. 'ಅನಂತರ' ಅರ್ಥದಲ್ಲಿಯ ಪ್ರಯೋಗಗಳನ್ನು ನೋಡಿದ್ದಾಯಿತು. ಇನ್ನು 'ಪೂರ್ವದಲ್ಲಿ' ಎನ್ನುವ ಅರ್ಥ ನೋಡಿರಿ.

*ಮಾಗಾಜ್ ಬಾಳಪಣೀ ಏಣೇಜ್ ಶ್ರೀಪತಿ ಜೇ ವೇಳು ಏಕು ಖಾದಲೀ ಮಾತೀ (೧೧.೧೮೧)*

ಹಿಂದೊಮ್ಮೆ ಬಾಲ್ಯದಲ್ಲಿ ಶ್ರೀಕೃಷ್ಣನು ಹೀಗೆ ಮಣ್ಣು ತಿಂದಾಗ-

ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿ 'ಅನಂತರ' 'ಬಳಿಕ' ಎನ್ನುವುದಕ್ಕೆ 'ಹಿಂದಾಗಡೆ' 'ಹಿಂದಾಗಡಶೇ' ಎನ್ನುತ್ತಾರೆ. ಇದು ಮರಾಠಿಯಲ್ಲಿ ಹೇಗೆ ಹೋಗಿದೆ ನೋಡಿರಿ. ಉದಾಹರಣೆಗಳು ಲೀಳಾ ಚರಿತ್ರದಲ್ಲಿಯವು.

*ಗೋಸಾವಿಯಾಲಾಗೌನಿ ಕಾಹೀಜ್ ವಾಟೇಚೇಜ್ ಸಂಬಳ ಮೇಳಉನಿ*
*ಪಾಠಿಲಾಜ್ ಕಡುನಿಜ್ ಘೇಉನಿ ಆಲೇ (ಪೂರ್ವಾರ್ಧ ೨೮)*

ಚಕ್ರಧರರಿಗಾಗಿ ಒಂದಿಷ್ಟು ದಾರಿಯ ಸಂಬಳ (ದ್ವಿರುಕ್ತಿ) ಹೊಂದಿಸಿಕೊಂಡು ಹಿಂದುಗಡೆಯಿಂದ ತೆಗೆದುಕೊಂಡು ಬಂದರು.

*ಹೇಜ್ ಮಾಗಿಲೀಕಡೌನಿ ಯೇಈಲ (ಪೂರ್ವಾರ್ಧ ೩೦)*

ಇವನು (ಅಂದರೆ ಚಕ್ರಧರರು) ಹಿಂದುಗಡೆಯಿಂದ ಬರುವನು.

ಮಗ, ಮಾಗೇ, ಮಾಜ್ ಮುಂತಾದ ಶಬ್ದಗಳಿಗೆ ಮೂಲವಾದ ಹಳಗನ್ನಡದ 'ಮಗುಳ್' ಶಬ್ದದಲ್ಲಿಯ 'ಮಗ' ಶಬ್ದಕ್ಕೆ 'ಹಿಂದೆ' (ದಿಗ್ವಾಚಕ) ಅರ್ಥವಿದ್ದು ನಂತರ 'ಕಾಲಾರ್ಥ' ಬಂದಿರಬಹುದೆಂದು ನೋಡಿದೆವು.

ಈ ಸಂದರ್ಭದಲ್ಲಿ ನನಗೆ ನೆನಪಾಗುವ ಇಂತಹದೇ ಶಬ್ದ 'ಬಳಿಕ.' ಇದು 'ಬಳಿ' ಶಬ್ದದ ಚತುರ್ಥೀಭಾವದ ರೂಪ. ಹೀಗೆನಿಸುವುದಕ್ಕೆ ಕಾರಣವಿಲ್ಲದಿಲ್ಲ. ಬೇರೆಡೆ ನಾನು ಮರಾಠಿ 'ಲಾಗ'=ಕನ್ನಡ 'ಹತ್ತು' ಕುರಿತು ಚರ್ಚಿಸಿದ್ದೇನೆ. 'ಲಾಗಿ' ಈ ಚತುರ್ಥೀ ಸಾಧಕ ಅವ್ಯಯ ಮರಾಠಿಯಲ್ಲಿ 'ಲಾ' ಆದ ಬಗ್ಗೆಯೂ ಹೇಳಿದ್ದೇನೆ. ಈ 'ಮಗ' ಶಬ್ದದ ವಿವರಣೆಯಲ್ಲಿಯೇ ಲೀಳಾಚರಿತ್ರದಲ್ಲಿಯ ಉದಾಹರಣೆ ಕೊಡುವಾಗ 'ಗೋಸಾವಿಯಾಲಾಗೌನಿ' ಪದಪ್ರಯೋಗವೂ ಇದೆ. ಇದನ್ನು ಶಬ್ದಶಃ 'ಗೋಸಾವಿಯ ಹತ್ತಿರಕ್ಕಾಗಿ' (ಭಾವ ಗೋಸಾವಿಗಾಗಿ) ಎಂದು ಅರ್ಥೈಸಬಹುದು. ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿಯ ಹತ್ತಿರಕ್ಕೆ = ಹತೀಕ ಬೆಳವಣಿಗೆಯನ್ನು ಗುರುತಿಸಿದರೆ ಹಾಗೂ ಬಳಿ=ಹತ್ತಿರ ಈ ಅರ್ಥವನ್ನು ಗಮನಿಸಿದರೆ 'ಬಳಿ' ಇದರ ಚತುರ್ಥೀ ರೂಪ 'ಬಳಿಕ' ಎಂಬುದು ಸ್ಪಷ್ಟವಾಗಬಹುದು. ('ಬಳಿಕ' ಮಾತ್ರ ಕಾಲಾರ್ಥವನ್ನಷ್ಟೇ ಹೊಂದಿದೆ.)

'ಬಳಿ (ಬಟಿ)' ಎಂದರೆ ಬೆನ್ನು. ಕಾಯ್ದು ಕೆಮ್ಮಗೆ ಬಳಸಂದು ಕೊಂದವನ ಕಾರಣದಿಂ (ಆದಿಪುರಾಣ ೧೨.೩೪) ಬಳಿದಪ್ಪಿದ ಪಶು ತನ್ನ ಓಂದನರಸುವಂತೆ (ಬಸವೇಶ್ವರರ ವಚನಗಳು ೩೪೭) ಬಟಿಕೊಳ್ ಕ್ರಮಸಂಧಾನೇ (ಶಬ್ದಮಣಿದರ್ಪಣ ಧಾತು ಪ್ರಕರಣ)ಉಟಿವರುಮನುಟಿಯಲೀಯದೆ ಬಳಸಂದಾಗಳ್ (ಪಂಪಭಾರತ ೧೧.೯ವ) ಮೊದಲಾದ ಉಲ್ಲೇಖಗಳಲ್ಲಿ ಈ ಅರ್ಥ ಸ್ಪಷ್ಟವಾಗಬೇಕು. ಸಂಸ್ಕೃತದ 'ಪಶ್ಚಾತ್' ಶಬ್ದದಂತೆ, ಆದರೆ ಬರಿ ಕಾಲಾರ್ಥದಲ್ಲಿ, 'ಬಳಿಕ' ರೂಪವು ಅರ್ಥ ಹೊಂದಿತು, ಎಂದು ನನ್ನ ಅಭಿಪ್ರಾಯವಾಗಿದೆ.

**ಮಥಂಗಣೇಜ್ ಮಡಗು, ಮಡಂಗು, ಮುಚ್ಚಿಟ್ಟುಕೊಳ್ಳು**

'ಗೋಪನ' ಅರ್ಥದಲ್ಲಿಯ 'ಮಡಗು' ಹಳಗನ್ನಡದಲ್ಲಿಯಂತೆ 'ಮಡಂಗು' ಆಗಿ ಅದೇ ಅರ್ಥದಲ್ಲಿ ಮರಾಠಿಗೆ ಹೋದ ಬಗ್ಗೆ ಒಂದೇ ಒಂದು ಪ್ರಯೋಗ ಜ್ಞಾನೇಶ್ವರೀಯಲ್ಲಿ ದೊರೆಯುತ್ತದೆ. ಹಳಗನ್ನಡದ ಪ್ರಯೋಗ ಮಾತ್ರ ಇಂತು.

*ವಿಪ್ರಕೋಟಿ ಮಡಗಲ್ಕೆಡೆಯಿಲ್ಲದೆ ಪೊನ್ನ ರಾಶಿಯಂ ಬಟ್ಟಿಸೆ ಬಂದು ಕಾಯೆ (ಪಂಪಭಾರತ ೬.೩೯)*

ಜ್ಞಾನೇಶ್ವರರಂತಹ ದಾರ್ಶನಿಕರಿಗೆ ಸಹಜವಾದ ದೃಷ್ಟಾಂತ ವೈಪುಲ್ಯ, ಶ್ರವಣ ಲೇಖನ ಸ್ಖಾಲಿತ್ಯದಿಂದಾಗಿ ಪ್ರತಿಕಾರರು ಮಾಡಿದ ತಪ್ಪುಗಳು, ಕನ್ನಡದ ಅಭ್ಯಾಸ-ವಿಲ್ಲದ್ದರಿಂದಾಗಿ ಅನ್ವಯಕಾರರು ಹಚ್ಚಿದ ಯದ್ವಾತದ್ವಾ ಅರ್ಥಗಳು ಇವುಗಳಿಂದಾಗಿ ಕೆಲವು ಓವಿಗಳು ಕಬ್ಬಿಣದ ಕಡಲೆಗಳಾಗಿವೆ. ಅವುಗಳಲ್ಲಿ ಇದು ಒಂದು!

*ರತ್ನಪಾರಿಖಿಯಾಚಾಜ್ ಗಾಂವೀಜ್ ಜಾಈಲ ಗಂಡೀ ತರಿ ಸೋಡಾವೀ ಕಾಶ್ಮೀರೀಜ್ ನ ಕರಾವೀಜ್ ಮಡಂಗಣೇಜ್ (೧೩.೩೧೯) ('ಮಥಂಗಣೇಜ್' ಗೆ 'ಮಿಡಗಣೇಜ್' ಎಂದೂ ಪಾಠಭೇದ ಬೇರೆ!)*

ಇದಕ್ಕೆ ದಾಂಡೇಕರರು ಹಚ್ಚಿದ ಅನ್ವಯ ಹೀಗೆ-

> ರತ್ನ ಪರೀಕ್ಷೆ ಮಾಡುವವರ ಊರಲ್ಲಿ ಗಂಡಕೀ (ಶಾಲಿಗ್ರಾಮ) ಕಲ್ಲು ರತ್ನವೆಂದು ಮಾರಬಹುದೆಂದು ಅನಿಸಿದರೆ ಅದನ್ನು ಗಂಟಿನಲ್ಲಿಂದ ಹೊರಗೆ ತೆಗೆಯಬೇಕು. (ಹಾಗೆಯೇ) ಸರಸ್ವತಿಯ ಸ್ತುತಿಯನ್ನು ಎಷ್ಟು ಮಾಡಿದರೂ ಪೂರ್ಣ-ವಾಗದು. ಆದ್ದರಿಂದ ಆಕೆಯ ಸ್ತುತಿ ಮಾಡಬಾರದು. (ಪು೬೪೩)

ಇದರಲ್ಲಿ ಸ್ಖಾಲಿತ್ಯ ಒಂದು : 'ಕಾಶ್ಮೀರೀಜ್'. ಇದು 'ಕಾಚ್‌ಮರೀಜ್' ಎಂದಿರಬೇಕು.

ಈ ಓವಿಯಲ್ಲಿ ಬರುವ ಕನ್ನಡ ಶಬ್ದಗಳು ಮೂರು ಗಂಡಿ=ಕಂಡಿ (ಸುಂಕದ) ಕಿಂಡಿ; ಕಾಚ್‌ಮರೀಜ್ = ಕಚ್ಚೆಯ ಮರೆಯಲ್ಲಿ=ಉಡುಗಚ್ಚೆಯಲ್ಲಿ. ಮಡಂಗು = ಬಚ್ಚಿಟ್ಟುಕೊಳ್ಳು.

ನಾನು (ಮಡಂಗು ಶಬ್ದಕ್ಕಾಗಿ) ಪ್ರಯತ್ನಪಟ್ಟು ಹಚ್ಚಿದ ಅನ್ವಯ ಹೀಗೆ-

> ರತ್ನಪರೀಕ್ಷರ ಊರಲ್ಲಿ ಹೋದರೆ (ಸುಂಕದ) ಕಿಂಡಿ ದಾಟುವಾಗ ಉಡುಗಚ್ಚೆಯಲ್ಲಿ (ಏನೂ) ಬಚ್ಚಿಡಬಾರದು.

ಇಲ್ಲಿ 'ಕಾಚ್‌ಮರೇಜ್' 'ಕಾಶ್ಮೀರ'ವಾಗಿ 'ಸರಸ್ವತಿ'ಗೆ ಅವತರಿಸಬೇಕಾಯಿತು.

ಸಂದರ್ಭಕ್ಕಾಗಿ ಮುಂದಿನ ಓವಿಯನ್ನು ನೋಡಬೇಕು.

*ಇಛಾ ವಾಸು ಕಾಮುರಾ ಮಂದ ಜೇಥ ಅವಧಾರಾಜ್*
*ಪಿಠಾಚಾ ವಿಕಿರಾ ಠಿಯೇ ಸಾಂತೇ (೧೩.೩೨೦)*

ಇಲ್ಲಿ ಬರುವ ಹಳಗನ್ನಡ ಶಬ್ದಗಳು ಎರಡು. ಇಚ=ಹುಟ್ಟಿದ (ಶಬ್ದಮಣಿದರ್ಪಣ ಸೂತ್ರ ೨೧೧) ಸಂತೆ=ಮಾರುಕಟ್ಟೆ.

> ವಾಸನೆಯಿಂದಲೇ ಹುಟ್ಟಿದಂತಿದ್ದ ಕರ್ಪೂರಕ್ಕೆ ಎಲ್ಲಿ 'ಮಂದ' ವೆನ್ನುತ್ತಾರೋ ಆ ಸಂತೆಯಲ್ಲಿ (ಕಪ್ಪುರವೆಂದು) ಹಿಟ್ಟನ್ನು ಮಾರಬಹುದೇ?

**ಮಢು- ಮಡು, ಕೆರೆ**

'ಅಗಾಧ ಜಲ' ಎಂದು ಕೇಶಿರಾಜನು ಅನ್ವಯ ಹೇಳಿದ 'ಮಡು' (ಧಾತುಪ್ರಕರಣ) ಶಬ್ದದ ಬಳಕೆ ಹಳಗನ್ನಡದಲ್ಲಿ ಇಂತಿದೆ.

*ಅಡದಿರ್ದ ಮಡುವಂ ಪೋಲ್ತಂ (ಪಂಪಭಾರತ ೮.೧೩)*

'ಕೆರೆ' ಅರ್ಥದಲ್ಲಿಯ 'ಮಡು' ಶಬ್ದದ ಪ್ರಯೋಗ ಜ್ಞಾನೇಶ್ವರೀಯಲ್ಲಿ ಹೀಗೆ-

*ತೋ ತೃತೀಯ ನೇತ್ರಾಚಾ ಮಢು ಫೂಟಲಾ ಜೈಸಾ (೧೧.೨೯೯)*
*ತೈಸೇ ಪಸರಲೇನಿ (೧೧.೩೦೦)*

> ಆ ಮೂರನೆಯ ಕಣ್ಣಿನ ಮಡುವು ಕಟ್ಟೊಡೆದರೆ ಹೇಗೋ ಹಾಗೆ ಬೆಳಕು ಪಸರಿಸಿತು.

**ಮದವೀ, ಮದುವೆ, ವಿವಾಹ**

ಬಂದು ಪೊಕ್ಕುಂ ಪುರಮಂ ಶ್ರೀ ವಜ್ರದಂತಂ ಮಗಳ ಮದುವೆಯಂ ಮಾಡಲುದ್ಯುಕ್ತ ಚಿತ್ತಂ (ಆದಿಪುರಾಣ ೩.೪೬) ಹೀಗೆ ಹಳಗನ್ನಡದಲ್ಲಿ ಬರುವ 'ಮದುವೆ' ಶಬ್ದವು 'ಮದವೀ' ಆಗಿ ಅದೇ ಅರ್ಥದಲ್ಲಿ ಜ್ಞಾನೇಶ್ವರೀಗೆ ಹೋಗಿದೆ. ಅದರ ಏಕಮಾತ್ರ ಪ್ರಯೋಗವಿದು.

*ಆತಾಜ್ ಅವಿದ್ಯೇಚಾಜ್ ಗಾವೀಜ್ ಮೋಹಾಚೀ ವೇಢೂನಿ ಮದವೀ*
*ಸಂದೇಹಾಚಿಜ್ ಅಢವೀಜ್ ಲೇಊನಿ ಲೇಣೇಜ್ (೧೮.೭೮೭)*

ಈಗ ಅವಿದ್ಯೆಯ ಊರಿನಲ್ಲಿ ಮೋಹದ 'ಸೂತ್ರ' ಮದುವೆ
(ಯಾಗಿ) ಸಂದೇಹದ ಅಲಂಕಾರಗಳೆಲ್ಲವನ್ನು ತೊಟ್ಟು-

ಈ ಸಂದರ್ಭದಲ್ಲಿ (ಮದುವೆ, ಮದವೀ ಆದಂತೆ) ಉತ್ತರಕರ್ನಾಟಕದ ಜನಪದ ಭಾಷೆಯಲ್ಲಿಯ 'ಸುತ್ತ' ಶಬ್ದದ ಅರ್ಥವೈಶಿಷ್ಟ್ಯವನ್ನು ಸ್ಮರಿಸಿಕೊಳ್ಳಬೇಕು. 'ಸುತ್ತಲ್' ಅರ್ಥವುಳ್ಳ ಈ ಶಬ್ದಕ್ಕೆ 'ಜತೆಗೆ' ಎಂಬರ್ಥವೂ ಇದೆ. ನನ್ನ ಸುತ್ತ ನೀ ಬರಬ್ಯಾಡ. ಅಕೀ ಸುತ್ತ ಛಲೋತ್ನಾಗಿ ಮಾತಾಡಲಿಲ್ಲಸ್ಕತ. ಹೀಗೆ. ವೇಢಣೇಜ್ ಎಂದರೆ ವೇಷ್ಟನೇ, 'ಸುತ್ತು'. 'ಸುತ್ತ' ಅರ್ಥದಲ್ಲಿ 'ವೇಢೂನಿ' ಶಬ್ದ ಬಳಸಲಾಗಿದೆ ಎಂದು ನನ್ನ ಅನಿಸಿಕೆ.

ಮರಾಠೀ ವಾಖ್ಯಾನಕಾರರು 'ಮದವೀ' ಶಬ್ದಕ್ಕೆ 'ಹೊಸ ವಸ್ತ್ರ'ವೆಂದು ಸಂದರ್ಭಕ್ಕನುಗುಣವಾಗಿ ಅರ್ಥ ಹೇಳಿದ್ದಾರೆ. ಮದುವೆಯಲ್ಲಿ ಹೊಸವಸ್ತ್ರ ಉಡುತ್ತಾರೆಂದು ಆ ಅರ್ಥದಲ್ಲಿ 'ಮದವೀ' ಶಬ್ದ ಬಳಸಿದುದಾಗಿಯೂ ತುಳಪುಳೆ ಹೇಳುತ್ತಾರೆ[25].

**ಮಾಂಟುಳಣೇಜ್ ತಡೆ, ಮುಗಿ**

'ನಿವಾರಣ' ಅರ್ಥದಲ್ಲಿ ಮಾಣ್ ಧಾತು ಹಳಗನ್ನಡದಲ್ಲಿ ಕಂಡುಬರುವುದು ಹೀಗೆ-

*ಮಾಣದೆ ಜಡಿದದನೆ ಕೃತಿಗಳಂ ಕೆಡೆನುಡಿವರ್ (ಕವಿರಾಜಮಾರ್ಗ ೧.೪೦)*
*ಸಾವು ಮಾಣ್ದುದು (ಪಂಪರಾಮಾಯಣ ೮.೧೫) ಮಱುಗುವಿನಂ ಮಾಣದೆಟ್ಟಿನ್ ಅರಿವಾಹಿಣಿಯಂ (ಶಬ್ದಮಣಿದರ್ಪಣ ಸೂತ್ರ ೨೪೯)*

ಭೂತಕಾಲವಾಚಕ ಕೃದಂತವನ್ನು ಮಾಡುವಾಗ 'ತು' ಪ್ರತ್ಯಯ ಹತ್ತುವುದು ವ್ಯಾಕರಣ ನಿಯಮ. ಉದಾ. ಸೋಲ್ತು, ಪೋಲ್ತು, ಕಿಱ್ತು, ಉಱ್ತು (ಶಬ್ದಮಣಿದರ್ಪಣ ಸೂತ್ರ ೨೪೭).

'ಮಾಣ್' ಧಾತುವಿಗೆ 'ತು' ಪ್ರತ್ಯಯ ಹತ್ತಿದಾಗ 'ಮುಗಿಸಿ', 'ತಡೆದು' ಅರ್ಥದಲ್ಲಿಯ ರೂಪ 'ಮಾಣ್ತು'. ಇದೇ ರೂಪ ಮತ್ತೆ ಧಾತುವಿನಂತೆ ಜ್ಞಾನೇಶ್ವರೀಯಲ್ಲಿ ಒಮ್ಮೆ ಮಾತ್ರ ಪ್ರಯುಕ್ತವಾಗಿದೆ.

*ನಾನಾ ಫಳತಿಏ ವೇಳೇ ಕೇಳಿಚೀ ವಾಢಿ ಮಾಂತುಳೇ (ಪಾಠಭೇದ ಮಾಂಟುಳೇ)*
*ಕಾಜ್ ಗಾವಾಜ್ ಪುಢೇಜ್ ವಾಳೇ ಮಾರ್ಗು ಜೈಸಾ (೧೮.೧೦೭೬)*

ಹಣ್ಣಾಗುವ ಸಮಯದಲ್ಲಿ ಬಾಳೆಯ (ಗಿಡದ) ಬೆಳವಣಿಗೆ
ಮುಗಿಯುತ್ತದೆ. ಊರಮುಂದೆ ದಾರಿ ಮುಗಿಯುತ್ತದೆ, ಹಾಗೆ.

---

25. ಯಾದವಕಾಲೀನ ಮರಾಠೀ ಭಾಷಾ ಪು. ೧೦೫

**ಮಾತ, ಮಾತು, ಮಾತು**

*ನೆನೆನೆನೆದು ಪೆಱರ ಮಾತುಗಳನೆ ನೆಗಟ್ದಿರೆ ಕೃತಿಯೊಳ್* (*ಕವಿರಾಜಮಾರ್ಗ ೧.೧೪*) ಹೀಗೆ ಕನ್ನಡದ ಆದ್ಯಕಾವ್ಯದಲ್ಲಿ ಬರುವ 'ಮಾತು' ಶಬ್ದ ಅದೇ ಅರ್ಥದಲ್ಲಿ ಅದೇ ರೂಪದಲ್ಲಿ ಜ್ಞಾನೇಶ್ವರಿಗೆ ಹೋಗಿದೆ.

*ಸಾಂಘ್ಯೆಜ್ ಸಂಜಯಾ ಮಾತು ಕುರುಕ್ಷೇತ್ರಿಚೀ (೧.೮೫)*
ಸಂಜಯನೇ, ಕುರುಕ್ಷೇತ್ರದ ಮಾತು ಹೇಳ್ಳೈ.
*ಐಸೇಜ್ ಬೋಲೌನಿ ಮಾತು ಸಾಂಡಿಲೀ ತೇಣೇಜ್ (೧.೧೨೦)*
ಹೀಗೆ ಹೇಳಿ ಆವನು ಮಾತು ತಡೆದನು.
*ಹ್ಮಣೌನಿ ಗಾ ಇಯೇ ಮಾತುಚಾ ವಿಸಂವಾದು (೪.೩೭)*
ಅಂತೆ ಅಯ್ಯಾ, ಈ ಮಾತಿನ ವಿಸಂವಾದವು (ಅಪರಂಭವತೋ ಜನ್ಮ-)
*ಕಾಜ್ ರಾತ್ರಿಚೇಯಾ ಪೋಟಾಆಜ್‌ತು ರಿಗಾಲಾ ಜೋ ಕಾಜ್ ಭಾಸ್ವತು*
*ತೋ ರಾತ್ರಿ ಐಸೀ ಮಾತು ಆಇಕೇ ಕಾಇ (೧೮.೪೧೪)*
ರಾತ್ರಿಯ ಹೊಟ್ಟೆಯಲ್ಲಿ ಹೋದ ದಿನಕರನು ರಾತ್ರಿ ಎಂಬುವ ಮಾತು ಕೇಳುವನೇ?

ಕನ್ನಡದ 'ಕಿವಿಮಾತು' ಈ ಸಮಸ್ತ ಪದವು ಮರಾಠಿಯಲ್ಲಿ 'ಕಾನಮಾತ' (ಕಾನ=ಕಿವಿ) ಎಂದೂ ಹೋಗಿದೆ. (ಲೀಳಾಚರಿತ್ರ ಉತ್ತರಾರ್ಧ ೨೧೬)

**ಮಾಂದಿ-ಮಂದಿ ಜನಸಮೂಹ**

'ಮಂದಿ' ಶಬ್ದ ಸಂಸ್ಕೃತ 'ಮನು' ದಿಂದ ಬಂದಿರಬಹುದೇ ಎಂದು ಕಿಟೆಲ್‌ರು ಶಂಕಿಸಿದ್ದಾರೆ. ಅದಕ್ಕಿಂತ 'ಸಮೂಹ' ಅರ್ಥದಲ್ಲಿಯ 'ಮಂದೆ' ಶಬ್ದವೇ ವ್ಯುತ್ಪತ್ತಿಯ ದೃಷ್ಟಿಯಿಂದ ಸನಿಹದ್ದಾಗಿದೆ. ಮರಾಠಿಯಲ್ಲಿಯ ಆಧಾರಗಳಿವು.

*ಇಂದ್ರಿಯಾಂಚಾಜ್ ರಾಜಬೀದೀಜ್ ಅಹಂಮತಿಚಾ ಜಲ್ಪವಾದಿಜ್*
*ವಿಕಾರಾಂತರಾಚೀ ಮಾಂದೀ ಮೇಳಪಿತಾತಿ (೭.೧೦೩)*
ಇಂದ್ರಿಯಗಳ (ಊರಿನ) ರಾಜಬೀದಿಯಲ್ಲಿ ನಾನು, ನನ್ನದು ಎಂದು ಹೇಳುವ ವಿಕಾರಗಳ ಸಮೂಹವನ್ನು ಕೂಡಿಸುತ್ತಾರೆ.
*ಅಖತ ಟಾಕಿಲೀ ಜೈಸೀ ಮಾಂದಿಏಸೀ (೧೮.೭೨೦)*
ಜನಸಮೂಹದ ಮೇಲೆ ಅಕ್ಷತೆ ಹಾಕಿದಂತೆ (ಆ ಅಕ್ಷತೆ ಎಲ್ಲಿ ಬೀಳಬೇಕೋ ಅಲ್ಲಿ ಬೀಳುವುದಿಲ್ಲವೆಂದು ಭಾವಾರ್ಥ)
*ಅಂಗಾಚಿಯಾ ಮಾಂದಿಯಾ ಏಕಲಿಯಾ (೧೮.೧೦೧೬)*
ಅವಯವಗಳ ಸಮೂಹದಲ್ಲಿ ಒಬ್ಬಂಟಿಗನು
*ರಾಜಸೂಯಾಚಾಜ್ ಸಭಾಸದೀಜ್ ದೇಖತಾಜ್ ತ್ರಿಭುವನಿಚೀ ಮಾಂದೀ (೧೧.೧೦೧)*

ರಾಜಸೂಯ ಯಜ್ಞದ ಸಭಾಸದನದಲ್ಲಿ ತ್ರಿಭುವನದ (ಜನ)
ಸಮೂಹವು ನೋಡುತ್ತಿದ್ದಂತೆ

*ಈಶ್ವರನಿಷ್ಠಾಂಚೀ ಮಾಂದಿಯಳೀ (೧೮.೧೭೭೫)*
ಈಶ್ವರನಲ್ಲಿ ನಿಷ್ಠೆ ಇದ್ದವರ ಸಮೂಹವು

*ವಿಶ್ವಿಚೀ ಆಘವೀ ಮಾಂದಿ ಜೇಣೇಂ ಭೇದಲೀನಿ ಗುಣಭೇದೀಂ (೧೮.೫೨೩)*
ವಿಶ್ವದ ಸಮಸ್ತ ಜನ ಸಮೂಹವು ಗುಣಭೇದಗಳಿಂದ
ಭಿನ್ನಭಿನ್ನವಾದಂತೆ

ಇಲ್ಲಿ ಮಾಂದಿ=ಜನರು ಎನ್ನಬಹುದಿತ್ತು. ಆದರೆ ಅದು ಏಕವಚನದಲ್ಲಿದೆ.

*ಶಾಖಾಂಚೀ ಮಾಂದೋಡೇ (೧೫.೭೭ ಹಾಗೂ ೧೫.೧೭೧)*
ಟೊಂಗೆಗಳ ಸಮೂಹಗಳು

'ಮಂದಿವಾಳ'ದಿಂದ 'ಮಾಂದಿಯಾಳಿ' 'ಮಾಂದೋಡೇ' ಶಬ್ದಗಳೂ 'ಮಂದಿ' ಅರ್ಥದಲ್ಲೇ (ಕನ್ನಡದ 'ಉದ್ಧಟತನ' ಅರ್ಥದಲ್ಲಿ ಅಲ್ಲ) ಬಳಸಿದುದನ್ನು ಗಮನಿಸಬೇಕು.

**ಮಿರವಣೇಂ - ಮೆರೆಸು**

'ವಿಡಂಬೇ' ಅರ್ಥದಲ್ಲಿಯ 'ಮೆಱೆ' ಧಾತುವಿನ ಪ್ರಯೋಜಕ ಮೆಱಿಸು, ಮೆರೆಸು. ಮರಾಠಿಯಲ್ಲಿ ಈ ಪ್ರಯೋಜಕದ ಪ್ರವಾಸ ವೈಶಿಷ್ಟ್ಯಪೂರ್ಣವಾದದ್ದು. 'ಮೆಱೆ' ಧಾತು 'ಮಿರ(?)' ಆಗಿ ಮರಾಠಿಯಲ್ಲಿ ಹೋದಬಗ್ಗೆ ಆಧಾರಗಳಿಲ್ಲ. ಪ್ರಯೋಗಗಳೂ ದೊರೆಯುವುದಿಲ್ಲ. ಆದರೆ ಆಭಾಷೆಯ ವ್ಯಾಕರಣ ನಿಯಮಗಳಂತೆ ವ ಕಾರ ಆಗಮವಾಗಿ (ಕರ-ಮಾಡು-ಕರವಣೇಂ-ಮಾಡಿಸು; ಭರ-ತುಂಬು-ಭರವಣೇಂ-ತುಂಬಿಸು; ಪಳ-ಓಡು-ಪಳವಣೇಂ-ಓಡಿಸು; ಇತ್ಯಾದಿ) 'ಮಿರವಣೇಂ' ಪ್ರಯೋಜಕದ ಬಳಕೆ ಹತ್ತಾರು ಸಂದರ್ಭಗಳಲ್ಲಿ ಜ್ಞಾನೇಶ್ವರೀಯಲ್ಲಿ ದೊರೆಯುತ್ತದೆ. ಇದು ಕನ್ನಡದ್ದೇ ಎಂದು ಮರಾಠೀ ಪಂಡಿತರು ಒಪ್ಪಿಕೊಂಡಿದ್ದಾರೆ. ಇಲ್ಲಿ ಕೆಲವು ಉದಾಹರಣೆಗಳು.

*ನ ಮಿರವೀ ಅಭ್ಯಾಸಿಲೇಂ (೧೩.೨೦೮)*
ಅಭ್ಯಸಿಸಿದ್ದನ್ನು ಮೆರೆಸುವುದಿಲ್ಲ.

*ಪಿಸೇಪಣ ಮಿರವೀ (೧೩.೧೯೧)*
ಹುಚ್ಚುತನವನ್ನು (ಪೆದ್ದತನವನ್ನು) ಮೆರೆಸುತ್ತಾನೆ.

*ಮಛ ಕೂರ್ಮ ಇಯಾ ಮಿರವಣಿಯಾಂ (೧೧.೮೪)*
ಮತ್ಸ್ಯಕೂರ್ಮಗಳನ್ನು ಮೆರೆಯಿಸಿ

*ಜೈಂ ಸತ್ವ ಮಾಜು ಮಿರವೀ (೧೪.೧೯೮)*
ಯಾವುದು ಸತ್ವದಲ್ಲಿ ಮೆರೆಯುವುದೋ-

**ಮುಡ-ಮೊಳೆ, ವೊಳಕೆ**

'ಅಂಕುರಿಸು' ಅರ್ಥದಲ್ಲಿಯ ಹಳಗನ್ನಡ ಧಾತು 'ಮೊಳೆ'ಯಿಂದ ಮರಾಠಿಗೆ ಹೋದ ಶಬ್ದ 'ಮುಡ'.

ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳಿವು.

*ಸೋಹಂಭಾವ ಮಹುರೇಜ್ ಮೋಡೌನಿ ಆಲೇಜ್ (೬.೧೪೯)*

ಸೋಹಂಭಾವದ (ಮಾವಿನ) ಹೂವು ಅಂಕುರಿಸಿ ಬಂತು.

*ನೀಂಬು ನೀಂಬೊಳೀಜ್ ಮೋಡೌನಿ ಆಲಾ ತರಿ ಕಾಉಳೆಯಾಜ್‌ಸಿ ಸುಕಾಳು ಜಾಲಾ (೯.೪೩೪)*

ಬೇವು, ಬೇವಿನಹಣ್ಣು ಅಂಕುರಿಸಿ ಬಂದರೆ ಕಾಗೆಗಳಿಗೆ ಸುಗ್ಗಿ ಬಂತು.

ಇವೆರಡೂ ಉದಾಹರಣೆಗಳಲ್ಲಿ 'ಮೋಡ' ಧಾತು 'ಅಂಕುರಿಸು' ಎನ್ನುವುದಕ್ಕಿಂತ 'ಬೆಳೆ' 'ವರ್ಧಿಸು' ಎನ್ನುವಲ್ಲಿ ಹೆಚ್ಚು ಸಫಲವಾಗಿದೆ.

ಇನ್ನೊಂದು ಮೋಜಿನ ಪ್ರಯೋಗ.

ಹಳಗನ್ನಡದಲ್ಲಿ 'ಅಂಕುರ' 'ಸಸಿ' ಅರ್ಥದಲ್ಲಿ 'ಅಗೆ (ಅಗಿ)' ಎಂಬ ನಾಮಪದವಿದೆ. 'ಖನನ' 'ಹಡ್ಡು' ಅರ್ಥದಲ್ಲಿ 'ಅಗೆ' (ಅಗಿ) ಎಂಬ ಧಾತುವೂ ಇದೆ. ಹೀಗೆ 'ಅಗೆ' ಶಬ್ದಕ್ಕೆ ಎರಡು ಭಿನ್ನ ಅರ್ಥಗಳು. ಮುಡ, ಮೊಳೆ, ಅಗೆ ಇವು ಸಮಾನಾರ್ಥಕ ಶಬ್ದಗಳಷ್ಟೇ? ಜ್ಞಾನೇಶ್ವರರು ಮಾತ್ರ ಈ 'ಅಗೆ'ಯನ್ನು ಒಯ್ದು ಆ 'ಅಗೆ'ಗೆ ಹಚ್ಚಿದ್ದಾರೆ.

*ಹೇಜ್ ಪಾಹಾಣೇಜ್ ಐಸೇಜ್ ಅಸೇ ವೀರಾ ಜೈಸಾ ನ ಮೋಡಲಿಯಾ ವಿಹಿರಾ ಮಗ ಆಪುಲಿಯಾಜ್ ಉಗಮೀಜ್ ಝುರಾ ಭರೋನಿ ಠಾಕೇ (೧೫.೨೬೯ ದಾಂಡೇಕರ)*

(ಇದನ್ನು ಈ ಆತ್ಮಸ್ವರೂಪವನ್ನು) ಎಲೈ ವೀರನೇ, ಹೀಗೆ ನೋಡುವುದು, ಬಾವಿಯನ್ನು ಅಗೆಯದಿದ್ದರೆ ಸೆಲೆಯು ತನ್ನ ಉಗಮದಲ್ಲಿಯೇ ತುಂಬಿ ಉಳಿಯುವುದು ಹಾಗೆ.

**ಮೂಡ-ಮೋಟ, ಮೂಟೆ, ಮೊಟ್ಟೆ, ಹೊರೆ**

ಮುತ್ತಿನ ಮೊತ್ತವ ಕತ್ತೆಗಲಂಕರಿಸಿದಡೇನು! ಎಂದು ಚನ್ನಬಸವೇಶ್ವರರ ವಚನದಲ್ಲಿ (೪೦೮) ಮೊಟ್ಟೆ, ಹೊರೆ ಅರ್ಥದಲ್ಲಿಯ 'ಮೊತ್ತ' ಶಬ್ದದ ಬಳಕೆ ದೊರೆಯುತ್ತದೆ. ಇದು 'ಮೂಡ' 'ಮೋಟ' ಆಗಿ ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾಗಿದೆ. ಇವು ಉದಾಹರಣೆಗಳು.

*ಚೋಖಟ ಟೀಕ ಭಾಂಗಾರ ಏಕವಟ ಘಾಲುನು ಬಾಂಧಲೀ ಮೋಟ (೧೭.೩೪೫)*

(ಅಲಂಕಾರಗಳಿಗೆ ಬದಲಾಗಿ) ಚೊಕ್ಕಹೊನ್ನು ಬಂಗಾರಗಳನ್ನು

ಒಟ್ಟಿಗೆ ಹಾಕಿ ಹೊರೆ ಕಟ್ಟಿ-

*ಮೂಡಾಪ್‌ಹೂನಿ ಬಿಜ್ ಕಾಢಿಲೇ ಮಗ ನಿರೋಗಲಿಯೇ ಭೂಇಜ್ ಪಾಹಿರಿಲೇಜ್ (೯.೩೯)*

ಮೂಟೆಯಲ್ಲಿಯ ಬೀಜವನ್ನು ತೆಗೆದು ಹಸನುಮಾಡಿದ ನೆಲದಲ್ಲಿ
ಬಿತ್ತಿದರೆ-

ದಾಂಡೇಕರರು ಮಾತ್ರ 'ಮೂಡಾಪ್‌ಹೂನಿ'ಗೆ 'ಅಗೆ (ಹಗೆಯ) ಒಳಗಿನಿಂದ' ಎಂದು ಅರ್ಥೈಸಿದ್ದಾರೆ. ಇದು 'ಮೂಟೆ'ಗಿಂತ ಹೆಚ್ಚು ಸಮರ್ಪಕವೂ ಆದೀತು. 'ಮುಡ' ಶಬ್ದಕ್ಕೆ ಮೊಳಕೆ ಅರ್ಥವಿದ್ದದ್ದನ್ನು - 'ಮುಡ' ಶಬ್ದವೇ 'ಮೊಳೆ' ಶಬ್ದದಿಂದ ವ್ಯುತ್ಪನ್ನವಾದದ್ದನ್ನು - ಮೇಲೆ ಚರ್ಚಿಸಿದ್ದೇನೆ. ಅದು 'ಅಂಕುರ', 'ಸಸಿ' ಅರ್ಥದಲ್ಲಿಯ 'ಅಗೆ'ಯೂ ಹೌದು. ಉಚ್ಚಾರ ಸಾಮ್ಯದಿಂದಾಗಿ ಇದೊಂದು ವೈಖರಿ!

ಮೂಡ (ಮುಡ) = ಅಂಕುರ, ಸಸಿ, ಅಗೆ;

ಅಗೆ=ಹಗೇವು; ಹೀಗೆ 'ಮೂಡ' ಶಬ್ದಕ್ಕೆ 'ಹಗೆಯ' ಅರ್ಥವೂ ಒದಗಿರಬಹುದಾಗಿದೆ.

**ಮುದಲ, ಮೊದಲು ಆರಂಭದಲ್ಲಿ, ಬಂಡವಾಳ**

*ಎತ್ತಿದ ತೋಳ ಮೊತ್ತ ಮೊದಲಂಗಜನಂ ಪಟಪಿದ್ದೆಗೆತ್ತಿದಂತೆತ್ತಮಪೂರ್ವಮಾಗೆ (ಪಂಪಭಾರತ ೪.೮೧)* ಎನ್ನುವಲ್ಲಿ 'ಮೊತ್ತ' 'ಮೊದಲ್' ಇವೆರಡು ಶಬ್ದಗಳು 'ಆರಂಭ' 'ಆರಂಭದ ಆರಂಭ'ಗಳನ್ನು ಸೂಚಿಸುತ್ತವೆ. ಆದರೆ 'ಮೊದಲು' ಶಬ್ದಕ್ಕೆ 'ಬಂಡವಾಳ' ವೆಂಬ ಅರ್ಥ ಒದಗಿದ್ದು ವಚನ ಸಾಹಿತ್ಯದಲ್ಲಿ. *ಮೊದಲು ಗೆಟ್ಟಿಲ್ಲದೆ ಲಾಭವಾಸೆ ಬಿಡದು (ಅಲ್ಲಮನ ವಚನಗಳು ೭೧) ಮೊದಲುಗೆಡುವ ಹರವನಂತೆನಗಾಯಿತ್ತಯ್ಯಾ (ಚನ್ನಬಸವೇಶ್ವರ ವಚನಗಳು ೫೮೭)* ಈ 'ಮೊದಲು' ಶಬ್ದ 'ಮುದಲ' ಆಗಿ 'ಬಂಡವಾಳ' ಅರ್ಥದಲ್ಲೇ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ. ಕೆಲವು ಪ್ರಯೋಗಗಳು.

*ಐಸೇಜ್ ಕರ್ಮಭೇದೇಜ್ ಮುದಲೇಜ್ ಫಳಸುಖ ಹೀ ತ್ರಿಧಾ ಜಾಲೀಜ್ (೧೮.೮೦೭)*

ಹೀಗೆ (ಮೂರು ತರಹದ) ಕರ್ಮಭೇದಗಳ ಬಂಡವಾಳದಿಂದಾಗಿ
ಫಲಸುಖವೂ ಮೂರು ತೆರನಾಯಿತು.

*ಜೇಜ್ ಸರ್ವಕರ್ಮಸಿದ್ಧಿಲಾಗಿ ಇಯೇಜ್ ಚಿ ಮುದಲೇಜ್ ಹೋ ಜಗೀಜ್ (೧೮.೨೭೮)*

ಎಲ್ಲ ಕರ್ಮಗಳ ಸಿದ್ಧಿಗಾಗಿ ಜಗತ್ತಿನಲ್ಲಿ ಇದೇ ಬಂಡವಾಳವು

'ಮುದಲ' ಶಬ್ದ 'ಆರಂಭದಲ್ಲಿ' ಎನ್ನುವ ಅರ್ಥದಲ್ಲಿ ಕೂಡ ಸಾಕಷ್ಟು ಸಲ ಬಳಸಲಾಗಿದೆ.

*ಮನಪಣ ಮುದಲ ಜಾಯೇ (೫.೧೫೭)*

ಮನಸ್ಸೆಂಬುದು ಮೊದಲು ನಾಶವಾಗಬೇಕು.

*ಹ್ಮಣೌನಿ ಕರಿತಾ ಮುದಲು ನ ದಿಸೇ (೮.೨೭)*

ಅಂತಾಗಿ ಮೊದಲು ಕಾಣುವುದಿಲ್ಲ.

*ಮುದಲ ಮೂಳ ಪಾಜ್‌ತಾಜ್ (೧೫.೧೭೫)*

ಮೊದಲ ಬೇರು ನೋಡಲಾಗಿ

*ಪಾಣೀ ಮುದಲಾ ಝಾಡಾ ಜಾಏ (೧೭.೨೧೭)*

ನೀರು ಮೊದಲು ಗಿಡಗಳಿಗೆ ಹೋಗುವುದು

**ಮುರುಕುಂಡೀ- ಮುಱುಕು-ಮುರಿಗೆ**

'ಮುಱುಕು' ಶಬ್ದಕ್ಕೆ 'ಮುಖವಿಕಾರ' ವೆಂದು ಕೇಶಿರಾಜನು ಅರ್ಥ ಹೇಳುತ್ತಾನೆ. ಆದರೆ ಅದಕ್ಕಿಂತ ಹೆಚ್ಚಾಗಿ, ನಾಮಪದವಾಗಿದ್ದಲ್ಲಿ 'ತಿರಿಚು' ಅರ್ಥವು ಸಮೀಪದ್ದಾಗಿದೆ. ಹೆಡಮುರಿಗೆ, ತಿರುಗುಮುರಿಗೆ ಇವು ಇಂದಿನ ಪ್ರಯೋಗಗಳು. ಅಲ್ಲದೆ ಕೇಶಿರಾಜನೇ ಹೇಳುವ 'ವಕ್ರಭಾವ' ಅರ್ಥದಲ್ಲಿಯ 'ಮುರಿ' ಧಾತುವೂ ಇದಕ್ಕೆ ಮೂಲವಾಗಿರಬಹುದಾಗಿದೆ. 'ಮುಱುಕು' ದಿಂದ ಅದೇ ಅರ್ಥದಲ್ಲಿ ಸಿದ್ಧವಾದ 'ಮುರಕುಂಡೀ' ಶಬ್ದವು ಜ್ಞಾನೇಶ್ವರೀಯಲ್ಲಿ ಹೀಗೆ ಬಳಸಲಾಗಿದೆ.

*ಪಡಿಲಿಯೇ ಧೋಂಡೀ ನೇಣೇ ಕಾನೀ ಮುರಡೀ*
*ತಯಾಚಿ ಪರಿ ಮುರುಕುಂಡೀ ಉಕಲುಜ್ ನೇಣೇ (೧೪.೧೮೧ ಪಾಠಭೇದ)*

(ನೆಲದ ಮೇಲೆ) ಬಿದ್ದ ದೊಡ್ಡ (ಕಲ್ಲು) ಮಗ್ಗಲಾಗಿ ಮುದುರಿಕೊಳ್ಳುವುದನ್ನರಿಯದು. (ಆದರಂತೆ ತಮೋಗುಣಿಯು) (ಮೈಯ) ಮುರಿಗೆ ಬಿಚ್ಚಲು ಅರಿಯದವನು.

*ಪಾಯಾಜ್ ಪಸತಿ ವೇಂಗಡೀಜ್ ಹಾತ ಹೋಜ್‌ತಿ ಮುರುಕುಂಡೀ*

ಹೆಜ್ಜೆಗಳು ಸೊಟ್ಟಾಗಿ ಬೀಳುತ್ತವೆ. ಕೈಗಳು ಮುರಿಗೆಗೊಳ್ಳುತ್ತವೆ.

**ಮುರಡಣೇಜ್- ಮುದುಡು-ಮುರುಟು-ಮುರುಂಟು**

'ಸಂಕೋಚನ' ಅರ್ಥದಲ್ಲಿಯ 'ಮುದುಡು' ಈ ಹಳಗನ್ನಡ ಧಾತು, 'ಮುರುಂಟು' ಧಾತುವಿನಿಂದ ಸಿದ್ಧವಾಗಿರಬಹುದೆನ್ನಲು ವಡ್ಡಾರಾಧನೆಯಲ್ಲಿಯ ಈ ಪ್ರಯೋಗವನ್ನು ಗಣಿಸಬೇಕು. *ತಾಂ ತೊಸ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು (೧೨೨.೨೨)*

'ಮುರುಂಟು'ವಿನಿಂದ ಅದೇ ಅರ್ಥದಲ್ಲಿ ಮರಾಠಿಯಲ್ಲಿ ಮುರಡಣೇಜ್ ಧಾತು ಸಾಧಿಸಲಾಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು ಹೀಗೆ-

*ಅಪಾನು ಮಾಘೌತಾ ಮುರಡಲಾ (೬.೨೧೪)*

ಹಿಂದುಗಡೆ (ಬಳಿಕ!) ಅಪಾನವಾಯುವು ಸಂಕೋಚಗೊಂಡಿತು.

*ಠಾವೋ ನ ಪವತಾಜ್ ಜೇಯಾಚಾ ಮನೇಜ್‌ಸಿ ಮುರಡಲೀ ವಾಚಾ (೧೫.೧೫)*

ಠಾವಿಗೆ ತಲುಪದೆಯೆ ಮನಸ್ಸಿನೊಡನೆ ಯಾರ ಮಾತು

ಸಂಕೋಚಗೊಂಡಿತೋ-

*ಪತಲಿಯೇ ಥೋಂಥೀ ಕೋಣ ಕಾಸೀ ಮುರಡೀ (೧೪.೧೮೧)*

(ನೆಲದ ಮೇಲೆ) ಬಿದ್ದ ದೊಡ್ಡ (ಕಲ್ಲು) ಮಗ್ಗುಲಾಗಿ ಮುದುರಿಕೊಳ್ಳುವದೇ?

**ಮೇಚು, ಮೇಚವಣೇಜ್, ಮೆಚ್ಚು, ಒಪ್ಪು.**

'ಒಡಂಬಡು' 'ಅಭ್ಯುಪಗಮ' ಎಂದು ಕೇಶಿರಾಜನು ಕೊಡುವ ಅರ್ಥದ 'ಮೆಚ್ಚು' (ಧಾತು ಹಾಗೂ ನಾಮಪದ) ಹಳಗನ್ನಡದಲ್ಲಿ ಬಳಕೆಯಾದದ್ದು ಹೀಗೆ.

*ಪರಿಣಾಮ ಪಥ್ಯಮಂ ಸುಖಪರಿಕರಮಂ ಮೆಚ್ಚದನ್ನರಾರ್ (ಕವಿರಾಜಮಾರ್ಗ ೩.೧೫೩)*

*ಸರಸೀರುಹ ಜನ್ಮನ ಮೆಚ್ಚು ತೀರ್ಗೆ (ಪಂಪಭಾರತ ೫.೧೮)*

ಈ ಶಬ್ದ ಇದೇ ಅರ್ಥದಲ್ಲಿ ಎರಡೂ ರೂಪಗಳಲ್ಲಿ ಜ್ಞಾನೇಶ್ವರೀಯಲ್ಲಿ ಬಳಕೆಯಾದುದನ್ನು ನಾವು ಕಾಣುತ್ತೇವೆ.

*ಬುದ್ಧಿ ಮೇಚುವೇ ನಾ ಥೋಂಡೀ (೧೪.೨೪೫)*

ಬುದ್ಧಿಯು ದೊಡ್ಡ (ಕಲ್ಲನ್ನು) ಮೆಚ್ಚಿಸದಾಯಿತು (ಜಡತ್ವದಲ್ಲಿ)

*ಏವಂ ತಾಮಸಾ ಜೇವ್ಹಣಾರಾ ಐಸೇ ಚಿ ಮೇಚು ವೀರಾ (೧೭.೧೬೩)*

ಹೀಗೆ ತಾಮಸೀ ಅನ್ನವನ್ನು ಉಣ್ಣುವವನು, ವೀರನೇ, ಇಂತಹವುಗಳನ್ನೇ ಮೆಚ್ಚುತ್ತಾನೆ.

*ತೈಜ್ ಮಧುರಿಜ್ ರಸಿಜ್ ಘಪೇ ಮೇಚು ತೇಯಾ (೧೭.೧೨೪)*

ಆಗ ಮಧುರರಸಗಳಲ್ಲಿ ಅವನಿಗೆ ಮೆಚ್ಚುಗೆ ಉಂಟಾಗುತ್ತದೆ.

*ಪರಿ ಮೇಚು ಇಯೇ ಹೋಇಜ್ಯೆಲ ರಿಣಿಯಾಜ್ ತುಜ (೧೮.೨೯೯)*

(ನನ್ನ ನಿವೇದನೆಗೆ) ಋಣಿಯಾದ ನಿನಗೆ ಇದು ಮೆಚ್ಚುಗೆಯಾದೀತು.

**ಮೇಹುಣಾ- ಮೈದುನ**

'ಅನ್ನೆಗಂ ತನ್ನ ಮಯ್ದುನನಪ್ಪಮೋಘಾಸ್ತ್ರ ಧನಂಜಯನ ಬರವಿನ ಸಂತಸದೊಸಗೆ-' ಎಂದಾಗಿ ಪಂಪಭಾರತದಲ್ಲಿ (೪.೩೨ವ) ಮಯ್ದುನ ಶಬ್ದದ ಪ್ರಯೋಗ ದೊರೆಯುತ್ತದೆ.

ತಮಿಳು-ಮಲಯಾಳಗಳಲ್ಲಿಯ ಮಣ (ಕೂಡುವದು, ಮದುವೆ), ಹಳಗನ್ನಡದ ಮದ ಶಬ್ದದಿಂದಾಗಿ ಮದವ ಶಬ್ದ ಹುಟ್ಟಿದೆ.

ವಡ್ಡಾರಾಧನೆಯಲ್ಲಿ ಈ ಪ್ರಯೋಗ ನೋಡಬೇಕು.

ವಿಜಯನೆಂಬ ಮಂತ್ರಿಯುಕ್ಕೆವಂದಿವರ ಪೇೞ್ದು ಮದವಕ್ಕಳಂ ನಿರಾಕರಿಸಿ (೪೦.೨೫)

ಮಗಳ-ಮದವನಂ ಜಾಮಾತೃ ಎಂಬುದು (ಅಭಿಧಾನ ರತ್ನಮಾಲಾ)

ಆ ಮದೆವಳ್ ರಕ್ಕಸನಲ್ಲಿಗೆ ಬಂದೇನೆನ್ನಂ ನೀಂ (ವಡ್ಡಾರಾಧನೆ ೧೬.೨೩)

ಇವೆರಡು ಪ್ರಯೋಗಗಳಿಂದ ಮದವನ, ಮದವಳ ಶಬ್ದಗಳು ಸ್ಥಿರಗೊಂಡ ಬಳಿಕ ಮದ+ಅಣ್ಣ = ಮದುವಣ್ಣ=ಮದುವನ=ಮಯ್ದುನ ಶಬ್ದ ಹುಟ್ಟಿರಬಹುದೆಂದು ನನ್ನ ತರ್ಕವಾಗಿದೆ. ಈ ಮಯ್ದುನ ಶಬ್ದದಿಂದ ಮರಾಠಿಯಲ್ಲಿ ಮೇಹುಣಾ ಶಬ್ದವಾಗಿದೆ. (ಇಂದಿಗೂ ಹೆಂಡತಿಯ ಅಣ್ಣತಮ್ಮಂದಿರು ಮರಾಠಿಯಲ್ಲಿ ಮೇಹುಣಾ ಆಗುತ್ತಾರೆ.)

ಮಹದಂಬೆಯ (ಕ್ರಿ.ಶ. ೧೨೫೩-೧೩೦೩) ರುಕ್ಮಿಣೀಗೀತದಲ್ಲಿ ಈ ಪ್ರಯೋಗ ಬರುತ್ತದೆ. ರುಕ್ಮಿಯನ್ನು ಸೋಲಿಸಿದ ಬಳಿಕ ಅವನ ತಲೆ ಬೋಳಿಸಿದ ಸಂದರ್ಭ:

*ಮೇಹುಣೇಯಾ ಮಾನು ಕೇಲಾ (೮೫)*

ಬೀಗನ ಸಂಭಾವನೆ ಮಾಡಿದನು.

ಈ ಚರ್ಚೆಯನ್ನು ಒಂದಿಷ್ಟು ಮುಂದುವರೆಸಿ ಹಳಗನ್ನಡದ 'ಭಾವ' ಶಬ್ದವನ್ನೂ, ಗಣನೆಗೆ ತೆಗೆದುಕೊಳ್ಳುವುದು ಉಚಿತವಾದೀತು. ಸಂಸ್ಕೃತ 'ಭಾಮ' ಶಬ್ದದ ತದ್ಭವವಾದ 'ಭಾವ' ಶಬ್ದ (ಶಬ್ದಮಣಿದರ್ಪಣ ಸೂತ್ರ ೨೫) ತಂಗಿಯ/ಅಕ್ಕನ ಗಂಡ ಅರ್ಥದಲ್ಲಿ ಬಳಸಲಾಗಿದೆ. ತಮ್ಮ ಭಾವಂ ಕೃಪನ ಮನೆಯೊಳಪಗತ ಪರಿಶ್ರಮನಾಗಿರ್ದು ಎಂದು ಪಂಪಭಾರತದಲ್ಲಿ (೨.೫೦ ವ) ಉಲ್ಲೇಖ ಬರುತ್ತದೆ. ಈ 'ಭಾವ' ಶಬ್ದ ಕನ್ನಡಕ್ಕೆ ವಿಶಿಷ್ಟವಾದದ್ದು. ಇದು ಅದೇ ಅರ್ಥದಲ್ಲಿ ಲೀಳಾಚರಿತ್ರದಲ್ಲಿ ಕಾಣಿಸಿಕೊಳ್ಳುತ್ತದೆ.

ಸಿನ್ನರ (ಸೇವುಣಪುರ ಇಂದಿನ ನಾಸಿಕ ಜಿಲ್ಲೆಯಲ್ಲಿಯ ತಾಲೂಕು ಸ್ಥಳ) ಊರಿನಲ್ಲಿ ಗೋಂದೇಶ್ವರ ಹಾಗೂ ಪದ್ಮೇಶ್ವರ ಗುಡಿಗಳು ಇದಿರುಬದಿರಾಗಿವೆ. ಅವುಗಳ ಬಗ್ಗೆ, ಅವುಗಳ ರಚನೆಯ ಬಗ್ಗೆ, ಚಕ್ರಧರರು ಹೇಳುವಾಗ (ಪೂರ್ವಾರ್ಧ ೧೦೧ ಪಾಠಭೇದ) ಈ ನಿರೂಪಣೆ.

*ತೇ ದೋಘೆ ಭಾವೆ ಮೇಹುಣೇಜ್; ಏಕೇ ಮ್ಹಣತಿ ಮಾಮೇಭಾಚೇ :*

ಆವರಿಬ್ಬರು (ಗೋಂದೇಶ್ವರ-ಪದ್ಮೇಶ್ವರ) ಭಾವಮೈದುನರು.

ಒಬ್ಬರು ಹೇಳುತ್ತಾರೆ ಸೋದರಮಾವ, ಸೋದರಳಿಯ.

ಇಂದಿಗೂ ಮಹಾರಾಷ್ಟ್ರದಲ್ಲಿ ತಂಗಿಯ/ಅಕ್ಕನ ಗಂಡನನ್ನು (ಕನ್ನಡದ 'ಭಾವಯ್ಯ'ನನ್ನು) 'ಭಾವೋಜೀ' ಎಂದೇ ಕರೆಯುತ್ತಾರೆ.

**ಮೈಳ-ಮೈಲಿಗೆ-ಅಶೌಚ, ಅಸ್ವಚ್ಛತೆ.**

'ಮಯ್ಲಿ' ಶಬ್ದವು ಬಹುಶಃ ದೇಸಿಯಾಗಿರಬಹುದೆಂದು ಕಿಟೆಲ್ ಅಭಿಪ್ರಾಯಪಟ್ಟಿದ್ದಾರೆ. ಸಂಸ್ಕೃತ 'ಮಲಿನ'ದಿಂದ ಅಪಭ್ರಂಶ 'ಮೈಲಾ', ಮರಾಠಿ 'ಮೈಳ' ಎಂದು ತುಳಪುಳೆಯವರು ಹೇಳಿದುದನ್ನು ಅಲ್ಲಗಳೆಯುತ್ತ ಸುಮಂತ

ಕತ್ರೆಯವರು 'ಮೃತ್‌ಇಲ' ಶಬ್ದದಿಂದ ಮೈಳ ಬಂದಿರಬಹುದೆನ್ನುತ್ತಾರೆ[26]. (ಅಂದರೆ 'ಮಲ'ದಿಂದ 'ಮೈಳಾ' ಆಗದೆ 'ಮೃತ್' ದಿಂದ 'ಮೈಳಾ' ಎಂದು ಅವರ ಅನಿಸಿಕೆ). ಈಗ ನಾವು ನೋಡಬೇಕಾದದ್ದು ವಾಕ್ ಪ್ರಯೋಗ 'ಅಶೌಚ' ಅರ್ಥದಲ್ಲಿಯ 'ಮೈಲಿಗೆ'. ಇದರಲ್ಲಿ 'ಮಲ' (ಹೊಲಸು) ಅಥವಾ 'ಮೃತ್' (ಮಣ್ಣು) ಇವಾವುಗಳ ಸಂದರ್ಭವೂ ಇಲ್ಲ. ಇಷ್ಟೇ ಅಲ್ಲ, ಮಧ್ಯಯುಗೀನ ಭಾರತೀಯ ಆರ್ಯಭಾಷೆಗಳಲ್ಲಿ ಈ ಅರ್ಥದಲ್ಲಿ (ಜನನ 'ಆಶೌಚ', ಮರಣ 'ಆಶೌಚ', ಮಡಿ ಮೈಲಿಗೆಯಲ್ಲಿಯ 'ಮೈಲಿಗೆ') 'ಮೈಲಾ' ಶಬ್ದ ರೂಢವಿಲ್ಲ. ಬಳಕೆಯಾಗಿಲ್ಲ. ಈ ವಿಶಿಷ್ಟಾರ್ಥದ 'ಮೈಲಿಗೆ' ಮರಾಠಿಯಲ್ಲಿ 'ಮೈಳ' ಆಗಿ ಹೋಗಿದೆ.

*ಆಲಾಜ್‌ಗೇಲಾಜ್ ಗುಣಾಂಚಾ ಬೋಧು ನ ಮೈಳೇ ತೇಯಾಚಾ*
*ತೋ ದೇಹೀಂಜ್ ಜೈಸಾ ವ್ಯೋಮಿಚಾ ಚಂದ್ರ ಜಳೀಂಜ್ (೧೪.೩೦೭)*

> ಸತ್ವರಜತಮಗುಣಗಳು ಬಂದು ಹೋಗುವುದರಿಂದ ಆವನಿಗೆ ಮೈಲಿಗೆಯಿಲ್ಲ. ಆಕಾಶದ ಚಂದ್ರನು (ನೆಲದ ಮೇಲಿನ) ನೀರಿನಲ್ಲಿ ಕಾಣಿಸಿಕೊಳ್ಳುವಂತೆ, ಇವನು ದೇಹದಲ್ಲಿರುತ್ತಾನೆ.

*ತಥ್ಟಿ ದಾತಾರು ಹಾ ಆಮಚಾ ಹ್ಮಣೌನಿ ಐಸೇಂಜ್ ಬೋಲತಾಜ್ ಮೈಳೇಲ ವಾಚಾ (೯.೫೧೯)*

> ಆದರೂ ಇವನು (ಧೃತರಾಷ್ಟ್ರನು) ನಮ್ಮ ಅನ್ನದಾನಿಯು. ಅಂತೆಯೇ ಹೀಗೆ ಹೇಳುವುದರಿಂದ ಬಾಯಿಗೆ ಮೈಲಿಗೆಯಾದೀತು.

*ಸಾಧು ತೇಜ್ ಗೋಂದಳಿಜ್ ಸಂಚರೌನಿ ಸುಯೇ ಮೈಳಜ್*

> ಸಾಧುವು ಗೊಂದಲದಲ್ಲಿ ಸಂಚರಿಸಿ ಮೈಲಿಗೆಯಾದಂತೆ.

*ಗಂಗೇಚೇ ಏಕ ಪಾಣೀಜ್ ಪರಿ ನೇಲೇಜ್ ಆನಾನೀಜ್ ವರ್ಣೀಜ್*
*ಏಕ ಮೈಳೇ ಏಕ ಆಣೇ ಶುದ್ಧತ್ವ ಜೈಸೇಜ್ (೧೭.೧೯೫)*

> ಭಾಗೀರಥಿಯ ನೀರು ಒಂದೇ. ಬೇರೆಬೇರೆ ವರ್ಣದವರು ಅದನ್ನೊಯ್ದರು. ಒಬ್ಬ ಮೈಲಿಗೆಯವ ಒಬ್ಬ ಅನ್ಯ. ಶುದ್ಧತೆ (ಅದಕ್ಕೆ ಊನವಿಲ್ಲ) ಆದರಂತೆ.

ಮಡಿಮೈಲಿಗೆ, ಶುದ್ಧ ಅಶುದ್ಧಗಳ ಕಲ್ಪನೆ ಮರಾಠಿಯಲ್ಲಿ ಇಲ್ಲವೆಂದಲ್ಲ. ಕಾಯಿ ದ್ವಿಜು ಅಂತ್ಯಜು ಸೋಪೇ *(೧೭.೫೧)*

ಅಂತ್ಯಜನೊಡನೆ (ಮೈ) ತಿಕ್ಕಿದರೆ ಬ್ರಾಹ್ಮಣನು ಅಂತ್ಯಜನಾಗುವುದಿಲ್ಲವೇ? ಎಂದು ಜ್ಞಾನೇಶ್ವರರೇ ಒಂದು ದೃಷ್ಟಾಂತದಲ್ಲಿ ಕೇಳಿದ್ದಾರೆ!

**ಮೋಡಣೇಜ್ - ಮುರಿ-ತುಂಡುಮಾಂಡು-ಮುರಿ-ಬಗ್ಗಿಸು**

'ಮೋಟನ' (ತುಂಡರಿಸು) ಅರ್ಥದಲ್ಲಿಯ 'ಮುಟಿ' ಧಾತುವಿನ ಹಳಗನ್ನಡದ

---

26. ಯಾದವಕಾಲೀನ ಮರಾಠೀ ಭಾಷಾ ಪು. ೨೦,೨೧

ಪ್ರಯೋಗ ಹೀಗೆ : *ಮುಳಿದೆಳೆಮಯ್ಯ ನಿನ್ನನಿರದಂತಕನಾಂ ನಡೆ ನೋಡೆ (ಆದಿಪುರಾಣ ೩೧೪)* 'ವಕ್ರಭಾವ' (ಬಗ್ಗಿಸು) ಅರ್ಥದಲ್ಲಿಯ ಪ್ರಯೋಗ ಇಂತು. *ಪೆಱಪಿಂಗುವನಂ ಮುರಿದಡಸಿ ಪಿಡಿದು ಘಟ್ಟಿಸಿ (ಪಂಪಭಾರತ ೩.೩೦)*

ಜ್ಞಾನೇಶ್ವರೀಯಲ್ಲಿ ಇವೆರಡೂ ಅರ್ಥದಲ್ಲಿ 'ಮೋಡಣೇಜ್' ಶಬ್ದ ಬಳಸಲಾಗಿದೆ. ವ್ಯುತ್ಪತ್ತಿಯ ದೃಷ್ಟಿಯಿಂದ 'ಮೋಟನ' ಧಾತುವು ಹತ್ತಿರದ್ದೆನಿಸಿದರೂ ಅದಕ್ಕೆ ಬಗ್ಗಿಸು' ಎಂಬರ್ಥವಿಲ್ಲ. ಹೀಗಾಗಿ 'ಮೊಟು' ದಿಂದ 'ಮೋಡ' ಆಗಿದ್ದರೂ ಕನ್ನಡದಿಂದಾಗಿ ಅದಕ್ಕೆ 'ಬಗ್ಗಿಸು' ಅರ್ಥ ಒದಗಿದ್ದು ಸ್ಪಷ್ಟವಾಗಿದೆ.

*ಕಡಾಡಿಜ್ ಮೋಡೇ ಜೋ ಗಾಡಾ ತೋ ಆಪೇಣಪೇಯಾಜ್ ನ ಮನೀ ಆವಘಡಾ (೧೮.೬೪೩)*

ಕಡಾಣೆ ಮುರಿದರೂ ಬಂಡಿಯು ಇದೊಂದು ತನ್ನ ಮೇಲಿನ
ಆವಘಡವೆಂದು ತಿಳಿಯುವುದಿಲ್ಲ. (ಅದು ತನ್ನ ಮಟ್ಟಿಗೆ
ಹೋಗುತ್ತಲೇ ಇರುತ್ತದೆ ಎಂದು ಭಾವ)

'ಕೀಲು' ಅರ್ಥದಲ್ಲಿಯ 'ಕಡಾಣೆ' ಶಬ್ದ ಮರಾಠಿಗೆ 'ಕಡಾಡಿ'ಯಾಗಿ ಹೋಗಿದ್ದನ್ನು ಇಲ್ಲಿ ಗಮನಿಸಬಹುದು. ಆದರೆ ಭಾಷ್ಯಕಾರರಿಗೆ ಈ ಶಬ್ದ ತಿಳಿಯದ್ದರಿಂದ 'ಕಣಿವೆಯಲ್ಲಿ ಬಂಡಿಯು ಮುರಿದು ಬಿದ್ದರೂ' ಎಂದಾಗಿ ಅಪಾರ್ಥ ಹಚ್ಚಿದ್ದಾರೆ.

*ತೋ ವಾಢೌನಿ ಮೋಡಲಾ ಭೆಂಡು ಜೈಸಾ (೧೮.೫೭೨)*

ಅವನು ಬೆಳೆದು ಮುರಿದ ಬೆಂಡಿನಂತೆ

*ಆಂಗ ಮೋಡಾ ಮೋಡಿ (೧೪.೧೭೯)*

ಆಲಸ್ಯದಿಂದ (ಬರಿದೆ) ಮೈ ಮುರಿಯುವುದು

(ಇದೇ ಅರ್ಥದ ಪ್ರಯೋಗ 'ಚಂದ್ರಪ್ರಭ ಪುರಾಣದಲ್ಲಿ - ೬.೨೩-ಬಂದಿದೆ.)

*ಆಂಗೇಜ್ ಜೀವೇಜ್ ಮೋಡೌನಿ ತೇಥ ಚಿ ಭರು (೧೮.೮೯೦)*

ಮನಸ್ಸುಗೊಟ್ಟು ಅಲ್ಲಿಯೇ ಮೈ'ಮುರಿದು' ತುಂಬುವುದು.

'ಮೈಮುರಿ ದುಡಿತ' ಈ ಅರ್ಥದಲ್ಲಿ.

'ಮನೆ ಮುಳಿದರೆ ಕಟ್ಟಬಹುದು. ಮನಮುಳಿದರೆ ಕಟ್ಟಲಾಸ' ಈ ಕನ್ನಡ ಗಾದೆಯೊಂದರಲ್ಲಿ ಬರುವ 'ಮುಳಿ' ಅರ್ಥ ಜ್ಞಾನೇಶ್ವರಿಯ ಈ ಓವಿಯಲ್ಲಿ ನೋಡಬೇಕು.

*ಘರೇಜ್ ಮೋಡುನೀ ಕೇಲೇ ಮಾಂಡವ ಪುಢೇಜ್ (೧೩.೨೩೧ ಪಾಠಭೇದ)*

ಮನೆ ಮುಳಿದು ಮುಂದೆ ಹಂದರ ಹಾಕಿದರು!

*ವಿಚಾರಾಚೀ ಮೋಡಲೀ ವಾಟ ಜೇಥ (೧೩.೮೬೮)*

ವಿಚಾರದ ದಾರಿಯು ಎಲ್ಲಿ ಹೊರಳಿತೋ (ವಕ್ರವಾಯಿತೋ)

**ಮೋಹರ-ಮೋಚೆ ಮುಖ**

ಹಳಗನ್ನಡದಲ್ಲಿ ಪ್ರತ್ಯೇಕವಾಗಿ ಈ ಶಬ್ದದ ಪ್ರಯೋಗ ದೊರೆಯದಿದ್ದರೂ ಎಮ್ಮ ಮೋಚೆ ಎಂಬುದಾಗಿ ಶಬ್ದಮಣಿದರ್ಪಣದಲ್ಲಿ (ಸೂತ್ರ ೧೪೩.) ಉದಾಹರಣೆ ದೊರೆಯುತ್ತದೆ. ಈ ಶಬ್ದವು 'ಮೋಹರ' ಆಗಿ ಕನ್ನಡ 'ಮೋರೆ' ಅರ್ಥದಲ್ಲೂ ಸಂಸ್ಕೃತದ 'ಮುಖ' (ದಿಕ್ಕು) ಅರ್ಥದಲ್ಲೂ ಜ್ಞಾನೇಶ್ವರೀಯಲ್ಲಿ ಬಳಸಿದುದನ್ನು ನಾವು ಕಾಣುತ್ತೇವೆ.

*ಹೇಂ ಕಾಇ ಜನ್ಮಲೇಯಾಸಿ ಮೋಹರ ನಾಹಿಂ (೧೧.೪೧೪)*

ಇದೇನು? ಹುಟ್ಟಿದವನಿಗೆ ಮೋರೆ(ಯೇ) ಇಲ್ಲ!

'ಮೋರೆ ಮಾಡು' ಅರ್ಥದಲ್ಲಿ ಬಳಸಲಾದ ಧಾತು 'ಮೋಹರ'.

*ಪ್ರವೃತ್ತಿ ಮಾಗೌತಿ ಮೋಹರೇ ಸಮಾಧಿ ಐಲಾತಿ ಉತ್ತರೇ (೬.೧೯೧)*

ಪ್ರವೃತ್ತಿಯು ಹಿಂದೆ ಮೋರೆ ಮಾಡುತ್ತದೆ. ಸಮಾಧಿಯು ಇತ್ತ ಉತ್ತರಕ್ಕೆ ಮೋರೆ ಮಾಡುತ್ತದೆ.

*ಯೇಕಸರೇಯಾ ಆಹಾರಾ ಕೈಸೇನಿ ತಿನಿ ಮೋಹರಾ ಜಾಲಿಯಾ (೧೭.೧೧೯)*

ಒಂದೇ ರೀತಿಯ ಆಹಾರಕ್ಕೆ ಮೂರು ಮೋರೆ (ಮುಖ)ಗಳು ಹೇಗೆ ಆದವು?

ಇಲ್ಲಿ ಇನ್ನೊಂದು ಮೋಜು. ಕನ್ನಡದಲ್ಲಿ 'ಬಾಯಿ' 'ಮೋರೆ' ಇವುಗಳಿಗೆ ಬೇರೆ ಬೇರೆ ಶಬ್ದಗಳು. ಸಂಸ್ಕೃತದಲ್ಲಿಯಂತೆ ಮರಾಠಿಯಲ್ಲೂ ಒಂದೇ ಶಬ್ದ 'ಮುಖ'. (ನಂತರದ ಕಾಲದಲ್ಲಿ 'ತೋಂಡ'). 'ಮುಖ' ಅರ್ಥದಲ್ಲಿ (ಅಂದರೆ 'ಬಾಯಿ') ಶಬ್ದ ಬೇಕಿದ್ದಾಗ 'ಮೋರೆ' ಅರ್ಥದ 'ಮೋಹರಾ' ಬಳಸಲಾಗಿದೆ. ಅಂದರೆ ಈ ಓವಿಯ ಭಾವಾರ್ಥ - ಒಂದೇ ಆಹಾರಕ್ಕೆಂದು ಮೂರು ಬಾಯಿಗಳು ಹೇಗೆ ಹುಟ್ಟಿಕೊಂಡವು? (ಸಾತ್ವಿಕ, ರಾಜಸ, ತಾಮಸಿಕ) ಇದರ ಮುಂದಿನ ಓವಿಯ ಭಾವಾರ್ಥ ಹೀಗೆ : 'ಇಲ್ಲಿ ಉಣ್ಣುವವನ ರುಚಿಯೋ, ಅನ್ನದ ರುಚಿಯೋ ಅಥವಾ ಊಟಕ್ಕೆ ಹಾಕುವವನ (ಯಜಮಾನನ) ರುಚಿಯೋ? ಆದಕ್ಕಾಗಿ ಇಲ್ಲಿ ಎಲ್ಲವೂ ಮೂರು ಗುಣಗಳಿಗೆ ಅಧೀನವಾಗಿವೆ.'

*ಜ್ಞಾನಪದೇಂ ಆಠರಾ ಕೇಲಿಯಾ ಏರೀ ಮೋಹರಾ (೧೩.೮೪೭)*

(ಅಮಾನಿತ್ವಾದಿ) ಹದಿನೆಂಟು ಜ್ಞಾನಪದಗಳ ಮೋರೆ ತಿರುಪಿದರೆ (ವಿರುದ್ಧ ಅರ್ಥ ತೆಗೆದುಕೊಂಡರೆ)

ಸಂಸ್ಕೃತದಲ್ಲಿ 'ಸಮ್ಮುಖ' 'ಪರಾಙ್ಮುಖ' ಶಬ್ದಗಳು ದಿಕ್ಕು ಸೂಚಿಸುತ್ತವೆಯಷ್ಟೇ? ಮರಾಠಿಯಲ್ಲಿ 'ಸಮ್ಮುಖ'ವು ಸ+ಮೋರೆ' 'ಸಾಮೋರೆ'-ಯಾಗಿದೆ. ಪರಾಙ್ಮುಖವು (ಬೆನ್ನು+ಮೋರೆ ಅರ್ಥದಲ್ಲಿ) 'ಪಾಠ+ಮೋರೆ' ಆಗಿದೆ. ಪ್ರಯೋಗಗಳು ಹೀಗೆ.

*ನಿಮ್ನ ಭರಲೇಯಾಂ ಉಣೇಂ ತೇಂ ಪಾಠೀ ಥಳೋಂ ಚಿ ನೇಣೇ.*

*ತೇವಿ ಆನ ತೋಖೌನಿ ಜಾಣೇಜ್ ಸಾಮೋರೇಯಾಜ್. (೧೬.೧೫೭)*

ತಗ್ಗಿನಲ್ಲಿ ತುಂಬಿದ (ಪರಿದು) ಉಳಿದ ನೀರು ಕಲಕುವುದಿಲ್ಲ. ಅದು ಸಮ್ಮುಖ (ಇದಿರು) ಬಂದವನ ನೀರಡಿಕೆಯನ್ನು ಹಿಂಗಿಸುತ್ತದೆ. ಹಾಗೆ (ಒಱತೆಯ ನೀರಾದೊಡೆ ತಾನೇಂ ಬಱನಂ ಪಿಂಗಿಸದೆ-ಎಂದಂತೆ)

*ಕುಳೇಜ್‌ಸಿಜ್ ಪಾಠಿಮೋರಾ ವೇದಾಜ್ಞೇಸಿ ದುರ್ಥಾ ಕೃತ್ಯಾಕೃತ್ಯ ವ್ಯಾಪಾರಾ ನಿವಾಡು ನೇಣೇ (೧೩.೬೯೫)*

ಕುಲಾಚಾರಗಳಿಗೆ ಬೆನ್ನು ಮೋರೆ ಮಾಡಿದವನು, ವೇದದ ಆಜ್ಞೆಗಳಿಗೆ ದೂರವಾದವನು, ಯಾವುದನ್ನು ಮಾಡಬೇಕು ಯಾವುದನ್ನು ಮಾಡಬಾರದು ಇದರ ಆಯ್ಕೆನ್ನರಿಯನು.

*ನಿಗಿಜೇ ಪೂರ್ವಿಲೀ ಮೋಹೋರಾ ಕಿಜ್ ಯೇಇಜೇ ಪಶ್ಚಿಮಾಚೇಯಾ ಘರಾ (೬.೧೫೯)*

ಪೂರ್ವದ ದಿಕ್ಕಿನಿಂದ ಹೊರಡುವುದು ಆಗ ಪಶ್ಚಿಮದ ಮನೆ ಬರುವುದು.

**ಮೌಳಾ-ಮುಳ್ಳು**

ಹಳಗನ್ನಡದ ಮುಳ್ಳು ಶಬ್ದ (ಉದಾ. ಮುಳ್ಪೆರಸಿದ ಗುಜುರುಗೊಮ್ಬು, ಶಬ್ದಮಣಿದರ್ಪಣ) ಮರಾಠಿಯಲ್ಲಿ ಮೌಳಾ ಆಗಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ.

*ಕನಕಾಚಿಯಾ ಫಳಾ ಆಜ್‌ತು ಮಾಜ ಬಾಹೇರೀ ಮೌಳಾ (೧೮.೬೫೮)*

ಮದ್ದುಗುಣಿಕೆಯ ಕಾಯಿ, ಒಳಗೆ ಮತ್ತು (ಬರಿಸುವ ಬೀಜಗಳು) ಹೊರಗೆ ಮುಳ್ಳು.

ಇಲ್ಲಿ ಮೊಳೆ (ಕಬ್ಬಿಣದ ಶಲ್ಯ, ಶಂಕು ಗೂಣ್ಟ-ಶಬ್ದಮಣಿದರ್ಪಣ ೧೧೧) ಶಬ್ದದ ಸ್ವಾರಸ್ಯಕರ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ.

ಮುಳ್ಳು ಮೊಳೆಗಳೆರಡೂ ಹಳಗನ್ನಡ ಶಬ್ದಗಳೇ ಆಗಿದ್ದರೂ ಮೊಳೆ ಶಬ್ದ ಮುಳ್ಳಿನಿಂದ ಹುಟ್ಟಿರಬಹುದೆಂಬುದರ ಕಲ್ಪನೆ ಯಾರಿಗೆ ಬಂದೀತು? ರೆ. ಕಿಟೆಲ್‌ರು ಮೊನೆ=ಮೊಳೆ ಸಾಧಿಸಿದ್ದನ್ನು ಮಾತ್ರ ಇನ್ನೊಮ್ಮೆ ಪರೀಕ್ಷಿಸುವಂತಾಗಿದೆ.

ಮೊಳೆದಿಗುರ ಮುಗಿಲ್ (ಗರ್ಜನ್ಮೇಘ) ಎಂದು ಶಬ್ದ ಪ್ರಯೋಗ ಹಲಾಯುಧನ ಅಭಿಧಾನರತ್ನಮಾಲಾದಲ್ಲಿ ಕಾಣುತ್ತೇವೆ. ಇಂತಹದೇ ಒಂದು ಪ್ರಯೋಗ ಜ್ಞಾನೇಶ್ವರೀಯಲ್ಲಿಯೂ ಬಂದಿದೆ.

*ಆಷಾಢಿಚೇನಿ ಜಳೇಜ್ ಜೈಸಿಜ್ ಥಿುರಪಾಂತಿ ಮೌಳೇಜ್*
*ತೈಸೆಜ್ ಖಾಂಡೇಹೂನಿ ಲಾಳೇ ಪೇಟತಿ ಪುರ (೧೩.೫೬೬)*

ಆಷಾಢದ ಗರ್ಜನ್ಮೇಘಗಳು ಮಳೆಗರೆಯುವಂತೆ ಹಲ್ಲುಗಳ ಸಂದಿಯಿಂದ ಜೊಲ್ಲು ಸಿಡಿಯುತ್ತದೆ. (ಸುರಿಯುತ್ತದೆ)

ಮುರಾರಿ ಪಂಡಿತರು ಮಾತ್ರ ಮೌಳಿ-ಪರ್ವತ ಓಬಲೇಮು ಅರ್ಥೈಸಿ ಅನ್ವಯ ಹಚ್ಚಲು ಹೆಣಗಿದ್ದಾರೆ. ಈ ಓವಿಯ ಶಬ್ದಶಃ ಅರ್ಥವನ್ನು ಈ ರೀತಿಯಾಗಿಯೂ ಹಚ್ಚಬಹುದು.

ಆಷಾಢದ (ಮಳೆ) ನೀರು ಮುಳ್ಳುಗಳಿಂದ ಕೆಳಗೆ ಹರಿಯುವಂತೆ ಹಲ್ಲುಗಳಿಂದ ಜೊಲ್ಲು ಸುರಿಯುತ್ತದೆ.!

**ಹ್ಮಣೌನಿ - ಅಂತು, ಎಂದು**

**ಹ್ಮಣಜೇ - ಅಂದರೆ**

ಈ ಶಬ್ದದ ಬೆಳವಣಿಗೆ ಸ್ವಾರಸ್ಯಕರವಾಗಿದೆ. ಪ್ರಕಾರ ಕಾಲ್ಯಾರ್ಥವಾದ ಶಬ್ದ ಅನ್ತು (ಶಬ್ದಮಣಿದರ್ಪಣ ಸೂತ್ರ ೩.೩೫)

*ಕುಣಿತಂತು ಪೆಣಿರ ಬಗೆಯಂ ತಣಿವಿರೆ (ಕವಿರಾಜಮಾರ್ಗ ೧.೧೫)*
ಎಂಬುದಾಗಿ ಹಳಗನ್ನಡದಲ್ಲಿ ಪ್ರಯೋಗಗಳು ದೊರೆಯುತ್ತವೆ.

*ಹಾ ಕರ್ಣಾ ಎನುತುಮಂತೆ ಮೂರ್ಛೆಗೆ ಸಂದಂ (ಗದಾಯುದ್ಧ)*
*ಅಂತು ಬಂದಗುರ್ವು ಪರ್ವೆ ಬಿಗುರ್ವಿಸಿದ ಬಿಲ್ಗಳಂ ಕಂಡು (ಪಂಪರಾಮಾಯಣ)*

'ಅಂತು'ಗೆ ಇಲ್ಲಿ ಹಾಗೆ, ಹೀಗೆ ಎಂಬರ್ಥ ಒದಗಿದೆ. 'ಅನ್ತೆಗೆ' ಕೂಡ ಹಾಗೆ ಎನ್ನುವ ಅರ್ಥವಿದ್ದರೂ ಅಲ್ಲಿ ಹೋಲಿಕೆಗೆ ಆಸ್ಪದವಿದೆ.

*ಗಿರಿಯನ್ತೆ ಬಣ್ಣವಂ, ಸುರಕರಿಯನ್ತೆ ಬಲಾಢ್ಯನ್ (ಶಬ್ದಮಣಿದರ್ಪಣ ಸೂತ್ರ ೨೨೫)*

ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿಯ ಕೆಲವು ಉದಾಹರಣೆಗಳನ್ನು ಪರಿಶೀಲಿಸಬಹುದು.

*ಅವನು ಬೈದ ಅಂತ ನಾ ಹೊಡೆದೆ. ರಾಜಾ ಸತ್ತ ಅಂತ ರಾಣಿ ಅತ್ತಳು. ಹೊತ್ತಿಗೆ ಮಳೀ ಆತು ಅಂತ ಬೆಳೀ ಬಂತು.*

ಈ ಮೂರೂ ವಾಕ್ಯಗಳಲ್ಲಿಯ 'ಅಂತ' ಅವ್ಯಯವಾಗಿ ಕಾರ್ಯಕಾರಣ ಭಾವ ಸೂಚಿಸುತ್ತದೆ.

*ಅಂವಾ ಹೋದಂತೆ ಮಾಡಿದ. ಇದ್ದಕ್ಕಿದ್ದಂತೆ ಬೆಂಕಿ ಹತ್ತಿತು.*

ಈ ವಾಕ್ಯಗಳಲ್ಲಿಯ ಅಂತೆ ಉಪಮಾನ (ಹಾಗೆ ಅರ್ಥದಲ್ಲಿ) ತೋರಿಸುತ್ತದೆ.

ಕಾರ್ಯಕಾರಣಭಾವ ಮತ್ತು ಉಪಮಾನಭಾವಗಳೆರಡೂ ಅಂತು, ಅಂತೆಗಳಿಂದ ಎಂದಿನಿಂದಲೂ ಸಾಧಿಸುತ್ತ ಬಂದಿರಲು ಬೇಕು. ಅಂತುಗೆ ಬದಲಾಗಿ ಎಂದು ಶಬ್ದವೂ ಪ್ರಯುಕ್ತವಾಗಿದೆ. *ಸರಿತ್ತಟವನಲತಾಗೃಹದೊಳ್ ಸೀತೆ ಒಳೆವಳ್ ಎಂದು (ಪಂಪರಾಮಾಯಣ)*

ವಸ್ತುತಃ ಅಂತು, ಅಂತೆ ಅವ್ಯಯಗಳಿಗೂ ಅನ್ (ಹೇಳು) ಧಾತುವಿಗೂ ಯಾವ ಸಂಬಂಧವೂ ಇಲ್ಲ. ಆದರೆ ಆಡುಮಾತಿನ ನೆಲೆ ಕಂಡವರಾರು? ಇಲ್ಲದಿದ್ದರೆ

'ಸೀತೆ ಒಳಿದಳ್ ಎಂದು' ಎಂಭ ಪ್ರಯೋಗವಾಗಬಹುದಿತ್ತೇ? ಮರಾಠಿ ಮ್ಹಣ=ಅನ್ನು ಧಾತುವಿನಿಂದಾದ ಮ್ಹಣೌನಿ=ಅಂದು (ಹೇಳಿ) ಧಾತುಸಾಧಿತವು ಅವ್ಯಯವಾಗಿ ಕಾರ್ಯಕಾರಣಭಾವವನ್ನು ಸೂಚಿಸುತ್ತದೆ. ಇಲ್ಲಿ ಮಾತನಾಡುವ ಯಾವ ಕ್ರಿಯೆಯೂ ಇಲ್ಲವೆಂಬುದನ್ನು ಜ್ಞಾನೇಶ್ವರೀಯ ಕೆಲ ಉದಾಹರಣೆಗಳಿಂದ ಮನಗಾಣಬಹುದು. (ಎಲ್ಲವೂ ಮೂರನೆಯ ಅಧ್ಯಾಯದಲ್ಲಿಯವು)

*ಹ್ಮಣೌನಿ ಸಂಗು ಜಜ್ವ ಪ್ರಕೃತಿಜ್ (೬೩)*
ಆದ್ದರಿಂದ ಪ್ರಕೃತಿಯ ಸಂಪರ್ಕವಿರುವವರೆಗೆ
*ಹ್ಮಣೌನಿ ಜೇಜೇ ಉಚಿತ (೭೮)*
ಅಂತೆಯೇ ಯಾವುದಾವುದು ಯೋಗ್ಯವೋ
*ಪರಿ ನೇಣತಿ ಚಿ ತಿಯೇ ಯಜ್ಞಾತೇಜ್ ಸೂಕ್ಷ್ಮ ಹ್ಮಣೌನಿ(೮೬)*
ಆದರೆ ಆ ಯಜ್ಞವನ್ನು ಸೂಕ್ಷ್ಮವೆಂದು ತಿಳಿಯುವುದಿಲ್ಲ.
*ಹ್ಮಣೌನಿ ಸ್ವಧರ್ಮ ಜೋ ಸಾಂಡೀಲ (೧೧೨)*
ಅಂತೆಯೇ ಸ್ವಧರ್ಮವನ್ನು ತ್ಯಜಿಸಿದವನು.

ಹೇಳು ಅರ್ಥದಲ್ಲಿ ಕನ್ನಡದಲ್ಲಿ ಅನ್ ಎಂಬ ಧಾತುವಿದೆ. ಕೇಶಿರಾಜನು ಶಬ್ದಮಣಿದರ್ಪಣದ ಆರನೆಯ ಅಧ್ಯಾಯದಲ್ಲಿ ಇದನ್ನು ಕೊಟ್ಟಿಲ್ಲ. ಆದರೂ ಎನ್(೬.೪೩೬) ಈ ಸಮಾನಾರ್ಥದ ಧಾತುವಿನಂತೆ ಅದರ ಬಳಕೆಯಾಗುತ್ತಿಬೇಕು.

ಜ್ಞಾನೇಶ್ವರೀಯಲ್ಲಿ ಮಾತ್ರ ಹೇಳು ಅರ್ಥದ ಮ್ಹಣ ಧಾತುವಿನ ಭೂತಕಾಲವಾಚಕ ಕೃದಂತ ಮ್ಹಣೌನಿ ಶಬ್ದ (ಹೇಳುವ ಕ್ರಿಯೆ ಇಲ್ಲದಿದ್ದರೂ) ಅನ್ತ, ಅನ್ತು ಅರ್ಥಗಳಲ್ಲಿ ಬಳಸಿದ್ದನ್ನು ನಾವು ಕಾಣುತ್ತೇವೆ.

*ಹ್ಮಣೌನಿ ಬುದ್ಧಿಯೋಗು ಸಧರು (೨.೨೬)*
ಆದ್ದರಿಂದ ಬುದ್ಧಿಯೋಗವು ದೃಢ.
*ಹ್ಮಣೌನಿ ಗಾ ಇಯೇ ಮಾತುಚಾ ವಿಸಂವಾದು (೪.೩೭)*
ಆದಕ್ಕಾಗಿ ಈ ಮಾತು ವಿಸಂಗತ (ವೆನಿಸುತ್ತದೆ)
*ಹ್ಮಣೌನಿ ಕರ್ಮ ಆಣಿ ಕರಿತಾ (೧೮.೨೧೪)* ಆದ್ದರಿಂದ ಕರ್ಮ ಹಾಗೂ ಕರ್ತೃ.
*ಹ್ಮಣೌನಿ ನಯೇ ಯೇವೋಜ್ ಜಾವೋಜ್ ತಿಯಾ ವಾಟಾ (೧೮.೬೭೧)* ಆದ್ದರಿಂದ ಆ ಹಾದಿಯಲ್ಲಿ ಹೋಗಲು ಬರಲು ಬಾರದು. ಹ್ಮಣ ಧಾತುವಿನಿಂದುಂಟಾದ ಕನ್ನಡದ ಛಾಯೆಯುಳ್ಳ ಇನ್ನೊಂದು ಶಬ್ದ ಮ್ಹಣಜೇ. ಅ(ಎ)ನ್ನುವುದು ಎಂಬರ್ಥದಲ್ಲಿ ಮ್ಹಣ ಧಾತುವಿನ ವಿಧ್ಯರ್ಥ ಪ್ರಥಮ ಪುರುಷ ಏಕವಚನದ ರೂಪ ಮ್ಹಣಜೇ. ಹೇಳುವ ಪ್ರಕ್ರಿಯೆ ಇಲ್ಲದಿದ್ದರೂ ವಿಶಿಷ್ಟಾರ್ಥದ ಅವ್ಯಯವಾದ ಈ ಶಬ್ದ ಬಳಕೆ ಜ್ಞಾನೇಶ್ವರೀಯಲ್ಲಿ ಇಂತು.

*ಜೇಜ್ ವೇದಾಂಚಾ ಚೌಹಟಾ ವೇದ್ಯ ಹ್ಮಣಜೇ (೯.೨೭೨)*
ಯಾವುದು ವೇದಗಳ ಚೌವಟ್ಟ (ನಾಲ್ಕು ದಾರಿಗಳ ಕೂಡುವ ತಾಣ)ವೋ ಅದಕ್ಕೆ ವೇದ್ಯವೆನ್ನುವುದು-
*ಚೂಕಲೀಜ್ ಜ್ಞಾನೇಜ್ ಜೇಥ ಮಿಳೋಜ್ ಆಲೀಜ್ ಜೇಜ್ ಪವಿತ್ರ ಹ್ಮಣಜೇ*

*(೯.೨೭೩)*

(ದಾರಿ) ತಪ್ಪಿದ ಜ್ಞಾನಗಳು ಎಲ್ಲಿ ಬಿಟ್ಟುಬಿಡುವುವೋ
ಯಾವುದನ್ನು ಪವಿತ್ರ ಅನ್ನುವುದೋ-

ಅದರ ಸಮಕಾಲೀನ ಗದ್ಯಗ್ರಂಥ ಲೀಳಾಚರಿತ್ರದಲ್ಲಿಯ ಪ್ರಯೋಗ ಹೀಗೆ :

*ದೇಶ ಮ್ಹಣಿಜೇ ಖಂಡ ಮಂಡಳ*

ಖಂಡಮಂಡಳಕ್ಕೆ ದೇಶವೆನ್ನುವುದು ಅಥವಾ ದೇಶವೆಂದರೆ
ಖಂಡಮಂಡಳ.

**ಯಾ -ವಾ**

ಆಜ್ಞಾರ್ಥದ ಉತ್ತಮಪುರುಷ ಬಹುವಚನ ಹಳಗನ್ನಡ ಪ್ರತ್ಯಯ 'ಅಂ'. ಇದು 'ವ' ಆಗಮದೊಂದಿಗೆ ಬಳಕೆಯಾದುದನ್ನು ಕೇಶಿರಾಜನು ಈ ರೀತಿಯಾಗಿ ಉದಾಹರಿಸುತ್ತಾನೆ. *ಅನಿಬರುಂ ಒಂದಾಗಿ ತಾಗುವಂ ಫಲ್ಗುನನೊಳ್ (ಶಬ್ದಮಣಿದರ್ಪಣ ಸೂತ್ರ ೨೪೦) ಏಗೆಯ್ವಂ? ಪೇಟಿಂ (ಅದೇ) ಅಂ ಎಲ್ಲರ್ ಈಗಳ್ ಅಶ್ವಮೇಧವಂ ಮಾಡುವಂ (ಸೂತ್ರ ೨೪೧).* ಈ 'ಅಂ' ಪ್ರತ್ಯಯ 'ವಂ' ಆಗಿ ಮುಂದೆ'ವಾ' ಕೂಡ ಆಗಿದೆ.

'ಆಗಮನ' ಅರ್ಥದಲ್ಲಿಯ 'ಬರ್' ಧಾತುವಿನ ಮೂಲ ಕನ್ನಡ ರೂಪ 'ವರ್'. *ನೆಲಕ್ಕೆ ಏರುತಿರ್ದ ವಿಮಾನಂ ಬಾರದೆಪೆಯಿಂದೆ ಮೇಗೆ ಮಗುಟ್ದುಂಮ (ವಡ್ಡಾರಾಧನೆ ೮೫-೨೩)* ಇದು ಇದಕ್ಕೆ ಉದಾಹರಣೆ. ವರ್ ಧಾತುವಿನ ಆಜ್ಞಾರ್ಥ ಮಧ್ಯಮಪುರುಷ ಏಕವಚನದ ರೂಪ 'ವಾ' (ಬಾ).

ಮರಾಠಿಯ ಆದ್ಯಗ್ರಂಥಕಾರರಲ್ಲಿ ಇವೆರಡೂ 'ವಾ'ಗಳಲ್ಲಿ ಅರ್ಥಭೇದವಳಿಸಿ ಒಂದಕ್ಕೆ ಬದಲಾಗಿ ಇನ್ನೊಂದರ ಮರಾಠಿ ರೂಪಾಂತರಿತ ಶಬ್ದವು ಬಳಸಲಾಗಿದೆ. ಬರ್ (ವರ್) ಅರ್ಥದ 'ಯೇ' ಧಾತುವಿನ ಆಜ್ಞಾರ್ಥ ಮಧ್ಯಮಪುರುಷ ಬಹುವಚನ (ಏಕವಚನ ಅಲ್ಲ!) ರೂಪ 'ಯಾ'. ಲೀಳಾಚರಿತ್ರದಲ್ಲಿಯ ಉದಾಹರಣೆಗಳು.

*ಬಿಢಾರಾಸಿ ಜಾವೋಜ್ ಯಾ (ಏಕಾಕ ೭೫)*

ಬಿಡಾರಕ್ಕೆ ಹೋಗು ವಾ.

**ಯೇ ಬರ್ಪುದು, ಬಹುದು, ನ + ಯೇ ಬಾರದು**

ಹಳಗನ್ನಡದ ಬಾ, ಬರ್ ಧಾತುವಿನ ವರ್ತಮಾನಕಾಲವಾಚಕ ಪ್ರಥಮ-ಪುರುಷ ಏಕವಚನದ ರೂಪ ಬರ್ಪುದು, ಬಪ್ಪುದು. ಬರುವ ಕ್ರಿಯೆಯನ್ನಲ್ಲದೆ ಸಾಧ್ಯತೆಯನ್ನು ಸೂಚಿಸುವ ಶಬ್ದ ಬಪ್ಪುದು, ನಡುಗನ್ನಡ ಹೊಸಗನ್ನಡದಲ್ಲಿ ಬಹುದು ಎಂದು ರೂಪಗೊಂಡಿದೆ.

*ನಿಮ್ಮ ಭಕ್ತರ ದೆಸೆಯೊಳ್ ಆರಿಗೆ ಬದುಕಬಹುದು (ಬಸವಪುರಾಣ ೨೧.೧೮)*

ಬಪ್ಪುದು (ಅದೇ ಸಾಧ್ಯತೆಯ ಅರ್ಥದಲ್ಲಿ) ಮರಾಠಿಯಲ್ಲಿ ಅನುವಾದಿತಗೊಂಡು ಯೇ ಆಗಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ.

*ತೋ ಜಾಣೋಜ್ ಯೇ (೨.೩೫೬)*

ಅದನ್ನು ತಿಳಿಯಬಹುದು

*ಅಸೇ ಪುಡೇಜ್ ಹೇಜ್ ಜಾಣೋಜ್ ಯೇ (೪.೧೯೫)*

ಹೀಗೆ ಮುಂದೆ ತಿಳಿಯಬಹುದು

*ಪುರುಷು ಮ್ಹಣೋಜ್ ಯೇ (೮.೧೮೭)*

ಪುರುಷ ಎನ್ನಬಹುದು

*ಸಾಂಡಿವಿಖುರೀ ಗೇಲೀಜ್ ಮ್ಹಣೋ ಯೇ ಕಾಇ (೯.೩೯)*

ಬಿದ್ದು ಹಾಳಾಯಿತು ಎನ್ನಬಹುದೇ

*ತೈಸೇಜ್ ಸಾಧ್ಯಸಾಧನಾದಿಕ ಐಕ್ಯತೇ ಯೇ (೧೩.೯೩೨)*

ಹಾಗೆ ಸಾಧ್ಯಸಾಧನಾದಿಗಳು ಐಕ್ಯತೆಗೆ ಬರುವವು

*ಕಾ ವಾಂಝೆಚೀ ಸಂತತೀ ವಾನೋಜ್ ಏ (೧೫.೨೯)*

ಬಂಜೆಯ ಸಂತತಿಯನ್ನು ಬಣ್ಣಿಸಬಹುದೇ

*ಹೇಜ್ ದಿಠೀ ಪಾಹೋಜ್ ಏ ತೈಸೇಜ್ (೧೬.೨೦೨)*

ಇದನ್ನು ಕಣ್ಣಾರೆ ನೋಡಬಹುದಾದಂತೆ-

*ಆಪಣ ಲಾವಿಜೇ ಟಿಳಾ ಮ್ಹಣೌನಿ ಪುಸೂಜ್ ಯೇ ಆವಲೀಳಾ*

*ಮಾಥಾಲೀ ಥೇಡಿ ನಿಡಳಾ ಕಾಜ್ ಕರುಜ್ ಏ ಗಾ (೧೮.೨೨೧)*

ತಾನು ತಿಲಕವನ್ನು ಸೊಟ್ಟಾಗಿ ಹಚ್ಚಿದೆನೆಂದು ಒರೆಸಬಹುದು.
ಪೂರ್ವ ಕರ್ಮವನ್ನು (ಪ್ರಾಕ್ತನ) ಕಳೆಯಲು ಹಣೆಗೆ ಏನು ಮಾಡಬಹುದಯ್ಯ

*ತ್ಯಜೂಜ್ ಯೇ ತ್ಯಜಿಲೇ (೧೮.-೨೨೨)*

ತ್ಯಜಿಸಬಹುದಾದ್ದನ್ನು ತ್ಯಜಿಸಬೇಕು.

*ಕಾಇ ಕಾಜಳೀ ದೀಪು ಮ್ಹಣೋಜ್ ಏ (೧೮.೨೭೦)*

ಕಾಡಿಗೆಗೆ ದೀಪ ಎನ್ನಬಹುದೇ

*ರೂಪಾಚಾ ಸುಜಾಣು ಡೋಳಾ ಪೋಡೌಜ್ ಯೇ ಕಾಇ ಪರಿಮಳಾ (೧೮.೧೮೫)*

ರೂಪವನ್ನು (ಗುರುತಿಸಬಹುದಾದ) ಒಳ್ಳೆಯ ಕಣ್ಣು ಪರಿಮಳವನ್ನು ಮೂಸಬಹುದೇ?

ನಿಷೇಧಾತ್ಮಕವಾದ 'ಬಾರದು' ರೂಪ ಅನುವಾದಿತಗೊಂಡು ನ+ಯೇ = ನಯೇ ಆಗಿ ಪ್ರಯೋಗಿಸಲ್ಪಟ್ಟಿದೆ.

*ಹಾ ಸ್ವಧರ್ಮ ಹೀ ತೇಣೇಜ್ ಪಾಡೇಜ್ ವಿಸಂಭೋಜ್ ನಏ (೩.೧೧೭)*

ಅವರಿಯಂತೆ ಈ ಸ್ವಧರ್ಮವನ್ನು ಬಿಡಬಾರದು.

*ರಾಹಾಟೋಜ್ ನಯೇ ಅನ್ಯಥಾ (೩.೧೨೬)*

ಬೇರೆ ರೀತಿಯಿಂದ ವರ್ತಿಸಬಾರದು

*ಗೋಠೀ ಕರೂಜ್ ಚ ನ್ಯೆಯೇ (೬.೧೦೦)*

ಮಾತು ಆಡಲೇ ಬಾರದು

*ಅನಾರಿಸೇಜ್ ಬೋಲೋ ನಯೇ (೧೩.೫೩೩)*

ಅನ್ಯಥಾ ಮಾತನಾಡಬಾರದು.

*ಸ್ತ್ರೀಯೇಚಿ ಉಣೀ ಹೋಜ್ ನಯೇ (೧೩.೭೯೩)*

ಸ್ತ್ರೀಗೆ ಕಡಿಮೆ ಆಗಬಾರದು.

*ಜೇಜ್ ಜ್ಞಾನೇಜ್‌ವಾಜ್‌ಚೂನಿ ಕಷ್ವಣೇಜ್ ಉಪಾಯಾ ನಯೇ (೧೩.೮೬೧)*

ಯಾವುದು ಜ್ಞಾನದವಿನಾ (ಬೇರೆ) ಯಾವುದೇ ಉಪಾಯದಿಂದ ಬಾರದು

*ನಾ ಹ್ಮಣೋಜ್ ನ್ಯೆಎ (೧೫.೧೮೦)*

ಇಲ್ಲವೆನ್ನಬಾರದು

**ಯೇರು ಏಱು ಬೆಳೆ, ಬೆಳೆಯುವ**

ಸಂಸ್ಕೃತ 'ಇತರ' ಶಬ್ದದಿಂದ 'ಯೇರ' ಈ ಮರಾಠಿ ಶಬ್ದ ಸಾಧಿಸಲು ಯತ್ನಿಸಿದ ಮರಾಠಿ ಸಂಶೋಧಕರು ಹಳಗನ್ನಡದ ಏಱು ಹಾಗೂ ಪೆಱ ಶಬ್ದ ಮರಾಠಿಗೆ ಹೋದುದನ್ನು ಪೂರ್ಣವಾಗಿ ದುರ್ಲಕ್ಷಿಸಿದ್ದಾರೆ! ಜ್ಞಾನೇಶ್ವರೀಯಲ್ಲಿಯ ಹನ್ನೊಂದನೆಯ ಅಧ್ಯಾಯದಲ್ಲಿಯ ಈ ಮೂರು ಉದಾಹರಣೆಗಳನ್ನು ಪರಿಶೀಲಿಸಬೇಕು.

*ತೋ ಕೃಪಾ ಪೀಯೂಷಸಜಳು ಅಣೆಯೇರು ಜವಳಾ ಆಲಾ ವರಿಷಾಕಾಳು (೧೧.೧೧೩)*

ಅವನು (ಕೃಷ್ಣನೋ) ಕೃಪಾಮೃತಹೊತ್ತ ಮೇಘನು; ಹಾಗೂ (ಅರ್ಜುನನೋ) ಹತ್ತಿರ ಬಂದ ವರ್ಷಾಋತುವು!

(ನನಗಂತೂ ಈ ಸಂದರ್ಭದಲ್ಲಿ 'ಏಱುಂ ಜವ್ವನದೊಳ್ ಸೊಕ್ಕಿ' (ಶಬ್ದಮಣಿದರ್ಪಣ ಸೂತ್ರ ೧೮೧) ಯಂತೆ 'ಯೇರು ಜವಳಾ'ವನ್ನು 'ಏಱುಂ ಜವ್ವನ'ವೆಂದು ಹೋಲಿಸಿ, ಅರ್ಜುನನೆಂದರೆ ಏಱುಂ ಜವ್ವನ ಬಂದ ವರ್ಷಾಕಾಲ ಹೀಗೆ ಅರ್ಥೈಸುವ ಮೋಹ ತಡೆಯದಾಗಿದೆ!)

*ತಜ್‌ವ ದೇಖತು ಆಹೇಜ್ ಕಾ ನ ಹ್ಮಣೇ ನಿವಾಂತೂ ಚಿ ಏರು (೧೧.೧೫೮)*

ಆಗ (ತಾನು) ನೋಡುತ್ತಿದ್ದೇನೆಯೋ (ಎಂಬುದನ್ನು) ಹೇಳಲಿಲ್ಲ. ಮೌನವೇ ಬೆಳೆಯಿತು.

ಹಳಗನ್ನಡ ಪೇಱ>ಹೇಱ (ಅನ್ಯ ಅರ್ಥದಲ್ಲಿ) > ಯೇರ ಹೀಗೆ ವ್ಯುತ್ಪತ್ತಿಯನ್ನು ಸಾಧಿಸಬಹುದಾಗಿದೆ. ಮೇಲ್ಕಾಣಿಸಿದ ಎರಡೂ ಸಂದರ್ಭಗಳಲ್ಲಿ ಅನ್ಯ (ಇಲ್ಲಿ ಅರ್ಜುನ) ಅರ್ಥದಲ್ಲಿ ಕೂಡ ಬಳಕೆ ಸಮರ್ಪಕವಾಗಿದೆ. ಮುಂದಿನ ಉದಾಹರಣೆ ನೋಡಬೇಕು.

*ಯಯಾ ಬೋಲಾ ಏರೇಜ್ ವಿಚಕ್ಷಣೇಜ್ ಹ್ಮಣತಲಿಜ್ ಹಾಜ್ ಜೇ ತೇಜ್*

*ಕವಣಾಸಿ ಉಣೇಜ್ (೧೧.೧೫೭)*

(ಶ್ರೀಕೃಷ್ಣನ) ಈ ಮಾತಿಗೆ ವಿಚಕ್ಷಣನಾದ ಅನ್ಯನು (ಅರ್ಜುನನು) ಹೇಳಿದನು, ಹೌದು ಜೀಯಾ. ಇದು ಯಾವುದಕ್ಕೆ ಕಡಿಮೆ?

**ಯೇರ, ಯೇರು ಆರ್**

*ಪರಮಾಲಂಕಾರೋಚಿತ ವಿರಚನೆಗಳ್ ನೆಗಟ್ದುಮಾರ ವದನೋದರದೊಳ್ (ಕವಿರಾಜಮಾರ್ಗ ೧.೪)* ಯಾರು ಅರ್ಥದಲ್ಲಿಯ ಆರ್ ಶಬ್ದವು ಮರಾಠಿಯಲ್ಲಿ ಯೇರ ಯೇರು ಆದುದನ್ನು ನೋಡಬಹುದು. ಇದು ಹೊಳೆಯದ, ಅಥವಾ ಇದನ್ನೊಪ್ಪದ ಮರಾಠಿ ವಿದ್ವಾಂಸರು ಸಂಸ್ಕೃತ 'ಇತರ' ಶಬ್ದದಿಂದ ಯೇರ ಶಬ್ದವನ್ನು ಸಾಧಿಸಲೆತ್ನಿಸಿದ್ದಾರೆ. ಆದರ ವ್ಯರ್ಥತೆಯೂ ಈ ಉದಾಹರಣೆಗಳಿಂದ ಸ್ಪಷ್ಟವಾಗಬೇಕು.

*ತರಿ ತೇ ಚಿ ಯೇತುಲಾಜ್ ಆವಸರೀಜ್ ಕಾಯ ಕೀಜತಸೇ ಯೇರವಿರೀಜ್ (೧.೮೭)*

ಇಲ್ಲಿಯ ಈ ಪ್ರಸಂಗದಲ್ಲಿ ಯಾರ್‍ಯಾರು ಏನು ಮಾಡುತ್ತಿದ್ದಾರೆ?

*ಹೇ ಯೇರಯೇರ್‍ಯೆ ಆಘವೇ ಗೋತ್ರ ಆಮುಚೇಜ್ (೧.೨೧೭)*

ಇವರು ಯಾರಾರೆಲ್ಲ ನಮ್ಮ ಗೋತ್ರಜರು

*ಆಣಿ ಯೇರ ತೇ ಪಾಂಡವಾ ಜೇ ಆರುಢೌನಿ ಸೋಹಂಭಾವಾ (೧೨.೪೦)*

ಮತ್ತು ಪಾಂಡವನೇ, ಸೋಹಂಭಾವವನ್ನು ಆಶ್ರಯಿಸಿ ಯಾರು-

*ದರ್ಪಣಾ ಹಿಜ್‌ಹೂನಿ ಚೋಖೇಜ್ ದೋನ್ಹಿಜ್ ಹೋಜ್‌ತಿ ಸಂಮುಖೇ*
*ತೇಥ ವಿರೀಜ್ ಏರ ದೇಖೇ ಆಪಣಾವೇ ಜೈಸೇಜ್ (೧೮.೧೫೭೪)*

ಕನ್ನಡಿಗಿಂತ ಚೊಕ್ಕವಾದ ಎರಡು (ವ್ಯಕ್ತಿಗಳು) ಎದುರುಬದುರು ಇದ್ದರೆ ಅಲ್ಲಿ ಯಾರು ಯಾರನ್ನು ನೋಡಿದರೂ ತಮ್ಮಂತೆಯೇ (ಎನಿಸುವುದು)

*ಯಯಾ ಬೋಲಾ ಸಂಜಯೋ ಹ್ಮಣೇ ಜೇ ಯೇರಯೇರಾಂಚೇ ಮಿಾ ನೇಣೇ (೧೮.೧೬೧೨)*

*ಆ ಮಾತಿಗೆ ಸಂಜಯನೆಂದದ್ದು - ಸ್ವಾಮಿ ಯಾರ್‍ಯಾರದು ನನಗೆ ಅರಿಯದು.*

**ರಗಟೇಜ್- ರಗಟೆ, ಹಳೆಯ ಬಟ್ಟೆ**

ಉತ್ತರಕರ್ನಾಟಕದ ಜನಪದ ಭಾಷೆಯಲ್ಲಿಯ ರಗಟೆ ಶಬ್ದ ಹಳಗನ್ನಡ ಗ್ರಂಥಗಳಲ್ಲಿ ಬರದಿದ್ದರೂ ಗೋದಾವರಿ ನದಿಯ ದಕ್ಷಿಣಭಾಗದಲ್ಲಿಯ ಆ ಕಾಲ-ದಲ್ಲಿಯ ಮರಾಠಿಯಲ್ಲಿ ಪ್ರಚಾರದಲ್ಲಿದ್ದದ್ದು ವೈಶಿಷ್ಟ್ಯಪೂರ್ಣ. ಲೀಳಾಚರಿತ್ರದಲ್ಲಿಯ ಈ ಸಂದರ್ಭ ನೋಡಬೇಕು. ಇದೊಂದು ಉಪಕಥೆ. ಧಾಂದುಲವೆಂಬ ರೈತನ ಹೊಲವನ್ನು ಹೊಕ್ಕು ಐರಾವತ ಮೆಯ್ದಿದೆ. ಆದರ ಬಾಲಹಿಡಿದು ಆವನ ತಮ್ಮ ಪದ್ಮನಾಭ ಇಂದ್ರಸಭೆಗೆ ಹೋಗಿ ವ್ಯಾಜ್ಯ ಮಾಡುತ್ತಾನೆ.

*ಹೇಜ್ ಮ್ಹಸರೂಜ್ ವಿಕಾ ನಾಕಾಜ್; ಚೋರಾಜ್ ಕಾ ದಿಯಾನಾ; ಮಾಝೀ*
*ಆವಘೇಜ್ ಸೇತ ಖಾವಲೇಜ್ ; ಆತಾಜ್ ಮೀಜ್ ಸೀ ದಾವೇಜ್*
*ಕಾಇಸೇನಿ ಫೇಡೀನ;*
*ತುಝಿಯಿ ಸೇತೀಜ್ ಕಾಇ ಹೋಇ;*
*ಬೋಟೇ ದೋನಿ ಹೋತಿ ತೇಣೇಜ್ ಸೀ ದಾವೋ ಫೇಡೀ.*
*ಸಾ ತುಝೇನಿ ನೇವವೇಲ ತೇತುಕೆ ಘೇ;*
*ಗೇಲಾ; ರಗಟೇಜ್ ಪಸರಿಲೇಜ್; ಆಸು ಭರಿಲಿಯಾ; ಘೇಉನಿ ಆಲಾ;*

ಈ ಎಮ್ಮೆಯನ್ನು ಮಾರಿರಿ; ಕಳ್ಳರಿಗಾದರೂ ಕೊಡಿರಿ; ನನ್ನ
ಇಡೀ ಹೊಲವನ್ನು ಮೆಯ್ದಿತು;
ನಾನು ಸಾಲವನ್ನು ಹೇಗೆ ಕಳೆಯಲಿ;
ನಿನ್ನ ಹೊಲದಲ್ಲಿ ಏನು ಆಗುತ್ತದೆ;
ಎರಡು ಮೊಟ್ಟೆ (ಹತ್ತಿ) ಆಗುತ್ತದೆ; ಅದರಿಂದ ಸಾಲ ಕಳೆಯುತ್ತೇನೆ;
ಅಲ್ಲವೇ; ನಿನ್ನಿಂದ ಒಯ್ಯಲಾದಷ್ಟು ತೆಗೆದುಕೋ;
ಹೋದ; ರಗಟೆ ಹರವಿದ; ವರಹಗಳನ್ನು ತುಂಬಿದ;
ತೆಗೆದುಕೊಂಡು ಬಂದ;

**ರಾಢ- ರೊಂಡೆ, ರಾಡಿ, ರೊಜ್ಜು**

ಕೆಸರು, ಆರಲು ಅರ್ಥದಲ್ಲಿ 'ರಾಡಿ' ಶಬ್ದ ರೂಢಿಯಲ್ಲಿದೆಯಷ್ಟೇ? ಕನ್ನಡದಲ್ಲಿ ಗ್ರಂಥಸ್ಥವಾದ ಹಳೆಯ ಪ್ರಯೋಗ ಬಸವ ಪುರಾಣದಲ್ಲಿ (೧೦.೮) 'ರೊಂಡೆ' ರೂಪದಲ್ಲಿ ಸಿಕ್ಕುತ್ತದೆ. ಆದರೆ 'ರಾಡಿ' ಶಬ್ದ ಅದಕ್ಕೂ ಮೊದಲು ಆಡುಮಾತಿನಲ್ಲಿ ಬಳಕೆಯಲ್ಲಿರಬಹುದಾಗಿದೆ. ಅದರ ಮರಾಠೀ ರೂಪ 'ರಾಢ' ಎಂದಾಗಿ ಲೀಳಾಚರಿತ್ರದಲ್ಲಿ ಬಂದಿದೆ.

ಅಪಪಾಠದಿಂದಾಗಿ ಅದು 'ರಾಂಡ' ಆಗಿ ವ್ಯಾಖ್ಯಾನಕಾರರ ಅಪಾರ್ಥಕ್ಕೆ ಸಾಕಷ್ಟು ಸಾಮಗ್ರಿ ಒದಗಿಸಿದೆ. ಇದು ಲೀಳೆ (ಪೂರ್ವಾರ್ಧ ೯೫)

*ಗೋಸಾವೀ ಪುಸಿಲೇಜ್; 'ಕೇಜ್ ಗೆಲೀ ಹೋತೇಜ್'; 'ಜೀ ಜೀ; ಕ್ಲೇಷ್ಟಾ ಝೂಡುಜ್ ಗೇಲಾಜ್ ಹೋತಾಜ್; ಸರ್ವಜ್ಞೇಜ್ ಮ್ಹಣತಲೀ 'ಜೇಜ್ ತುಮ್ಹಾಜ್ ಜಾಲೇಜ್ ಆಸೇಜ್; ತೇಣೇಜ್ ಸಿಜ್‌ವನೀಜ್ ರಾಂಡ ನಷ್ಟೇ; (ತಥಾ) ಮುಂಗೀಜ್ ; ಮಾ ಕ್ಲೇಷ್ಟಾ ಕಾಇ ಝುಡ್ಯೆಲ.*

ಅಪಾರ್ಥ ಸಾಧನ : 'ಸಿಜ್‌ವನೀಜ್' ಇದಕ್ಕೆ 'ಚಿಮಣೀ (ಗುಬ್ಬಿ)' ಎಂದಿದ್ದಾರೆ. ಇದು ವಸ್ತುತಃ ಜನಪದ ಕನ್ನಡದ 'ಸಿಂಬೆ' (ಮೂಗಿನ ಎಡಬಲ ಹೊರಳೆಗಳ ನಡುವಿನ ಮಾಂಸಲ ಭಾಗ. ಕನ್ನಡ ಕೋಶಕಾರರು ಇದನ್ನು ಕೊಡುವುದಿಲ್ಲ!) ಯಿಂದ ಮರಾಠಿಗೆ ಹೋಗಿರಬಹುದಾದ ಶಬ್ದ.ಈ 'ಸಿಂಬೆ'ಯಿಂದಲೇ ಕನ್ನಡದಲ್ಲಿ 'ಸಿಂಬಳ' ಮರಾಠಿಯಲ್ಲಿ 'ಸೇಂಬೂಡ' ಶಬ್ದಗಳು.

ಎರಡನೆಯದಾಗಿ 'ರಾಂಡ'. ಕನ್ನಡದ 'ರಂಡೆ' ಅರ್ಥ ಹೇಳಿದ್ದಾರೆ.

ಇದು ರಾಡ (ಕನ್ನಡದ 'ರಾಡಿ' ಅರ್ಥದಲ್ಲಿ) ಇರಬೇಕಾಗಿತ್ತು. ಮೂರನೆಯದಾಗಿ 'ಮುಂಗೀ'. ಇದಕ್ಕೆ 'ಇಱುವೆ' ಅರ್ಥ ಹಚ್ಚಿದ್ದಾರೆ. ಇದು ಕನ್ನಡದ 'ಮೂಗು' ಶಬ್ದವನ್ನು ಇದಕ್ಕಿದ್ದಂತೆ ಎತ್ತಿ ಮರಾಠೀ ತೃತೀಯಾ ವಿಭಕ್ತಿ ಪ್ರತ್ಯಯ ಹಚ್ಚಿದ ಶಬ್ದ. (ಉದಾಃ ಕನ್ನಡದ 'ಮೂಗಿಂ') 'ಮುಗಿಜ್' ಯನ್ನು ಅಪಪಾಠದಲ್ಲಿ 'ಮುಂಗೀಜ್' ಮಾಡಿದ್ದಾರೆ.

ಸಹಜವಾದ ಅರ್ಥ ಹೀಗೆ : ಚಕ್ರಧರರು ಕೇಳಿದರು. 'ಎಲ್ಲಿ ಹೋಗಿ ಇದ್ದೆ'; 'ಅಯ್ಯಾ, ಅಯ್ಯಾ. ಸಿಂಬಳ ಜಾಡಿಸಲು ಹೋಗಿ ಇದ್ದೆ.' ಚಕ್ರಧರರೆಂದರು : 'ಯಾವುದು ನಿಮಗೆ ಆಗಿದೆಯೋ ಅದರಿಂದ ಸಿಂಬೆ ರಾಡಿಯಾಗಿಲ್ಲ. ಮೂಗಿನಿಂದ, ಬಳಿಕ ಸಿಂಬಳವೇನು ಸಿಡಿದೀತು!

ತುಳಮುಳೆಯವರು ಹೇಳಿದ ಭಾವಾರ್ಥ ಇಂತು. (ಲೀಳಾ ಚರಿತ್ರ ಪೂರ್ವಾರ್ಧ ಪು. ೧೦೫)

ಭಟೋಬಾಸ, ಎಂದರೇನೇ ನಾಗದೇವ, ನೆಗಡಿಯಾಗಿದ್ದರಿಂದ ಮೂಗು ಸೀಂಕರಿಸಲು ಹೊರಗೆ ಹೋಗಿದ್ದರು. ಅವರು ದಾರಿಯಲ್ಲಿ ಭೆಟ್ಟಿಯಾದಾಗ ಚಕ್ರಧರರು ಅವರಿಗೆನ್ನುತ್ತಾರೆ. (ನೆಗಡಿ) ಇದು ಇಂತಹ ಸಾಮಾನ್ಯ ಸಂಗತಿ, ಅದರಿಂದ ಇಱುವೆಗೂ ಏನೂ ಆಗುವುದಿಲ್ಲ. ಆದ್ದರಿಂದ ಇಂತಹ ಕ್ಷುಲ್ಲಕ ಸಂಗತಿಗಳ ಬಡಿವಾರ ಮಾಡಬಾರದು. ಇದನ್ನು ಹೇಳುವಾಗ ಅವರೇ ಅರ್ಥ ಕೊಟ್ಟ 'ಸಿಜ್‌ವನೀಜ್' (ಚಿಮಣೀ=ಗುಬ್ಬಿ) ಹಾಗೂ 'ರಾಂಡ' (ರಂಡೆ=ಸೂಳೆ ಅಥವಾ ವಿಧವೆ) ಶಬ್ದಗಳನ್ನೇ ಕೈಬಿಟ್ಟದ್ದು ಲಕ್ಷಣೀಯ!

**ರಿತುಪೇಜ್ - ತುಪ್ಪಹೀರೆ, ತುಪ್ಪೀರೆ**

ಲೀಳಾ ಚರಿತ್ರದಲ್ಲಿಯ ಸಾರಂಗಪಂಡಿತ ಒಮ್ಮೆ ಚಕ್ರಧರರ ದರ್ಶನಕ್ಕೆ ಹೋಗುವಾಗ ಸೇವುಣರ ಭಂಡಾರಿ ಗದೋನಾಯಕ ಭೆಟ್ಟಿಯಾಗಿ ಎರಡು ಹಣ್ಣು ಕೊಡುತ್ತಾನೆ. 'ಗೋಸಾವಿ ಅವರಿಗೆ ಕೊಟ್ಟು ಹೆಸರು ಕೇಳಬೇಕು' ಎಂದೂ ಹೇಳುತ್ತಾನೆ. ಸಾರಂಗಪಂಡಿತ ಅವುಗಳನ್ನು ಸರ್ವಜ್ಞರಿಗೆ ಒಪ್ಪಿಸಿ ಹೆಸರು ಹೇಳಬೇಕೆಂದು ಬಿನ್ನವಿಸಿದಾಗ ನೆರೆದವರು ಏನೇನೋ ಹೇಳುತ್ತಾರೆ. ಆಗ ಚಕ್ರಧರರು ಹೇಳುವ ಮಾತು 'ಯೇಜ್ ರಿತುಪೇಜ್' (ಲೀಳಾ ಪೂ. ೭೬) ಮರಾಠೀ ವ್ಯಾಖ್ಯಾನಕಾರರು 'ಇವು ರಿತುಪೇಗಳು' (ಒಂದು ಜಾತಿಯ ಹಣ್ಣು) ಎಂದಷ್ಟೇ ಅರ್ಥ ಹೇಳುತ್ತಾರೆ. ವಸ್ತುತಃ ಅವು ತುಪ್ಪಹೀರೆ = ತುಪ್ಪೀರೆ (Luffa AegyptiacaMill) ಕಾಯಿಗಳು. ಕನ್ನಡದ ಶಬ್ದವನ್ನು ಚಕ್ರಧರರು ತಿರುವು ಮುರುವಾಗಿ ಹೇಳಿದ್ದಾರೆ!

**ಲೆಸಾ-ಲೇಸು, ಯೋಗ್ಯ, ಒಳ್ಳೆಯ**

ಸಕ್ಕದವೇನೋ ಕಾರಕವಿಭಕ್ತಿಯೊಳೊಂದೆ ಸಮಾಸಯುಕ್ತ ಲೇಸಕ್ಕುಂ

(ಕವಿರಾಜಮಾರ್ಗ ೧.೧೧೭) ಎನ್ನುವಲ್ಲಿ ಬರುವ ಹಳಗನ್ನಡ ಶಬ್ದ 'ಲೇಸು' ಅದೇ ಅರ್ಥದಲ್ಲಿ ಮರಾಠಿಗೆ ಹೋಗಿದೆ.

ವೇಗೇಜ್ ಆಣಿ ಲೇಸಾಜ್ ದೀಠಿ ಘಾಲುಊನಿ ಆವಿಜ್‌ಸಾ (೧೩.೨೪೭)
ವೇಗದಿಂದ ಹಾಗೂ ಲೇಸಾಗಿ ಆಮಿಷದ ಮೇಲೆ ದೃಷ್ಟಿ ಹಾಕಿ
ಮಗ ಪ್ರಮೇಯಾಂಚಿಯಾ ಗಾಜ್‌ವಾ ಲೇಸಾಜ್ ಜಾಇಜೋ (೭.೨೦೪)
ಬಳಿಕ ಸಿದ್ಧಾಂತಗಳ ಊರಿಗೆ ಲೇಸಾಗಿ ಹೋಗಬಹುದು.

**ಲಾಜ್‌ಚ, ಲಂಚ**

ಕೇಶಿರಾಜನು ಲಂಚಗುಳಿ ಹಾಗೂ ಲಂಚವಣಿಗಂ ಹೀಗೆ ಎರಡು ಶಬ್ದ ಸಿದ್ಧಿಗಳನ್ನು ಹೇಳುತ್ತಾನೆ. (ಸೂತ್ರ ೨೩೮ ಹಾಗೂ ೨೪೨) ಮಂಗರಸನ ನಿಘಂಟುವಿನಲ್ಲಿ 'ಲಂಚ' ಈ ಸಂಸ್ಕೃತ ಶಬ್ದ ಮೂಲವೆಂದು ಹೇಳಲಾಗಿದೆ. ಹಳಗನ್ನಡದಲ್ಲಿ 'ಲಂಚ' ಶಬ್ದದ ಬೇರೆ ಉಲ್ಲೇಖ ಬರುವುದಿಲ್ಲ. ನಡುಗನ್ನಡದಲ್ಲಿ ಒಲಿದರ ಒಳಲಂಚದಲಿ ಛಿದ್ರಿಸಿಕೊಲುವ ಎಂಬ ಪ್ರಯೋಗ ಕುಮಾರವ್ಯಾಸನ ಭಾರತದಲ್ಲಿ (ಉದ್ಯೋಗಪರ್ವ ೮.೩೫) ಬರುವುದೆಂದು ಜಿ. ವೆಂಕಟಸುಬ್ಬಯ್ಯನವರು ಹೇಳಿದ್ದಾರೆ. (ಪ್ರಜಾವಾಣಿ ೨೯-೩-೧೯೯೨) ಸೊಡರು ಲಂಚವ ಕೊಣ್ಬು ಕೊಡುವುದೊಚ್ಚತ ಬೆಳಗ ಎಂದು ಸರ್ವಜ್ಞ ಹೇಳಿದ್ದಾನೆ.

ಮರಾಠಿಯಲ್ಲಿ ಜ್ಞಾನೇಶ್ವರರ ಸಮಕಾಲೀನನಾದ ಭಾಸ್ಕರಭಟ್ಟನ ಶಿಶುಪಾಳವಧದಲ್ಲಿ 'ಲಾಜ್‌ಚ' ಶಬ್ದ ಬಳಕೆಯಾಗಿದೆ.ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗ ನೋಡಬೇಕು.

ಐಸಿಯಾ ಪ್ರಜಾ ಮಹೇಶಾ ಪಾಂಗುರಣೇಜ್ ದಾಹೀ ದಿಶಾ
ಲಾಜ್‌ಚಕರು ಮ್ಹಣೌನಿ ಕೋಳಿಸಾ ಕಾಮು ಕೇಲಾ (೧೩.೨೭)

ಇಂತಹ ಪ್ರತಿಜ್ಞೆಯಿಂದ ಶಂಕರನಿಗೆ ಹತ್ತೂ ದಿಕ್ಕುಗಳನ್ನು ಹೊದೆಯ-ಬೇಕಾಯಿತು. (ದಿಗಂಬರ) (ಅವನು) ಲಂಚವಣಿಗನೆಂದು ಮದನನನ್ನು (ಸುಟ್ಟು) ಇದ್ದಲು ಮಾಡಿದನು.

ತುಳಪುಳೆಯವರು 'ಲಾಜ್‌ಚ' ಶಬ್ದವನ್ನು[27] ಒಮ್ಮೆ 'ಲಾಞ್ಚ' ದಿಂದ ಇನ್ನೊಮ್ಮೆ 'ಲಂಚ' ಶಬ್ದದಿಂದ ಸಿದ್ಧಪಡಿಸಿದ್ದಾರೆ. ಆದರೆ 'ಲಾಞ್ಚ' ವಾಗಲೀ 'ಲಂಚ'ವಾಗಲೀ ಯಾವ ಭಾಷೆಯ ಶಬ್ದಗಳೆಂದು ಅವರು ಸ್ಪಷ್ಟವಾಗಿ ಹೇಳಿಲ್ಲ. ಎಷ್ಟೆಂದರೂ 'ಲಂಚ'ದ ವ್ಯವಹಾರವಲ್ಲವೇ?

**ಲಾಠು-ಲಟ್ಟ, ರಟ್ಟ, ರಾಷ್ಟ್ರಕೂಟ, ಪರಾಕ್ರಮ**

ರಾಷ್ಟ್ರಕೂಟರು 'ಗೋದಾವರಿವರೆಗಂ' ರಾಜ್ಯವಾಳಿದರಷ್ಟೇ? ಆಗಿನ ಅವರ ಕಾರ್ಯ ಪರಾಕ್ರಮಗಳಿಂದಾಗಿ, ಪರಾಕ್ರಮಕ್ಕೇ ಮರಾಠಿಯಲ್ಲಿ ಇನ್ನೊಂದು ಹೆಸರು

---

27. ಯಾದವಕಾಲೀನ ಮರಾಠೀ ಭಾಷಾ ಪು. ೧೪೫, ೧೬೧

ರಾಷ್ಟ್ರ>ರಟ್ಟ>ಲಟ್ಟ>ಲಾಠ ಎಂದಾಯಿತು.

'ಪರಾಕ್ರಮ' ಅರ್ಥದಲ್ಲಿಯ 'ಲಾಠು' ಶಬ್ದ ಲೀಳಾಚರಿತ್ರದಲ್ಲಿ ಹೀಗೆ ಪ್ರಯುಕ್ತವಾಗಿದೆ.

*ಮಗ ಧುರೇಚಾ ಲಾಠು ಬೋಲತಾಜ್ (ಪೂರ್ವಾರ್ಧ ೭೮)*
ಬಳಿಕ ಅಗ್ರಗಣ್ಯನಾದ ಶೂರನು ಹೇಳಿದನು.

ಜ್ಞಾನೇಶ್ವರೀಯಲ್ಲಿ

*ತೂಝೀಯಾ ಲಾಠೀಪಣಾಚಾ ಆಹೋ ತಿಹಿಜ್ ಲೋಕಿಜ್ (೨.೯)*
ಮೂರೂ ಲೋಕಗಳಲ್ಲಿ ನಿನ್ನ ಪರಾಕ್ರಮದ ಖ್ಯಾತಿಯು
*ಅವಿದ್ಯಾ ಜೇಣೇಜ್ ಲಾಠೀ (೧೩.೧೧೩)*
ಅವಿದ್ಯೆಯು ಯಾವುದರಿಂದ ಬಲಿಷ್ಠವಾಗಿದೆಯೋ-
*ಐಸಾ ಸ್ವಯಂಭೂ ಜೋ ಜೀವ ಲಾಟು (೧೮.೮೫೪)*
ಹೀಗೆ ಯಾವುದು ಸ್ವಭಾವತಃ ಸ್ವಯಂಭೂವಾದ ಶೌರ್ಯವು

ಶಿಶುಪಾಳವಧದಲ್ಲಿ:

*ಐಸೇಆ ಘರಲಾಠೇಆ ಬೋಲಾಜ್*
(ಶೈಲ್ಯನ) ಇಂತಹ ಮನೆ ಪರಾಕ್ರಮದ (ಬಾಯ್ ಹೆಗ್ಗಳಿಕೆಯ)
ಮಾತಿನಿಂದ-
*ಲಾಠೇಯಾಂಚೀಜ್ ಆಂಗೇ ಸ್ಫುರಿನಲೀಜ್*
ಪರಾಕ್ರಮಿಗಳ ಮೈ ಸ್ಫುರಣಗೊಂಡವು.

**ವಚಣೇಜ್ ಪೋ ಹೋಗು:**

**ಬೀಜೇಜ್ ಕರಣೇಜ್ ಬಜಯಂ ಗೆಯ್**

*ಆಯ್ದು ಕೊಟ್ಟು ತಣಿದಂ ಪೋ ಸಾಲ್ಗುಮೆಮ್ಮನ್ನಮ್ (ಪಂಪಭಾರತ ೨.೫೩)* ಇದು ಹಳಗನ್ನಡದಲ್ಲಿಯ ಒಂದು ಪ್ರಯೋಗ. 'ಪೋ' ದಿಂದ 'ಓ' ಆಗಿ 'ಓಯ್' ಎಂಬ ಧಾತು ಆಡುಮಾತಿನಲ್ಲಿ ಬಳಕೆಯಲ್ಲಿರಬಹುದೆಂದು ನನ್ನ ತರ್ಕವಾಗಿದೆ. ಈ 'ಓಯ್'ದಿಂದಲೇ ಮರಾಠಿಯಲ್ಲಾಗಲೀ ಕೊಂಕಣೀಯಲ್ಲಾಗಲೀ 'ಒಚ್' 'ವಚ್' ರೂಪಗಳು ಸಿದ್ಧವಾಗಿರಲು ಸಾಕು. ಅಂತರವಿಷ್ಟೇ. ಜ್ಞಾನೇಶ್ವರೀಯ ನಂತರದ ಕಾಲದಲ್ಲಿ ಮರಾಠಿಯಲ್ಲಿಯ 'ವಚ್' ಲುಪ್ತವಾಯಿತು. ಕೊಂಕಣಿಯಲ್ಲಿ ಮಾತ್ರ ಉಳಿಯಿತು. ಆಜ್ಞಾರ್ಥ ಮಧ್ಯಮ ಪುರುಷ (ಬಹುಶಃ ಎಲ್ಲ ಧಾತುಗಳ ಮೂಲ ರೂಪ)ದಲ್ಲಿ 'ವೊಚ್' ಎಂದು ರೂಪವಿದ್ದರೆ ವರ್ತಮಾನ, ಭೂತಕಾಲದ ರೂಪಗಳಲ್ಲಿ 'ವೊಯ್' ಎಂದು ಮಾರ್ಪಾಡು ಆಗುತ್ತದೆ.

'ಹಾಜ್‌ವ್ ವೊಯ್‌ತಾ' ನಾನು ಹೋಗುತ್ತೇನೆ. ಇದು ಹಳಗನ್ನಡದ ಪೋಯ್ತು ತಮಿಳಿನ ಪೋಯ್ವಿಟ್ಟು ರೂಪಗಳಿಗೆ ಅದೆಷ್ಟು ಸಮಿಪವಿದೆಯೆಂಬುದನ್ನು ನೋಡಬೇಕು.

*ಜಲನಿಧಿಯುಂ ಪಾಯ್ದೊರ್ವನೆ ನಿಲಿಕಿ (ಕವಿರಾಜಮಾರ್ಗ ೩.೧೯೦) ಪೊಳೆಪಿಂಬವೋಯ್ತು. ತಾರಗೆ ಬೆಳಗುಟಿವವು ಹಿಮಕರಂಗೆ ಪಾಪ್ತು ಚಕೋರಾವಳಿ ಬೆಜಿಗಾದುದು. ಕುಮುದಂಗಳ ನಗೆ ಬತ್ತಿದುವು ಪಾಪ್ತು ನೇಸಜನಾಗಳ್ (ಲೀಲಾವತಿ ಪ್ರಬಂಧ ೩.೫)*

ಮರಾಠಿ ಸಂಶೋಧಕರು 'ವಚ್' ಧಾತುವನ್ನು ಸಂಸ್ಕೃತ 'ವ್ರಜ' ದಿಂದ ಸಿದ್ಧಿಸಿದ್ದಾರೆ. ಇಷ್ಟೇ ಅಲ್ಲ, ಹಳಗನ್ನಡದಿಂದ ಮರಾಠಿಗೆ ಹೋದ 'ಬಿಜಯಂ ಗೈ' (*ಧೃತರಾಷ್ಟ್ರ ಗಾಂಧಾರಿಯರ ಚರಣಾರವಿಂದ ವಂದನಂಗೆಯ್ದು ದೇವರ ಮನಃ ಕ್ಷತಮನಾಪೆಸಲ್ವೇಱ್ಬುದು ಬೀಡಿಂಗೆ ಬಿಜಯಂ ಗೆಯ್ವುದೆನೆ - ರನ್ನನ ಗದಾಯುದ್ಧ*) ಕೂಡ ಮೂಲತಃ ಸಂಸ್ಕೃತದ ವ್ರಜನಮ್‌ದಿಂದ ಬಂದಿದೆಯೆಂದು ವಾದಿಸಿದ್ದಾರೆ (ಕನ್ನಡದ 'ಬಿಜಯಂ ಗೆಯ್' ಮರಾಠಿಯಲ್ಲಿ ಬೀಜೇಜ್ ಕೀಲೇಜ್ ಆಗಿದೆ) ತುಳಮಳಿಯವರ ಅಭಿಪ್ರಾಯ ಕುರಿತು ನನ್ನ ಆಕ್ಷೇಪಗಳು ಹೀಗೆ.

೧. ಸಂಸ್ಕೃತ 'ವ್ರಜ್' ಧಾತುವಿನ ಅರ್ಥ 'ಹೋಗು' ಎಂದು ಅಲ್ಲ. ಅಮರ ಸಿಂಹನು 'ವ್ರಜ್ಯಾಟಾಟ್ಯಾ ಪರ್ಯಟನಂ' ಎಂದು ಹೇಳುತ್ತಾನೆ. ವ್ರಜ್ ಧಾತುವನ್ನು ಆಧರಿಸಿ ಸಿದ್ಧವಾದ ಪರಿವ್ರಾಜಕ (ಭಿಕ್ಷುಃ ಪರಿವ್ರಾಟ್ ಕರ್ಮಂದೀ ಪಾರಾಶರ್ಯಪಿ ಮಸ್ಕರೀ–ಇತಿ ಅಮರಃ) ಶಬ್ದವು ಇದನ್ನು ಸ್ಪಷ್ಟಗೊಳಿಸುತ್ತದೆ.

೨. ವ್ರಜ್ ಧಾತುವಿನ ಪ್ರಾಕೃತ ರೂಪ ಯಾವುದು? ಉಳಿದ ಭಾರತೀಯ ಆರ್ಯ ಭಾಷೆಗಳಲ್ಲಿ ವಚಣೇಜ್ ಆದಾವ ರೂಪದಲ್ಲಿ ಹೋಗಿದೆಯೆಂಬುದನ್ನು ಸ್ಪಷ್ಟಪಡಿಸಿಲ್ಲ. (ಹಿಂದೀ ಗುಜರಾತಿಗಳಲ್ಲಂತೂ ಈ ರೂಪವಿಲ್ಲ!)

೩. ಮರಾಠಿ ಕೊಂಕಣಿಗಳಲ್ಲಿದ್ದ ಶಬ್ದ ಸಾಮ್ಯಗಳ ಪೈಕಿ ಇದೊಂದು ಎಂದು ಪ್ರಿಯೋಳಕರ-ತುಳಮಳಿ ಹೇಳುತ್ತಾರೆ. ಕೊಂಕಣಿ ವೊಚ್ ಧಾತು ರೂಪಭೇದಗಳಲ್ಲಿ ವೊಸ್ ಆಗುತ್ತದೆ. ವೊಯ್ ಆಗುತ್ತದೆ. ಮರಾಠಿಯಲ್ಲಿ ಮಾತ್ರ ವಚ ಒಂದೇ ರೂಪವಿದೆ. ಜ್ಞಾನೇಶ್ವರೀಯಲ್ಲಿಯ ಉದಾಹರಣೆಗಳಿವು.

*ಆಣಿ ಅವಯಶ ತೇಜ್ ನ ವಚ್ಚೆಲ ಕಲ್ಪಾಂತವೇಱೀಜ್ (೨.೨೦೧)*

ಹಾಗೂ ಕಲ್ಪಾಂತರದವರೆಗೆ ಆ ಅಪಯಶವು ಹೋಗಲಾರದು.

*ವತ್ಸಾವರೌನಿ ಧೇನುಚೇಜ್ ಸ್ನೇಹ ರಾನಾ ನ ವಚೇ (೧೩.೪೮೫)*

ಕರುವಿನ ಮೇಲಿನ ಆವಿನ ಸ್ನೇಹವು (ಅದು) ಅಡವಿಗೆ ಹೋದರೂ, ಹೋಗುವುದಿಲ್ಲ.

*ವೈರ ಜನ್ಮಾಂತರಿಚೇಜ್ ಸಾಪಾಮನೌನಿ ನ ವಚೇ (೧೩.೫೩೬)*

ಜನ್ಮಾಂತರದ ವೈರಭಾವನೆಯು ಹಾವಿನ ಮನಸ್ಸಿನಿಂದ ಹೋಗುವುದಿಲ್ಲ.

*ಝೂಪ್‌ಕಾಝೂಪ್‌ಕಿ ಕೀಜೆ ವಾತಿ ನ ವಚತಾಜ್ ಚಿ (೧೩.೫೮೦)*

ಬತ್ತಿ (ದೀಪ) ಹೋಗುವ ಮುನ್ನವೇ (ದ್ರವ್ಯದ) ಮಚ್ಚುಮರೆ

---

28. ಯಾದವಕಾಲೀನ ಮರಾಠೀ ಭಾಷಾ ತುಳಮುಳೆ ಪುಟ ೯೨

ಮಾಡಬೇಕು.

*ಸರಲೇಯಾಜ್ ಗೀತಾಚಾ ಸಮಾರಂಭು ನ ವಚೇ ರಾಹಲೇವಣಚಾ ಸೋಭು (೧೮.೪೨೧)*

ಸಂಗೀತದ ಕಾರ್ಯಕ್ರಮವು ಮುಗಿದರೂ ಅದು ನಡೆದಾಗ ಇದ್ದ
ಶೋಭೆಯು (ಕೆಲಕಾಲ ಮನಸ್ಸಿನಿಂದ) ಹೋಗದು.

೪. ಇವೆಲ್ಲ ಉದಾಹರಣೆಗಳಲ್ಲಿ ವಚ್ ಧಾತುವಿನ ರೂಪಗಳು ನಿಷೇಧಾತ್ಮಕ ನ ಪ್ರತ್ಯಯದೊಂದಿಗೇ ಬಂದಿವೆ. ವಚ್ ಧಾತುವಿನ ಬೇರಾವ ರೂಪಗಳೂ ಜ್ಞಾನೇಶ್ವರೀಯಲ್ಲಿ, ಸಮಕಾಲೀನ ಸಾಹಿತ್ಯದಲ್ಲಿ ಪ್ರಯುಕ್ತವಾಗಿಲ್ಲ.

೫. ತುಳಮುಳೆಯವರಿಗೆ ಅಭಿಪ್ರೇತವಿದ್ದಂತೆ ಸಂಸ್ಕೃತ ವ್ರಜ ಧಾತುವು ಮರಾಠಿಯ ವಚ್‌ಗೆ ಮೂಲ. ಹಾಗಿದ್ದರೆ ಅದು ಕೊಂಕಣಿಯಲ್ಲಿ ಇಂದಿನವರೆಗೆ ಉಳಿಯುವ, ಮರಾಠಿಯಲ್ಲಿ ಅಳಿಸಿಹೋಗುವ ಐತಿಹಾಸಿಕ ಕಾರಣಗಳು ಸ್ಪಷ್ಟವಾಗಿಲ್ಲ. ಮೊದಲೇ ಹೇಳಿದಂತೆ ಕೊಂಕಣಿಯ ರೂಪವು ಸರ್ವಗಾಮಿಯಾಗಿದ್ದರೆ ಮರಾಠಿಯಲ್ಲಿ ಅದು ನಿಷೇಧಾರ್ಥದಲ್ಲಿ ಮರ್ಯಾದಿತ ರೂಪವಾಗಿ ಮಾತ್ರ ಬಳಸಲಾಗಿದೆ.

ಇವೆಲ್ಲ ವಿಚಾರಗಳಿಂದಾಗಿ ವಚ್‌ದ ಪೂರ್ವರೂಪ ಕನ್ನಡದ ಪೋ, ಎಂದೂ ಇದು ಮರಾಠಿ ಕೊಂಕಣಿಗಳಿಗೆ ಕನ್ನಡದಿಂದಲೇ ಹೋಯಿತೆಂದೂ ತಿಳಿಯುವುದು ಸಯುಕ್ತಿಕವಾದೀತು.

ಇನ್ನು 'ಬಿಜಯಂ ಗೈ' ಬಗ್ಗೆ ಸಂಸ್ಕೃತ ಮೂಲವೆಂಬ ಕಿಟೆಲ್‌ರ ಅಭಿಪ್ರಾಯವನ್ನು ತಿದ್ದುವುದು ಅವಶ್ಯವೆನಿಸುತ್ತದೆ. ಈ ಪದಪ್ರಯೋಗ ರಾಜರು, ಮಹಾರಾಜರು, ಧರ್ಮಗುರು, ಮಹಾತ್ಮರ ಮಟ್ಟಿಗೆ ಮಾತ್ರ ಸೀಮಿತವಾಗಿತ್ತು. ಜ್ಞಾನೇಶ್ವರಕಾಲೀನ ಮರಾಠಿಯಲ್ಲೂ ಅಷ್ಟೆ. ಬಂದು, 'ಗೆದ್ದು', ತಮ್ಮವರನ್ನಾಗಿ ಮಾಡಿಕೊಂಡು ಹೋದರೆನ್ನುವ ಭಾವ ಈ ಪಡೆನುಡಿಯಲ್ಲಿದೆ. ಇದಕ್ಕೆ ಅನ್ಯಾಯ ಸಲ್ಲದು, ಎಂದು ವಿನಯದಿಂದ ಹೇಳಬೇಕಾಗಿದೆ.

**ವಳಘೇ ಒಳಗೆ ಒಳಗೊಳ್ಳು, ಒಳಗೆಯ್**

ಮರಾಠಿಯಲ್ಲಿ (ಹ್ರಸ್ವ) ಒ ಕಾರವಿರದ್ದರಿಂದ ಹಳಗನ್ನಡದಲ್ಲಿಯ 'ಒ'ದಿಂದ ಆರಂಭವಾಗುವ ಅನೇಕ ಶಬ್ದಗಳು ಜ್ಞಾನೇಶ್ವರೀ ಹಾಗೂ ಸಮಕಾಲೀನ ಗ್ರಂಥಗಳಲ್ಲಿ 'ವ'ಕಾರದೊಂದಿಗೆ ಬಳಸಲಾದುದನ್ನು ನೋಡುತ್ತೇವೆ. ಇಲ್ಲಿ ಒಳಗೆ ಶಬ್ದ ವಳಘೇ ಆಗಿ ಹೋಗಿದೆ.

*ಉತರಲೇ ಉದಕ ಪರ್ವತು ವಳಘೇ ತರಿ ಝಾಡ ಸೇಂಡಾಹೂನಿಮುಳಾಸಿ ಲಾಗೇ (೧೦.೬೮)*

(ಪರ್ವತದ ಮೇಲಿನಿಂದ ಹರಿದು ಹೋಗಬೇಕಾದ) ನೀರು
ಪರ್ವತದ ಒಳಗೆ ಇಳಿದರೂ, ಗಿಡ ತುದಿಯಿಂದ ಬೇರಕಡೆ
ಬೆಳೆದರೂ-

*ತೈಸೇಜ್ ಚ ಸತ್ವರಜ ಲೋಪುನಿ ತಮಾ ಭೋಜ ವಳಘೇ ತೈಜ್ ಸಹಜ*

*ಪ್ರಮಾದಿವಿ ಹೋಯೇ (೧೪.೧೯೯)*
ಅದರಂತೆ ಸತ್ವರಜಗಳು ಲೋಪಹೊಂದಿ ತಮೋಗುಣವು
ಬೆಳೆದರೆ (ಮನಸ್ಸು) ಸಹಜವಾಗಿ ಪ್ರಮಾದಕ್ಕೆ ಒಳಗಾಗುತ್ತದೆ.
*ಧರೂಜ್ ವೊಳಗೇ ಉಪಾಷಿ ತೂಯಿಘಾಜ್ ಚಿ ಆಂಗೀಜ್ (೧೭.೧೦)*
ಆನಂದವು ನಿನ್ನ ಮೈಯಲ್ಲೇ ಒಳಗೊಂಡಿದೆ.

ಈ ಕೊನೆಯ ಉದಾಹರಣೆಯಲ್ಲಿಯ ವೊಳಗೆ (ಒಳಗೊಳ್ಳು ಅರ್ಥದಲ್ಲಿ) ಇನ್ನೂ ಕೆಲವು ರೂಪ ಪಡೆದಿದೆ. ಕನ್ನಡದಲ್ಲಿ ಒಳಗೆ ಇದು ಅವ್ಯಯ, ಒಳಗೊಳ್ಳು ಇದು ಕ್ರಿಯಾಪದ (ಉದಾಹರಣೆ -ನಿನ್ನ ಯಶೋರಾಶಿಯ ನಿಸ್ತುಪ್ಯುತಿಯ ನಿಕಾಶಮನೊಳಕೊಳ್ಳುಮಳವಿಗಪಿದಿರ್ದುದುಮಂ ಕವಿರಾಜಮಾರ್ಗ ೩.೯೫) ಮರಾಠಿಯಲ್ಲಿ ಮಾತ್ರ ಒಳಗೆ = ವಳಘೇ, ಒಳ+ಕೊಳ್ಳು = ವಳ+ಘೇ (ಕೊಳ್ಳು) ಹೀಗೆ ಹೆಚ್ಚು ಕಡಿಮೆ ಒಂದೇ ರೂಪ ಪಡೆದಿದೆ. ಇನ್ನೂ ಕೆಲವು ಉದಾಹರಣೆಗಳಿವು.

*ಮಗ ವಾರೇಯಾ ವಳಘೇ ತೃಷ್ಣೇಚಿಯಾ (೧೪.೧೬೦)*
ಬಳಿಕ ತೃಷ್ಣೆಯೆಂಬ ಗಾಳಿಯನೊಳಗೊಳ್ಳುತ್ತದೆ.
*ಹ್ಮಣೇ ವಳಘೋಜ್ ಏಕಾದೇಯಾ ದಾರುಣಾ ಹೀಜ್ (೧೪.೧೬೩)*
(ಇದಕ್ಕಿಂತ) ಕಷ್ಟತರವಾದದ್ದು ಒಂದರ್ಧ ಇದ್ದರೂ (ಅದನ್ನು)
ಒಳಗೊಳ್ಳುತ್ತೇನೆ, ಎನ್ನುತ್ತಾನೆ.

ಹಿಂದಿನ ಉದಾಹರಣೆಯಲ್ಲಿಯ ವಳಘೋಜ್‌ಕ್ಕೆ ಒಳಗೊಳ್ಳುಗಿಂತ ಒಳಗೆಯ್ (ಒಳಗೆ ಹಾಕಿಕೊಳ್ಳು ಅರ್ಥದಲ್ಲಿ) ಎಂದು ಅನ್ವಯ ಹಚ್ಚುವುದು ಹೆಚ್ಚು ಪ್ರಶಸ್ತವೆನಿಸುತ್ತದೆ.

ನಲಿನ ನಾಲಮಂ ಬಳಸಿ ತಳ್ತ ಅಲಿಮಾಲೆಯ ಲೀಲೆಯನ್ ಒಳಕೆಯ್ದಿ ಎಂಬುದಾಗಿ ಬರುವ ರಾಜಶೇಖರ ವಿಳಾಸದಲ್ಲಿಯ (೧೩.೫೯ವ) ಈ ಅರ್ಥದಲ್ಲಿಯ ಪ್ರಯೋಗ ನೋಡಬಹುದು.

*ತರಿ ದೇಹ ಹೇಜ್ ಆತ್ಮಾ ಐಸೇಯಾ ಜೋ ಮನೋಧರ್ಮಾ*
*ವಳಘೌನಿಯಾಜ್ ಕರ್ಮಾರಂಭ ಕರೀ (೧೩.೭೧೨)*
ದೇಹವೇ ಆತ್ಮ ಹೀಗೆ ಮನೋಧರ್ಮ ಒಳಗೈದು (ಸ್ವೀಕರಿಸಿ)
ಕರ್ಮವನ್ನಾರಂಭಿಸಿದವನು-
*ಭವಸ್ವರ್ಗಾ ಉಬಗಲೀ ಮುಮುಕ್ಷು ಯೋಗಜ್ಞಾನ ವಳಘಲೀ (೧೫.೨೪೭)*
ಭವ ಹಾಗೂ ಸ್ವರ್ಗಗಳಿಗೆ ಬೇಸತ್ತ ಮುಮುಕ್ಷುಗಳು
ಯೋಗಜ್ಞಾನ ಒಳಗೆಯ್ದಂತೆ
*ವಾಜ್‌ಲಿವೇಚಿಯಾ ಮದಾ ವಳಘಲೀ ಜೇ (೧೧.೪೫೨)*
ಪರಾಕ್ರಮದ ಸೊಕ್ಕು ಹೊಂದಿದವರು-
*ಬುದ್ಧಿತೇಜ್ ಸಾಂಡೂನಿ ಜ್ಞಾನ ಭೇಣ ವಳಘಲೀಜ್ ರಾನ (೧೧.೬೫೪)*
ಬುದ್ಧಿಯನ್ನು ತ್ಯಜಿಸಿದ ಜ್ಞಾನವು ಭಯದಿಂದ ಅಡವಿಯನ್ನು
ಆಶ್ರಯಿಸಿತು.

*ಹರಿಷಾ ವಳಘೇ ತೈಸಾ ಸ್ತುತಿವೇಳೇ (೧೩.೭೭೪)*

(ತನ್ನ) ಸ್ತುತಿಯ ಸಮಯದಲ್ಲಿ ಹರ್ಷಕ್ಕೆ ಒಳಗಾಗುವಂತೆ-

*ತೈಸಾ ವಳಘೇ ಸಾಹಸಾ (೧೪.೧೯೧)*

ಹಾಗೆ ಸಾಹಸಕ್ಕೆ (ಕೈಹಾಕುತ್ತಾನೆ) ಒಳಗೆಯ್ಯುತ್ತಾನೆ.

*ಯೋಗಾಚೀಯಾ ಆಕಾಶಾ ವಳಘಿಜೇ (೧೩.೧೧೨೬)*

ಯೋಗರೂಪದ ಆಕಾಶವನ್ನು ಒಳಗೆಯ್ಯುವುದು-

**ವಳಸಾ- ಬಳಸು, ಸುತ್ತು**

*ಬಳಸು-ಭ್ರಮಣ ಕಂಚುಕಾಂಗಯೋಃ* ಎಂದು ಕೇಶಿರಾಜನು ಹೇಳುತ್ತಾನೆ. ಈ ಧಾತುವಿನಿಂದಾದ ಬಳಸು ನಾಮಪದ ಪಂಪಭಾರತ (೧೨. ೬೭) ದಲ್ಲಿ ಹೀಗೆ ಪ್ರಯುಕ್ತವಾಗಿದೆ.

*ಶ್ಯಾಮ ಜಳಧರ ವಿಮುಕ್ತ ಶರಾವಳಿಯ ಬಳಸಂ ಕಣ್ಣು*

'ಬಳಸು' 'ವಳಸಾ' ಆಗಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ.

*ಜೇಥ ದೇವಢೇ ಭ್ರಜ್‌ವತ ವಳಸೇ ಅಜ್ಞಾನಾಚೇ (೭.೭೫)*

ನಡುಗಡ್ಡೆಯ ಸುತ್ತ ಅಜ್ಞಾನದ ತಿರುಗಣಿ ಎಲ್ಲಿ ಸುತ್ತುವುದೋ-

('ನಡುಗಡ್ಡೆ' ಅರ್ಥದಲ್ಲಿಯ ತೆಮರ್=ತೆವರು ಪಳಗನ್ನಡ ಶಬ್ದ ದೇವಢಾ ಆಗಿ ಜ್ಞಾನೇಶ್ವರೀಗೆ ಹೋಗಿದೆ. ಇದು ಗೊತ್ತಾಗದೆ ದಾಂಡೇಕರರು ರಾಜವಾಡೇಯವರು ದೇವಢೇ=ವಕ್ರಗತಿಯಿಂದ ಎಂದು ಅರ್ಥೈಸಿದ್ದಾರೆ. ಸಂದರ್ಭದ ಮೇಲೆ 'ಅಂದಾಜು' ಮಾಡಿದ ಅರ್ಥ, ಅಷ್ಟೇ)

*ನ ಚುಕುತೀಚಿ ಪುನರಾವೃತ್ತಿಚೇ ವಳಸೇ (೮.೧೫೦)*

ಪುನರಾವೃತ್ತಿಯ ಸುತ್ತುಗಳು ತಪ್ಪಲಾರವು.

*ಕಾಜ್ ಬಾಹೀಜ್ ಉತರಲಾಜ್ ವಳಸಾಜ್ ದಾಟಲಾ ಜೇವಿ (೧೩.೧೮೬)*

ಪ್ರವಾಹದಲ್ಲಿ ಇಳಿದವನು ತಿರುಗಣೆಯಲ್ಲಿ ಸಿಕ್ಕಿಹಾಕಿಕೊಂಡಂತೆ.

**ವಾಜ್‌ಚೌನಿ-ಉಟಿದು, ವಿನಾ, ಬಿಟ್ಟರೆ**

ಪಳಗನ್ನಡದಲ್ಲಿ ಬಿಡು ತ್ಯಜಿಸು ಅರ್ಥದಲ್ಲಿ ಉಟಿ ಶಬ್ದ ಬಳಸಲಾಗಿದೆ. ಉದಾಃ *ಒನ್ದೆಡೆಯೊಳೊರ್ವಂ ಪಟಿಕೆಯ್ದು ನಲ್ಲಳನುಟಿಯಲಾರದೆ (ಪಂಪಭಾರತ ೪.೯೧ ವ)* ಉಟಿ ಧಾತುವಿನ ಕೃದಂತವಾದ ಉಟಿದು ಶಬ್ದ 'ವಿನಾ' 'ಬಿಟ್ಟರೆ' ಅರ್ಥದಲ್ಲಿ ಪ್ರಯುಕ್ತವಾಗಿದೆ. *ಜಾಕವ್ವೆಗುಟಿದ ಪೆಣ್ದಿರ್ ದೊರೆಯೇ (ಪಂಪಭಾರತ ೧.೪೦)* ಹೀಗೆ ಅದರ ಉದಾಹರಣೆಗಳೂ ದೊರೆಯುತ್ತವೆ. ಹೊಸಗನ್ನಡದಲ್ಲೂ ಇದರ ಪ್ರಯೋಗ ಕಂಡುಬರುತ್ತದೆ.

ಉಳಿ ಅರ್ಥದಲ್ಲಿ ಸಂಸ್ಕೃತ ವಂಚ್ ಧಾತುವಿನಿಂದ ಮರಾಠಿಯಲ್ಲಿ ವಾಜ್‌ಚ ಧಾತು ಬಂದಿದೆ. ಆದರೆ ವಿನಾ ಅರ್ಥದಲ್ಲಿ ಸಂಸ್ಕೃತದಲ್ಲಿಯಾಗಲೀ ಪ್ರಾಕೃತದಲ್ಲಿಯಾಗಲೀ ವಂಚ್ ಶಬ್ದದ ಭೂತಕಾಲವಾಚಕ ಕೃದಂತದ

ಪ್ರಯೋಗವಿಲ್ಲ. ಹಳಗನ್ನಡದಿಂದ ಸಮಾನಾರ್ಥದಲ್ಲಿ ಅನುವಾದಿತಗೊಂಡ ಈ ಅವ್ಯಯದ ಬಳಕೆಯನ್ನು ಜ್ಞಾನೇಶ್ವರೀಯಲ್ಲಿ ಹೀಗೆ ಕಾಣಬಹುದು.

*ಹೇಂ ವಾಚೂನಿ ಶೋಧಕ ಆನ ನಾಹಿಂ (೧೮.೧೩೭)*
ಇದನ್ನುಳಿದು ಶುದ್ಧಿಗಾಗಿ ಮತ್ತಾವುದಿಲ್ಲ.

*ವಾಚೂನಿ ಮುಖಾಲಾಗಿ ವಾಳಾವೀ ಗಾಯ ಚ ಸಲಗೀ (೧೮.೨೦೧)*
(ಹೊಲಸಾದ) ಬಾಯಿಯನ್ನು ಬಿಡಬಹುದೇ ವಿನಾ ಪೂರ್ತಿಯಾಗಿ ಆಕಳನ್ನು ತ್ಯಜಿಸಬಹುದೇ?

*ಪೃಥ್ವಿಯೇಚೇಂ ಆಧಾರು ವಾಚೂನಿ (೧೮.೩೦೯)*
ಮಣ್ಣಿನ ಆಸರೆಯನ್ನುಳಿದು-

*ದಂಡವತಾಚೇನಿ ಪ್ರಸಂಗೇ ಭುಇಂ ಹಾನ ಅಂಗ ಲಾಗೇ ವಾಚೂನಿ ಏರ ನೇಘೇ (೧೮.೧೦೨೨)*
ದಂಡವತ್ ನಮಿಸುವಾಗ ಮಾತ್ರ ನೆಲಕ್ಕೆ ಮೈ ಹತ್ತುವುದು. ಅದನ್ನು ಬಿಟ್ಟರೆ ಇತರ (ಅವಿಚಾರ, ಆಲಸ್ಯ)ವಿಲ್ಲ.

*ಮಿ ಏಕು ವಾಚೂನಿ (೧೮.೧೧೦೫)*
ನನ್ನೊಬ್ಬನನ್ನು ಬಿಟ್ಟರೆ

**ವಾಢಣೇಂ ಬಡ್ಡಿಸು, ಬಡಿಸು**

*ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾನಟ್ಟು ಬಡ್ಡಿಸು* ಎಂದು ಕವಿರಾಜಮಾರ್ಗದಲ್ಲಿ ಬರುವ ಬಡ್ಡಿಸು ಶಬ್ದಪ್ರಯೋಗವು (೨.೧೪೭) 'ವಾಢಣೇಂ'ಯಾಗಿ ಮರಾಠಿಯಲ್ಲಿ ಹೋಗಿದೆ. ಜ್ಞಾನೇಶ್ವರೀಯಲ್ಲಿ ಹೀಗೆ ಬಳಕೆ:

*ಆಗಾ ವಾಂತೀ ವಾಢಲೇಯಾ ನಾಜುಕಾಂ ಸಡಿಲೇಯಾಂ*
*ವಿವೇಕು ಕಾಉಳೇಯಾ ನಾಹಿಂ ಜೈಸಾ (೧೮.೫೫೩)*
ಕಕ್ಕಿದ್ದೇ ಅಥವಾ ಬಡಿಸಿದ್ದೇ ಚೆನ್ನಾದುದೇ ಅಥವಾ ಕೊಳೆತದ್ದೇ ಇದರ ವಿವೇಕವಿರದ ಕಾಗೆಯಂತೆ-

*ಸಭಾಗ್ಯ ಪಾಹುಣಾ ಯೇ ಸುಭಗಾಚೇ ವಾಢತೀ ಹೋಯೇ (೧೩.೬೪೨)*
ಭಾಗ್ಯಶಾಲಿಯಾದ ಅತಿಥಿ ಬಂದಾಗ ಸೌಭಾಗ್ಯ ಉಳ್ಳವಳು ಬಡಿಸುವುದಾದರೆ-

*ಮಾಂಸಾಚಿಯಾಂ ವಡವಾಳೀಂ ಆರೋಗುಂ ಲಾಗೇ (೬.೨೩೦)*
ಮಾಂಸದ ತುತ್ತುಗಳನ್ನು (ಬಡಿಸಿದವುಗಳನ್ನು) ಉಣ್ಣತೊಡಗುತ್ತದೆ.

**ವಾಣಸಿ ಬಾಣಸ, ಅಡುಗೆಯ ಜಾಗ,**

**ಉಭಲೇ ಉಬ್ಬಣ, ಬಾಗಿಲಿಗೆ ಬಳಸುವ ಅಗಳಿ**

*ಸತ್ರೀಂ ಅನ್ನ ಜಾಲೇಂ ಕಾ ಸಾಮಾನ್ಯಾ ಜೀಕ ಆಲೇಂ*

*ವಾಣಸಿಯೇ ಉಭಲೇಜ್ ಕೋಣ ನ ರಿಗೇ (೧೩.೭೯೯)*

ಛತ್ರದಲ್ಲಿ ಅನ್ನವಿದ್ದಾಗ ಸಾಮಾನ್ಯರಿಗೆ ಸೊಕ್ಕು ಬರುತ್ತದೆ.

ಹೀಗೆ ಮೊದಲಿನ ಸಾಲಿನ ಅರ್ಥ ಸರಿಯಾಗಿದೆ. ಎರಡನೆಯ ಸಾಲಿಗಾಗಿ ಮಾತ್ರ ಮರಾಠಿ ಪಂಡಿತರು ವಾಣಸಿ=ಪಣ್ಯಸ್ತ್ರೀ ಎಂದು ಅರ್ಥೈಸಿ ಸೂಳೆಯ ಹೊಸ್ತಿಲನ್ನು ಯಾರು ದಾಟುವುದಿಲ್ಲ ಎಂದು ಅನ್ವಯ ಹಚ್ಚಿದ್ದಾರೆ. ಇದು ಅನರ್ಥಕರವಷ್ಟೇ ಅಲ್ಲ, ದೃಷ್ಟಾಂತದ ಮೊದಲ ಭಾಗಕ್ಕೂ ಅನ್ಯಾಯವೆಸಗುತ್ತದೆ.

ಸಂಸ್ಕೃತ ಮಹಾನಸ>ವಾಳಸ>ಬಾಣಸ, ಅಡುಗೆಯ ಜಾಗವೆಂದು ಅರ್ಥ ತೆಗೆದುಕೊಂಡರೆ ಛತ್ರದಲ್ಲಿಯ ಅಡುಗೆಯ ಜಾಗಕ್ಕೆ ಯಾರೆಲ್ಲರೂ ಹೋಗಬಹುದಾಗಿದೆ. (ಅಡುಗೆಗೆ, ಬಡಿಸುವುದಕ್ಕೆ ಎಂದಾಗಿ) ಎಂದು ಅನ್ವಯ ಹಚ್ಚಬಹುದಾಗಿದೆ. ಇದು ಹೆಚ್ಚು ಸಮಂಜಸವಾದೀತು.

ಇಲ್ಲಿ ಉಭಲೇಜ್ ಶಬ್ದಕೂಡ ಹಳಗನ್ನಡದ್ದೆಂದು ಗುರುತಿಸಬಹುದಾಗಿದೆ.

**ವಾಣೇಜ್-ಓವು, ಸಂರಕ್ಷಿಸು**

'ಪಾಲನ' ಅರ್ಥದಲ್ಲಿಯ 'ಓವು' ಈ ಹಳಗನ್ನಡ ಧಾತು 'ವಾ' ಆಗಿ ಮರಾಠಿಗೆ ಹೋದುದನ್ನು ಜ್ಞಾನೇಶ್ವರೀಯಲ್ಲಿ ನೋಡಬಹುದು.

*ಯಾಲಾಗಿ ನುಭಗಿಜೇ ವಾಹೋ ಕರಿತಾಜ್ (೧೦.೫೪)*

(ಪ್ರತಿವರ್ಷ ಹೊಲದಲ್ಲಿ ಬಿತ್ತುವುದು, ಬಿತ್ತಿದ್ದು ಬೆಳೆದದ್ದನ್ನು ನೋಡುವುದು) ಅದನ್ನು ರಕ್ಷಿಸವುದರಲ್ಲಿ ಬೇಸರಿಸಲಾಗದು.

*ಹ್ಮಣೌನಿ ವನ್ಹಿ ಜ್ವಾಳ ದೋನ್ಹೀ ವನ್ಹೀಚ ಕೇವಳ*
*ತೇವಿ ಮಿಾಗಾ ಸಕಳ ಸಮಂಧು ವಾಓ (೧೪.೧೨೧)*

ಅಂತೆ ಬೆಂಕಿ ಮತ್ತು ಉರಿ ಇವೆರಡೂ ಬೆಂಕಿಯೇ. ಆ ರೀತಿಯಾಗಿ ನಾನು ಎಲ್ಲ ಸಂಬಂಧಗಳನ್ನು ರಕ್ಷಿಸುತ್ತೇನೆ. (ಮೊದಲಿನ ಓವಿಗಳಲ್ಲಿಯ ಕಲ್ಪನೆಯನ್ನು ಮುಂದುವರೆಸಿ ಮಣ್ಣು-ಮಡಿಕೆ, ಹತ್ತಿ-ಬಟ್ಟೆ, ತೆರೆ-ಸಮುದ್ರ ಬೆಂಕಿ-ಉರಿಗಳ ಸಂಬಂಧಗಳು ಭಗವಂತನ ರಕ್ಷಣೆಗೆ ಒಳಪಟ್ಟಿದೆಯೆಂದು ಭಾವಾರ್ಥ)

*ಆಣಿ ತಿಯೇತೇಜ್ ಚ ಆಘವಾ ಆಥಿ ಘರಮೇಳಾವಾ*
*ಹ್ಮಣೌನಿ ವಾಹಿವಾಜ್ ಘರೀಜ್ ವಾಹೇ (೧೩.೩೭)*

ಮತ್ತು ಆವಳಲ್ಲಿ (ಆ ಪ್ರಕೃತಿಯಲ್ಲಿ) ಎಲ್ಲ (ಕೃಷಿಯ) ಮೇಳವೂ ಮನೆಯದೇ ಇದೆ. ಅಂತೆ (ಅವಳು, ಕೃಷಿಯ) ಪಾಲನೆಯನ್ನು ಮನೆಯಿಂದಲೇ ಮಾಡುತ್ತಾಳೆ. (ಇನ್ನೊಬ್ಬರಿಗೆ ಒಪ್ಪಿಸುವುದಿಲ್ಲ, ಎಂದು ಭಾವಾರ್ಥ)

*ಐಸೇನಿ ಅಹಂಕೃತಿಭಾವೋ ಜೇಯಾಚಾಜ್ ಬೋಧಿಜ್ ಚಾಲಾ ವಾಓ*
*ತರ್ಹಿಜ್ ದೇಹಾ ಜಜ್‌ವ ನಿರ್ವಾಹೋ ತಜ್‌ವ ಆಥಿ ಕರ್ಮ (೧೮.೪೯೧)*

ಹೀಗೆ ನಾನು ಮತ್ತು ನನ್ನ ಕರ್ಮ (ಇದರ ಸಂಬಂಧದ) ಭಾವದ ತಿಳಿವಳಿಕೆಯು ಹಾಳಾಗಿ ಯಾವಾಗಿಂದಾಯಿತೋ ಅದಕ್ಕಿಗೆ ದೇಹನಿರ್ವಾಹಕ್ಕಾಗಿ (ಮಾತ್ರ) ಕರ್ಮ ಇರುವುದು.

**ವಾಯ-ವಾಯ, ವ್ಯರ್ಥ, ಮೋಸ**

*ಆಗಮ ಬಲ್ಲಿತ್ತೆಂಬನೇ? ವಾಯ ಹೋದಿತ್ತು (ಬಸವೇಶ್ವರ ವಚನಗಳು ೫೫೦)* ಎನ್ನುವಲ್ಲಿ ವಾಯ ಶಬ್ದಕ್ಕೆ ಮೋಸ ಎಂಬರ್ಥವಿದೆ. ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗಗಳನ್ನು ಪರಿಶೀಲಿಸಬೇಕು.

*ಆಣಿ ಹೇಂ ಚಿ ವಾಯಪ್ರಸಂಗೇಂ ಮರಣಾಚೇಂ ಜರಿ ಖಾಗೇಂ (೧೪.೨೫೩)*
*(ತಮೋ ಗುಣಗಳ) ಈ ಅನಿಷ್ಟ ಪ್ರಸಂಗಗಳಿಂದ ಮರಣವು ರಕ್ಷಣೆ ನೀಡಿದರೂ-*
(ತಮೋ ಗುಣಗಳಿಂದ ತುಂಬಿದ ಜೀವನಕ್ಕೆ ಮರಣವೊದಗಿದರೂ ಎಂದು ಭಾವಾರ್ಥ)

*ವಾಯಾಂ ಚಿ ಧಿಂವಸಾ ಉಪನಲಾ ಚಿತ್ತಾ (೧.೬೭)*
(ಗೀತಾಭಾಷ್ಯದ ಈ ಕೆಲಸವು ನೀಗಲಾರದ್ದೆಂದು ಯೋಚಿಸದೆ) ಹುಸಿಧೈರ್ಯದಿಂದ ಮನಸ್ಸು ಮಾಡಿದ್ದೇನೆ (ಶಬ್ದಶಃ ವ್ಯರ್ಥವಾಗಿ ಮನಸ್ಸಿನಲ್ಲಿ ಹುಟ್ಟಿಕೊಂಡಿದೆ)

*ತೈಸೀ ಹೇ ಮಾಯಾ ತೂಂ ಭ್ರಮತು ಆಹಾಸಿ ವಾಯಾಂ*
*ಶಸ್ತ್ರೇ ಹಾಣಿತಲೇಯಾಂ ಛಾಯಾ ಆಂಗೀಂ ನ ರುಪೇ (೨.೧೪೦)*
ಹಾಗೆ ಈ ಮಾಯೆಯು, ನೀನು ವ್ಯರ್ಥವಾಗಿ ಭ್ರಮೆಗೊಂಡಿರುವೆ.
ನೆರಳಿಗೆ ಶಸ್ತ್ರದಿಂದ ಹೊಡೆದರೆ (ಅದು) ಮೈಗೆ ಚುಚ್ಚುವುದಿಲ್ಲ.

*ಸಕಳ ಕರ್ಮಾಂ ಅಸಣೇಂ ತೇಂ ಘಡೇಂ ಮಾನೂನಿಯಾಂ ವಾಯಾಣೇಂ*
ಎಲ್ಲ ಕರ್ಮಗಳಲ್ಲಿ (ತೊಡಗಿ) ಇರುವುದು. ಬಳಿಕ ಅದು ಹುಸಿ, ವ್ಯರ್ಥವೆಂದೆಣಿಸುವದು (ಇದು ನೈಷ್ಕರ್ಮ್ಯವು)

*ಐಸಾಂ ವಿಕಲ್ಪಾಂಚೇಂ ವಾಯಾಣೇಂ ಕಾಂಟೇ ದೇಖೌನಿ ಸಣಾಣೇ*
*ಜೇ ಮತಿಭ್ರಮಾಚೇ ಪಾಸವಣೇ ಘೇಂತಿ ಚಿ ನಾ (೭.೧೬೭)*
ವಿಕಲ್ಪಗಳ ಇಂತಹ ವ್ಯರ್ಥ ಹಾಗೂ ಸಣ್ಣಸಣ್ಣ ಕಂಟಿಗಳನ್ನು ನೋಡಿ ಯಾರು ಮತಿಭ್ರಮಣೆಯ ಶರಣು ಪಡೆಯುವುದಿಲ್ಲವೋ-

ಮರಾಠೀ ವ್ಯಾಖ್ಯಾನಕಾರರು 'ಸಣಾಣೇ ಕಾಂಟೇ' ಗೆ ತೀಕ್ಷ್ಣ ಮುಳ್ಳು (ಕಂಟಕ) ಎಂದು ಅರ್ಥವಿಸಿದ್ದಾರೆ. ಆದರೆ ಇದು 'ವಾಯಾಣೇ'ಗೆ ಹೊಂದುವುದಿಲ್ಲ.

**ವಾರಣೇಜ್ - ಒರೆ ಹೇಳು**

*ಬೇಡಿಸುವಪ್ಪುಗಳ್ಗೊರೆವ ಲಲ್ಲೆಯ ಮೆಲ್ನುಡಿಗಳ್ಗೆ* (ಪಂಪಭಾರತ ೩.೮೩) ಹೀಗೆ ಹಳಗನ್ನಡದಲ್ಲಿ 'ಹೇಳು' ಅರ್ಥದಲ್ಲಿ ಬರುವ 'ಒರೆ' ಶಬ್ದ 'ವಾರೆ' ರೂಪದಲ್ಲಿ ಅದೇ ಅರ್ಥದಲ್ಲಿ ಮರಾಠಿಯಲ್ಲಿ ಉಪಯೋಗಿಸಿದ್ದನ್ನು ಕೆಳಗಿನ ಉದಾಹರಣೆಗಳಿಂದ ಕಾಣಬಹುದು.

*ವೈದ್ಯು ಪಥ್ಯ ವಾರುನಿ ಜಾಯೇ ಮಗ ವಿಷ ಆಪಣಚಿ ಸುಯೇ* (೩.೮)
ವೈದ್ಯನು ಪಥ್ಯ ಹೇಳಿ ಹೋಗುತ್ತಾನೆ. ಬಳಿಕ ತಾನೇ ವಿಷ ಕೊಡುತ್ತಾನೆ. (ಆಗ ರೋಗಿಯು ಬದುಕುವುದು ಹೇಗೆ?)

*ತಜ್‌ವ ನಕೋ ಹ್ಮಣೌನಿ ದೇವೇಜ್ ವಾರಿಲೇ ಮಾತೇಜ್* (೧೨.೨೨)
ಆಗ ಬೇಡವೆಂದು ಭಗವಂತನು ನನಗೆ ಹೇಳಿದನು.

**ವಾರೀ - ಒರೆ ಡೊಂಕು**

*ಮಡಂ ಕಡಿವೋಮದು, ಪಾಟಿ ರೂಪುಗೆಟ್ಟುದು, ಸೊಗಸೋರೆ ವೋಯ್ತು, ತುರಗಂ ಪಡಲಿಟ್ಟುವು* (ಪಂಪರಾಮಾಯಣ ೧೩.೬೯) ಹೀಗೆ 'ಡೊಂಕು', ಸೊಟ್ಟ' ಅರ್ಥದಲ್ಲಿ 'ಒರೆ' ಶಬ್ದದ ಬಳಕೆಯನ್ನು ನಾವು ಹಳಗನ್ನಡದಲ್ಲಿ ಕಾಣುತ್ತೇವೆ. ಈ ಶಬ್ದವು ಇದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲೂ ಪ್ರಯೋಗಿಸಲಾಗಿದೆ.

*ಐಸೇಜ್ ವೈರಾಗ್ಯ ಹೇಜ್ ಕರೀ ತರಿ ಸಂಕಲ್ಪಾಚಿ ಸರೇ ವಾರೀ* (೬.೩೭೬)
ಹೀಗೆ ವೈರಾಗ್ಯ ಮಾಡಿದರೆ ಸಂಕಲ್ಪದ (ಗಳ) ಕೊಂಕುತನವು ನಶಿಸುತ್ತದೆ.

*ದಾಢೀ ಸಾಉಳ ಧರೀ ಮಾನ ಹಾಲಉನಿ ವಾರೀ* (೧೩.೭೫೬)
ಗಡ್ಡ ಸವಳು ಹಿಡಿಯುತ್ತದೆ. (ಕುರೂಪ ಕಾಣುತ್ತದೆ) ಕುತ್ತಿಗೆ ಅಲಗುತ್ತ ಓರೆಯಾಗುತ್ತದೆ.

*ಯರ್ಥವಿಜ್ ದ್ವೈತಾಚೀ ವಾರಿ ಸಾರೂನಿ ಐಕ್ಯಾಚಾಜ್ ಪರಿವರೀಜ್* (೧೮.೧೩೩೬)
(ಉಳಿದವುಗಳಂತೆ) ದ್ವೈತದ ಒಮ್ಮಗ್ಗಲನ್ನು ತ್ಯಜಿಸಿ ಐಕ್ಯದ (ಅದ್ವೈತದ) ಸಾನ್ನಿಧ್ಯದಲ್ಲಿ

**ವಾಸ ಓಸು, ಕಡೆಗೆ, ದಿಕ್ಕಿನಲ್ಲಿ**

'ಓಸು' ಇದೊಂದು ದಂಗು ಬಡಿಸುವಂತಹ ಶಬ್ದ! ಹಳಗನ್ನಡದಿಂದ ಇಲ್ಲಿಯುವರೆಗೆ ಚತುರ್ಥೀ ಭಾವವನ್ನು ಸೂಚಿಸುವುದಕ್ಕಾಗಿ ಬಳಸಲಾಗುವ 'ಓಸುಗ', 'ಓಸ್ಕರ' ಅವ್ಯಯಗಳ ಬೀಜ ಇಲ್ಲಿ ದೊರೆಯುತ್ತದೆ. ಈ 'ಓಸು'ಗೆ ಚತುರ್ಥಿಯ 'ಗೆ' ಪ್ರತ್ಯಯ ಹತ್ತಿ 'ಓಸುಗೆ' ಓಸುಗವಾಯಿತು, ಮುಂದೆ 'ಇರೆ' ಪ್ರತ್ಯಯ ಹತ್ತಿ 'ಓಸುಗಿರೆ', 'ಓಸುಗದ', 'ಓಸ್ಕರ' ರೂಪಗಳಾದುವೆಂಬುದನ್ನು ಇದು ಬಿಡಿಸಿ ಹೇಳುತ್ತದೆ. ಹಾಗಾದರೆ 'ಓಸು' ಈ ಶಬ್ದದ ಅರ್ಥವೇನಿರಬಹುದು?

ಆಗಿನ ಆಡುಮಾತಿನಲ್ಲಿಯ ಈ ಹಳಗನ್ನಡ 'ಓಸು' ಶಬ್ದ ಮರಾಠಿಯಲ್ಲಿ 'ವಾಸ'ವಾಗಿ ಬಳಸಿದುದನ್ನು ಲೀಳಾಚರಿತ್ರದಲ್ಲಿ ಹೀಗೆ ಕಾಣುತ್ತೇವೆ.

*ತೀಯೇ ಪುಢೇಜ್ ಉಪಾಹಾನಹೌ ಘೇಉನಿ ಗಂಗಾ ಉತರಲೀ : ಉಪಾನಹೋ ಮೇಳವಾವೀಯಾ : ಮಾಗೀಲ ವಾಸ ಪಾಹೀಲೀ : ತೇ ಗೋಸಾವೀ ತೇಥಚಿ ಉಭೇ ಆಸತಿ: (ಪೂರ್ವಾರ್ಧ ೧)*

> ಅವಳು ಮುಂದೆ ಪಾದುಕೆಗಳನ್ನು ಕೊಂಡು ಗಂಗೆಯನ್ನು (ಇಂದಿಗೂ ಆ ಭಾಗದಲ್ಲಿ ಗೋದಾವರೀ ನದಿಗೆ 'ಗಂಗೆ' ಎನ್ನುತ್ತಾರೆ) ದಾಟಿದಳು; ಪಾದುಕೆಗಳನ್ನು ಹೊಂದಿಸಿದಳು: ಹಿಂದಿನ ಬದಿಗೆ (ಕಡೆಗೆ, ದಿಕ್ಕಿನಲ್ಲಿ) ನೋಡಿದ್ದಳು; ಆಗ ಚಕ್ರಧರರು ಅಲ್ಲೇ ನಿಂತಿದ್ದರು:

*ಗೋಸಾವೀ ತೀಎಚಾ ಶಬ್ದ ಆಇಕೌನಿ ಏರಿಚೀ ವಾಸ ಪಾಹಾತಿ (ಏಕಾಕ ೬೯)*

> ಚಕ್ರಧರರು ಅವಳ ಮಾತು ಕೇಳಿ ಬೇರೆ ದಿಕ್ಕಿನಲ್ಲಿ (ಕಡೆಗೆ) ನೋಡಿದರು:

*ಬಾಇಯಾ ಪುಢೇಜ್ ಚಾಲತೀ ಹೋತೀಯಾ: ತೇಹೀ ಮಾಗೀಲ ವಾಸ ಪಾಹೀಲೀ: (ಏಕಾಕ ೭೩)*

> ಸ್ತ್ರೀಯರು ಮುಂದೆ ನಡೆದಿದ್ದರು; ಅವರೂ ಹಿಂದಿನ ಬದಿಗೆ ನೋಡಿದರು:

ಹೀಗೆ ಕನ್ನಡದ 'ಓಸು' ಶಬ್ದವು 'ದಿಕ್ಕು' 'ಬದಿ' 'ಕಡೆ' ಅರ್ಥ ಸೂಚಿಸುವದೆಂದಾಯಿತು.

ಈ 'ಕಡೆಗೆ' ಅವ್ಯಯ ಉತ್ತರ ಕರ್ನಾಟಕದ ಜನಪದ ಭಾಷೆಯಲ್ಲಿ ಚತುರ್ಥಿ ಭಾವವನ್ನು ಸಾಧಿಸುತ್ತದೆ. ಉದಾಹರಣೆ:

*ನಿನ್ನೆ ಊರಕಡೆ ಹೋಗಿದ್ನಿ. ಎಲ್ಲಾರೂ ಕೂಡಿ ಅವನ ಕಡೆ ರೊಕ್ಕಾ ಕೊಟ್ಟಿದ್ದವು, ಮಂದಿಕಡೆ ಕೇಳಿ ಏನ ಉಪೇಗ?*

ವಿಜಾಪುರ ಕಲಬುರ್ಗಿ ಜಿಲ್ಲೆಗಳಲ್ಲಿ ವಿಶೇಷತಃ ಬ್ರಾಹ್ಮಣರಲ್ಲಿ - 'ಕಡೆಗೆ' ಬದಲಾಗಿ 'ಬದಿಯಲ್ಲಿ' (ಬದ್ಲೇ) ಶಬ್ದದ ಬಳಕೆ ಹೆಚ್ಚಾಗಿದೆ. 'ಕಡೆಗೆ'ಯಂತೆ ಅದು 'ಹತ್ತಿರ' ಅರ್ಥವನ್ನು ಸಾಧಿಸುತ್ತದೆ. 'ಕಡೆ' ಶಬ್ದ ಅದೇ ರೂಪದಲ್ಲಿ ಮರಾಠಿ ಆಡುಮಾತಿನಲ್ಲೂ ಗ್ರಾಂಥಿಕ ಭಾಷೆಯಲ್ಲೂ ಚತುರ್ಥಿ ಭಾವಕ್ಕಾಗಿಯೂ ಬಳಸಲಾಗುತ್ತದೆ.

*ನಾನು ಅವನಿಗೆ ಹಣ ಕೊಟ್ಟಿದ್ದೆ (ನಾ ಅವನ ಕಡೆ ರೊಕ್ಕಾ ಕೊಟ್ಟಿದ್ನಿ) ಮೀ ತ್ಯಾಚ್ಯಾಕಡೇ ಪೈಸೇ ದಿಲೇ ಹೋತೇ.*

ಇದೊಂದು ಉದಾಹರಣೆ.

**ವಾಳಣೇಜ್ ಒಣಗು**
**ವಾಳಿಲಾ ಒಣ**

ಶೋಷಣ ಅರ್ಥದಲ್ಲಿಯ 'ಒಣಗು' ಧಾತುವಿನ ಹಳಗನ್ನಡದಲ್ಲಿಯ ಬಳಕೆ ಹೀಗೆ:

*ಒಣಗಿದುದೊಂದು ಪೆರ್ಬಿದಿರ್ ಪೆರ್ವೋದಟಂ ಮೊರೆದುರ್ವುವಾರು ಶುಷ್ಕಣೆಯ ವೊಲ್ (ಪಂಪಭಾರತ ೧೧.೯೪)*

ಈ ಧಾತುವಿಗೆ ಮೂಲವಾದ ವಿಶೇಷಣ 'ಒಣ' ಇದು ಮರಾಠಿಯಲ್ಲಿ 'ವಾಳ' ಆಯಿತು. ಸಂಸ್ಕೃತದ 'ವಾನ' (=ಒಣಗಿದ ಕಾಯಿ) ಈ 'ವಾಳ'ಕ್ಕೆ ಹತ್ತಿರದ್ದೇನೋ ನಿಜ. ಆದರೆ ಶಬ್ದಗಳ ಅಂತರ್ಭಾಗದಲ್ಲಿಯ ಸಂಸ್ಕೃತ 'ನ' ಮರಾಠಿಯಲ್ಲಾಗಲೀ ಪ್ರಾಕೃತದಲ್ಲಾಗಲೀ 'ಳ' ಆಗುವುದಿಲ್ಲ. ಅಲ್ಲದೆ ಅರ್ಥದ ಮರ್ಯಾದೆಯನ್ನೂ ಗಮನಿಸುವುದು ಅಗತ್ಯವಾಗಿದೆ. ಕನ್ನಡದಲ್ಲಿ ಣ > ಳ ಆಗುವುದು ಸಾಮಾನ್ಯ, ಅಣೆ - ಅಳ, ಅಣಲೆ - ಅಳಲೆ, ಆಣ್ - ಆಳ್, ಆಣೆ - ಆಳಿ, ಅಣ್ಕೆ - ಅಳಿಕೆ, ಉಣೆ - ಉಳಿ, ಉಣ್ಬು - ಉಳ್ + ದು ಹೀಗೆ ನೂರಾರು ಉದಾಹರಣೆಗಳು. ಕನ್ನಡದ 'ಗಾಣ' ಮರಾಠಿಗೆ ಹೋಗುವಾಗ 'ಘಾಣಾ' ಆಗಿ ಕ್ರಿಯಾಪದದಲ್ಲಿ ಮಾತ್ರ 'ಗಾಳಣೇ' ಆಗಿದೆ. ಕನ್ನಡದ 'ಒಣ' ವಿಶೇಷಣಕ್ಕೆ ಆಡುಮಾತಿನಲ್ಲಿ 'ವ್ಯರ್ಥ' 'ನಿರುಪಯುಕ್ತ' ಎಂಬರ್ಥಗಳಿವೆ. ಜ್ಞಾನೇಶ್ವರೀಯಲ್ಲಿಯೂ 'ವಾಳಿಲಾ' (ಶಬ್ದಶಃ ಅರ್ಥ ಒಣಗಿದ) ಶಬ್ದಕ್ಕೆ ಈ ಆಲಂಕಾರಿಕ ಅರ್ಥ ಒದಗಿದೆ. ಉದಾಹರಣೆಗಳು:

*ಮಿಾ ಜಾಣೌನಿ ಜೇಣೇಜ್ ವಾಳಿಲಾ ಭೇದು (೧೫.೫೨೮)*

ನನ್ನನ್ನು ಅರಿತು ಅವನು ಭೇದ ವ್ಯರ್ಥ (ವೆಂಬುದನ್ನು ಮನಗಾಣುವನು)

*ಹೀಜ್‌ವರಾಂಚೀ ದಾಟ ಸಾಉಲೀ ಸಜ್ಜನೀಜ್ ಜೈಸೀ ವಾಳಿಲೀ (೯.೪೩೩)*

ಹೀನ ಮರಗಳ ದಟ್ಟ ನೆರಳು ಸಜ್ಜನರಿಗೆ ಹೇಗೆ ನಿರುಪಯುಕ್ತವೋ

*ಗಾವಾಜ್ ಪುಢೇ ವಾಳೇ ಮಾರ್ಗು ಜೈಸಾ (೧೮.೧೦೭೭)*

ಊರ ಮುಂದೆ (ಊರು ಮುಟ್ಟಿದ ಬಳಿಕ) ದಾರಿ ಹೇಗೆ ನಿರುಪಯುಕ್ತವೋ -

ನಿರುಪಯುಕ್ತವಾದದ್ದನ್ನು ತ್ಯಜಿಸಲೇ ಬೇಕಷ್ಟೇ? ಈ ಕೊನೆಯ ಉದಾಹರಣೆಯನ್ನು ಹೀಗೂ ಅರ್ಥವಿಸಬಹುದು

ಊರ ಮುಂದೆ (ಊರು ಮುಟ್ಟಿದ ಬಳಿಕ) ದಾರಿಯನ್ನು ತ್ಯಜಿಸುವಂತೆ

ಹೀಗೆ 'ವಾಳಣೇ' ಧಾತುವಿಗೆ 'ತ್ಯಜಿಸು ಎಂಬರ್ಥವೂ ಒದಗಿತು. ಉದಾಹರಣೆಗಳು

*ಮಗ ಇದಂತೇಸಿ ವಾಳಲೇಜ್ (೧೫.೨೪೨)*

ಬಳಿಕ 'ಇದು' ಎಂಬ ಭಾವನೆಯನ್ನು ತ್ಯಜಿಸಿ

*ಅಕೃತ್ಯತ್ವ ಕ್ರೇಜ್ ಕುಡೇಜ್ ಲೋಕೀಜ್ ವಾಳಾವೇಜ್ ಗಾ (೧೬.೪೬೩)*

ಈ ಜಗತ್ತಿನಲ್ಲಿ ಯಾವುದನ್ನು ಮಾಡಬಾರದೋ ಅದು
ಕೊಂಕು. ಅಯ್ಯಾ, (ಅದನ್ನು) ತ್ಯಜಿಸಬೇಕು.

*ವಾರುಕಾಜ್ ವಾರುಣು ವಾರಿಜೇ ಜೈಸೇ ರತ್ನಾಸಿ ದೂಷಣ ಠೇವಿಜೇ*
*ನಾ ತರಿ ಕನ್ಯಾ ಪಾಹುನು ಮ್ಹಣಿಜೇ ಮನಾ ನ್ಯೇಯೇ (೧೧.೬೩೨)*

ರತ್ನಕ್ಕೆ ದೋಷ ಕೊಡುವುದು. ಹಾಗೆ ಸವಾರಿ ಮಾಡಿ ನೋಡಿದ
ಬಳಿಕ ಕುದುರೆಯನ್ನು ತ್ಯಜಿಸುವುದು. ಇಲ್ಲವೆ ಕನ್ಯೆಯನ್ನು
ನೋಡಿ ಹೇಳುವುದು 'ಮನಸ್ಸಿಗೆ ಬಂದಿಲ್ಲ'

(ಕನ್ಯೆಯರನ್ನು ತೋರಿಸಿ ಮದುವೆ ಮಾಡುವ ರೂಢಿ ಆಗ ಇರಲಿಲ್ಲವೆಂದು ಕಾಣುತ್ತದೆ. ಇಷ್ಟಾಗಿ, ರೂಢಿಗೆ ವಿರುದ್ಧವಾಗಿ, ತೋರಿಸಿದ ಬಳಿಕವೂ 'ಇಲ್ಲ'ವೆಂದರೆ ಹೇಗೆ?)

ಪರಮಾತ್ಮನು ವಿಶ್ವರೂಪ ತೋರಿಸಿದ ಬಳಿಕ ಹೆದರಿದ ಅರ್ಜುನನಿಗೆ ತನ್ನ ಸೌಮ್ಯರೂಪವನ್ನು ತೋರಿಸಿದಾಗಿನ ದೃಷ್ಟಾಂತವಿದು!

ಮಹಾರಾಷ್ಟ್ರದ ಜನಪದ ಭಾಷೆಯಲ್ಲಿ ಇಂದಿಗೂ 'ವ್ಯರ್ಥ' ಅರ್ಥದಲ್ಲಿ 'ವಾಳಲಾ' ಶಬ್ದ ರೂಢಿಯಲ್ಲಿದೆ. 'ವಾಳೀಜ್‌ತ ಟಾಕಣೇಜ್' ಎನ್ನುವ ಪ್ರಯೋಗ ಸಾಮಾಜಿಕ ಬಹಿಷ್ಕಾರದ ಸಂದರ್ಭದಲ್ಲಿ ಬಳಸಲಾಗುತ್ತದೆ.

**ವಿದಳ ಬಿದಿರ**

ಮಿಕ್ಕ ಎಡೆಗಳಲ್ಲಿ ನಾನು ಹಳಗನ್ನಡ ಶಬ್ದವನ್ನು ಸೂಚಿಸಿ ಅದರ ಮರಾಠಿಯಲ್ಲಿಯ ಬಳಕೆಯನ್ನು ವಿವರಿಸಿದ್ದೇನೆ. ಆದರೆ ನಾನೀಗ ಕೊಡುತ್ತಿರುವುದು ಒಂದು ಕಬ್ಬಿಣದ ಕಡಲೆ. ಹೀಗಾಗಿ ಮೊದಲು ಮರಾಠೀ ಓವಿ ಕೊಟ್ಟು, ಅದರ ವ್ಯಾಖ್ಯಾನವನ್ನು ವಿವರಿಸಿ, ನನ್ನ ಸ್ಪಷ್ಟೀಕರಣ ಕೊಡುತ್ತಿದ್ದೇನೆ.

ಭಗವದ್ಗೀತೆಯ ೧೩ನೆಯ ಅಧ್ಯಾಯ ಪ್ರಕೃತಿ ಪುರುಷರ ಲೀಲೆಯ ವರ್ಣನೆಯ ಸಂದರ್ಭ. ಇಲ್ಲಿ ಪುರುಷ ಅಮಾವಾಸ್ಯೆಯ ಚಂದ್ರನಂತೆ, ಹಸುವಿನ ಹೊಟ್ಟೆಯಲ್ಲಿ ಹಾಲಿನಂತೆ, ಕಟ್ಟಿಗೆಯಲ್ಲಿ ಅಡಗಿದ ಬೆಂಕಿಯಂತೆ, ಬಟ್ಟೆಯಲ್ಲಿ ಮುಚ್ಚಿದ ರತ್ನದೀಪದಂತೆ, ಸೋತ ಅರಸನಂತೆ, ರೋಗಗ್ರಸ್ತ ಸಿಂಹದಂತೆ, ತನ್ನ ತೇಜಸ್ಸು ಕಳೆದು ಕೊಂಡಿದ್ದಾನೆ. ಆ ಮಾಲೋಪಮೆಯಲ್ಲಿಯ ಓವಿ ಇದು.

*ವಿದಳ ಬಹು ಚೋಖಾ ಮಾನಲೇಯಾಜ್ ವಾಲಾ ವಿಕಾ*
*ಕಸು ಹೋಯೇ ಪಾಜ್‌ಚಿಕಾ ಜಿಯಾಪರೀ (೧೩.೧೧೦೩)*

ಇಲ್ಲಿ ಮಹತ್ವದ ಶಬ್ದಗಳು ನಾಲ್ಕು. ವಿದಳ, ವಾಲ, ಕಸು ಮತ್ತು ಪಾಜ್‌ಚಿಕಾ. ಮರಾಠೀ ವ್ಯಾಖ್ಯಾನಕಾರರು ವಾಲಕ್ಕೆ (=ಅವರೆಕಾಳು) ವಾಲ ತೂಕದ ಬಂಗಾರ

ಎಂದರು. ವಿದಳಕ್ಕೆ ಹೀನ ಧಾತು, ಕಸು=ಒರೆ, ಪಾಜ್‌ಚಿಕಾ=ಹೀನ ಎಂದಾಗಿ ಕಲ್ಪಿಸಿ ವಿವರಣೆ ಕೊಟ್ಟದ್ದು ಹೀಗೆ (ದಾಂಡೇಕರ): ಅತಿಶಯ ಶುದ್ಧವಾದ 'ವಾಲ' ತೂಕದ ಬಂಗಾರದಲ್ಲಿ ಹೀನ ಧಾತು ಕೂಡಿಸಿದರೆ ಅದರ ಒರೆ ಐದಕ್ಕೆ ಬರುತ್ತದೆ.

ಆಕ್ಷೇಪಣೆಗಳು ಹೀಗೆ 'ವಾಲ' ಇದೊಂದು ಕೊಂಕಣ ಮುಂಬಯಿ, ಠಾಣೆ, ಪುಣೆ ಕ್ಷೇತ್ರಗಳಲ್ಲಿ ಮಾತ್ರ (ಗ್ರಾಮ್ ಬರುವ ಮೊದಲು) ಇದ್ದ ಬಂಗಾರದ ತೂಕ. (೧ ವಾಲ = ೨ ಗುಲಗಂಜಿ). ಮಿಕ್ಕೆಡೆಗಳಲ್ಲೆಲ್ಲ ಗುಲಗಂಜಿಯೇ ತೂಕದ ಆಧಾರವಾಗಿತ್ತು. ಅಮರ ಕೋಶದಲ್ಲೂ ಈ ಸಂದರ್ಭ ಬಂದಿದೆ. ಬಹುಶಃ ಪೇಶವೆಯವರೇ ಈ ವಾಲ ತೂಕವನ್ನು ಕೊಂಕಣದಿಂದ ದೇಶಕ್ಕೆ ತಂದಿರಬಹುದಾಗಿದೆ. ಪಾಜ್‌ಚಿಕಾ ಶಬ್ದದ ಸಂದರ್ಭ ೧೮ನೆಯ ಅಧ್ಯಾಯದಲ್ಲಿ ಇನ್ನೊಮ್ಮೆ ಬಂದಿದೆ. ಅಲ್ಲಿ ಹೀನ ಬಂಗಾರ ಎಂದು ಅರ್ಥೈಸಿದ್ದಾರೆ. ಅದನ್ನು ಪಂಚ ಲೋಹ (ಬಂಗಾರ, ಬೆಳ್ಳಿ, ತಾಮ್ರ, ಸೀಸ ಹಾಗೂ ಕಬ್ಬಿಣ) ಹೀಗೂ ಅರ್ಥೈಸಬಹುದಾಗಿದೆ. ಆಗ ಶುದ್ಧ ಬಂಗಾರದೊಡನೆಯ ವಿರೋಧಾಭಾಸವೂ ಚೆನ್ನಾಗಿ ಆಗುತ್ತದೆ. ವಿದಳಕ್ಕೆ ಹೀನ ಧಾತುವೆನ್ನುವ ಅರ್ಥ ಯಾವ ಭಾಷೆಯಲ್ಲೂ ಇಲ್ಲ.

ವಾಲ ಎಂಬುದು ಒಂದು ತೂಕ (ವಲ್ಲಃ ಎಂದು ಆಪಟೆಯವರೂ ತಮ್ಮ ಸಂಸ್ಕೃತ ಕೋಶದಲ್ಲಿ ಕೊಡುತ್ತಾರೆ. ಅವರೂ ಕೊಂಕಣದವರೇ ಅಲ್ಲವೇ?) ಅಷ್ಟು ಚೊಕ್ಕ ಬಂಗಾರ ತೆಗೆದುಕೊಂಡೆವೆಂದು ಕೊಳ್ಳೋಣ. ಅದರಲ್ಲಿ ಹೀನ ಧಾತು ಕೂಡಿಸಿದ ಪ್ರಮಾಣವೆಷ್ಟು? ಅಲ್ಲದೆ ಕಸವನ್ನು ಕೂಡಿಸುವುದೇ ಆದರೆ ಹೆಚ್ಚು ಬಂಗಾರದಲ್ಲಿ ಕೂಡಿಸಿದರೆ ಏನು ಅಭ್ಯಂತರ? ಅಂತೂ ವ್ಯಾಖ್ಯಾನಕಾರರು ಈ ಓವಿಯ ಅರ್ಥವನ್ನು ಎಳೆದಾಡಿ ಹಚ್ಚಿದ್ದಾರೆಂಬುದು ಸ್ಪಷ್ಟ.

ನಾನು ಹಚ್ಚುವ ಅರ್ಥ ಹೀಗೆ; ವಿದಳ=ಬಿದಿರು (ಹಳಗನ್ನಡದ ಬಿದಿರ್ ಸಂಸ್ಕೃತಕ್ಕೆ ವಿದುಲ ಆಗಿ ಹೋಗಿದೆ ಎಂದು ಕಿಟೆಲ್ ಭಾವಿಸುತ್ತಾರೆ) ವಾಲ (ವಲಯದಿಂದ) = ಬಳೆ, ಕಸು = ಶಕ್ತಿ, ಪಾಂಚಿಕಾ = ಹಗ್ಗ ಓವಿಯ ಅರ್ಥ ಹೀಗೆ ಬಹಳೇ ಚೊಕ್ಕದಾದ (ಗಟ್ಟಿ) ಬಿದಿರಿಗೆ ಬಳೆಯ ಸಂಸರ್ಗ ಬಂದರೆ ಅದರ ಶಕ್ತಿ ಹಗ್ಗದಂತಾಗುತ್ತದೆ.

ಹಳಗನ್ನಡದಲ್ಲಿ ಬಿದಿರ, ಬಿದಿರು ಇವೆರಡೂ ಭಿನ್ನ ಶಬ್ದಗಳು. ಮೊದಲನೆಯದು 'ವೇಣು' ಅರ್ಥದಲ್ಲಿಯದು. ಎರಡನೆಯದು ಬಿದಿರು = ಬಗ್ಗು, ವಿನೀತನಾಗು, ಲೋಕದೊಳು ಬಿದಱದವ ಕೆಟ್ಟ ಎಂದು ಸರ್ವಜ್ಞ ಹೇಳುತ್ತಾನೆ. *ಬಿದಿರವವರ ಮೆಚ್ಚ ನಮ್ಮ ಕೂಡಲ ಸಂಗಮದೇವ (೨೨೧)* ಎಂದು ಬಸವೇಶ್ವರರೂ ಹೇಳುತ್ತಾರೆ, 'ಬಿದಿರ', 'ಬಿದಿರು'ಗೆ ಒಂದು ಕೊಂಬಿನದಷ್ಟೇ (ಬಳೆ) ಅಂತರ. ಸೆಟೆದು ನಿಲ್ಲುವ, ಬಾಗದ ಗಂಡು 'ಬಿದಿರ' ಬಳೆ ಹತ್ತಿದೊಡನೆ ಬಾಗುತ್ತದೆ, ವಿನೀತವಾಗುತ್ತದೆ. ಅದರ ಕಸುವು ಹಗ್ಗದಂತಾಗುತ್ತದೆ.

ಅಕ್ಕನೀ ಕೇಳೇ - ಎಂದು ಸ್ವತಂತ್ರವಾಗಿ ಕನ್ನಡದಲ್ಲಿ ಅಭಂಗ ರಚಿಸಿದ

ಜ್ಞಾನೇಶ್ವರರ ಇದೊಂದು ಶಬ್ದ ಕ್ಲೀವವೆನ್ನಬೇಕು. ಅವರ ಅಭ್ಯಾಸವನ್ನು ಮೆಚ್ಚಬೇಕು.

**ವಿರಣೇಜ್ - ವೆರೆ, ಬೆರೆ**

'ಸಂಯುಗ' ಅರ್ಥದ ಬೆರೆ ಧಾತುವಿನ ಪ್ರಯೋಗಗಳು ಹಳಗನ್ನಡದಲ್ಲಿ ದೊರೆಯುತ್ತವೆ. *ಸಂಸ್ಕೃತಂ ಬೆರೆಯದ ಬಜೆಯು ಕನ್ನಡಂ* ಎಂದಾಗಿ ಕೇಶಿರಾಜನೇ ಉದಾಹರಣೆ ಕೊಡುತ್ತಾನೆ (ಶಬ್ದಮಣಿದರ್ಪಣ) ಆದರೆ ಬೆರೆಗೆ ಮೂಲವಾದ 'ವೆರೆ' ಧಾತುವಿನ ಬಳಕೆ ನಮಗೆ ಪ್ರತ್ಯೇಕವಾಗಿ ಗ್ರಂಥಗಳಲ್ಲಿ ದೊರೆಯುವುದಿಲ್ಲ. *ಕೊಳ್ಳಿದುಳ್ವೆರಸಿ ಮಸ್ತಕ ಪಿಂಡದ ಮೌಕ್ತಿಕೋತ್ಕರಂ (ಪಂಪ ರಾಮಾಯಣ ೧೩.೭೫) ಮನಃ ಪ್ರೀತಿವೆರಸಿ ತಿರ್ದುವುದು (ಶಬ್ದ ಮಣಿದರ್ಪಣ ಸೂತ್ರ ೪೩)* ಹೀಗೆ 'ಬೆರಸು' ಶಬ್ದ 'ವೆರಸು' ಆಗಿದೆ. ಆದರೆ ಜ್ಞಾನೇಶ್ವರಿಯಲ್ಲಿ ಮಾತ್ರ 'ವೆರೆ' ಶಬ್ದ 'ವೀರ' ಆಗಿ 'ಕರಗು' 'ಕರಗಿ' ಒಂದಾಗು ಅರ್ಥಗಳಲ್ಲಿ ಬಳಸಿದುದನ್ನು ನೋಡಬಹುದಾಗಿದೆ.

*ಜೈಸಾ ಸ್ಕೆಂಧವಾಚಾ ರವಾ ಸಿಂಧೂ ಮಾಝಿ ಪಾಂಡವಾ*
*ವಿರಾಲಿಯಾಜ್ ವಿರಾವಾ ಹೇಜ್ ಇಜ್ ಠಾಕೇ (೧೪.೩೯೦)*

ಉಪ್ಪಿನ ಹರಳು ಸಮುದ್ರದಲ್ಲಿ ಕರಗಿಸಿದಾಗ ಕರಗಬೇಕು (ಕರಗುವುದು). ಇದುವೆ ಪ್ರಾಪ್ತ (ಅಥವಾ ಕರಗಿದುದೇ ಉಳಿಯುವುದು, ಎಂದೂ ಹೇಳಬಹುದು)

*ತೈಸೇಜ್ ಸಧಿರ ವರಿ ವಿರಾಲೇಜ್ ಹೃದಯ ತೇಯಾಚೇಜ್ (೨.೩)*

ಆದರಂತೆ ಗಟ್ಟಿಯಾಗಿದ್ದರೂ (ಶ್ರೀಕೃಷ್ಣನ) ಅವನ ಹೃದಯ ಕರಗಿತು.

*ಜೈಸಾ ವಾರಾ ಠಾಜ್ ಗಗನೀಜ್ ವಿರೇ ಮಗ ವಾರೇಪಣ ವೇಗಳೇಜ್ ನುರೆ (೭.೧೧)*

ಗಾಳಿಯು ಆಕಾಶದಲ್ಲಿ ಕರಗಿದ ಬಳಿಕ ಗಾಳಿತನವು ಪ್ರತ್ಯೇಕವಾಗಿ ಉಳಿಯುವುದಿಲ್ಲ ಹಾಗೆ -

*ಜೋ ಅರ್ಜುನು ಕೃಷ್ಣಿಜ್ ವಿರತ ಹೋತಾ ತೋ ಪರತೌನಿಯಾ (೧೫.೪೨೭)*

ಯಾವ ಅರ್ಜುನನು ಕೃಷ್ಣನಲ್ಲಿ ಕರಗುತ್ತಿದ್ದನೋ (ಲೀನನಾಗುತ್ತಿದ್ದನೋ) ಅವನು ಮರಳಿ -

*ತೇಥ ಮನಾಚೇಜ್ ಮೇಘೌಡೇಜ್ ವಿರೇ (೬.೪೭೬)*
ಅಲ್ಲಿ ಮನಸ್ಸಿನ ಮೋಡಗಳು ಕರಗುತ್ತವೆ.
*ಪೃಥಿವೀ ವರ ವೀರೋ (೧೩.೯೯೪)*
ಮೇಲೆ (ಬಳಿಕ) ಪೃಥ್ವಿ(ಯೇ) ಕರಗಲಿ
*ವಿಶ್ರಾಂತಿಚಾ ವಿಶ್ರಮು ವಿರಾಲಾ ಜೇಥ (೧೫.೫೧೫)*

ವಿಶ್ರಾಂತಿಯಲ್ಲಿಯ ವಿರಾಮಭಾವವು ಎಲ್ಲಿ ಕರಗಿತೋ -

**ವಿಳೀ - ಇಟೆ ಇಳಿ ಹೊತ್ತು, ಸಂಜೆ**

'ನಿಮ್ನಾವತರಣ' ಅರ್ಥದಲ್ಲಿಯ ಪಳಗನ್ನಡದ 'ಇಟೆ' ಧಾತುವಿನಿಂದ ಸೂರ್ಯನು ಇಟೆಯುವ ಹೊತ್ತು ಅರ್ಥದಲ್ಲಿ 'ಇಟೆ ಹೊತ್ತು' ಶಬ್ದ ರೂಢಿಯಲ್ಲಿ ಬಂದಿದೆ. ಇದು ಮರಾಠಿಯಲ್ಲಿ 'ವಿಳೀ' ಆಗಿದೆ. ಲೀಳಾಚರಿತ್ರದಲ್ಲಿಯ ಪ್ರಯೋಗಗಳು.

*ವಿಳೀಜ್‌ಚಾ ಭಿಕ್ಷಾ ಮಾಗೌನಿ ಯೇಉನಿಃ ತೈಸೇಜ್ ಜೇವಾವೇಜ್; ಭೋಗ ನಾರಾಏಣೆಜ್ ನಿದ್ರಾ ಕರಾವೀ; (ಲೀಳಾ ಪೂರ್ವಾರ್ಧ ೧)*

ಇಳಿ ಹೊತ್ತಿನ ಬಿಕ್ಷೆ ಬೇಡಿ ಬಂದು : ಹಾಗೆಯೇ (ಅದನ್ನೇ)
ಉಣ್ಣಬೇಕು :
ಭೋಗ ನಾರಾಯಣನಲ್ಲಿ (ಗುಡಿಯಲ್ಲಿ) ಮಲಗಬೇಕು.

*ವಿಳೀಚಾಜ್ ಘಡಿಯಾಜ್ ಚೌ : ಆಪಣಚಿ ಬೋಲವಾವೇಯಾ ಆಲೇ;*

ಇಳಿ ಹೊತ್ತಿನಲ್ಲಿ ನಾಲ್ಕನೆಯ ಪ್ರಹರ; ತಾವೇ ಕರೆಯಲು
ಬಂದರು (ಪೂರ್ವಾರ್ಧ ೧೦)

*ವಿಳೀಚಾಜಿ ಪುಜಾವಸರೂ ಜಾಲಾ : ಮಗ ಉದಿಯಾಜ್‌ಚಿ ಮೇಘಂಕರಾ ಬೀಜೇ ಕೇಲೇಜ್ (ಪೂರ್ವಾರ್ಧ ೨೬)*

ಇಳಿ ಹೊತ್ತಿನ ಪೂಜೆಯ ಸಮಯವಾಯಿತು; ಬಳಿಕ ಬೆಳಗಾದ
ನಂತರ ಮೆಹಕರ (ಊರಿಗೆ) ಬಿಜಯಂ ಗೈಸಿದರು.

*ಪುಜೆ ಕೇಲೀಃ ಆರೋಗಣಾ ಜಾಲೀಃ ವಿಳೀಚಾಜ್ ವಸತಿ ಜಾಲೀಃ (ಪೂರ್ವಾರ್ಧ ೨೯)*

ಪೂಜೆ ಮಾಡಿದರುಃ ಆರೋಗಣೆಯಾಯಿತುಃ ಇಳಿಹೊತ್ತು ವಸತಿಯಾಯಿತು.
ಜ್ಞಾನೇಶ್ವರೀಯಲ್ಲಿ:

ಜೈ ಚೌಕಡಿಯಾ ಸಹಸ್ರು ಜಾಯೇ ತೈಜ್ ಠಾಯೇ ಠಾಓ ವೀಳು ಹೋಯೇ (೮.೧೫೪)

ನಾಲ್ಕು ಯುಗಗಳ ಸಹಸ್ರ ಆವರ್ತನೆಯಾದಾಗ ಆವನಲ್ಲಿ (ಬ್ರಹ್ಮನಲ್ಲಿ) ಇಳಿಹೊತ್ತು ಆಗುತ್ತದೆ. ಆವನ ಒಂದು ಹಗಲು ಮುಗಿಯುತ್ತದೆ ಎಂದು ಭಾವಾರ್ಥ. ಮರಾಠಿಯಲ್ಲಿ, ನಮ್ಮಲ್ಲಿಯಂತೆಯೇ, ಸೂರ್ಯೋದಯದಿಂದ ಮರು ಸೂರ್ಯೋದಯದವರೆಗೆ 'ದಿವಸ'. ಆದರೆ ಅಲ್ಲಿ 'ಹಗಲಿಗೂ' (ಸೂರ್ಯೋದಯದಿಂದ ಸೂರ್ಯಾಸ್ತದ ಕಾಲಕ್ಕೂ) ದಿವಸ ಎಂದೇ ಹೇಳುತ್ತಾರೆ. ಈ ಗೊಂದಲವಾಗಬಾರದೆಂದು ಜ್ಞಾನೇಶ್ವರರು 'ವೀಳು' ಶಬ್ದ ಬಳಸಿದ್ದಾರೆ. ಇಷ್ಟು ಕಾಲಾವಧಿಯ ನಂತರ ಬ್ರಹ್ಮನ ರಾತ್ರಿ ಎಂದೂ ಮುಂದೆ ಹೇಳುತ್ತಾರೆ.

*ಪೈಜ್ ಬ್ರಹ್ಮಾಪ್ರಾತಃಕಾಳು ವಿಷ್ಣುತೋ ಮಧ್ಯಾಹ್ನವೇಳು ಸದಾಶಿವ ಉವೀಳು ಬಾಳಕಾಯೇಯಾ (೧೪.೧೧೦)*

ಈ ಬಾಲಕನಿಗೆ ಬ್ರಹ್ಮನು ಪ್ರಾತಃಕಾಲ, ವಿಷ್ಣುವು ಮಧ್ಯಾಹ್ನ
ಹಾಗೂ ಸದಾಶಿವನು ಸಂಜೆ.

### ವೇಡ ಎಡ್ಡ, ಪೆಡ್ಡ

ಅಜ್ಞ, ಮೂಢ, ಯಥಾಜಾತ, ಮೂರ್ಖ ಎಂದೆಲ್ಲ ಅರ್ಥವುಳ್ಳ (ನಚಿರಾಚೀಯ) ಗಾವಿಲ, ಗಾಂಪ, ಎಗ್ಗ ಎಂದೂ ಪ್ರತಿಶಬ್ದಗಳನ್ನು ಹೊಂದಿರುವ (ಶಬ್ದಸಾರ) 'ಪೆಡ್ಡ' ಶಬ್ದವು 'ವೇಡ' ಆಗಿ ಮರಾಠಿಗೆ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳಲ್ಲಿ ಕೆಲವು ಇವು.

*ಬುದ್ಧಿ ಹೋಯೇ ವೇಡೀ (೧೩.೧೨೫)* ಬುದ್ಧಿಯು ಮೂಢವಾಗುವುದು
*ಮನ ಹೋಇಲ ವೇಡೇಜ್ (೧೩.೫೭೯)* ಮನಸ್ಸು ಹುಚ್ಚಾಗುವುದು
*ವೇಡಾ ಐಸಾ ಬ್ರಹ್ಮಾ ಏಕಲಾ ಹೋಜ್‌ತಾ (೧೭.೩೩೩)*
ಬ್ರಹ್ಮನೊಬ್ಬನು ಹುಚ್ಚನಂತಹನಿದ್ದನು.
*ಏಕು ಆಂಧಳಾ ವೇಡಾ ಪಂಗು ಏಕು ಸರ್ವಾಂಗಿ ಪುರತಾ ಚಾಂಗು (೧೫.೪೨)*
ಒಬ್ಬ ಕುರುಡ, ಹುಚ್ಚ, .ಹೆಳವ ಒಬ್ಬ ಸರ್ವಾಂಗಗಳಿಂದ ಪೂರ್ಣ ಒಳ್ಳೆಯವ

'ವೇಡ' ಶಬ್ದದಿಂದ 'ವೇಡಾವಣೇಜ್' ಧಾತು ಆದುದನ್ನು ಗಮನಿಸಬೇಕು.
*ಅನುಭವು ಹಿ ವೇಡಾವಲಾ ಅನುಭೂತಿ ಪಣೇಜ್ (೧೮.೧೨೧೧)*
ಅನುಭೂತಿಯಿಂದಾಗಿ ಅನುಭವವೇ ಮುಗ್ಧವಾಯಿತು.

### ವೋಇರಣೇಜ್ ಪೊಯ್ ಹೊಯ್ಯು

ಹೊಸಗನ್ನಡದಲ್ಲಿ, ಆಡುಮಾತಿನಲ್ಲಿ ಸಾಕಷ್ಟು ಬಳಕೆಯಲ್ಲಿರುವ 'ಹಾಕು' ಧಾತು ಹಳಗನ್ನಡದಲ್ಲಾಗಲೀ, ನಡುಗನ್ನಡದಲ್ಲಾಗಲೀ ಅಷ್ಟು ಪ್ರಚಾರದಲ್ಲಿರಲಿಲ್ಲ. 'ಬಡಿ' ಅರ್ಥದೊಡನೆ 'ಹಾಕು' 'ಸುರಿ' ಅರ್ಥಗಳಲ್ಲಿ 'ಪೊಯ್' ಧಾತು ಬಳಸಲಾಗುತ್ತಿತ್ತು. ಹಳಗನ್ನಡದಲ್ಲಿ 'ತಾಡನ' ಅರ್ಥದಲ್ಲಿ ಮಾತ್ರ ಇದರ ಬಳಕೆಯಿರಬೇಕು. *ಗದೆಯಿಂ ಪೊಯ್ದಂ, ಸಿಡಿಲ್ ಪೊಯ್ದುದೆನಿಸೆ ಭೂತಂ ಪೊಯ್ದುದು* ಹೀಗೆ ಪ್ರಯೋಗಗಳು ದೊರೆಯುತ್ತವೆ. *ಪಾಯಿಸಿ ಪೊಯ್ಯೆ ಘೋಳಯಿಲರ್ ಓರ್ವರಸೋರ್ವರ* ಎಂದೂ ಪಂಪರಾಮಾಯಣದಲ್ಲಿ (೧೩.೬೨) ಉಲ್ಲೇಖ ಬರುತ್ತದೆ. ಈ 'ಪೊಯ್' ಧಾತು 'ವೋಯಿರ' ಆಗಿ ಜ್ಞಾನೇಶ್ವರೀಯಲ್ಲಿ ಹೋಗಿದೆ.

*ಕಾಜ್ ತಾಂಥುವಾಚಾ ತಾಣಾ ತಾಂಥು ಘಾಲಿತಾಜ್ ವೋಜ್‌ಇರಣಾ ತಂತುಮಯ ಚ ವಿಚಕ್ಷಣಾ ಹೋಯೇ ಪಟು (೧೮.೩೫೮)*
ತಂತುಗಳ 'ಹಾಸಿ'ನಲ್ಲಿ ತಂತುಗಳನ್ನು ಹೊಯ್ದರೆ ('ಹೊಕ್ಕು' ಹಾಕಿದರೆ) ವಿಚಿತ್ರವಾದ ತಂತುಮಯ ಬಟ್ಟೆ ಸಿದ್ಧವಾಗುತ್ತದೆ.
*ಆಣಿ ಇಂದ್ರಿಯಾಂಚೇಜ್ ವೋಇರಿಲೇಜ್ ಚರೌನಿ ರಾಹೇ ಜೋ ಜಿಯಾಲೇಜ್ ಬೈಲಾತಳಿಜ್ ವತ್ತ್ರಲೇಜ್ ಪೋಸಣೇಜ್ ಜೈಸೇಜ್ (೧೮.೬೬೫)*
(ಪಂಚ) ಇಂದ್ರಿಯಗಳೆದುರು ಹೊಯ್ದದ್ದನ್ನು ಮೆಯ್ದು ಜೀವಿಸುವವನು, ಎತ್ತಿನ ಕೆಳಗಡೆಗೆ (ಹೊಟ್ಟೆ, ಗಂಗೆ ತೊಗಲುಗಳ ಮೇಲೆ) ಇರುವ 'ಉಣ್ಣೆ'ಯಂತೆ.

ಇಲ್ಲಿ ಒಂದು ಸ್ವಾರಸ್ಯಕರ ಮಾತು. ಕನ್ನಡದ ಉಣ್ ಧಾತುವಿನಿಂದ ಹುಟ್ಟಿದ

ಒಂದು ಹುಳದ ಹೆಸರು 'ಉಣ್ಣೆ'. ಆಕಳು ಎತ್ತುಗಳ ಮೈಮೇಲೆ ಬೆಳೆದುಕೊಂಡು ಮಷ್ಟವಾಗುವ ಈ ಹುಳದ ಹೆಸರನ್ನು ಮರಾಠಿಗೆ ರೂಪಾಂತರಿಸಿ ಜ್ಞಾನೇಶ್ವರರು 'ಪೋಸಣೇಜ್' ಎಂದಿದ್ದಾರೆ. ಏಕನಾಥರು ಜ್ಞಾನೇಶ್ವರೀಯನ್ನು ಸುಧಾರಿಸುವಾಗ (ಕ್ರಿ.ಶ. ೧೬೫೪) ಇದನ್ನು 'ಗೋಚಿಡ' ಎಂದು ತಿದ್ದಿದ್ದಾರೆ!

**ವೋಡಣೇಜ್, ಒಡ್ಡಣ, ಗುರಾಣಿ**

'ಪ್ರತಿಕಾರ' ಅರ್ಥದಲ್ಲಿಯ ಹಳಗನ್ನಡದ 'ಒಡ್ಡು' ಧಾತುವಿನ ಒಂದು ಪ್ರಯೋಗ ಇದು. ಅಂತು ನಿಜವಿಜಯ ಸೇನೆ ಸಂಗ್ರಾಮಭೂಮಿಯೊಳ್ ಒಡ್ಡಿ ನಿಲ್ವುದುಂ (ಪಂಪರಾಮಾಯಣ ೧೩.೧೭೮) ಈ ಧಾತುವಿನಿಂದ ಸಾಧಿಸಲಾದ 'ಗುರಾಣಿ' ಅರ್ಥದಲ್ಲಿಯ 'ಒಡ್ಡಣ' ಶಬ್ದದ ಪ್ರಯೋಗ ನಮಗೆ ಗ್ರಂಥಗಳಲ್ಲಿ ದೊರೆತಿಲ್ಲ. ಆದರೆ ಇದು 'ವೋಡಣೇಜ್' ಆಗಿ ಮರಾಠಿಯಲ್ಲಿ ಹೋದುದನ್ನು ಲೀಳಾಚರಿತ್ರದಲ್ಲಿಯ ಈ ಪ್ರಯೋಗಗಳಿಂದ ಗುರುತಿಸಬಹುದು.

*ಭಕ್ತಜನಾಂಚಿಯಾ ಕಾಠಿಯಾ: ಭಾಲೇ ಐಸೇ ದೀಸತಿ: ಪರಸನಾಯಕಾಚೀ ದೂಟಿ ಪ್ರಾವರ್ಣ ಕೇಲೀ ಹೋತೀ: ತೇ ಸೂರ್ಯಾಚಾ ರಶ್ಮಿಕರೂನಿ ಸೆಂದುರೀಜ್ ವೊಡಣೇಜ್ ಐಸೆ ದೀಸೋಜ್ ಲಾಗಲೀ (ಪೂರ್ವಾರ್ಧ ೧೫೧)*

> ಭಕ್ತಜನರ ಕೋಲುಗಳು : ಬರ್ಚಿಗಳಂತೆ ಕಂಡವು : ಪರಸನಾಯಕನ (ಅವನು ಕೊಟ್ಟ) ದುಪ್ಪಟಿಯನ್ನು (ಚಕ್ರಧರರು) ಹೊದ್ದುಕೊಂಡಿದ್ದರು: ಅದು ಸೂರ್ಯನ ಕಿರಣಗಳಿಂದಾಗಿ ಕುಂಕುಮ ಬಣ್ಣದ ಗುರಾಣಿಯಂತೆ ಕಾಣಹತ್ತಿತು:

*ಆಲೇ: ಪೂಢಾಜ್ ವೋಡೇಜ ಘಾಲುನಿ : ವರಿ ಹಾತಿಯೇರ ಠೇಉನಿ ಬೈಸಲೇ (ಪೂರ್ವಾರ್ಧ ೧೫೪)*

> ಬಂದರು: ಮುಂದೆ ಗುರಾಣಿ ಹಾಕಿಕೊಂಡು : ಮೇಲೆ ಕತ್ತಿ ಇಟ್ಟು ಕುಳಿತರು.

**ವೋಡೌ ಒಡಮೆ, ಆಲಂಕಾರ, ಆಭರಣ, ಒಡೆತನ**

ನೀಮಿಂತಳೆಯುತ್ತುಂ ಪೆಱರೊಡಮೆಯ ನುಚಿ (ಪಂಪಭಾರತ ೮.೧೮) ಇಲ್ಲಿ ಬರುವ 'ಒಡಮೆ' ಶಬ್ದ 'ವೋಡೌ' ಆಗಿ ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾಗಿದೆ. ಆ ಓವಿಗಳು ಹೀಗೆ.

*ರಾಜ್ಇಜ್ ಬೈಸತಿಯೇ ವೇಳೇ ಜೇ ರಸಸೋಇಯೇ ಘೇಉನಿ ಪಳೇ ತಿಯಾಚಾ ಯೇರು ವೋಡೌ ಮಿಳೇ ಕೋಣಾ ಅರ್ಥಾ (೧೩.೬೪೫)*

> (ಊಟಕ್ಕೆ) ಕೂಡ್ರುವ ಹೊತ್ತಿನಲ್ಲಿ, ಅಡುಗೆಯನ್ನು ತೆಗೆದುಕೊಂಡು ಓಡಿಹೋಗುವವಳ ಇತರ ಒಡವೆಗಳು ದೊರೆತರೆ, ಅದೇನು ಪ್ರಯೋಜನ?

*ಹೇಜ್ ಕಾಜ ಕಿರ ನಿರ್ವಾಣ ಪರಿ ಅಸಿಕ ಹೋ ಕಾಜ್ ಹೋಜ್ ಜೇ ಸಾಧಾರಣ ತೇಜ್ ಅಧಿಕಾರಾಚೇನಿ ವೋಡವೇವಿಣ ಕಾಯಿ ಸಿದ್ಧೀ ಜಾಯೇ (೬.೩೩೯ ಪಾಠಭೇದ)*

ಈ ಕಾರ್ಯವು ಒಂದಿಷ್ಟು ಹೆಚ್ಚಿನದಾಯಿತು. ಇನ್ನು ಕೆಲ
ಸಾಧಾರಣ (ಕಾರ್ಯಗಳು ಇವೆ). ಅವು ಅಧಿಕಾರದ
ಯೋಗ್ಯತೆಯಿಲ್ಲದ (ಅಲಂಕಾರ, ಒಡೆತನ) ಸಾಧಿಸಲಾಗುವವೇ?

ರಾಜವಾಡೇ ಅವರ ಪ್ರತಿಯಲ್ಲಿ 'ಒಡವಲೇನ ವಿಣ' ಎಂದು ಪಾಠಭೇಧವಿದೆ. ಇದೂ ಅಭ್ಯಸನೀಯ. 'ಒಡವೆ'ಯಿಂದ 'ಅಲಂಕಾರ ಧರಿಸು' ಅರ್ಥದಲ್ಲಿಯ 'ಒಡವಣೇಜ್' ಎಂದು ಧಾತುವನ್ನಾಗಿ ಮಾಡಿಕೊಂಡು, 'ಅಧಿಕಾರದ ಅಲಂಕಾರವನ್ನು ಧರಿಸದೆಯೆ' ಎಂದು ಅನ್ವಯವಾಯಿತು. 'ಒಡವಲೇನವಿಣ'ಕ್ಕೆ 'ಪ್ರಾಪ್ತವಾಗದೆಯೆ' ಎಂದರ್ಥ ಹಚ್ಚಿದರೂ ಆಗಬಹುದಲ್ಲವೇ? ಮುಂದೆ ಅದೇ ಅರ್ಥ ಒದಗಿದಂತಿದೆ. ಈ ಉದಾಹರಣೆಗಳನ್ನು ನೋಡಬೇಕು.

*ದೇವ ಹ್ಮಣತಿ ಪ್ರಳಯಕಾಳು ಓಢವಲಾ ಆಜಿ (೧.೧೩೬ ಪಾಠಭೇದ)*
ದೇವರೆಂದರು, ಇಂದು ಪ್ರಳಯಕಾಲ ಒದಗಿತು!
*ಆಣಿ ಸಾಮಾಸ ತೇ ಹೀ ವೋಢವತಿ ದಕ್ಷಿಣಾಯನ (೮.೨೩೧)*
ಮತ್ತು ಆರುತಿಂಗಳುಗಳ ದಕ್ಷಿಣಾಯನವು ಒದಗುತ್ತದೆ.

**ವೊರಕಳು ಒರೆಗಲ್ಲು**

ಬಂಗಾರದ ಶುದ್ಧತೆಯನ್ನು ಪರೀಕ್ಷಿಸುವ ಕಲ್ಲು ಎಂಬರ್ಥದಲ್ಲಿ 'ಒರೆಗಲ್ಲು' ಶಬ್ದವನ್ನು ಕನ್ನಡದಲ್ಲಿ ಬಳಸುತ್ತೇವಷ್ಟೇ? ಕಲ್ಲೇನೋ ಸರಿ. 'ಒರೆ' ಶಬ್ದದ ಅರ್ಥವೇನು? ಹಳಗನ್ನಡದಲ್ಲಿ ಒರೆ ಶಬ್ದ 'ಸರಿ' 'ಸಾಮ್ಯ' ಅರ್ಥದಲ್ಲಿ ಬಳಸಲಾಗಿದೆ.

*ಶಿಖಣ್ಡಿಯ ನಿಸ್ಸೊರೆಗುಣ್ಡೆ ಗಣ್ಡರಾರ್ (ಪಂಪಭಾರತ ೮.೯೭)*
*ಒರೆಗಂ ದೊರೆಗಂ (ಅದೇ ೨.೨೬ ವ)*

ಒರೆ ಕರ್ಷಣೇ (= ಹಿರಿ)[29] ಎಂಬ ಒಂದೇ ಅರ್ಥವನ್ನು ಕೇಶಿರಾಜ ಕೊಡುತ್ತಾನೆ. ಅದು ಇಲ್ಲಿ ಅಪ್ರಸ್ತುತ.

'ಒರೆ'ಗೆ ತಿಕ್ಕು ಎಂದೂ ಅರ್ಥವಿದೆ. ಕಿಟೆಲ್‌ರು ಒರೆಗಲ್ಲು ಶಬ್ದ ಈ ತಿಕ್ಕುವ ಕ್ರಿಯೆಯೊಡನೆ ಸಂಬದ್ಧವಾಗಿದೆ ಎಂದೂ ಭಾವಿಸಿದ್ದಾರೆ.

ಹಳಗನ್ನಡದಲ್ಲಿ 'ಪೊನ್ನೊರೆ' ಶಬ್ದ 'ಶುದ್ಧ ಬಂಗಾರಕ್ಕೆ ಸಮನಾದ' ಎಂಬರ್ಥದಲ್ಲಿ ಪ್ರಯುಕ್ತವಾದುದನ್ನು ನೋಡಬೇಕು.

---

29. ಬಹುಶಃ ಇದನ್ನೇ ಎತ್ತಿಕೊಂಡು ತುಳಪುಳೆಯವರು ಮರಾಠಿಯಲ್ಲಿಯ ಕಸವಟೀ (=ಒರೆಗಲ್ಲು) ಶಬ್ದದ ವ್ಯುತ್ಪತ್ತಿಯನ್ನು ಕಷಪಟ್ಟಿಕಾದಿಂದ ಸಾಧಿಸಿದ್ದಾರೆ. (ಯಾದವ ಕಾಲೀನ ಮರಾಠೀ ಭಾ. ೧೬೮) ಶಾಣಸ್ತು ನಿಕಷಃ ಕಷಃ ಎಂದು ಅಮರಸಿಂಹನು ಹೇಳಿದ್ದನ್ನೂ ಅವರು ಗಮನಿಸಿಲ್ಲ.

ಅಲ್ಲದೆ ಜ್ಞಾನೇಶ್ವರೀಯಲ್ಲಿ 'ಪಂಧರೇ' ಶಬ್ದದ ವಿವೇಚನೆಯನ್ನು ಪರಿಶಿಲೀಸಬೇಕು. ಹಾಗಿದ್ದಲ್ಲಿ ಒರೆಗಲ್ಲಿನ ಪ್ರಯೋಜನವೇನು? ಬಂಗಾರವೆಂದು ಬಂದದ್ದನ್ನು ಬರಿ ತಿಕ್ಕಿ ನೋಡುವುದೇ ಅಥವಾ 'ಪ್ರಮಾಣಿತ' ಬಂಗಾರದ ಶುದ್ಧತೆಯೊಡನೆ ಪೋಲಿಸಿ ನೋಡುವುದೇ? ಇಂದಿಗೂ ನಾವು ಜನಪದ ಭಾಷೆಯಲ್ಲಿ 'ಒರೆಗೆ ಹಚ್ಚು' ಎಂದು ಶಬ್ದ ಪ್ರಯೋಗ ಮಾಡುತ್ತೇವೆ. ಮರಾಠಿಯಲ್ಲೂ 'ಕಸ ಲಾವಣೇಜ್' ಎಂದೂ ಹೇಳುತ್ತಾರೆ. ಹೀಗೆ ನನಗನಿಸುವ ಮಟ್ಟಿಗೆ 'ಸಾಮ್ಯ' ಸರಿ ಅರ್ಥದಲ್ಲಿಯ ಒರೆಯನ್ನು ಆಧರಿಸಿಯೇ ಒರೆಗಲ್ಲು ಶಬ್ದ ಹುಟ್ಟಿಕೊಂಡಿದೆ. ಇದು 'ವೋರಕಳು' ಆಗಿ ಜ್ಞಾನೇಶ್ವರೀಯಲ್ಲಿ ಆದೇ ಅರ್ಥದಲ್ಲಿ ಯೋಜಿಸಲಾಗಿದೆ.

*ಪರಿಸಾಚಾಜ್ ವೋರಕಳೀಜ್ ನಾಹಿಜ್ ಚೋಖಾ ಕೇಡಾಚೀ ಬೋಲೀ (೧೭.೪೦೪)*

> (ಪರುಷಕ್ಕೆ ಯಾವ ಕೀಳ ಧಾತು ಸ್ಪರ್ಶಮಾಡಿದರೂ ಆದು
> ಶುದ್ಧ ಬಂಗಾರವಾಗುವುದು ಎಂಬ ಕವಿಕಲ್ಪನೆ ಇಲ್ಲಿದೆ)
> ಪರುಷವೇ ಒರೆಗಲ್ಲಾದರೆ ಚೊಕ್ಕ-ಕೀಳು ಎಂಬ ಮಾತೇ ಇಲ್ಲ.
> (ಎಲ್ಲವು ಚೊಕ್ಕವೇ ಎಂಬ ಭಾವನೆ ಇಲ್ಲಿದೆ)

*ಭವರೇಜ್ ಚಿ ಕೇಲಾಮಳಾ ವೋರಕಳು ಚಿ ಜಾಲಾ ಆಂಕಸಾಳಾ (೧೮.೪೮೯)*

> ದುಂಬಿಯೇ (ಹೂ) ದೋಟವನ್ನು ಮಾಡಿದಂತೆ, ಒರೆಗಲ್ಲೇ
> ಆಂಕಸಾಲೆ ಆದಂತೆ.

**ವೋಲ - ಒಲಿ, ಆಂದೋಳಿಸು**

**ವೋಲಾ - ಪೊಲ್, ಹೋಲುವ, ಅಂತಹ**

*ಮರಿದುಮ್ಬಿಗಳ ಗಾನಕ್ಕೆ ಕೊರಲಸೊಲೆದಾಡುವನ್ತೆ (ಜೈಮಿನಿ ಭಾರತ ೩.೭)*
*ನಗದ ಗುಹಾಧ್ವನಿಯ ಪೊಲ್ (ಕವಿರಾಜ ಮಾರ್ಗ ೧.೧೪)*

ಇವೆರಡೂ ಶಬ್ದಗಳನ್ನು ಒಂದೇ ವಾಕ್ಯದಲ್ಲಿ ಬಳಿಸಿ ಸಾಧಿಸಿದ ಶ್ಲೇಷೆಯನ್ನು ಮೆಚ್ಚಬೇಕು!

*ಜಾಹೋಜ್ ಜಗೀಜ್ ಆಪ ವೋಲೇಜ್ ತೇಜ್ ತುಝಿಯಾ ವೋಲಾ ಸುರಸ ಜಾಲೇಜ್ ತೂರ್ಝೇನಿ ಕ್ಷೇಮತ್ವ ಆಲೇಜ್ ವೃದ್ಧಿಯೇಸಿ (೧೪.೭)*

> ಜಗತ್ತಿನಲ್ಲಿ ನೀರು ಒಲೆಯುತ್ತದೆ. ಆದು ನಿನ್ನನ್ನು ಹೋಲುವಂತೆ
> ಸುರಸವಾಗುತ್ತದೆಂದು ತಿಳಿಯುವುದು. ನಿನ್ನಿಂದ ವೃದ್ಧಿಗೆ
> ಕ್ಷೇಮತ್ವ ಬಂತು.

ಇಲ್ಲಿ ದಾಂಡೇಕರರು ಆಪ ಶಬ್ದಕ್ಕೆ ನೀರು ಎಂದು ಅರ್ಥಹಚ್ಚಿದ್ದು ನನಗೆ ಸಮಂಜಸವೆನಿಸಿಲ್ಲ. ಹಿಂದಿನ ಸಂದರ್ಭಕ್ಕೂ ಮುಂದಿನ ಹೇಳಿಕೆಗೂ ಸಂಬಂಧವೇ ಒದಗಿಲ್ಲವೆನಿಸುತ್ತದೆ. ಇದಕ್ಕೆ ಬದಲಾಗಿ ಆಪ = ಆರ್ಪ, ಆಪುವ, ಆಗುವ ಎಂದು ಅರ್ಥ ತೆಗೆದುಕೊಂಡರೆ ಜಗತ್ತಿನಲ್ಲಿ ಆಗುವಂತಹದೆಲ್ಲವೂ ನಿನ್ನನ್ನು ಹೋಲುವಂತೆ ಸುರಸವಾಗುತ್ತದೆ... ಹೀಗೆ ಅನ್ವಯ ಸಾಧಿಸುತ್ತದೆ.

**ವ್ಹೋಲಿ ಒಲೆ, ಅಡುಗೆಗಾಗಿ ಬೆಂಕಿ ಮಾಡುವ ತಾಣ.**

*ಒಲೆಯೊಡನೆ ಮುತ್ತುಂಗಾಲೊಳ್ ಸರೆ ಬಿರ್ದ್ದೆಗಂ ಇದು (ಶಬ್ದಮಣಿದರ್ಪಣ ಸೂತ್ರ ೨೫೭)*

ಹೀಗೆ ಪಳಗನ್ನಡದಲ್ಲಿ ಬರುವ ಅಡುಗೆ ಒಲೆ ಜ್ಞಾನೇಶ್ವರೀಯಲ್ಲೂ ಹೂಡಿದೆ!

*ರಾಂಧವಣ ವ್ಹೋಲಿ ಮಥೇಜ್ ಪಕ್ವಿವೇ ವಾಹಾತಿ ಬಾಕಾಡೇಜ್ (೧೩.೫೬೧)*

ಅಡುಗೆಯ ಒಲೆಯ ಮುಂದೆ ಹಸರಿಸಿದ ಕಸಮುಸುರೆಯಂತೆ

**ವ್ಹೋಲಣೆ - ಒಲ್ಲಣಿಗೆ, ಬಟ್ಟೆ**

*ಧರಾತಳಮನೊಲ್ಲಣಿಗೆಯಿಂ ಪಿಟಿವಂತೆ ತಳಮೆಯ್ದೆ ಸುರುಳ್ಚಿಸಿ (ಪಂಪಭಾರತ ೧೨.೪೮ವ)* ಎನ್ನುವಲ್ಲಿ ಒಲ್ಲಣಿಗೆಯು 'ಮೇಲುದ'ವಾಗಿದ್ದರೆ *ಅವರ್ಗೆಲ್ಲಂ ನೀರಸಿಡಿಸಿ ತಲೆಯುಂ ಪೂಸಿಸಿಯೊಲ್ಲಣಿಗೆಯ ಸುಡಿಸಿ ತಲೆಯೊಳ್ ಕಟಿಯುಂ ಪೊಯ್ಯಾಗಳ್ (ವಡ್ಡಾರಾಧನೆ ೧೮.೨೩)* ಇಲ್ಲಿ ಅದು ಉಡುವ ವಸ್ತ್ರವಾಗಿದೆ. ಮರಾಠಿಯಲ್ಲಿ 'ವ್ಹೋಲಣೆ'ಯಾಗಿ ಹೋದ ಶಬ್ದದ ಪ್ರಯೋಗಗಳಿವು.

*ಮಗ ಪಟಸಾಳೇವರಿ ವ್ಹೋಲಣೆಯೋವರಿ ಬಾಹೀರವಾಸು ಹೋತಾ (ಪೂ. ೬೪)*

ಬಳಿಕ ಪಡಸಾಲೆಯಲ್ಲಿ ಒಲ್ಲಣಿಗೆಯ ಮೇಲೆ ಭೈರವಾಸ
(ಮೇಲು ವಸ್ತ್ರ) ಇತ್ತು.

ಮುಂದೆ ಅದನ್ನು ಹೊದ್ದುಕೊಂಡ ಸಂದರ್ಭ ಬರುತ್ತದೆ. ಇಲ್ಲಿ 'ಒಲ್ಲಣಿಗೆ' ಉಡುವ ವಸ್ತ್ರ ಅರ್ಥದಲ್ಲಿ ಬಂದದ್ದು ಸ್ಪಷ್ಟವಾಗಿದೆ.

ಸಾರಂಗ ಪಂಡಿತನ ಮನೆಯಲ್ಲಿ ಚಕ್ರಧರರ ಸ್ನಾನದ ವರ್ಣನೆಯ ಸಂದರ್ಭ.

*ಚರಣಕ್ಷಾಳಣ ಕೇಲೇಜ್; ಚರಣೋದಕ ಘೇತಲೇಜ್; ವ್ಹೋಲಣೇಜ್ ತೇಲ ಚಿಕಸಾ ಆಣಿಲಾ; (ಪೂ. ೮)*

ಪಾದತೊಳೆದರು; ಪಾದೋದಕ ಸ್ವೀಕರಿಸಿದರು: ಒಲ್ಲಣಿಗೆ, ಎಣ್ಣೆ
ನೂಲಿನ ಬಟ್ಟೆ (ಬಹುಶಃ ಮೈ ಒರೆಸುವುದಕ್ಕಾಗಿ) ತಂದರು:

*ಮಾ ಗೋಸಾವೀಯಾಜ್‌ಸಿ ವ್ಹೋಲಣೇಜ್ ದೀಧಲೀಜ್ (ಪೂ ೧೭೮)*

ಬಳಿಕ ಚಕ್ರಧರರಿಗೆ ಒಲ್ಲಣಿಗೆ ಕೊಟ್ಟರು.

ಇವೆರಡೂ ಸಂದರ್ಭಗಳಲ್ಲಿ 'ಒಲ್ಲಣಿಗೆ (ಸ್ನಾನಮಾಡುವಾಗ) ಉಡುವ ಬಟ್ಟೆ ಎಂಬರ್ಥದಲ್ಲಿ ಬಳಸಲಾಗಿದೆ.

ಆದುದರಿಂದ ಪಂಪಭಾರತದಲ್ಲಿಯ (೧೨.೪೮ವ) ಉಲ್ಲೇಖದಲ್ಲೂ 'ಮೇಲುಡಿಗೆ' ಬದಲಾಗಿ '(ಸ್ನಾನಕ್ಕಾಗಿ) ಉಡುವ ಬಟ್ಟೆಯೆಂದು ಅರ್ಥವಿಸುವುದು ಗ್ರಾಹ್ಯವಾದಂತೆನಿಸುತ್ತದೆ.

**ವ್ಹೋಳಣೇಜ್ - ಪೂಳೆ, ಹೂಳೆ, ಹರಿ, ಚಲಿಸು**

'ಉರಸ' ಅರ್ಥದಲ್ಲಿಯ 'ಪೂಳ್' ಧಾತುವಿಗೆ ಪೊಮ್ಮಡಿಪೋಲ್ ಪೊಳೆಯ ಪಾಜೆ ಪೋಪಂ ಶ್ವೇತಂ ಎಂದು ಕೇಶಿರಾಜನೇ ಉದಾಹರಣೆ ಕೊಡುತ್ತಾನೆ. (ಶಬ್ದಮಣಿದರ್ಪಣ ಸೂತ್ರ ೨೫೩)

*ಮನಃಪವನದ ವೇಗದೆ ಸೋಲ್ವರ ಕಣ್ಗಳೊಳ್ ಬಿಸಿಲ್ಬುದುರೆಗಳಂದದಿಂ ಕುದುರೆಗಳ್ ಪೊಳೆದುರ್ಕ್ಕಿದ ವೀರ್ವ್ವಲಂಗಳೊಳ್ (ಪಂಪರಾಮಾಯಣ ೧೩.೬೦)*

ಇದು ಇನ್ನೊಂದು ಉದಾಹರಣೆ. ಈ 'ಪೊಳೆ' ಧಾತು ಅದೇ ಅರ್ಥದಲ್ಲಿ 'ವೋಳ' ಆಗಿ ಜ್ಞಾನೇಶ್ವರೀಯಲ್ಲಿ ಪ್ರಯುಕ್ತವಾಗಿದೆ.

ತೃಷಾರ್ತ್ತಾ ಮರುತ ದೇಸೀಜ್ ಝಳೇ ಅಮೃತೇಜ್ ವೋಳಲೀ ಜೈಸೀ ಕಾಜ್ ಅಂಧಾಲಾಗಿ ಡೋಳಾಸೀ ಸೂರ್ಯೋ ಆಲಾ (೧೮.೧೪೫)

> ನೀರಡಿಸಿದವನಿಗೆ ಮರುಭೂಮಿಯಲ್ಲಿ ನೀರು ಅಮೃತವಾಗಿ ಹರಿದಂತೆ ಅಥವಾ ಕುರುಡನಿಗೆ ಕಣ್ಣಮೇಲೆಯೇ ಸೂರ್ಯನು ಬಂದಂತೆ (ಸೂರ್ಯನಿಂದಾಗಿ ಕಣ್ಣು ಕುಕ್ಕಿದಂತೆ ಎಂದು ಭಾವ)

ಇಲ್ಲಿ 'ಮರುತ ದೇಸೀಜ್' ಶಬ್ದಪ್ರಯೋಗವೂ ಪರಿಶೀಲನೆಗೆ ಯೋಗ್ಯವಾದದ್ದು. 'ಮರು ದೇಸೀಜ್' ಎಂದು ಅದರ ಪಾಠಭೇದ.- ವ್ಯಾಖ್ಯಾನಕಾರರು ಎರಡೂ ಸಂದರ್ಭಗಳಲ್ಲಿ 'ಮಾರವಾಡ' ಎಂದು ಅರ್ಥ ಹಚ್ಚಿದ್ದಾರೆ. ಅರ್ಥವೇನೋ ಸರಿಯೇ, ಎನ್ನಬಹುದಾದರೂ ಕನ್ನಡದ 'ಮರುಭೂಮಿ' ಅರ್ಥವೇ ಜ್ಞಾನೇಶ್ವರರಿಗೆ ಅಭಿಪ್ರೇತವಿರಬೇಕೆಂದು ನನ್ನ ಅನಿಸಿಕೆ. ಆಗಿನ್ನು ಮಾರವಾಡವೆಂಬ ಪ್ರಾದೇಶಿಕ ಹೆಸರೂ ಇದ್ದಿರಲಾರದು. ಇಷ್ಟೇ ಅಲ್ಲ, 'ಮಾರವಾಡ' ಹೆಸರಿನಲ್ಲಿಯ 'ಮಾರ' ಶಬ್ದವು 'ವಾಲುಕಾಮಾಯ' ಎಂಬರ್ಥವನ್ನು ಸೂಚಿಸುತ್ತಿದ್ದರೆ ಅದು ಕನ್ನಡ 'ಮರಲ್'ದಿಂದಲೇ ಹೋದುದೆಂದಲೂ ಹೇಳಬಹುದಾಗಿದೆ.

**ಶಿರಕಣೇಜ್ ಸಿರ್ಕು, ಸಿಕ್ಕು, ತೊಡಕಿಕೊಳ್ಳು**

'ಪ್ರತಿಬಂಧ' ಅರ್ಥದಲ್ಲಿಯ 'ಸಿರ್ಕು' ಧಾತುವನ್ನು ಕೇಶಿರಾಜನು ಉಲ್ಲೇಖಿಸುತ್ತಾನೆ. *ನೀಳ ನೀರಜ ವನಂಗಳ ಚೆಲ್ವುಗಳೆಂಬುವಾ ಲತಾಂಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ (ಪಂಪಭಾರತ ೪.೭೦)* ಇದು ಹಳಗನ್ನಡದಲ್ಲಿಯ ಒಂದು ಪ್ರಯೋಗ. ಈ ಸಿರ್ಕು (ಸಿಕ್ಕು, ಸಿಲ್ಕು) ಮರಾಠಿಯಲ್ಲಿ 'ಶಿರಕಣೇಜ್' ಆಗಿ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗವಿದು.

*ಆಪಣ ಚಿ ವೀಉನಿ ದುಹಿತಾ ನಮಮ ಹ್ಮಣೇ ಪಿತಾ*
*ಕಿಜ್ ತೋ ಸುಟೇ ಯೇರು ಘೇಜ್‌ತಾ ಜಾವಾಜ್‌ಈ ಸಿರಕೇ (೧೮.೨೩೨)*

> ತಾನೇ ಮಗಳನ್ನು ಪಡೆದು, (ಇವಳು) ನನ್ನವಳಲ್ಲವೆಂದು ತಂದೆ ಹೇಳುತ್ತಾನೆ. ಆಗ ಅವನು ಬಿಡುಗಡೆ ಹೊಂದುತ್ತಾನೆ. ಇನ್ನೊಬ್ಬ ಅಳಿಯ (ಆ ಕನ್ಯೆಯನ್ನು ತೆಗೆದುಕೊಂಡು) ಸಿಕ್ಕಿ ಹಾಕಿಕೊಳ್ಳುತ್ತಾನೆ.

**ಸಡಕ - ಸಡಕ (ಹವಳ ಮುತ್ತುಗಳ) ಒಂದು ಆಭರಣ ವಿಶೇಷ**

*ಮಿಳಿರ್ವ ಪತಾಕೆಗಳ ಪರಿವಿಡಿಯ ಮುತ್ತಿನ ಸೂಸಕದ ಸಡಕುಗಳ ಸೀಗುರಿಯ - (ಕುಮಾರ ವಾಲ್ಮೀಕಿ ರಾಮಾಯಣ ೧.೧೩.೪)*

ಆಭರಣ ವಿಶೇಷದ ಅರ್ಥದಲ್ಲಿ ಬರುವ 'ಸಡಕ' ಶಬ್ದವು ಅದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲಿ ಪ್ರಯೋಗಿಸಲಾಗಿದೆ.

*ತೇಥ ವ್ಯಾಸಾದಿಕಾಂಚಿಯಾ ಮತೀ ಚೋಖಡೇಪಣೇಂಜ್ ಝಳಕತೀ ತಿಯಾ ಮೇಖಾಳೇ ಮಿರವತೀ ಪಲ್ಲವಸಡಕಾ (೧.೬)*

> ಅಲ್ಲಿ ವ್ಯಾಸಮೊದಲಾದ ಋಷಿಗಳ ಬುದ್ಧಿ ಚಕಚಕನೆ ಹೊಳೆಯುತ್ತದೆ. ಅದು (ಗಣಪತಿಯ) ಸೊಂಟದ ಪಟ್ಟಿ. ಅಲ್ಲಿ ಹವಳ ಮುತ್ತುಗಳ ಸಡಕ ಶೋಭಿಸುತ್ತದೆ.

**ಸಟವಿ - ಸಟಿ + ಅವ್ವೆ**

ಗೋದಾವರಿ ನದಿಯ ಉತ್ತರ ಪ್ರದೇಶ ಹಾಗೂ ಮಹಾರಾಷ್ಟ್ರಗಳ ಸಾಂಸ್ಕೃತಿಕ ಸಂಬಂಧವನ್ನು ಸೂಕ್ಷ್ಮವಾಗಿ ಸೂಚಿಸುವ ಶಬ್ದವಿದು. ಕೂಸು ಹುಟ್ಟಿದ ಆರನೆಯ ದಿವಸ ಅದರ ಹಣೆ ಬರೆಹವನ್ನು ದುರ್ಗೆ ಬರೆಯುವಳೆಂದು ಕಲ್ಪನೆ ಇಂದಿನ ಗುಜರಾಥ ಮಧ್ಯಪ್ರದೇಶ ಭಾಗಗಳಲ್ಲಿ ರೂಢಿಯಲ್ಲಿದೆ.

ಇನ್ನು ಕರ್ನಾಟಕ ಮಹಾರಾಷ್ಟ್ರಗಳ ಸಾಂಸ್ಕೃತಿಕ ಬೆಸುಗೆ. ಈ ವಿಧಿ ಮಹಾರಾಷ್ಟ್ರ ಕರ್ನಾಟಕಗಳಲ್ಲಿ ಆಗುವುದು ಆರನೆಯ ದಿನವಲ್ಲ, ಐದನೆಯ ದಿನ! 'ಹಣೆ ಬರಹ'ಕ್ಕೆ ಉತ್ತರ ಕರ್ನಾಟಕದ ಇನ್ನೊಂದು ನಾಮಾಭಿಧಾನ 'ಐದೇಸಿ'. ಮರಾಠಿಯಲ್ಲಿ ಇದು ಬೇರೆ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಅದನ್ನೇ ಬೇಡಿಕೊಂಡು ಬಂದಿದ್ದಾನೆ ಎನ್ನುವ ಅರ್ಥದಲ್ಲಿ 'ತ್ಯಾಚ್ಯಾ ಪಾಚವೀಲಾ ಮಜಲೇ ಆಹೇ' (ಅವನ ಐದೇಸಿಯಂದು ಪೂಜಿಸಿದೆ) ಎಂದು ಹೇಳುತ್ತಾರೆ. ದಿವಸ ಐದನೆಯದಾದರೂ ಬರೆಯುವವಳು ಸಟವಿ (ಅಥವಾ ಸಟವಾಯೀ)ಯೇ.

ಜ್ಞಾನೇಶ್ವರಿಯಲ್ಲಿಯ ಈ ಓವಿ ನೋಡಬೇಕು.

*ತೇವಿ ಚಿ ಸಟವಿಯೇಚಿಯೇ ರಾತೀ ನ ವಿಸಂಭಿಜೇ ಜೇವಿ ವಾತೀ ತೈಸಾ ಈಶ್ವರ ನಿರ್ಣಯೋ ಚಿತ್ತಿಜ್ ವಾಹಾಣೇ ಸದಾ (೧೮.೮೩೪)*

> ಅದರಂತೆಯೆ, ಸಟವಿಯ ರಾತ್ರಿಯಂದು ಬತ್ತಿಯ (ದೀಪದ) ಮೇಲೆ ವಿಶ್ವಾಸವಿಡಲಾಗದು. ಹಾಗೆ ಈಶ್ವರ ನಿರ್ಣಯವನ್ನು ಚಿತ್ತದಲ್ಲಿ ಸದಾಕಾಲ ಧರಿಸುವುದು.

ಬರೆಯುವ ಸಾಧನ (ಕಾಡಿಗೆ, ಕಡ್ಡಿ)ಗಳನ್ನು ಐದೈಸಿ (ಸಟವಿ)ಯ ಮುಂದಿಟ್ಟು, ರಾತ್ರಿಯೆಲ್ಲ ದೀಪ ಆರದ ಹಾಗೆ ನಿದ್ದೆ ಕಾದು ನೋಡಿಕೊಳ್ಳುತ್ತಾರೆ. ಅಷ್ಟು ಆಸ್ಥೆಯಿಂದ ಈಶ್ವರನ ಬಗ್ಗೆ ವಿಚಾರವನ್ನು ಚಿತ್ತದಲ್ಲಿ ತಂದುಕೊಳ್ಳುವುದು (ತಪ ವೆನಿಸುತ್ತದೆ, ಎನ್ನುವ ಭಾಗ ಮುಂದಿನ ಓವಿಯಲ್ಲಿದೆ) ಎಂದು ಭಾವಾರ್ಥ.

**ಸಧರ ಸದರ, ಸುಲಭ, ಸಲುಗೆ, ಶ್ರೇಷ್ಠ**

ಹಳಗನ್ನಡದಲ್ಲಿಯ 'ಸದರ' ಶಬ್ದ ಚೆನ್ನಬಸವೇಶ್ವರ ವಚನಗಳಲ್ಲಿ ಹೀಗೆ ಬರುತ್ತದೆ. ಮನವದ್ಭುತವಹಂಕಾರವಳಿಯದನ್ನಕ್ಕ ಸದ್ಭಕ್ತಿ ಸದರ ವೆನ್ತೆಮ್ಮನು!

ಈ ಶಬ್ದ ಜ್ಞಾನೇಶ್ವರೀಯಲ್ಲಿ ಹೀಗೆ ಬಳಕೆಯಾಗಿದೆ

*ಹೇ ಯೇಣೇಜ್ ಮಾನೇಜ್ ದುರ್ಭರ ಜೇ ಯಾಹೀಹುನಿ ಭೋಗ ಸಧರ ತೇ ಆಸತು ಯೇಥವರ ಭಿಕ್ಷಾಮಾಗತಾಜ್ ಭಲೀ (೨.೪೬ ದಾಂಡೇಕರ)*

(ದ್ರೋಣಾಚಾರ್ಯರನ್ನು ಕೊಂದು, ರಾಜ್ಯ ಸುಖವನ್ನು ಅನುಭವಿಸುವುದು) ಇದು ನನಗೆ ದುರ್ಭರವೆನಿಸುತ್ತದೆ. ಇದಕ್ಕಿಂತ ಭಿಕ್ಷೆ ಬೇಡುವುದೇ ನನಗೆ ಸದರ ಭೋಗವೆನಿಸುತ್ತದೆ.

*ಹ್ಮಣೌನಿ ಬುದ್ಧಿಯೋಗು ಸಧರು ತೇಥ ಅರ್ಜುನಾ ಹೋಇಜ್ ಥೀರು (೨.೨೭೬)*

ಅಂತೆಯೇ, ಬುದ್ಧಿಯೋಗವು ಸದರ. ಅರ್ಜುನನೇ ಅಲ್ಲಿ ಸ್ಥಿರವಾಗಿರು.

**ಸರೀ - ಸರಿಗೆ, ಆಭರಣ ವಿಶೇಷ**

*ಕೇಯೂರಂ ಕರ್ಣಕುಂಡಲಂ ಕೊಪ್ಪು ಸರಿಗೆ ದುಸರಂ ಮಣಿಮುದ್ರಿಕೆ (ಆದಿ ಪುರಾಣ ೫.೩೩) ಸರಿಗೆಯೊಳ್ ಸಮೆದಕ್ಷಮಾಲಿಕೆ (ಪಂಪಭಾರತ ೬.೮)* ಎನ್ನುವಲ್ಲಿ ಬರುವ 'ಸರಿಗೆ' ಶಬ್ದವು 'ಸರೀ' ಆಗಿ ಮರಾಠಿಯಲ್ಲಿ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗ

*ತೈಸಿ ಹೃದಯ ಕಮಳವೇರ್ಥೀಜ್ ದೀಸೇ ಸೋನೇಯಾಂಚೀ ಜೈಸೀ ಸರೀ*
*ನಾ ತರಿ ಪ್ರಕಾಶ ಜಳಾಚೀ ಝುರೀ ವಾಹಾಜ್‌ತಿ ಆಲೀ (೬.೨೮೬)*

ಹೃದಯ ಕಮಲದ ವರೆಗೆ ಬಂಗಾರದ ಸರಿಗೆ ಅಥವಾ ಪ್ರಕಾಶ ಜಲದ ಪ್ರವಾಹವು ಹರಿದು ಬಂದಂತೆ (ಆ ಕುಂಡಲಿನಿಯು) ಕಾಣುತ್ತದೆ.

**ಸಲಗೀ ಸಲುಗೆ - ಆತ್ಮೀಯತೆ**

ಹಳಗನ್ನಡದ 'ಸಲುಗೆ' ಶಬ್ದವು ಅದೇ ರೂಪದಲ್ಲಿ ಅದೇ ಅರ್ಥದಲ್ಲಿ ಜ್ಞಾನೇಶ್ವರಿಯಲ್ಲಿ ಬಳಸಲಾಗಿದೆ.

*ಹೇ ಸಲಗೀ ಮಿಯಾಜ್ ಮ್ಹಣಿತಲೇ (೧.೬೩)*
ಇದನ್ನು ನಾನು ಸಲುಗೆಯಿಂದ ಹೇಳಿದೆ.
*ಮಗ ಅರ್ಜುನು ಹ್ಮಣೇ ಸಲಗಿ (೬.೧೩೯)*
ಬಳಿಕ ಅರ್ಜುನನು ಆತ್ಮೀಯತೆಯಿಂದ ಹೇಳಿದನು.
*ಐಸೀ ಸಲಗೀ ಕರುಜ್ ನ ಲಭೇಜ್ (೧೧.೧೬)*
ಇಂತಹ ಸಲುಗೆಯನ್ನು ಮಾಡಲು ಆಗದು
*ತರಿ ದೇವೇಜ್‌ಸಿಜ್ ಸಲಗಿ ಕೇಲೀ (೧೧.೫೭೮)*
ಆದರೂ ಭಗವಂತನೊಡನೆ ಸಲುಗೆ ಮಾಡಿದೆ.

**ಸರ್ವಸಾಟೀ ಸಮಸಾಟಿ ಸಮಾನ**

**ಸಾಟೋವಾಟೀ ಸಾಟಿ, ಪಾಟಿ, ಸಾಮ್ಯವುಳ್ಳ, ಸಾಟೀ, ಸರಿ,**

**ಸಮಾನ ಸಾಟೀ, ಸಾರೀ, ಅದಕ್ಕಾಗಿ**

*ಮಗ ಮಾಝಿಯಾ ಸರ್ವಸಾರೀ ತೂಕಸೀ ಜಗೀಂ (೧೮.೧೪೯೯)*

ಬಳಿಕ (ನೀನು) ನನಗೆ ಸರಿಸಾಟಿಯಾಗಿ ತೂಗುತ್ತೀ.

ಸಮ, ಸಾಟಿ ಅರ್ಥದಲ್ಲಿ ಕನ್ನಡದಲ್ಲಿ ಪಾಟಿ ಶಬ್ದವೂ ಬಳಸಲಾಗುತ್ತದೆ.

*ಆಪಣ ಪೇಯಾ ಸಾಟೋವಾಟೀ ಮೀ ಚಿ ಹೋಂತಿ (೧೩.೯೪೦)*

ತಾವು ಸರಿಸಮಾನರಾಗಿ ನಾನೇ ಆಗುತ್ತಾರೆ. (ನನ್ನನ್ನೇ ಹೊಂದುತ್ತಾರೆ)

*ಮೀ ಚಿದ್ರತ್ನ ತೇ ಸಾಟೋವಾಟೀ ಹೋಯೇ ತೋ ಮಾಝಾ (೧೮.೧೨೧೩)*

ನಾನು ಚಿದ್ರತ್ನ. ಅವನು ಅದಕ್ಕೆ (ನನಗೆ) ಸರಿಸಮಾನನಾಗುತ್ತಾನೆ.

ಹೀಗೆ ಸರಿ ಸಮಾನ ಅರ್ಥದಲ್ಲಿ ಸರ್ವಸಾರೀ ಸಾಟೋವಾಟೀ ಪ್ರಯೋಗಗಳನ್ನು ನೋಡಿದ ಬಳಿಕ ಇವುಗಳಿಗೆ ಮೂಲವಾದ ಸಾಟಿಯ ಬಳಕೆ ಸ್ವಾರಸ್ಯಕರವೆನಿಸುವುದು.

ಜ್ಞಾನೇಶ್ವರೀಯಲ್ಲಿಯ ಕೆಲವು ಪ್ರಯೋಗಗಳನ್ನು ನೋಡಬೇಕು.

*ತೇಥ ಸತ್ಕಾರಾಚೀ ಕೇಂ ಗೋಠೀ ಕೇಂ ಆದರಾ ಹೋಈಲ ಭೇಟೀ ಮರಣೇಂಸಿ ಸಾರೀ ನಮಸ್ಕಾರಿತಾಂ (೧೩.೧೮೯)*

ಅಲ್ಲಿ ಸತ್ಕಾರದ ಮಾತೇಕೆ? (ಅವನು) ಆದರ ಮಾಡಿಸಿಕೊಳ್ಳುವವನೇ? (ಯಾರಾದರೂ) ನಮಸ್ಕರಿಸಿದರೆ (ಅವನಿಗೆ) ಮರಣಕ್ಕೆ ಸಮಾನವೆನಿಸುವುದು.

*ತೈಸೇಂ ಆತ್ಮಭ್ರಾಂತಿ ಸಾಟಿಂ ವಸ್ತು ವಿಖುರಲೀ ಬಾರ್ಹಾಂ ವಾಟಿಂ (೧೫.೨೬೮)*

ಹೀಗೆ ಆತ್ಮವು ಬ್ರಮೆಗೊಂಡಂತೆ ವಸ್ತುಗಳು ಹನ್ನೆರಡು ದಿಕ್ಕುಗಳಲ್ಲಿ ಚೆಲ್ಲಾಪಿಲ್ಲಿಯಾದಾಗ

*ಕಾಂ ಕಿಡಾಚಿಯೇ ಪುಟಿಂ ಪಡಿಲೇಂ ಸೋನೇಂ ಕಿರೀಟೀ*

*ಫೇತಲೇಯಾಂ ಸೋಳೇಂ ಸಾರಿಂ ನಾಗವೇ ನಾಂ (೧೭.೫೪)*

ಕೀಳುಧಾತುವಿನ ಮುಸಿಯಲ್ಲಿ, ಕಿರಿಟಿಯೇ, ಬಂಗಾರ ಬಿದ್ದರೆ, ಅದನ್ನು ಚೊಕ್ಕ ಬಂಗಾರ ಸಮಾನ ತೆಗೆದುಕೊಳಲಾಗುವುದೇ?

*ಜೇಂ ಪರಬ್ರಹ್ಮ ನಿರ್ಮಳಾ ಸಾರಿಂ ಸರೇ (೮.೨೬೦)*

ಪರಬ್ರಹ್ಮನ ನಿರ್ಮಲತ್ವಕ್ಕೆ ಸಾಟಿಯಾಗುವುದಿಲ್ಲವೋ ಅ-

*ಇಯೇ ವಿನವಣಿಯೇ ಸಾರಿಂ ಅವಲೋಕಿಲೇಂ ಗುರುದ್ರಿಷ್ಟೀ (೧೨.೧೮)*

ಈ ವಿನಂತಿಗೆ ಸರಿಯಾಗಿ, ಗುರುದೃಷ್ಟಿ (ಅವನನ್ನು) ನೋಡಿತು.

*ಉತ್ತಮಾಚಿಯಾ ಸಾರೀಂ ಪಾವಲೇಯಾಂ ತೇಂ ಕಿರೀಟೀ (೧೭.೧೫೧)*

ಉತ್ತಮನಿಗೆ ಸಾಟಿಯಾಗಿ, ಕಿರೀಟಿಯೇ, ಅವರನ್ನು (ನೋಡಬೇಕು)

*ರಥಿಚಿಯೇ ರಾಹಾಟಿ ಘ್ಲೇಇಜೇ ಘೋಡೇಯಾಜ್ ಸಾಠೀಜ್ (೧೮.೧೫೬೫)*

ರಥದ ಗತಿಯು ಕುದುರೆಗಳ (ಗತಿಗೆ) ಸಮವಾದದ್ದು

ಹೀಗೆ ಸರಿ, ಸಮಾನ ಎಂಬರ್ಥದಲ್ಲಿ ಬಳಸಲಾದ ಸಾಟಿ ಶಬ್ದವು ಕಾರ್ಯಕಾರಣ ಭಾವ ತೋರಿಸುವ ಅವ್ಯಯವಾಗಿಯೂ ಅರ್ಥಾಂತರಗೊಂಡು ಅದೇ ಗ್ರಂಥದಲ್ಲಿ ಪ್ರಯುಕ್ತವಾಗಿದೆ.

*ಯೇತುಲಿಯಾ ಸಾಠಿಜ್ ನಿಶ್ಚಿಂತು ವಾಸ್ತಿಕು ಹೋಏ (೧೩.೭೬೩)*

ಇಷ್ಟಕ್ಕಾಗಿ (ಅವನು) ನಿಶ್ಚಿಂತನಾಗಿ ನಾಸ್ತಿಕನಾಗುತ್ತಾನೆ.

*ಏತುಲೆಯಾಸಾಠಿಜ್ ಸಂಭ್ರಾಂತಾಚಾಜ್ ಮೋಟೇಜ್*

ಇಷ್ಟಕ್ಕಾಗಿ (ಅವರು) ಭ್ರಾಂತಿಯನ್ನು ಹೊಂದಿ (೧೩.೯೦೨)

*ಜೇಯಾ ತುರ್ಘೇಯಾ ಉದ್ದೇಶಾಸಾಠಿಜ್ (೧೬.೨೦)*

ನಿನ್ನ ಯಾವ ಉದ್ದೇಶಕ್ಕಾಗಿ -

*ಶ್ರದ್ಧಾ ಹ್ಮಣತಲೇಯಾ ಚಿ ಸಾಠೀಜ್ (೧೭.೫೧)*

ಶ್ರದ್ಧೆಯೆಂದು ಹೇಳಿದ ಮಾತ್ರಕ್ಕೆ

*ಕವಡೆಯಾ ಏಕಾ ಸಾಠಿಜ್ (೧೭.೨೮೯)*

ಒಂದು ಕವಡೆಗಾಗಿ

*ಜೇಯಾ ಜೇಜ್ ದೇ ಕಿರೀಟೀ ತೇಯಾತೇಜ್ ಉಮಾಣೇಜ್ ತೇಯಾ ಸಾಠಿಜ್ (೧೭.೩೦೪)*

ಯಾರಿಗೆ ಎಷ್ಟು ಕೊಡುತ್ತಾನೋ, ಕಿರೀಟಿಯೇ, ಅವರ ಬೆಲೆಯನ್ನು ಅಷ್ಟಕ್ಕಾಗಿ ಕಟ್ಟುತ್ತಾನೆ.

*ತೇಯಾಸಾಠಿಜ್ ಆವಗಾಳೀ ಫಳಾತೇಜ್ ಕೋಣ್ಹೇಜ್ (೧೮.೨೦೨)*

ಅದಕ್ಕಾಗಿ ಯಾರಾದರೂ ಫಲಗಳನ್ನು ತ್ಯಜಿಸುತ್ತಾರೆಯೇ?

**ಸಳು ಸಲ್ಲು ಸಳೀ ಸಲಿ**

ಒಪ್ಪು ಅರ್ಥದಲ್ಲಿ ಹಳಗನ್ನಡದ ಸಲ್ ಶಬ್ದ ಮರಾಠಿಯಲ್ಲಿ ಸಳುವಾಗಿ ಹೋಗಿದೆ.

*ಯೋಗನಿದ್ರಾ ತರೀ ನ ಮೋಡೇ ಅಕರ್ತೇಪಣಾ ಸಳು ನ ಪಡೇ (೫.೭೮)*

ಯೋಗನಿದ್ರೆ ಕೆಡದಿದ್ದರೂ ನಿಷ್ಕ್ರಿಯತೆ ಯೋಗ್ಯವಲ್ಲದಿದ್ದರೂ -

(ರಾಜವಾಡೆಯವರ ಪ್ರತಿಯಲ್ಲಿ ಸಳು ಗೆ ಬದಲಾಗಿ ಸಂಚಲು ಎಂಬ ಶಬ್ದ ಬಳಸಲಾಗಿದೆ.)

*ಜೋ ಧೃತೀಸಿ ಸದಾಜ್ ಪ್ರತಿಕೂಳು ನಿಯಮಾಹೀ ನಾಗವೇ ಸಳು (೭.೧೬೮)*

(ದ್ವಂದ ಮೋಹದ) ಧೈರ್ಯಕ್ಕೆ ಪ್ರತಿಕೂಲನಾಗಿ ನಿಯಮಗಳನ್ನು ಒಪ್ಪದವನು

ಚೆನ್ನಾಗಿ ಅರ್ಥದಲ್ಲಿ ಸಲೆ ಶಬ್ದ ಹಳಗನ್ನಡದಲ್ಲಿ ಬಳಕೆಯಾಗಿದೆ ಉದಾ : ಗಟಿಯಿಸಿವರ್ಥಂ ಸಲೆ ಪಾಂಗಟೆಯುದೆಯುಂ (ಕವಿರಾಜಮಾರ್ಗ ೨.೫) ಅದೇ ಅರ್ಥದಲ್ಲಿ

*ದೇಖೇಂಜ್ ವಿಹಿತ ಕರ್ಮ ಜೇತುಲೇಂಜ್ ತೇಂಜ್ ಸಳೇಂಜ್ ಜರೀ ಪೂಸಂಟಿಲೇಂಜ್ (೩.೫೪)*

ನೋಡ್ವೆ, ವಿಹಿತ ಕರ್ಮ ವಿಷ್ಪಿದೆಯೋ ಅದನ್ನು ಚೆನ್ನಾಗಿ (ಸರಿಯಾಗಿ) ಬಿಟ್ಟರೂ

**ಸಾಂತೇ - ಸಂತೆ, ಪೇಟೆ**

ಕಾಮದೇವಂ ಮಾಡಿದೋಜನ ಸಾಲೆಯಿರ್ಪಂತಿಪ್ಪ ಪೂಜಿನ ಸಂತೆಯೊಳ್ (ಪಂಪಭಾರತ ೪.೮೦) ಹೀಗೆ 'ಪೇಟೆ' ಅರ್ಥದಲ್ಲಿ ಬಳಸಲಾದ 'ಸಂತೆ' ಶಬ್ದ ಮರಾಠಿಗೆ ಹೋದದ್ದನ್ನು ಜ್ಞಾನೇಶ್ವರೀಯಲ್ಲಿ ಇಂತು ಗುರುತಿಸಬಹುದು.

*ಇಭಾ ವಾಸು ಕಾಪುರಾ ಮಂದ ಜೇಥ ಆವಧಾರಾ*
*ಪಿಠಾಬಾ ವಿಕಿರಾ ತಿಯೇ ಸಾಂತೇ (೧೩.೩೨೦)*

ವಾಸನೆಯಿಂದಲೇ ಹುಟ್ಟಿದ ಕರ್ಪೂರದ ಮಂದವೆಂದು ಯಾವ ಸಂತೆಯಲ್ಲಿ ಹೇಳುತ್ತಾರೋ (ಅಲ್ಲಿ) ಆ ಸಂತೆಯಲ್ಲಿ (ಕಪ್ಪುರವೆಂದು) ಹಿಟ್ಟು ಮಾಡಬಹುದೇ?

*ಸೂರ್ಯೇಂಜ್ ದಾವಿಲೇಂಜ್ ಸಂತೇಂಜ್ ಕಾಇ ಏಕ ನ ದಿಸೇ ಏಥೇಂಜ್ (೧೭.೩೧೭)*

ಸೂರ್ಯನು ತೋರಿದ ಸಂತೆಯಲ್ಲಿ ಯಾವುದೊಂದನ್ನು ಕಾಣಲಾಗದು? (ಆ ಪ್ರಕಾಶದಲ್ಲಿ ಎಲ್ಲವೂ ಸುಸ್ಪಷ್ಟ ಎಂದು ಭಾವಾರ್ಥ)

ಇಲ್ಲಿ 'ಸಾಂತೇಜ್' ಶಬ್ದದಲ್ಲಿಯ ಅನುಸ್ವಾರವು ಲೇಖನದೋಷವೆಂದು ಹಲವರ ಭಾವನೆ. ಅದು 'ಸಾತೇಜ್' ಆಗಿರಬೇಕು. ಸತಃ ಷಷ್ಠಿ ಸತಿ ಸಪ್ತಮಿಗಳಂತೆ ಇದೊಂದು ತೃತೀಯೆಯ ಪ್ರಯೋಗ. ಹೀಗೆ ಅರ್ಥವಿಸಬಹುದು.

ಸೂರ್ಯನಿಂದ ತೋರಿಸಲ್ಪಡುತ್ತಿರುವಾಗ ಇಲ್ಲಿ ಯಾವುದೆಂದನ್ನು ಕಾಣಲಾಗದು?

**ಸಾಧನ, ಸಾಧ್ನಿ, ವ್ಯಂಜನ ಪದಾರ್ಥ**

ಸಾರು, ಪಲ್ಯ, ಚಟ್ನಿ ಇತ್ಯಾದಿ ವ್ಯಂಜನ ಪದಾರ್ಥಗಳಿಗೆ ಉತ್ತರ ಕರ್ನಾಟಕದ ಜನಪದ ಶಬ್ದ 'ಸಾಧ್ನಿ' (ಸಾದನಿ) ಇದು ಸಂಸ್ಕೃತದ 'ಸಾಧನ'ದ ಅನೇಕ ಅರ್ಥಗಳಲ್ಲಿ ಒಂದು. ಹಳಗನ್ನಡದ ಗ್ರಂಥಗಳಲ್ಲಿ ಕಾಣಸಿಕೊಳ್ಳುವುದಿಲ್ಲ. ಆದರೆ 'ಸಾಧನ' ಈ ರೂಪದಲ್ಲೇ ಲೀಳಾಚರಿತ್ರದಲ್ಲಿ ಬರುತ್ತದೆ.

ಹುಡುಗ ಚಾಂಗದೇವ ಭಟ ಭಿಕ್ಷೆ ತಂದಿದ್ದಾನೆ. 'ಉಂಡೆಯಾ?' ಎಂದು ಕೇಳಿದಾಗ 'ಇಲ್ಲ, ಗೋಸಾವಿಗಳು (ಚಕ್ರಧರರು) ದೃಷ್ಟಿಪೂತ ಮಾಡಲಿಲ್ಲ' ಚಕ್ರಧರರು ಜೋಳಿಗೆ ತರಿಸಿದರು. ನೋಡಿದರು.

*'ಬಟಿಕಾ ರುಕ್ಷ ಆಸೇ' : 'ತಜ್‌ವ ಸಾಧನ ಕಾಹೀಜ್‌ನಾಹೀಜ್' : ಸರ್ವಜ್ಞೇ ಮ್ಹಣಿತಲೇಜ್ : 'ಬಟಿಕಾ : ಹೇ ಕಾಇ : ಸಾಧನ ಕಾಜ್‌ಹೀ ನಾಹೀಜ್ : ತರಿ ಏಥ ಸಾಂಘಾಚಿ ನಾ : ಏಥ ಮ್ಹಣೇಜೇ ಹೋಃ ಬಟಿಕಾ ಸಾಧನ ಕಾಜ್‌ಹೀಜ್ ಆಪಜವಿಜೇ (ಪೂರ್ವಾರ್ಧ ೩೧)*

> 'ಹುಡುಗಾ (ಅನ್ನ) ಒಣಗಿದೆ': ವ್ಯಂಜನ ಏನೂ ಇಲ್ಲ: ಚಕ್ರಧರರೆಂದರುಃ 'ಹುಡುಗಾ ಇದೇನು : ಸಾಧನ ಏನೂ ಇಲ್ಲ. ಇಲ್ಲಿ ಹೇಳುವುದಲ್ಲವೇಃ ಇಲ್ಲಿ ಹೇಳಬೇಕಪ್ಪ ಹುಡುಗಾ ಯಾವುದುದಾದರೂ ಶಾಕ ದೊರೆಯುತ್ತದೆಃ

**ಸಾನ - ಸಣ್ಣ ಸಾನೀವ - ಸಣ್ಣತನ**

*ಬಲಮೆಲ್ಲಮನರೆದು ಸಣ್ಣಿಸಿದಂತೆ ಮಾಡಿ (ಪಂಪಭಾರತ ೧೦.೧೧೭ ವ)* ಇದು ಹಳಗನ್ನಡದಲ್ಲಿ ಬರುವ 'ಸಣ್ಣ' ಶಬ್ದದ ಪ್ರಯೋಗ. ಆದರೆ ಇದು 'ಸನ್ನ' ಈ ಸಂಸ್ಕೃತ ಶಬ್ದದ ತದ್ಭವವೆಂದು ಕಿಟೆಲ್ ಭಾವಿಸಿದ್ದಾರೆ. ಸಂಸ್ಕೃತ ಕೋಶದಂತೆ 'ಸದ್' ಧಾತುವಿನ ಭೂತಕಾಲವಾಚಕ ಕರ್ಮಣಿ ಕೃದಂತ ಸನ್ನ. ಈ ಧಾತುವಿಗೆ ಅನೇಕ ಅರ್ಥಗಳಿದ್ದರೂ 'ಪುಡಿಯಾಗು' 'ಪುಡಿಮಾಡು' 'ಕುಗ್ಗು' 'ಸೊರಗು' ಇಂತಹ ಯಾವ ಅರ್ಥಗಳೂ ಇಲ್ಲ. ಹೀಗಾಗಿ 'ಸಣ್ಣ' ಶಬ್ದವು 'ಸನ್ನ'ದಿಂದ ಸಿದ್ಧವಾದುದಲ್ಲವೆಂಬುದು ಸ್ಪಷ್ಟವಾಗಬೇಕು. ಮರಾಠೀ ಪಂಡಿತರು ಇದು 'ಶ್ಲಕ್ಷ್ಣ'ದ ತದ್ಭವವೆಂದು ಭಾವಿಸುತ್ತಾರೆ.[30] ಆದರೆ ಈ ಸಂಸ್ಕೃತ ಶಬ್ದದ ರೂಪಸಿದ್ಧಿಗಳು ಪ್ರಾಕೃತದಲ್ಲಾಗಲೀ (ದೇಶೀನಾಮಮಾಲಾ) ಅಪಭ್ರಂಶದಲ್ಲಾಗಲೀ ದೊರೆಯಲಿಲ್ಲ. ಹೀಗಿರುವಾಗ 'ಶ್ಲಕ್ಷ್ಣ'ವು ನೇರವಾಗಿ 'ಸಾನ'ವಾಗಿ ಮರಾಠಿಯಲ್ಲಿ ಆಮದಾಯಿತು, ಎನ್ನುವುದು ಸಾಹಸದ ಮಾತು.

ನನಗನಿಸುವ ಮಟ್ಟಿಗೆ ಇದು ಕನ್ನಡದ 'ಸಿಂದು' ಅಥವಾ 'ಸೀಳ್' ಧಾತುವಿನಿಂದ ಸಿದ್ಧವಾದ ಕೃದಂತವಾಗಿರಬಹುದಾಗಿದೆ. ಅಥವಾ 'ಕಿಚೆ' ಧಾತುವಿನಿಂದ ಸಿದ್ಧವಾದ 'ಚಣ್ಣ' ರೂಪದಿಂದಲೂ 'ಸಣ್ಣ' ಶಬ್ದ ಒದಗಿರಬಹುದಾಗಿದೆ. ಆದರೆ 'ಸಣ್ಣ' ಇದು ದೇಶ್ಯ ಶಬ್ದವೆಂಬುದು ಮಾತ್ರ ಸ್ಪಷ್ಟ. 'ಸಾನ' ಆಗಿ ಮರಾಠಿಗೂ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು.

*ದಾಜ್‌ತ ಹೀ ಆನ ಹೋಜ್‌ತೀ ಪರಿ ಅಪಾಕೇ ಸಾನೇಜಾಜ್‌ತೀ (೭-೨೬೩)*

> ಹಲ್ಲುಗಳು ಮತ್ತು ಬರುತ್ತವೆ. ಆದರೆ ಬಹಳಷ್ಟು ಸಣ್ಣವಾಗಿರುತ್ತವೆ.

30. ಯಾದವ ಕಾಲೀನ ಮರಾಠೀ ಭಾಷಾ ೧೯೧.

ಸವೇಂಜ್ ಚಿ ಮಹಾಭೂತಾಂಚಾ ಬುಡಬುಡಾ ಸಾನಾ ಜಾಲಾ
(೭.೬೨)
ಮಹಾಭಾರತಗಳ ಸಣ್ಣ ಗುಳ್ಳೆ ಉತ್ಪನ್ನವಾಯಿತು.
ಜೇಂಜ್ ಕಾಹಿಜ್ ಸಾನೇಂಜ್ ಥೋರ (೧೫.೪೪೬)
ಸಣ್ಣ ದೊಡ್ಡ ಯಾವುದಿದ್ದರೂ

**ಸಾವಗಣೇ ಸಾವಗಿಸುವಿಕೆ ಸರಿಪಡಿಸುವುದು**

*ನಗೆ ತೇಜಿದುರುಂಬಂ ಸಾವಗಿಸಿದನ್ ಅಡಗಡಿಗೆ ನೃಪಕುಮಾರಕ ಪೋರ್ವ್ವಗಂ (ಪಂಪರಾಮಾಯಣ ೫.೫೩) ಒಗೆವ ಕುಚಂಗಳಿಂ ತೋಲಗೆ ಮೇಲುದಂ ಓರಡಿಗೊರ್ಮ್ಮೆ ಸೀತೆ ಸಾವಗಿಸುವ ಕೈತವಂ (ಅದೇ ೭.೨೮)*

ಇವೆರಡೂ ಉದಾಹರಣೆಗಳಲ್ಲಿ ತಿದ್ದು, ತೀಡು, ಸರಿಪಡಿಸು ಅರ್ಥಗಳಲ್ಲಿ 'ಸಾವಗಿಸು' ಧಾತು ಬಳಸಲಾಗಿದೆ. ಇದರಿಂದಾದ ಸಾವಗಣೇ ಕ್ರಿಯಾನಾಮದ ಪ್ರಯೋಗಗಳು ಜ್ಞಾನೇಶ್ವರೀಯಲ್ಲಿ ಹೀಗಿವೆ.

*ರಜೋಗುಣ ವೇರೀ ತೇತುಲೇ ಸತ್ವ ಸೋಂಜ್ ಕರೀ*
*ವಿಕಲೇ ತಮಕರೀ ಸಾವಗಣೇ (೧೩.೩೯)*
ರಜೋಗುಣವು ಬಿತ್ತುತ್ತದೆ. ಅಷ್ಟು ಸತ್ವಗುಣವು ದುಡಿಯುತ್ತದೆ. (ಸೋಂಜ್ = ಶ್ರಮ) ತಮವು ಒಂದೇ ಅದನ್ನು ಸಂಭಾಳಿಸುತ್ತದೆ.
*ಹೇ ಅಘವೇ ಚಿ ಯೋಗ ಜೇಯಾ ಠಾಯಾ ಯಂತಿ ಮಾರ್ಗ*
*ತೇಯಾಚೇಂಜ್ ವಾಕ್ಯ ಸವಂಗ ಕೇಲೇ ವ್ಯಾಸೇ (೧೮.೧೫೯೧ ಪಾಠ ಭೇದ)*
ಈ ಎಲ್ಲ ಯೋಗಗಳು ಮಾರ್ಗಗಳಾಗಿ ಎಲ್ಲಿ ತಲುಪುತ್ತವೆಯೋ ಅವನ (ಆ ಪರಮಾತ್ಮನ) ಸಂದೇಶವನ್ನು ವ್ಯಾಸರು ಸುಲಭಗೊಳಿಸಿದರು.

**ಸಿಂಪಿ - ಸಿಂಪು ಸಿಪ್ಪು**

*ಒಡನೆ ದಿಗಂತ ದಂತಿಗಳ ಕೋಡ ಮೊದಲ್ಗಳೊಳೆಯ್ದೆ ಪೊಕ್ಕು ಸಿಪ್ಪಡಿಸಿದ ಪಾಟ್ಕೆ ಪಾಟ್ಕೆಯಾದುವು (ಪಂಪಭಾರತ ೭.೩೬)*

ಇದು 'ಸಿಪ್ಪು' ಶಬ್ದದ ಹಳಗನ್ನಡದಲ್ಲಿಯ ಪ್ರಯೋಗ. ಈ ಶಬ್ದ 'ಶಿಂಪಿ'ಯಾಗಿ ಅದೇ ಅರ್ಥದಲ್ಲಿ ಮರಾಠಿಗೆ ಹೋದಬಗ್ಗೆ ಜ್ಞಾನೇಶ್ವರೀಯಲ್ಲಿಯ ಪ್ರಯೋಗವಿದು.

*ಪರಿ ಸಿಂಪೀ ಚಿ ಪಿಷ್ಟಡೇಂಜ್ ಉಮಟೇ ರೂಪೇಂಜ್ ಜೇವಿ (೧೫.೧೦೫)*
ಸಿಪ್ಪಿನಷ್ಟೇ (ಒಳಗಡೆ) ಬೆಳ್ಳಿಯು ಮೂಡಿದಂತೆ

**ಸಿರಿಯಾಣ, ಶ್ರಿಯಾಣ, ಸಿರಾಣ, ಶ್ರಿಯಾಣ ತಲ್ಲಣ**

ಹಳಗನ್ನಡದಲ್ಲಿ ತಲ್ಲಣ ಶಬ್ದವಿದೆ. ತಲ್ಲಣಿಸದಲಸದಿಡು ಮೃದು ಪದಮಂ, ಎಂಬುದಾಗಿ ಕವಿರಾಜಮಾರ್ಗದಲ್ಲಿ (೨.೪) ಇದರ ಮೊದಲ ಪ್ರಯೋಗ ದೊರೆಯುತ್ತದೆ. ಈ ಶಬ್ದದ ವ್ಯುತ್ಪತ್ತಿ ನೋಡಬಯಸಿದರೆ ಇದರಲ್ಲಿ ತಲ್ಲ - ತಳ್ಳ (ತಲೆ) ಹಾಗೂ ಅಣ (ಅಳ್ ಭೀತಿ) ಇವೆರಡು ಶಬ್ದಗಳು ಕಾಣಸಿಗುತ್ತವೆ. (ಹೋಲಿಸಿರಿ: ತಳ್ಳಂಕ)

ಜ್ಞಾನೇಶ್ವರೀಕಾಲೀನ ಮರಾಠಿಯಲ್ಲಿ ಇವುಗಳಲ್ಲಿಯ ಮೊದಲ ಶಬ್ದದ 'ಸಿರ' ಎಂಬ ರೂಪಾಂತರವಾಗಿ, ಸಮಾಸಿತ ಶಬ್ದದ ಅರ್ಥವನ್ನು ಹಾಗೆಯೇ ಸ್ವೀಕರಿಸಲಾಗಿದೆಯೆಂಬುದು ಸ್ಪಷ್ಟವಾಗುತ್ತದೆ. ಜ್ಞಾನೇಶ್ವರಿಯಲ್ಲಿಯ ಪ್ರಯೋಗಗಳನ್ನು ನೋಡಬೇಕು.

*ಆಣಿ ಪುತ್ರೇಜ್ ಮಿ ಸರ್ವಗುಣಜ್ ಜೇಣಾವಾ ಹೇ ಬಾಪು ಶ್ರಿಯಾಣೀ ಕರೀ (೧೮.೧೬೩೧)*

ಹಾಗೂ ತಾನು ಪುತ್ರನಿಂದ ಸರ್ವಗುಣಗಳಲ್ಲಿ ಜಿತನಾಗಬೇಕೆಂದು ತಂದೆ ತಲ್ಲಣಗೊಳ್ಳುತ್ತಾನೆ.

*ಜಿಯಾವಿಯಾ ಹೀ ಸಿರಾಣಿಯಾಜ್ ಕರಿತಿ ಗಾ (೧೭-೨೬೧)*

(ತಮಗೂ ತೊಂದರೆ ಮಾಡಿಕೊಂಡು, ಸುಖದಿಂದಿದ್ದ ಪ್ರಾಣಿಗಳನ್ನು) ಗೆಲ್ಲಬೇಕೆಂದು ತಳ್ಳಂಕ ಗೊಳ್ಳುತ್ತಾರಯ್ಯ!

*ಐಸೀ ಜಾಲೀಪಣಾಚೀ ಸ್ರಿಯೂಣಿ ಕಾಇಸೀ ತರ್ಹಿಜ್ (೬.೧೪೨)*

ಇಂತಹದು (ಗುಣಗಳನ್ನು ಹೊಂದುವುದು) ಆಗಬೇಕೆಂಬ ತಳ್ಳಂಕ, ಕಳವಳ ಯಾವ ತರಹದ್ದು?

*ಪರಿ ಸಮರ್ಥೇಜ್ ತುವಾಜ್ ಸಿರಿಯಾಣೀ ಫೇಡಿಲೀ ತೇ (೧೬.೩೯)*

(ಜ್ಞಾನೇಶ್ವರರು ಹೇಳುತ್ತಾರೆ, ನಾನು ಭಗವದ್ಗೀತೆಯನ್ನು ಒಕ್ಕಣಿಸುವುದೆಂದರೆ ಆಕಾಶಪುಷ್ಪವನ್ನು ಮುಡಿದಂತೆ) ಆದರೆ, ಭಗವಂತಾ, ನೀನು ನನ್ನ ತಳ್ಳಂಕವನ್ನು ಕಳೆದೆ.

ಇಲ್ಲಿ ಮೂಲತಃ ಅಣ ಅಳ ಭಯ ಎಂಬ ಅರ್ಥವಿದ್ದರೂ ಚಿಂತೆ, ಕಾಳಜಿ ಎಂಬರ್ಥದೊಡನೆ ಆಸೆ, ಅಪೇಕ್ಷೆ, ಕಳವಳ ಅರ್ಥಗಳೂ ಬೆಳೆದದ್ದನ್ನು ಕಾಣಬಹುದಾಗಿದೆ

ಮರಾಠೀ ವ್ಯಾಕರಣ - ಭಾಷ್ಯಕಾರರು ಈ ಶಬ್ದದ ವ್ಯುತ್ಪತ್ತಿಯ ಗೋಜಿಗೆ ಹೋಗದೆ 'ಚಿಂತೆ' ಎಂದಷ್ಟೇ ಅರ್ಥವನ್ನು ಕೊಟ್ಟಿದ್ದಾರೆ.

**ಸುಆರ - ಸುವ್ವಾರ ಅಡಿಗೆಯವ**

'ಸೂಪಕಾರ' ಈ ಸಂಸ್ಕೃತ ಶಬ್ದದ ಕನ್ನಡದ ತದ್ಭವಾದ 'ಸುವ್ವಾರ' ಶಬ್ದವು 'ಸುಆರ' ಆಗಿ ಜ್ಞಾನೇಶ್ವರರಿಗೆ ಹೋಗಿದೆ.

*ಸುಷುಮ್ನ ನಾಳದಲ್ಲಿ ಪವನನೆಂಬ ಪರಿಚಾರಕನಿಂದ ಅಗ್ನಿಯೆಂಬ ಸುಪ್ಪಾರನನಿಪ್ಪಿಸಲು (ಚೆನ್ನಬಸವೇಶ್ವರರ ವಚನಗಳು ೧೦೨೩)*
*ಮಿಾಚಿ ಹೋಈನ ಸುಆರು ವೋಗರೀನ ಉಪಹಾರು (೧೩.೪೦೦)*
ನಾನೇ ಅಡಿಗೆಯುವನಾಗುವೆನು (ಶ್ರೀಗುರುವಿಗೆ) ಉಪಹಾರ ಬಡಿಸುವೆನು.

ಇನ್ನೊಂದು ವಿಚಾರ. *ಭವಿ ನೋಡಿದ ಓಗರ ಲಿಂಗಾರ್ಪಿತವಾಗದು (ಬಸವೇಶ್ವರರ ವಚನಗಳು ೬೦೨)* ಎನ್ನುವಲ್ಲಿ 'ಅನ್ನ' ಅರ್ಥದಲ್ಲಿ ಬರುವ 'ಓಗರ' ನಾಮಪದವು ಮರಾಠಿಯಲ್ಲಿ ಕ್ರಿಯಾಪದವಾಗಿ 'ಬಡಿಸು' ಅರ್ಥವನ್ನು ಹೊಂದಿದ್ದು ಲಕ್ಷಣೀಯ.

**ಸುರವಾಡ, ಸುರವಾಡಣೇಜ್, ಹೆಚ್ಚಳ, ಹೆಚ್ಚಳವಾಗು**

'ಹೆಚ್ಚಳ' ಅರ್ಥದಲ್ಲಿಯ ಹಳಗನ್ನಡದ ಶಬ್ದ 'ಸುರ್ವು' (ಚಂದ್ರಪ್ರಭ ಪುರಾಣ ೮.೪೪ವ-೧.೧೦೧ವ) ಗಲನ ಅರ್ಥದಲ್ಲಿಯ ಸುರಿ ಧಾತುವಿನಿಂದ ಸಿದ್ಧವಾಗಿರಬಹುದಾಗಿದೆ.
*ನೆಗೆದ ಮುಗಿಲ್ಗಳುಂ ಸುರಿವ ಪೆರ್ಮಳೆಯುಂ (ಕವಿರಾಜಮಾರ್ಗ ೧.೧೨೪)*
*ಸುರಿವ ಸುರಯಿಯುರಲ ಮುಗುಳ್ಗೆ (ಪಂಪಭಾರತ ೧.೫೮)* ಇವು 'ಸುರಿ' ಶಬ್ದದ ಪೂರ್ವ ಪ್ರಯೋಗಗಳು.

ಈ 'ಸುರ್ವು' ಅದೇ ಅರ್ಥದಲ್ಲಿ 'ಸುರವಾಡ'ವಾಗಿ 'ಸುರವಾಡಣೇಜ್' ಎಂದು ಧಾತುವಾಗಿ ಹೋದದ್ದನ್ನು ನಾವು ನೋಡುತ್ತೇವೆ. ಇವು ಉದಾಹರಣೆಗಳು.

*ಜೇಣೇಜ್ ಶ್ರೋತೇಯಾಜ್ ಹೋಈಲ ಸುರವಾಡು ಶ್ರವಣಸುಖಾಚಾ (೩.೨೬೦)*
ಕೇಳುಗರಿಗೆ ಶ್ರವಣ ಸುಖದ ಸುರ್ವು ಆಗುವಂತೆ
*ಕಾಜ್ ಆಪುಲೇನಿ ಸುರವಾಡೇಜ್ ಇಛಾವೇಜ್ ನಾ (೩.೨೩)*
ತಮ್ಮ ಬಯಕೆಗಳ ಸುರ್ವಿನಿಂದ (ಆ ಇಷ್ಟಾರ್ಥ ಚಿಂತಾಮಣಿಯನ್ನು) ಕೇಳಬೇಕಲ್ಲ?
*ಉಮಾಣೇಜ್ ಫೇಉನಿ ಪರೇಸೀಜ್ ಸುರವಾಡಿಜೇ (೧೮.೫೧೯)*
ಸಂಕಷ್ಟಗಳನ್ನು ಕೊಂದು ಪರತತ್ವದೊಡನೆ (ಸಾಂಖ್ಯಾಶಾಸ್ತ್ರವೆಂಬ ಸೂರ್ಯನು) ವೃದ್ಧಿಹೊಂದುವನು.
*ಹ್ಮಣೌನಿ ವಿಷಯಸುರವಾಡೂ ತೂಟೇ (೧೮.೬೪೧ ಪಾಠಭೇದ)*
ಅಂತೆ ವಿಷಯ ಸುಖದ ಹೆಚ್ಚಳವು ಕಡಿಯುವುದು.

ಕೊನೆಯ ಉದಾಹರಣೆಯಲ್ಲಿಯ 'ಸುರವಾಡು' ಬರಿ 'ಹೆಚ್ಚಳ'ವಾಗಿಲ್ಲ. ಸುಖದ ಆನಂದದ ಹೆಚ್ಚಳವಾಗಿದೆ. ಈ ಉದಾಹರಣೆ ನೋಡಿರಿ.

*ತೇವಿ ಸ್ವಧರ್ಮ ಸಾಜ್‌ಕಹು ದೇಖೌನಿ ಕೇಲಾ ಜರಿ ಕೀಡು ತರಿ ಮೋಕ್ಷಸುರವಾಡು ಅಂತರಲಾ (೧೮.೯೨೨)*

ಆದರಂತೆ ಸ್ವಧರ್ಮವು ಸಂಕಷ್ಟದ್ದೆಂದು ಕಂಡು, ಕೀಳು ಮಾಡಿದರೆ ಮೋಕ್ಷದ ಮಹದಾನಂದಕ್ಕೆ ಎ(ಪೆ)ರವಾಗುವನು.

*ತೈಸೇಜ್ ಭಾರತೀಜ್ ಸುರವಾಡಲೇಜ್ ಅರ್ಥಜಾತ (೧.೪೦)*

ಆದರಂತೆ ಭಾರತದಲ್ಲಿ ಪುರುಷಾರ್ಥಗಳು ವಿಮಲವಾಗಿವೆ.

*ತರ್ಹಿಜ್ ಸ್ವಧರ್ಮೇಚಿ ಸುರವಾಡು (೩.೨೨೦)*

ಆದ್ದರಿಂದ ಸ್ವಧರ್ಮದಲ್ಲಿಯೇ ಶ್ರೇಯವು.

*ತೇಜ್ ದೈವಾಚೇನ ಸುರವಾಡೇಜ್ ಸಾಂಘವಲೇಜ್ ತುಜ (೫-೬೭)*

ಆದನ್ನು ದೈವದ ಹೆಚ್ಚಳ (ಸುದೈವ)ದಿಂದಲೇ ನಿನಗೆ ಹೇಳಿದೆನು.

*ಕೈಸೇಜ್ ದೈವೆಜ್ ಏಥ ಸುರವಾಡಲೇಜ್ ತೇಜ್ ಜಾಣವೇ ನಾ (೧೧.೧೭೦)*

ದೈವವು ಇಲ್ಲಿ ಹೇಗೆ ಒತ್ತರಿಸಿತೋ ತಿಳಿಯಲಿಲ್ಲ.

**ಸೂ, ಸುದ, - ಸು, ಇಸು**

*ಧಾತುಗಿಸು ಕನ್ನಡಕ್ಕಾ*
*ಹೇತುವಿನೊಳ್ ಸ್ವಪರ ಕರ್ತೃವೊಳ್ ಸಂಸ್ಕೃತದಾ*
*ಧಾತುಗನೇಕಾಕ್ಷರಕಿಸು*
*ಜಾತಂ ನಿಜ ಕರ್ತೃವೊಳ್ ಪ್ರಯೋಜನದೆಡೆಯೊಳ್*

ಎಂದು ಹೇಳಿದ ಕೇಶಿರಾಜನು (ಸೂತ್ರ ೨೪೨) ನಗಿಸು, ಕಾಣಿಸು, ಕಟ್ಟಿಸು, ಈಯಿಸು, ಖಂಡಿಸು, ಚಿತ್ರಿಸು, ಪೊಂಗಿಸು ಮೊದಲಾದ ಉದಾಹರಣೆಗಳನ್ನು ಕೊಡುತ್ತಾನೆ.

ಸು, - ಇಸು ಪ್ರತ್ಯಯಗಳು ಹತ್ತಿ ಮರಾಠಿಯಲ್ಲೂ ಧಾತುಗಳು ಸಿದ್ಧವಾದುವೆಂದರೆ ಆಶ್ಚರ್ಯವೆನಿಸುವುದಲ್ಲವೇ? ಆದರೆ ಜ್ಞಾನೇಶ್ವರೀಯಲ್ಲಿ ಅಂತಹ ಪ್ರಯೋಗಗಳು ದೊರೆಯುತ್ತವೆ. ಅಂತರವಿಷ್ಟೇ, ಮರಾಠಿ ಸಂಶೋಧಕರು ಅಜ್ಞಾನ ಮೂಲವಾಗಿಯೇ, ಅಥವಾ ಗ್ರಂಥಗಳ ಪ್ರತಿಕಾರರು ಶಬ್ದಗಳನ್ನು ಬಿಡಿಬಿಡಿಸಿ ಬರೆದಿದ್ದರಿಂದಲೋ ಸೂ ಎಂಬುದು ಸ್ವತಂತ್ರ ಧಾತುವೆಂದು ಅದರ ಅರ್ಥ ಹಾಕು, ಧರಿಸು ಎಂದೂ ಭಾವಿಸಿದ್ದಾರೆ. ಉದಾಹರಣೆಗಳು ಇಂತಿವೆ.

*ಟಿಟಿಭುಜ್ ಚಾಂಚುವೇರ್ಹಿಜ್ ಮಾಪ ಸುಯೇ ಸಾಗರೀಜ್ (೧-೬೮)*

ಟೀವಂಕ್ಕಿಯು ಚುಂಚಿನವರೆಗೆ ಸಮುದ್ರವನ್ನು ಅಳೆದಂತೆ (ಮಾಪ+ಸು) (ಅಥವಾ ಚುಂಚಿನಿಂದ ಎಂದು ಅರ್ಥೈಸಿದರೆ ಹೆಚ್ಚು ಸ್ಪಷ್ಟವಾದೀತು.)

*ಗಗನ ಮುಠೀ ಸುಆವೇಜ್ ಮಶಕೇಜ್ ಕೇವಿ (೧.೭೪)*

ನೊರಜಿನಿಂದ ಆಕಾಶಮುಟ್ಟಿಸುವುದು ಹೇಗೆ? (ಆಕಾಶವನ್ನು ಮುಷ್ಟಿಯಲ್ಲಿ ಹಿಡಿಯುವುದು ಎಂದು ಮರಾಠಿ ಪಂಡಿತರು ಅರ್ಥವಿಸಿದ್ದಾರೆ.)

ಸೂರ್ಯಪ್ರಭುಗಳ ವಂಶವೆತ್ತ, ಅಲ್ಪಮತಿಯಾದ ನಾನೆತ್ತ! ದುಸ್ತರವಾದ ಸಮುದ್ರವನ್ನು ನಾನು ಸಣ್ಣನಾವೆಯಿಂದ ದಾಟಲೆತ್ನಿಸುತ್ತಿದ್ದೇನೆ, ಎಂದು ರಘುವಂಶ

ಕೃತಿಯ ಬಗ್ಗೆ ಕಾಳಿದಾಸ ಹೇಳಿಕೊಂಡಿದ್ದಾನೆ. ಮೇಲಿನ ಎರಡು ದೃಷ್ಟಾಂತಗಳಲ್ಲಿ ಜ್ಞಾನೇಶ್ವರರು ಭಗವದ್ಗೀತೆಯ ಮಹತ್ವತೆಯನ್ನು ತಮ್ಮ ಅಲ್ಪತೆಯನ್ನು ದೃಷ್ಟಾಂತಗಳ ಮೂಲಕ ಹೇಳಲೆತ್ನಿಸಿದ್ದಾರೆ. ಸಾವಿರಾರು ದೃಷ್ಟಾಂತಗಳನ್ನು ಕೊಟ್ಟು ವಿಷಯವನ್ನು ಸ್ಪಷ್ಟಪಡಿಸುವುದರಲ್ಲಿ ಸಿದ್ಧಹಸ್ತರಾದ ಜ್ಞಾನೇಶ್ವರರು ನೊರಜಿಗೆ ಮುಟ್ಟಿ, ಅದರಲ್ಲಿ ಆಕಾಶ ಹಿಡಿಯುವುದು ಹೀಗೆ ಕಲ್ಪಿಸುವಷ್ಟು ಕಲ್ಪನಾದರಿದ್ರರೇ? ಇದೇ ದೃಷ್ಟಾಂತವನ್ನು ಬೇರೆ ಸಂದರ್ಭದಲ್ಲಿ ಅವರು ಸ್ಪಷ್ಟವಾಗಿ ಇಂತು ಹೇಳಿದ್ದಾರೆ.

*ಜಳಚರಾಂ ಉದಧೀಚೇಂ ಮಾನ ಮಶಕಾ ಸೋಲಾಂಡಾವೇ ಜೆ ಗಗನ (೧೦.೬೫)*

ಜಲಚರಗಳು ಸಮುದ್ರದ ಸೀಮೆಯನ್ನು, ನೊರಜುಗಳು ಗಗನವನ್ನು ದಾಟಲಾಗದು.

-ಸು, -ಇಸುಗಳ ಮುಂದಿನ ಪ್ರಯೋಗಗಳು ಹೀಗಿವೆ.

*ತೂಂ ಧರೂನಿ ದೇಹಾಭಿಮಾನಾತೇಂ ಆಣಿ ದಿಠಿ ಸೂನಿ ಏಯಾ ಶರೀರಾತೇಂ (೨.೧೩೨)*

ನೀನು ದೇಹಾಭಿಮಾನವನ್ನು ಹಿಡಿದು ಮತ್ತು ಈ ಶರೀರಗಳನ್ನು ದಿಟ್ಟಿಸಿ

*ದೃಷ್ಟಿ ಸೂನಿ ಜೇಯಾತೇಂ ಬ್ರಹ್ಮಚರ್ಯಾದಿ ವ್ರತೇಂ (೨.೧೬೧)*

ಯಾವುದನ್ನು ದೃಷ್ಟಿಸಿ ಬ್ರಹ್ಮಚರ್ಯಾದಿ ವ್ರತಗಳನ್ನು (ಆಚರಿಸುತ್ತಾರೋ)

*ಜೇಂ ಹೇ ವಡಿಲ ಸಕಳ ಆಪುಲೇ ವಧಾವೇಯಾ ದಿಠಿಸೂವಲೇ (೧.೨೬೩)*

ಯಾವ ಈ ನಮ್ಮ ಎಲ್ಲ ಹಿರಿಯರನ್ನು ಕೊಲ್ಲುವದಕ್ಕಾಗಿ ದೃಷ್ಟಿಸುತ್ತಿದ್ದೇನೆಯೋ

*ಜೋ ಧ್ಯಾನೇಂ ಸುಯೇ ಮಾನಸೀಂ ತೇಯಾಲಾಗಿ ತೂಂ ನಾಹಿಂ ದೇಶೀಂ (೧೭.೧೩)*

ಯಾವನು ಮನಸ್ಸಿನಲ್ಲಿ ಧ್ಯಾನಿಸುತ್ತಾನೋ ಅವನಿಗೆ ನೀನು ಕೊಡುವುದಿಲ್ಲ.

ಸಂಸ್ಕೃತ ಶಬ್ದಗಳಿಗೆ -ಇಸು ಪ್ರತ್ಯಯ ಹಚ್ಚಿ ಮಾಡಿದ ಹೊಸಧಾತುಗಳಿವು.

*ಜೇಂ ಅಖಂಡ ಸುಖಿ ಸಳ ಅಹಂಕಾರಾಸೀಂ (೧೩.೧೧೧)*

ಯಾವುದು ಛಲ (ಹಟ)ವನ್ನು ಅಹಂಕಾರದೊಂದಿಗೆ ಅಖಂಡಗೊಳಿಸುವುದೋ-

**ಸೂದಣೇಂ, ಸುತ್ತು**

'ವೇಷ್ಟನೇ' ಅರ್ಥದಲ್ಲಿಯ 'ಸುತ್ತು' ಧಾತು ಪಂಪಭಾರತದಲ್ಲಿ ಹೀಗೆ ಬಳಸಲಾಗಿದೆ. ನರನಂದನನ ರಥಮಂ ಸುತ್ತಿಮುತ್ತಿಕೊಂಡು (೧೧.೧೦೦ವ) ಈ ಶಬ್ದ ಜ್ಞಾನೇಶ್ವರರಿಗೆ 'ಸೂದ' ಆಗಿ ಹೋಗಿದೆ. ಅದರ ಅರ್ಥದ ಬೆಳವಣಿಗೆಯನ್ನು ಗಮನಿಸಬೇಕು.

*ಜೇಜ್ ಹೇ ವಡಿಲ ಸಕಳ ಆಪುಲೇ ವಧಾವೇಯಾ ದೀಠಿ ಸೂದಲೀ (೧.೨೬೩)*

ನಮ್ಮ ಈ ಎಲ್ಲ ಹಿರಿಯರನ್ನು ಕೊಲ್ಲಲೆಂದು ದೃಷ್ಟಿ ಹರಿಸಿದೆವು
(ಇದು- ಮರಾಠೀ ಪಂಡಿತರ ವ್ಯಾಖ್ಯಾನ)

*ಗೋಕ್ಷಿರ ಜರ್ಹಿಜ್ ಜಾಲೇಜ್ ತರ್ಹಿಜ್ ಪಥ್ಯಾಸಿ ನಾಹೀಜ್ ಬೋಲಿಲೇಜ್*
*ಐಸೇನಿ ಹಿ ವಿಷಸೋಹೇ ಸೂದಲೇಜ್ ದೇಇಜೇ ಜ್ವರಿಜ್ (೨.೧೮೪)*

ಹಸುವಿನ ಹಾಲಾದರೇನಾಯಿತು? ಪಥ್ಯಕ್ಕೆ ಹೇಳಲಿಲ್ಲ. (ನವ)
ಜ್ವರವಿದ್ದಾಗ ಕೊಟ್ಟರೆ ಇದರಿಂದ ವಿಷವು ಆವರಿಸುವುದಿಲ್ಲವೇ?

*ತರಿ ವಿಷಯಾಜ್ ಇಂದ್ರಿಯಾಂಚೇಮಿಳಣೇಜ್ ಜೋ ಉದ್ವೈಜತ ಸುಯೇ ವಿಭುಟಣೇ (೧೬.೮೮)*

ವಿಷಯಗಳ ಹಾಗೂ ಇಂದ್ರಿಯಗಳ ಮೇಳನ ಆಗುತ್ತಲೇ ಯಾವುದು (ಧರ್ಮವು) ಅವುಗಳ ವಿಯೋಗವನ್ನು ಆವರಿಸುವುದೋ (ವಿಯೋಗಕ್ಕೆ ಕಾರಣವಾಗುವುದೋ)

*ಆಗಿ ಸುಇಜೇ ದಾಹೇಜ್ ದ್ವಾರೀಜ್ ವೈರಾಗ್ಯಾಚೀ (೧೬.೯೦)*

ವೈರಾಗ್ಯದ ಬೆಂಕಿಯು ಹತ್ತೂ (ಇಂದ್ರಿಯಗಳ) ದ್ವಾರಗಳಲ್ಲಿ ಆವರಿಸುವುದು.

**ಸೂದಣೇಜ್, ಸೂಡು, ಹಾಕು**

ಪಂಪಭಾರತದಲ್ಲಿ ಬರುವ ಸೂಡು ಶಬ್ದದ ಪ್ರಯೋಗಗಳಿವು.

*ದೃಷ್ಟಿಗೆವರೆ ಮನಂಬುಗೆ ಪಾಂಡುರಾಜನನೆ ಮಾಲೆ ಸೂಡಿದಳ್ (೧.೧೦೬)*

(ಚತುರ್ಥೀಭಾವದಲ್ಲಿಯ ಷಷ್ಠಿಯ ಪ್ರತ್ಯಯವನ್ನು ಗಮನಿಸಬೇಕು)

*ಮಗಮಗಿಸುವ ಮೃಗಮದದ ಅಗರುವ ಕಪ್ಪುರದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪುಮುಂ (೧೪.೨೫)*

ಇಲ್ಲಿ ಡಿ.ಎಲ್. ನರಸಿಂಹಾಚಾರ್ಯರು ಸೂಡಿದ-ಮುಡಿದುಕೊಂಡ ಎಂದು ಅರ್ಥೈಸಿದ್ದಾರೆ. ಇದಕ್ಕೆ ಬದಲಾಗಿ 'ಬೀರಿದ' ಅರ್ಥ ಹೆಚ್ಚು ಸಮಂಜಸವಾಗುವದಲ್ಲದೆ ಮುಂಬರುವ ಸಂದರ್ಭಗಳಿಗೆ ಉಚಿತವೂ ಆಗುವುದು. ಪಂಪರಾಮಾಯಣದಲ್ಲಿಯ ಪ್ರಯೋಗಃ

*ಪಲರಂ ಪೆಱಗಿಕ್ಕಿ ಸೂಡಿದಳ್ ಮಾಲೆಯನ್ (೩.೪೭)*
*ಲವಂಗೆ ಮಂದಾಕಿನಿ ಮಾಲೆಯಂ ಸೂಡಿದಳ್-ಕುಶಂಗೆ ಚಂದ್ರವಕ್ತ್ರೆ ಮಾಲೆಯಂ ಸೂಡಿದಳ್ (೧೬,೪೨ವ)*

'ಮಾಲೆ ಸೂಡಿದ' ನಾಲ್ಕೂ ಸಂದರ್ಭಗಳಲ್ಲಿ ಡಿ.ಎಲ್. ನರಸಿಂಹಾಚಾರ್ಯರು ಹಾಗೂ ಕಿಟೆಲ್‌ರು 'ಮುಡಿಸು' ಎಂದು ಅರ್ಥ ಹಚ್ಚಿದ್ದಾರೆ. ಇವು ನಾಲ್ಕೂ ಸ್ವಯಂವರದ ಪ್ರಸಂಗಗಳು. ಆದುದರಿಂದ ಮುಡಿಸು ಬದಲು 'ಹಾಕು' ಎಂಬರ್ಥವೇ ಯೋಗ್ಯವೆನಿಸುವುದು.

ಇನ್ನು ಜ್ಞಾನೇಶರೀಯಲ್ಲಿ 'ಹಾಕು' 'ಬೀರು' ಅರ್ಥದಲ್ಲಿ ಬರುವ 'ಸೂದ' ಶಬ್ದದ ಪ್ರಯೋಗಗಳಿವು.

*ಜೇಜ್ ಹೇ ವಡಿಲ ಸಕಳ ಆಪುಲೇ ವಧಾವೇಯಾ ದಿಠಿ ಸೂದಲೇ (೧.೨೬೩)*

ನಮ್ಮ ಈ ಎಲ್ಲ ಹಿರಿಯರನ್ನು ಕೊಲ್ಲುವುದಕ್ಕೆ ದೃಷ್ಟಿ ಬೀರಿದ್ದೇವೆಯೋ (ಮೂರನೆಯ ಪರ್ಯಾಯ!)

*ಗೋಕ್ಷೀರ ಜರ್ಹೀಜ್ ಜಾಲೇಜ್ ತರ್ಹೀಜ್ ಪಥ್ಯಾಸಿ ನಾಹೀಜ್ ಬೋಲಿಲೇಜ್*
*ಐಸೇನಿ ಹಿ ವಿಷ ನೋಹೇ ಸೂದಲೇ ದೇಇಜೇ ಜ್ವರಿಜ್ (೨.೧೮೪)*

ಆವಿನ ಹಾಲಾದರೂ ಪಥ್ಯಕ್ಕೆ ಬೇಡವೆಂದು ಹೇಳಿದಾಗ, ಜ್ವರವಿದ್ದಾಗ (ಅದನ್ನು) ಕೊಡುವುದು ವಿಷ ಹಾಕಿದಂತಲ್ಲವೇ? (ಇದೂ ಒಂದು ಪರ್ಯಾಯ)

*ತೇ ಆಹಾರ ನವ್ಹಜ್ತಿ ಘೇತಲೇ ವ್ಯಾಧಿವ್ಯಾಳ ಸುತಲೇ (೧೭.೧೪೯)*

ಅವರು ಆಹಾರ ತೆಗೆದುಕೊಳ್ಳುವುದಿಲ್ಲ. ಬೇನೆಗಳೆಂಬ ಸರ್ಪಗಳನ್ನು (ಹೊಟ್ಟೆಯಲ್ಲಿ) ಹಾಕುತ್ತಾರೆ.

*ಜೈಜ್ ಭ್ರಾಂತಿ ಸೇಜೇ ಸೂತಲಾ ತೈಜ್ ಸ್ವಪ್ನಸುಖೇಜ್ ಭೂತಲಾ (೫.೪೭)*

ಆವನು ಭ್ರಮೆಯ ಹಾಸಿಗೆಯಲ್ಲಿ ಹಾಕಲ್ಪಟ್ಟನೋ ಅವನು ಸ್ವಪ್ನಸುಖ ಅನುಭವಿಸಿದನು.

*ತೋ ಧೃತರಾಷ್ಟ್ರಾ ರಾಯಾ ಸೂತ ಅಸೇ ಪಾನ ಕರಾವೇಯಾ (೧೫.೫೫೭)*

(ಆ ಕೃಷ್ಣವದನಾಮೃತವನ್ನು ಸಂಜಯನು) ಧೃತರಾಷ್ಟ್ರರಾಜನಿಗೆ ಕುಡಿಯುವುದಕ್ಕಾಗಿ ಹಾಕುತ್ತಿದ್ದಾನೆ.

ಇಲ್ಲಿ ಚತುರ್ಥೀಭಾವ ಸಾಧಿಸುವುದಕ್ಕಾಗಿ ಬಳಸಿದ '-ಆ' ಕನ್ನಡದ ಷಷ್ಠೀ ಪ್ರತ್ಯಯ ಗಮನಿಸಬೇಕು.

*ನ ರಿಗಾವೇ ತೇಥ ಕರಣೇಜ್ ತೋಂಡೇಜ್ ಸೂಜ್ತಿ (೧೩.೧೨೪)*

ಎಲ್ಲಿ ಹೋಗಬಾರದೋ ಅಲ್ಲಿ ಕರಣಗಳು ಮೋರೆ (ಬಾಯಿ?) ಹಾಕುತ್ತವೆ.

ಹೀಗೆ ಹಳಗನ್ನಡದ 'ಸೂಡು' ಎಷ್ಟೊಂದು ಭಿನ್ನ ಸಂದರ್ಭಗಳಲ್ಲಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆಯೆಂಬುದನ್ನು ಪರಾಮರ್ಶಿಸಬಹುದಾಗಿದೆ.

**ಸೂಳೆ, ಸೂಳೆ, ಗಣಿಕೆ, ವೇಶ್ಯೆ**

*ಪರವರ ಪಾರ್ದ್ವರ ಸೂಳೆಯರ ಮನೆಗಳವು (ಪಂಪಭಾರತ ೪.೧೦)* 'ಗಣಿಕೆ' ಅರ್ಥದಲ್ಲಿ ಬರುವ ಈ 'ಸೂಳೆ' ಶಬ್ದ, ಒಂದು ಅಪಶಬ್ದದಂತೆ, ಬೈಗುಳಂತೆ ರೂಢಿಯಲ್ಲಿದೆಯಷ್ಟೇ? ಇದು ಆ ಕಾಲದಲ್ಲೂ ಇದ್ದಿರಬಹುದು ಎನ್ನುವುದಕ್ಕೆ ಲೀಳಾಚರಿತ್ರದಲ್ಲಿ ಬರುವ ಈ ಪ್ರಸಂಗ ಸಾಕ್ಷಿ.

'ಏಕಾಕ' ಜೀವನದಲ್ಲಿ ಊರೂರು ಸುತ್ತಿದ ಚಕ್ರಧರರು ಪ್ರತಿಷ್ಠಾನ (ಇಂದಿನ ಪೈಠಣ) ಕ್ಕೆ ಬಂದಿದ್ದಾರೆ. ಸಾಗೂಬಾಯಿಯ ಮನೆಗೆ ಭಿಕ್ಷೆಗೆ ಬಂದಾಗ ಆಕೆ ಅವರನ್ನು ಆಹ್ವಾನಿಸಿ ಹೊರಗೆ ಕಾಲೊರೆಸುವ ತಟ್ಟಿನ ಮೇಲೆ ಕೂಡ್ರಿಸುತ್ತಾಳೆ. ಹಾಸೂಬಾಯಿಗೆ ಕೈಬಿಕ್ಷೆ (ಕರತಲ ಭಿಕ್ಷೆ) ನೀಡಲು ಹೇಳುತ್ತಾಳೆ. ಈ ಊರಲ್ಲಿರುವಾಗ ತಮ್ಮಲ್ಲಿ ಕೈಭಿಕ್ಷೆ ಕೊಂಡು ಭೋಗನಾರಾಯಣನ ಮಂದಿರದಲ್ಲಿ ಮಲಗಬೇಕೆಂದೂ ಹೇಳುತ್ತಾಳೆ.

ಮರುದಿನದ ಭಿಕ್ಷೆಯ ಬಳಿಕ ಮೂರನೆಯ ದಿನ ಆಕಸ್ಮಾತ್ತಾಗಿ ಕಣ್ಣಿಗೆ ಕಣ್ಣು ಕೂಡಿದಾಗ ಚಕ್ರಧರರ ಶಕ್ತಿಪಾತದಿಂದ ಅವಳಿಗೆ ಉನ್ಮನೀ ಅವಸ್ಥೆ ಒದಗುತ್ತದೆ. (ಮಲಗುವ, ಕೂಡ್ರುವ) ಕಟ್ಟೆಯ ಮೇಲೆ ಕುಳಿತಾಕೆಗೆ ಆಗ ಪಶ್ಚಾತ್ತಾಪ, ಸ್ವತಃ ನಿರ್ಭರ್ತ್ಸನೆ.

*ಮಗ ನಾಗೂಬಾಯಿ ಆಪಣೇಯಾತೇಜ್ ವೋಟೇಯಾ ಖಾಲುತೇಜ್ ಘಾತಲೇ; 'ಬಾಬಾ' ಮ್ಹಣೌನಿ'; ಬಾಬಾ ಪಾಪೀಣ; ಬಾಬಾಃಏಥ ಮಿ ಸೂಳೀಜ್ ಸೂದಲಿ-ಯೇಜ್ ಆಸೇಜ್; ಬಾಬಾ ಖಾಲಿ; ಮಗ ಗೋಸಾವಿ ವೋಟೇಯಾವರಿ ಆಸನ ಕೇಲೇ (ಪೂರ್ವಾರ್ಧ ೨)*

ಬಳಿಕ ನಾಗುಬಾಯಿ ತನ್ನನ್ನು ಕಟ್ಟೆಯ ಕೆಳಗಿಳಿಸಿ ಹಾಕಿದಳು; (ಕೆಳಗೆ ಇಳಿದಳು) 'ಅಪ್ಪಾ' ಎಂದು; 'ಅಪ್ಪಾ' ಪಾಪಿನಿ : ಅಪ್ಪಾ ಇಲ್ಲಿ ನಾನು ಸೂಳೆ ಹರವಿಕೊಂಡು ಬಿದ್ದಿದ್ದೇನೆ; ಅಪ್ಪ ಕೆಳಗೆ; ಬಳಿಕ ಚಕ್ರಧರರು ಕಟ್ಟೆಯಮೇಲೆ ಕುಳಿತರು.

ಇಲ್ಲಿ ನಾಗೂಬಾಯಿ ತನ್ನನ್ನು ತಾನೇ 'ಸೂಳೆ' ಎಂದು ಜರಿದುಕೊಂಡದ್ದು ಮರಾಠೀ ವ್ಯಾಖ್ಯಾನಕಾರರಿಗೆ ಅರ್ಥವಾಗಿಲ್ಲ.

**ಸೇಣ- ಸಗಣ- ಶಗಣಿ**

*ಸಗಣಕ್ಕೆ ಸಾಸಿರಹುಳ ಹುಟ್ಟವೇ ದೇವಾ (ಬಸವೇಶ್ವರ ವಚನಗಳು೧೫೭)* ಎನ್ನುವಲ್ಲಿ ಬರುವ 'ಸಗಣ' ಶಬ್ದ 'ಸೇಣ'ವಾಗಿ ಜ್ಞಾನೇಶ್ವರೀಯಲ್ಲಿ ಉಪಯೋಗಿಸಲಾಗಿದೆ.

*ಕಾಇ ಕರಿಸೀ ಚಿತ್ರಫಳ ಆಜ್ಂತು ಸೇಣ (೧೩.೪೬೯)*

ಆಟದ ಹಣ್ಣನ್ನು ತೆಗೆದುಕೊಂಡೇನು ಮಾಡುವೆ? ಒಳಗೆಲ್ಲ ಸಗಣಿ.

ಲೀಳಾಚರಿತ್ರದಲ್ಲಿಯ ಪ್ರಯೋಗ ಹೀಗೆ.

*ತೇಯಾಜ್ಸಿ ಸೇಣೇಜ್ ಮಾತಿಯಾಜ್ ಆಂಗಮಾಖೌನಿ ಆಡ ಪಡಿಲೇಜ್ (ಪೂ ೧೭೪)*

ಅವನಿಗೆ (ಅವನ ಮೈಗೆ) ಸಗಣಿ ಮಣ್ಣು ಮೆತ್ತಿ ಅಡ್ಡ ಕೆಡವಿದರು.

**ಸೇಂಬುಡ-ಸುಂಬಳ**

ಕನ್ನಡದ 'ಸುಂಬಳ' (ಸಿಂಬಳ) ಶಬ್ದವು ಅದೇ ಅರ್ಥದಲ್ಲಿ 'ಸೇಂಬುಡ' ಆಗಿ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ. ತುಳಪುಳೆಯವರು ಇದರ ಉಪಪತ್ತಿಯನ್ನು ಸಂಸ್ಕೃತದ 'ಶ್ಲೇಷ್ಮ' (ನೆಗಡಿ)ದಿಂದ ಸಾಧಿಸಿದ್ದಾರೆ.

*ಮಶಕು ಗುಂಪಲಾ ಸೇಂಬುಡೀಜ್ (೧೩.೭೮೨)*

ಸುಂಬಳದಲ್ಲಿ ಸಿಕ್ಕಿಕೊಂಡ ನೊಣ-

*ದೋಘೀ ಸೇಂಬುಡೀಯಾ ಕುಮಾರೀ (ಲೀಳಾಚರಿತ್ರ ಉತ್ತರಾರ್ಧ ೪೦೫)*

ಸುಂಬಳಬುರುಕ ಹೆಣ್ಣುಮಕ್ಕಳಿಬ್ಬರು.

**ಸೋಯೇ, ಸೋವು, ಸೋಹೆ, ಗುರುತು, ಚಿಹ್ನೆ**

*ದಾಸೋಹವೆಂಬ ಸೋಹೆಗೊಂಡು ಹೋಗಿ ಗುರುವ ಕಂಡೆ (ಬಸವೇಶ್ವರರ ವಚನಗಳು ೭೭೮)* ಎನ್ನುವಲ್ಲಿ ಬರುವ ಸೋಹೆ ಶಬ್ದ 'ಸೋಯೆ' ಆಗಿ ಮರಾಠಿಗೆ ಹೋದುದನ್ನು ಕಾಣಬಹುದು.

ಜ್ಞಾನೇಶ್ವರೀಯಲ್ಲಿ

*ಕಿಂಬಹುನಾ ಸೋಂವಿ ಜೀಉ ಆತ್ಮೆಯಾಂಚೀ ಲಾಹೇ*
*ತೇಥ ಜೀಜ್ ಹೋಯೇ ತೇಯಾ ನಾಜ್‌ವ ಸುಖ (೧೩.೧೩೧)*

ಹೆಚ್ಚೇನು (ಹೇಳುವುದು)? ಜೀವ-ಆತ್ಮರ ಗುರುತು ಆದಾಗ,
ಅಲ್ಲಿ ಏನು ಆಗುವುದೋ, ಅದರ ಹೆಸರು ಸುಖ.

ಇಲ್ಲಿ ಒಂದು ಮೋಜು. ಕಲ್ಲಿನ ಮೇಲೋ ಕಟ್ಟಿಗೆಯ ಮೇಲೋ ಮಾಡುವ ಗುರುತಿಗೆ (ಚಿಹ್ನೆಗೆ) ಬಸವೇಶ್ವರರು ಸೋಹೆ ಶಬ್ದ ಬಳಸಿದರು. ಕನ್ನಡದಲ್ಲಿ ಗುರುತಿಗೆ ಪರಿಚಯವೆಂಬ ಅರ್ಥವೂ ಇದೆ. ಜ್ಞಾನೇಶ್ವರರು ಮೇಲಿನ ಓವಿಯಲ್ಲಿ ಪರಿಚಯ ಅರ್ಥದಲ್ಲಿ ಸೋವಿ ಶಬ್ದ ಪ್ರಯೋಗಿಸಿದರು. ಉತ್ತರ ಕರ್ನಾಟಕದ (ವಿಶೇಷತಃ ವಿಜಾಪುರ,ಕಲಬುರ್ಗಿ ಜಿಲ್ಲೆಗಳಲ್ಲಿ) ಆಡುಮಾತಿನಲ್ಲಿ ಈ ಗೊಂದಲ ಇಂದಿಗೂ ಇದೆ. ಮರಾಠಿಯಲ್ಲಿ 'ಖೂಣ' ಎಂದರೆ 'ಸೋಹೆ', ಚಿಹ್ನೆ. ಈ ಶಬ್ದ ಕನ್ನಡಕ್ಕೆ ಬಂದು 'ಪರಿಚಯ' ಅರ್ಥದಲ್ಲಿ ಉಪಯೋಗಿಸಲಾಗುತ್ತದೆ. ಹೌಂದರಿ, ಅಂವನು ನನಗ ಖೂನ ಐತಿ (ಅವನ ಪರಿಚಯ ನನಗಿದೆ). ಬೆಳಗಾವಿ, ವಿಜಾಪೂರ ಧಾರವಾಡ ಜಿಲ್ಲೆಗಳಲ್ಲಿ ಇದು ಇನ್ನೊಂದು ರೂಪ ಪಡೆಯುತ್ತದೆ. 'ತಿಳಿಯಿತೇ?' ಎನ್ನುವುದಕ್ಕೆ 'ಗೊತ್ತಾಯಿತೇ?' ಎನ್ನುವ ಬದಲು 'ಗುರುತಾತೇನು?' ಎನ್ನುತ್ತಾರೆ. ಹೀಗೆ ತಿಳಿ=ಗೊತ್ತು=ಗುರುತುಗಳು ಸಮಾನಾರ್ಥದಲ್ಲಿ ಬಳಸಲಾಗುತ್ತವೆ.

ಇದೇ 'ಪರಿಚಯ' ಅರ್ಥ ಮುಂದಿನ ಓವಿಯಲ್ಲಿ

*ಆಮುಲೀಯಾ ಆಬುಲಿಯೇ ಸಂಗತಿ ನಾ ಸೋಯೇ*
*ಕಾಜ್ ಆಬುಲಿ ಜಗ ವಿಯೇ ಬೋಜ ಆಇಕಾಜ್ (೧೩.೯೭೪)*

ತಾಯಿ ತಂದೆಯರ ಸಹವಾಸವಿಲ್ಲ. ಪರಿಚಯವೂ (ಗುರುತೂ)
ಇಲ್ಲ.
ಆದರೆ ತಾಯಿ ಜಗತ್ತನ್ನೇ ಪ್ರಸವಿಸುತ್ತಾಳೆ. ಸೋಜಿಗ ಕೇಳಿರಿ.

*ಯೆರ್ಥವಿಜ್ ಗಿವಸಲೀಯಾಜ್ ಆಘವಾಜ್‌ಚಿ ಠಾಜ್‌ಇಜ್ ಪರಿ ಸೋಯ ನೇವಜೀಜ್ ಚಿ ಕೇಹೀಜ್ ಹ್ಮಣೌನಿ ತ್ರಿಶುದ್ಧೀ ಹೇಜ್ ನಾಹಿಜ್ ತಿಸ್ಥೀಜ್ ವಿಥ (೧೧.೨೭೭)*

ಅಲ್ಲದೆ, ಎಲ್ಲ ಸ್ಥಾನಗಳಲ್ಲೂ (ನೀನು) ದೊರೆತೆ. ಆದರೆ
ಎಲ್ಲಿಯೂ ಗುರುತು ಸಿಕ್ಕಲಿಲ್ಲ. ಆದುದರಿಂದ (ಆದಿ, ಮಧ್ಯ,
ಅಂತ್ಯಗಳ) ತ್ರಿಶುದ್ಧಿ ಆಗಲಿಲ್ಲ.

ಇಲ್ಲಿ ಗುರುತು ಸೋಹೆ ಅರ್ಥದಲ್ಲಿ ಬಳಸಲಾಗಿದೆ. ಆದಿ ಎಲ್ಲಿ ಆರಂಭವಾಯಿತು. ಎಲ್ಲಿ ಮುಗಿಯಿತು. (ಅದರಂತೆ ಮಧ್ಯಅಂತಗಳು ಕೂಡ) ಎಂಬುದಾಗಿ ಭಾವಾರ್ಥ.

*ಯರ್ಹವಿಜ್ ನಿರ್ಧಾರಿತಾಜ್ ನೇಣಿಜೇ ಸೋಯ ಜೇಯಾಚೀ (೩.೭೩)*

ಅಲ್ಲದೆ, ನಿರ್ಧರಿಸಬೇಕೆಂದರೆ ಅವನ ಪರಿಚಯವೇ (ಗುರುತೇ)
ಸಿಕ್ಕುವುದಿಲ್ಲ.

*ಕಾಜ್ ತೇ ಜಿಯಾ ವಾಟಾ ನಿಗಾಲೇ ಗಾ ಸುಭಟಾ*
*ತೇ ಸೋಯೇ ಪಾಜ್ ಯೇಊನಿ ಆಪ್ಹಾಜ್‌ಟಾ ಸ್ವರ್ಗಾಪವರ್ಗ (೧೦.೧೧೫)*

ಅಕೋ ಶೂರನೇ, ಅವರು ಯಾವ ದಾರಿಯಿಂದ ಹೊರಟರೋ
ಅದರ ಗುರುತು (ಗುರಿ) ನೋಡಿದರೆ ಸ್ವರ್ಗ ಮೋಕ್ಷಗಳು
ಅಡ್ಡದಾರಿಗಳೆನಿಸುತ್ತವೆ.

ಇನ್ನೊಂದೆಡೆ, ಒಂದೇ ಎಡೆ, 'ಸರಿ' ಅರ್ಥದಲ್ಲಿಯ ಕನ್ನಡದ ಸರಿ ಸಯ್, ಸೆಯ್ ಶಬ್ದ ಮರಾಠಿಯಲ್ಲಿ 'ಸೋಯ' ಆಗಿದೆ.

*ಜಿಯೇ ಗುರುಸೇವಾವಿಷೀಜ್ ಮಾಝಾ ಜೀಉ ಅಭಿಲಾಷೀ*
*ಪ್ಹಣೌನಿ ಸೋಯೇ ಚೂಕಿ ಬೋಲೀ ಕೇಲೀ (೧೩.೪೫೪)*

ಗುರುಸೇವೆಯ ವಿಷಯದಲ್ಲಿ ನನ್ನ ಜೀವ ಅಭಿಲಾಷೆ ಹೊಂದಿದೆ
ಎಂದು ಸರಿಯೋ ತಪ್ಪೋ ಮಾತು ಹೇಳಿದೆ.

**ಹಡಪ ಹಡಪ, ಅಡಪ, ಎಲೆಅಡಕೆ ಇಡುವ ಚಂಚಿ**

*ಚಾಮರದ ಕುಂಚದಡಪದ ಡವಕೆಯ ವಾರವಿಳಾಸಿನಿಯರಿರಪುಂ ಕೆಲದೊಳ್ ಸುತ್ತಿಱಿದು (ಪಂಪಭಾರತ ೩.೪೮)*

ಎನ್ನುವಲ್ಲಿ ಬರುವ 'ಅಡಪ' ಶಬ್ದವು 'ಹಡಪ'ವಾಗಿ ಮರಾಠಿಗೆ ಅದೇ ಅರ್ಥದಲ್ಲಿ ಹೋಗಿದೆ. ಜ್ಞಾನೇಶ್ವರೀಯಲ್ಲಿಯ ಪ್ರಯೋಗಗಳು.

*ಹಡಪು ಮೀಜ್ ವ್ಹೋಳಗ್ಯೆನ ಉಗಾಳು ಮೀಚಿ ಘೇಈನ (೧೩.೪೧೮)*

ಹಡಪವನ್ನು ನಾನು ಓಲೈಸುವೆನು. ಉಗುಳನ್ನು ನಾನೇ
ತೆಗೆದುಕೊಳ್ಳುವೆನು.

ವೀಳ್ಯದ ಉಗುಳನ್ನು ಪ್ರಸಾದವೆಂದು ಸ್ವೀಕರಿಸುವ ರೂಢಿ ಜ್ಞಾನೇಶ್ವರೀ ಪೂರ್ವಕಾಲೀನ ಮಹಾನುಭಾವ ಪಂಥದಲ್ಲಿತ್ತು. ಈ ಉದಾಹರಣೆ ನೋಡಬೇಕು.

*ಗೋಸಾವೀ ತಾಂಬುಳ ಪರಿತ್ಯಜೀಲೇಜ್; ಮಗ ಬಾಇಸೀಜ್ ಶ್ರೀಮುಖೀಚೇ ತಾಂಬುಳ ಆವಘೇಯಾಜ್‌ಸಿ ಪ್ರಸಾದು ಧಿಧಲಾ (ಲೀಳಾಚರಿತ್ರ ಪೂ ೯೩)*

ಶ್ರೀ ಚಕ್ರಧರರು ತಾಂಬೂಲ ತ್ಯಜಿಸಿದರು (ಉಗುಳಿದರು);
ಬಳಿಕ ನಾಗೂಬಾಯಿಯ ಶ್ರೀಮುಖದ ತಾಂಬೂಲನ್ನು
ಎಲ್ಲರಿಗೂ ಪ್ರಸಾದವಾಗಿ ಕೊಟ್ಟಳು.[31]

---

31. ಈ ಸಂದರ್ಭದಲ್ಲಿ ನೀನು ದುರಿಯೋಧನನ ಬಾಯ್ದಂಬುಲಿಕೆ ಕೈಯಾನುವದೆ ಹೇಳು ಕುಮಾರವ್ಯಾಸ ಭಾರತ ಉದ್ಯೋಗಪರ್ವ (೧೦೮) ಸ್ಮರಿಸಬಹುದಾಗಿದೆ.

*ರಾಜ್ ದೇಯಾಚೇಜ್ ರೇವಿಲೇಜ್ ತೇಯಾ ದೇಉನಿ ಹೋಇಜೇ ಉತರಾಈ*
*ಯಾಜ್ ನಾನಾ ಹತವೇಜ್ ವಿಡಾ ರಾಯಾ ದಿಧಲಾ ಜೈಸಾ (೧೭.೨೭೫)*

ಯಾರು (ನ್ಯಾಸವೆಂದು) ಇಟ್ಟಿದ್ದಾರೋ ಅದನ್ನವರಿಗೆ ಕೊಟ್ಟು (ಋಣ) ಇಳಿಸಿಕೊಂಡಂತೆ. ಬೇರೆ ಬೇರೆ ಹಡಪಗಳಿಂದ ರಾಜನಿಗೆ ವೀಳ್ಯ ಕೊಟ್ಟಂತೆ (ನಿಷ್ಕಾಮವಾಗಿ ಕೊಟ್ಟರೆ ಅದು ಸಾತ್ವಿಕದಾನ-ವೆನಿಸುವುದು ಎಂದು ಮುಂದಿನ ಭಾಗ)

**ಹರಳ-ಹರಳು- ಪರಲ್ ಹಾಳು**

*ಪಂಚರತ್ನದ ಪರಲ್ಗಳದಿರ್ದಸೆಯೆ (ಪಂಪಭಾರತ ೬.೪೯)* ಹೀಗೆ ಪಳಗನ್ನಡದಲ್ಲಿ ಬರುವ ಪರಲ್ ಶಬ್ದವು ಆಗಲೇ ಹರಳಾಗಿ ಅದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲಿ ಬಳಸಿದುದನ್ನು ಕಾಣುತ್ತೇವೆ.

*ಫಾಸಾಂತೂಲು ಹರಳು ಫೇಡಿತಾ ಲಾಗೇ ವೇಳು (೧೩.೬೬೫)*

ತುತ್ತಿನಲ್ಲಿಯ ಹರಳನ್ನು ಕಳೆಯಲು ಸಮಯ ತಗಲುವುದು.

*ಪಾಣಿಯೇಜ್ ಹೀರಾ ನ ಭೀಜೇ ಆಧಣಿಜ್ ಹರಳ ನ ಸಿಜೇ (೧೩.೪೮೧)*

ನೀರಿನಲ್ಲಿ ವಜ್ರವು ನೆನೆಯುವುದಿಲ್ಲ. ಎಸರಿನಲ್ಲಿ ಹರಳು ಬೇಯುವುದಿಲ್ಲ.

*ಡೋಳಾಜ್ ಹರಳು ನ ಥರೇ (೧೩-೫೩೭)*

ಕಣ್ಣಿನಲ್ಲಿ ಹರಳು ಕರಗುವುದಿಲ್ಲ.

*ಆಧಣಿಜ್ ಘಾತಲೇ ಹರಳ ಹೋಜ್ತಿ ಅಮೃತಾಚೇ ತಾಂಮಳ*
*ಜರಿ ಭುಕೇಚೀ ರಾಖೇ ವೇಳ ಜಗನ್ನಾಥು (೧೫.೨೩)*

ಜಗನ್ನಾಥನು ಹಸಿವೆಯ ಹೊತ್ತು ನೋಡಿಕೊಂಡರೆ ಎಸರಿನಲ್ಲಿ ಹಾಕಿದ ಹರಳು (ಕೂಡ) ಅಮೃತದ ಅಕ್ಕಿ(ಅನ್ನ)ಯಾಗುತ್ತವೆ.

**ಹಾಕಾಕ- ಹಾಕು, ಹಾಕು**

ಈಗ ಕನ್ನಡದಲ್ಲಿ ಬಳಕೆಯಲ್ಲಿದ್ದ 'ಹಾಕು' ಧಾತುವನ್ನು ಕೇಶಿರಾಜ ಹೇಳುವುದಿಲ್ಲ. ಹಳಗನ್ನಡದಲ್ಲಿಯ ಗ್ರಂಥಗಳಲ್ಲಿ ಇದರ ಪ್ರಯೋಗವೂ ದೊರೆಯುವುದಿಲ್ಲ. ಆದರೆ ಆಗ ಜನಪದ ಭಾಷೆಯಲ್ಲಿರಬಹುದಾದ ಈ ಧಾತು ಜ್ಞಾನೇಶ್ವರೀಯಲ್ಲಿ ಕಾಣಿಸಿಕೊಳ್ಳುವುದು ಒಂದು ವಿಶೇಷ. ಅದೂ ಒಂದು ಪಾಠಭೇದದಲ್ಲಿ ಸಂಬಂಧಿಸಿದ ಓವಿ ಇದು.

*ಜೈಸಾ ಭೋಗೇ ಕಾಮು ವಾಢೇ ಇಂಧನೇ ಆಗೀಸಿ ಹಾಕಾಕ ಚಢೇ*
*ತೈಸಿ ಖಾಜ್ತಾ ಖಾಜ್ತಾತೋಂಡೇ ಖಾಜ್ಖಾಜ್ತೇ ರೇಲೀಜ್ (೧೧.೪೨೭ ಪಾಠಭೇದ)*

ಭೋಗಿಸಿದಂತೆ ಕಾಮವು ಬೆಳೆಯುತ್ತದೆ. ಉರುವಲನ್ನು ಬೆಂಕಿಯಲ್ಲಿ ಹಾಕು-ಹಾಕಿದಷ್ಟು ಏರುತ್ತದೆ. ಹಾಗೆ (ನಿನ್ನ) ಒಂದೇ ಸಮನೆ ತಿನ್ನುವ ಬಾಯಿಗಳು ಮತ್ತೆ ಮತ್ತೆ ತಿನ್ನುತ್ತಲೇ ಇವೆ.

**ಹಾತ- ಕೆಯ್, ಕೈ**

ಕನ್ನಡದಲ್ಲಿ ಬಹಳಷ್ಟು ಪಡೆನುಡಿಗಳು 'ಕೈ' ಶಬ್ದವನ್ನಾಧರಿಸಿವೆ. ಅವುಗಳಲ್ಲಿಯ ಕೆಲವು ಅನುವಾದಿತಗೊಂಡು ಜ್ಞಾನೇಶ್ವರೀಯಲ್ಲಿ ಬಳಸಿದುದನ್ನು ನಾವು ಕಾಣುತ್ತೇವೆ.

*ಹಾತಧರಣೇಜ್ ಕೆಯ್‌ಕೊಳ್, ಅಂಗೀಕರಿಸು*

ಹಳಗನ್ನಡ ಪ್ರಯೋಗ ಹೀಗೆ - *ಶ್ರೀ ವಿಜಯ ಪ್ರಭೂತಮನಿದಂ ಕೆಯ್ಕೊಳ್ವುದೀ ಮಾಜ್ಪೆಯಿಂ (ಕವಿರಾಜಮಾರ್ಗ ೧.೧೫೦)*

ಜ್ಞಾನೇಶ್ವರೀಯಲ್ಲಿ : *ಜ್ಞಾನಾಚಿಯೇ ಪ್ರಭೇಸವೇಜ್ ಜೇಯಾಚೀ ಮತಿ ಪಾವೇ*
*ಹಾತಧರಣಿಯಾಜ್ ಸೀವೆ ಪರತತ್ವಾತೇಜ್ (೧೩.೬೩೦)*
ಜ್ಞಾನದ ಪ್ರಕಾಶದೊಡನೆ ಯಾವನ ಬುದ್ಧಿ (ಬ್ರಹ್ಮಸ್ವರೂಪವನ್ನು) ತಲುಪುವುದೋ (ಅವನು) ಪರತತ್ವವನ್ನು ಕೈಕೊಳ್ಳುವನು.

*ಹಾತತುಕ ಕೆಯ್ಗಟ್ಟಳೆ, ಕೈತೂಕ*

ಪಂಪಭಾರತ : *ಒಟ್ಟಿದ ಪೊನ್ನ ಬೆಟ್ಟುಗಳನೀವೆಡೆಗೇವುದೋ ತೂಕಮೆನ್ನ ಕೆಯ್ಗಟ್ಟಳೆ ಪೊಳ್ತಿಮೆಂದು ಕುಡೆ (ಪಂಪಭಾರತ ೬.೩೯)*

ಜ್ಞಾನೇಶ್ವರೀ : *ತೇಯಾತೇಜ್ ಯೋಗೀಶ್ವರ ಅಲೌಕಿಕೇಜ್ ದೀಠಿಚೇನಿ*
*ಹಾತತುಕೇಜ್ ಅನುಮಾನಿತಿ ಕವತಿಕೇಜ್ (೮.೨೬೪)*
ಅದನ್ನು (ಆ ಸ್ವರ್ಗಸುಖವನ್ನು) ಪರಮಾತ್ಮನು ಲೋಕೋತ್ತರ ದೃಷ್ಟಿಯ ಕೈತೂಕದಿಂದ ಪ್ರೇಮಪೂರ್ವಕ ಅನುಮಾನಿಸುತ್ತಾನೆ. (ಆಗ ಆ ಸ್ವರ್ಗಸುಖವು ಹಗುರೆನಿಸುತ್ತದೆ.)

*ಹಾತಾ ತಳ - ಅಂಗೈ*

ಶಬ್ದಮಣಿದರ್ಪಣ : ಸೂತ್ರ ೧೭೬ (ಪ್ರಯೋಗ)
ಅಂಗಯ್ಯುಂಗಯ್ ಮೇಂಗಾಲ್ಮುಂಗಾಲಂಗಾಲ್ ಪೊದಳ್ದ ಪಿಂಬೊಳ್ತುಕರಂ

ಜ್ಞಾನೇಶ್ವರೀ : *ಹೇ ಹಾತಾತಳೀಜ್ ತುಜ ದೇಯಿಜತಸೇ (೭.೪೨)*
ಇದನ್ನು ನಿನಗೆ ಅಂಗೈಯಲ್ಲಿ ಕೊಡುತ್ತಿದ್ದೇನೆ.

*ಏಕಹಾತೇ ಒರ್‌ಕೆಯ್ಸು, ಗಟ್ಟಿಯಾಗಿ ಹಿಡಿ*

ಶಬ್ದಮಣಿದರ್ಪಣ : *ಒರ್ಕೆಯ್ಸಿ ಬಿಲ್ಲುಂ ಅಮ್ಬುಮನ್ ಉರ್ಕಾಳ್ಗಳ್ (ಸೂತ್ರ ೭೬)*

ಜ್ಞಾನೇಶ್ವರ : *ಕೃಪೇಸಿಜ್ ಏಕ ಹಾತೇಜ್ ಜಾಲೇಜ್ ತಿಯೇಜ್ (೧೫.೧೯)*
ಕೃಪೆಯು ಸಮೃದ್ಧವಾಗಿ ಬಂದಿತು.

*ಹಾತಾಫಳೀ (ಹಾತ + ಅಪ್ಪಳಿಸಿ) ಕೆಯ್ವೊಯ್ ಒಪ್ಪು*

ಪಂಪಭಾರತ : *ಏಕೆ ತಡೆವಿರ್ ಕೆಯ್ವೊಯ್ದಿವಿನ್ನಂ ಕರಂ ಸೋದರ್ಯರ್ಕ್ಕೆ ಕನಲ್ವೊಡೆ (೧೩೮೮)*

ಜ್ಞಾನೇಶ್ವರೀ : *ಸ್ಥೈರ್ಯೇಸೀಜ್ ಹಾತಾಫಳೀ ಮೇಳೌನಿ' ಜಾಯೇ (೬.೪೧೩)*
(ಮನಸ್ಸು) ಸ್ಥಿರತೆಯನ್ನು ಒಪ್ಪಿಸಿ ಕೂಡಿಕೊಂಡು ಹೋಗುತ್ತದೆ.

*ಹಾತವಸ ಕೆಯ್‌ವಶ*

ಜ್ಞಾನೇಶ್ವರೀ : ತೇ ನಿಷ್ಠಾ ಜೇಥ ಪಾತವಲೇ ತೇಥ ಭಕ್ತಿ ಮಾಝೀ ಫಾಂಕೈಲೀ (೧೮.೧೨೪೨)

ಆ ನಿಷ್ಠೆಯು ಹಸ್ತಗತವಾದಾಗ ನನ್ನ ಭಕ್ತಿಯು ಪ್ರಕಟಗೊಳ್ಳುತ್ತದೆ.

ಹಾತಾಜ್‌ಯೇಣೇಜ್ ಕೆಯ್ಸರ್

ಜ್ಞಾನೇಶ್ವರೀ : ಜೇಜ್ ಹಾತಾಜ್ ಆಲೇಜ್ ತರಿ ನ ವಚೇ (೯.೫೨)

(ಸ್ವರೂಪಜ್ಞಾನವು) ಕೈಗೆ ಬಂದರೆ ಮತ್ತೆ ಹೋಗದು.

ಕೈವಾರ ಕೆಯ್‌ವಾಡ

ಜ್ಞಾನೇಶ್ವರೀ : ತೇವ್ಹಳೀ ಆಪುಲೇಯಾಚೇನೀ ಕೈವಾರೇಜ್ ಮೀ ಸಾಕಾರು ಹೋಉನಿ ಅವತರೇ (೪.೫೦)

ಆ ಸಮಯದಲ್ಲಿ ನನ್ನ ಕೈವಾಡದಿಂದಲೇ ನಾನು ಸಾಕಾರನಾಗಿ ಅವತರಿಸುವೆ.

**ಹೀರಣೇಜ್ ಪೀರ್, ಹೀರ್, ಹೀರು ಹಿರಣೇಜ್ ಹಿರಿ-ಎಳೆ—ಸೆಳೆ**

ಹಿರಿ ಧಾತು ಶಬ್ದಮಣಿದರ್ಪಣದಲ್ಲಿ ಇಲ್ಲ. ಹೀರ್ (ಪಿರ್) ರಸಾಸ್ವಾದನೇ ಎಂದು ಕೇಶಿರಾಜನು ಹೇಳುತ್ತಾನೆ. (೬.೫೬೫) ಸೋಲದೊಳಪ್ಪು ಪೀರ್ವ ತೆಜದಿಷ್ಟಮಯಿಕ್ಕದೆ ಸೋಟ್ಟಿ ಕಣ್ಗೆ (ಪಂಪಭಾರತ ೪.೪೩) ಎಂಬುದಾಗಿ ಹಳಗನ್ನಡದಲ್ಲಿ ಈ ಧಾತುವಿನ ಪ್ರಯೋಗವೂ ಸಿಗುತ್ತದೆ. ಅದೇ ಅರ್ಥದಲ್ಲಿಯ ಜ್ಞಾನೇಶ್ವರೀಯಲ್ಲಿಯ ಈ ಪ್ರಯೋಗಗಳನ್ನು ಲಕ್ಷಿಸಬೇಕು.

*ಕ್ಷುಧಾ ಕಾಇ ಜಾಲೀ ನಿದ್ರಾ ಕೇಉತೀ ಗೇಲೀ ಹೇ ಆಠವಣ ಹೀಜ್ ಹೀರತಲೀ (೬.೨೧೩)*

ಹಸಿವೆ ಏನಾಯಿತು ನಿದ್ದೆ ಎಲ್ಲಿ ಹೋಯಿತು ಇವುಗಳ ನೆನಪು ಕೂಡ ಹೀರಿತು.

*ತೈಸೇಜ್ ದುಃಖಿತಾಚೇಜ್ ಸೀಣಗೇ ಹೀರತಾಜ್ ಸಕಣವಪಣೇಜ್ (೧೬.೧೫೪)*

ಹಾಗೆ ದುಃಖಿತರ ಕಷ್ಟಗಳನ್ನು ಕರುಣೆಯಿಂದ ಹೀರಿದಾಗ-

*ತೋಹೀ ಮಿಾಜ್ ವ್ಹೋಲಾವಾ ಹೀರೇಜ್ (೧೬.೪೧೪)*

ಆ ಆರ್ದ್ರತೆಯನ್ನು ನಾನು ಹೀರಿಕೊಳ್ಳುತ್ತೇನೆ.

*ತೇ ಪದವೀ ಹಿರೌನಿ ವೈಜ್ ಗಾ (೧೬.೪೦೪)*

ಆ ಪದವಿಯನ್ನು ಹೀರಿ (ಹಿರಿದು) ಕೊಂಡು

*ಹ್ಮಣೌನಿ ಕರಾವಾ ಜಿ ಸ್ವಧರ್ಮು ಜೋ ಕರಿತಾಜ್ ಹಿರೌನಿ ಶ್ರಮು (೧೮.೯೪೪)*

ಅಂತೆಯೇ ಸ್ವಧರ್ಮವನ್ನಾಚರಿಸಬೇಕು. ಅದನ್ನು ಆಚರಿಸುವಾಗ (ಆಗುವ) ಶ್ರಮವನ್ನು ಹಿರಿದು

*ಜೋ ಕರಿತಾಜ್ ಹಿರೋನಿ ಘೇ ಶ್ರಮ*

ಅದನ್ನು ಆಚರಿಸುವಾಗ (ಆಗುವ) ಶ್ರಮವನ್ನು ಹಿರಿದುಕೊಳ್ಳುತ್ತಾನೆ.

ಎಂದು ಬರುವ ದಾಂಡೇಕರ ಪ್ರತಿಯಲ್ಲಿಯ ಪಾಠಭೇದವು ಅರ್ಥಕ್ಕೆ ಇನ್ನಷ್ಟು ಸ್ಪಷ್ಟತೆಯನ್ನೂ ಶಬ್ದಖಣಕ್ಕೆ ಇನ್ನಷ್ಟು ಪುಷ್ಟಿಯನ್ನೂ ಕೊಡುತ್ತದೆ.

**ಹೇಳಸಣೇ-ಹೀಯಾಳಿಸು, ಜರಿ, ಹೀನಾಯ ಮಾಡು**

ಹೀ ಶಬ್ದಕ್ಕೆ ಅವರ್ಣ, ಆಕ್ಷೇಪ, ನಿರ್ವಾದ, ಪರಿವಾದ ಅಪವಾದ, ಉಪಕ್ರೋಶ, ಜುಗುಪ್ಸೆ, ಕುತ್ಸೆ, ನಿನ್ದೆ ಎಂದೆಲ್ಲ ಪ್ರತಿಶಬ್ದಗಳನ್ನು ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು ಕೊಟ್ಟಿದ್ದಾರೆ. ಹಳಗನ್ನಡದಲ್ಲಿ ಹೀ, ಹೀಯಾಳಿಸು, ಹೀಗಳೆ ಈ ಶಬ್ದಗಳ ಪ್ರಯೋಗ ದೊರೆಯದಿದ್ದರೂ ಬಸವಪುರಾಣ (೨೧.೨೩), ಕುಮಾರವ್ಯಾಸ ಭಾರತ (೮.೧೩.೧) ಗಳಲ್ಲಿ ಈ ಶಬ್ದಗಳ ಬಳಕೆ ಕಾಣಿಸಿಕೊಳ್ಳುತ್ತದೆ.

ಜ್ಞಾನೇಶ್ವರೀಯಲ್ಲಿ ಹೇಳಸಣೇ ಧಾತುವಿನ ಒಂದೇ ಒಂದು ಪ್ರಯೋಗ ದೊರೆತಿದೆ.

*ನ ಕರೀತಿ ಸಿದ್ಧಿಅಜ್‌ಚೇ ಪಾಡ ನ ಧರೀತಿ ರಿದ್ಧಿಜ್‌ಚೇ ಭೀಡ*
*ಯೋಗಾ ಐಸೇಜ್ ದುವಾಡ ಹೇಳಾಸತಿ (೧೩.೧೬೩)*

(ಇಂತಹ ಯೋಗಿಗಳು) ಸಿದ್ಧಿಗಳ ಪಾಡಿಗೆ ಹೋಗುವುದಿಲ್ಲ. ರಿದ್ಧಿಗೆ ಬೆಲೆ ಕೊಡುವುದಿಲ್ಲ. ಕಷ್ಟಸಾಧ್ಯವಾದ ಇಂತಹ ಯೋಗವನ್ನು ಜರಿಯುತ್ತಾರೆ.

ಮರಾಠಿ ಪಂಡಿತರು ಸಂದರ್ಭದ ಮೇಲೆ ಅರ್ಥ ಹಚ್ಚಿದಂತಿದೆ. 'ಹೇಳಸ'ದ ವ್ಯುತ್ಪತ್ತಿಯನ್ನು ಶೋಧಿಸುವ ಗೋಜಿಗೂ ಅವರು ಹೋಗಿಲ್ಲ.

ತುಳು ಪೀ ಶಬ್ದದಿಂದ ಕನ್ನಡದಲ್ಲಿ ಹೀಯಾಳಿಸು ಶಬ್ದ ಬಂದಿದ್ದರೆ, ಕನ್ನಡದ ಪೇಲ್ ಮಲವಿಸರ್ಜನೇದಿಂದ ಮರಾಠಿಗೆ ಹೇಲಸಣೇ=ಹೆಳಸಣೇ ಶಬ್ದ ಹೋಗಿದೆ. ಇಷ್ಟೇ ಅಲ್ಲ, ಸಂಸ್ಕೃತದ ವಿಷ್, ವಿಷ್ಠಾ (ಅರ್ಥ ಅದೇ!) ಶಬ್ದಗಳಿಂದ ಮರಾಠಿಯಲ್ಲಿ ವಿಟಣೇ, ವಿಟಾಳ ಶಬ್ದಗಳು ಸಿದ್ಧವಾಗಿವೆ. (ಅರ್ಥ ಹೇಸಿಗೆ, ಮೈಲಿಗೆ ಇತ್ಯಾದಿ) ಕನ್ನಡದಲ್ಲಿ 'ಇಸ್ಸಿ' ಮರಾಠಿಯಲ್ಲಿ 'ಇಶ್ಯ'. ಮನುಷ್ಯ ಸ್ವಭಾವಕ್ಕೆ ಇದೊಂದು ಕನ್ನಡಿ!

**ಹೋಡ- ಒಡ್ಡ, ಪಣ**

ನಾಟಿ ವಾಸಗಳನರಸಾಳಂತೆ ಕಣ್ಣಟಿದು ಮೆಟ್ಟೆ ಮಟ್ಟಮಟಿದಿಕ್ಕು-ವಾಗಳೊಡ್ಡಮಂ ಪೇಟಿಮೆನೆ (ಪಂಪಭಾರತ ೬.೭೧ವ)

ಇದು 'ಪಣ' ಅರ್ಥದಲ್ಲಿಯ 'ಒಡ್ಡ' ಶಬ್ದದ ಹಳಗನ್ನಡ ಪ್ರಯೋಗ. ಈ 'ಒಡ್ಡ'ವು 'ಹೋಡ' ಆಗಿ ಅದೇ ಅರ್ಥದಲ್ಲಿ ಮರಾಠಿಗೆ ಹೋಗಿದೆ. ಇವು ಪ್ರಯೋಗಗಳು.

ಲೀಳಾಚರಿತ್ರದಲ್ಲಿ:

*ಸರ್ವಜ್ಞೇ ಮ್ಹಣಿತಲೇಃ 'ಏಥೌನಿ ಚೌಖಟ ನವ್ಹೇ (ತಥಾ) ನಿಕೇಜ್‌ನಾಹಿಜ್;*
*ಮ್ಹಣೇಜತ ಅಸೇಃ 'ಹೋಡು ಕಾಇ': ಗೊಸಾವೀ ದೃಷ್ಟಿಚೇಯಾ ಖುಣಾ ಅಸೂ ದಾಖವಿಲೀ (ಪೂರ್ವಾರ್ಧ ೫೧)*

ಚಕ್ರಧರರೆಂದರು : 'ಇಲ್ಲಿಂದ (ಅಡಕೆ) ಚೆನ್ನಾಗಿಲ್ಲ; (ತಥಾ)

ಸರಿಯಾಗಿಲ್ಲ; ಹೇಳುತ್ತಾನೆ' (ಅವರು ತಮ್ಮನ್ನು ಯಾವಾಗಲೂ ಪ್ರಥಮ ಪುರುಷದಲ್ಲಿಯೇ ಉದ್ದೇಶಿಸಿದ್ದುಂಟು.): 'ಏಮ ಪಣ?': ಚಕ್ರಧರರು ಕಣ್ಣುಸನ್ನೆಯಿಂದ ಪದಪಗಳನ್ನು ತೋರಿಸಿದರು.

ಜ್ಞಾನೇಶ್ವರಿಯಲ್ಲಿ:

*ಜೇಥ ಹಟಿಯೇ ಸಾಂಡಿತ ಹೋಡಾ ಕಢೇಲಗ (೬.೫೬)*

ಎಲ್ಲ ಹಟಯೋಗಿಗಳಿಗೆ ಕೊನೆಗೆ ತಮ್ಮ ಪಣವನ್ನು ಬಿಡಬೇಕಾಗುವುದೋ-

**ಹೋಡ- ಪೋಟಿ=ಹೋಟಿ, ಸರಿಸಮಾನ, ಹೋಲಿಕೆ**

**ಜೇ+ಹೋಡ > ಜೇಹ್ವಡಾ > ಜೇವಢಾ ಎಷ್ಟು**

**ಕೇ+ಹೋಡ = ಕೇಹ್ವಡಾ > ಕೇವಢಾ ಅಷ್ಟು**

**(ಈ) ಯೇ+ಹೋಡ > ಏಹ್ವಡಾ > ಯೇಹ್ವಡಾ > ಏವಢಾ, ಯೇವಢಾ ಇಷ್ಟು**

ಹಳಗನ್ನಡದ ಪೋಟಿ ಶಬ್ದದಿಂದ ಹೋಟಿಯಾಗಿ ಸರಿ, ಸಮಾನ ಅರ್ಥದಲ್ಲಿ ಹೋಡವಾಗಿ ಅದು ಅದೇ ಅರ್ಥದಲ್ಲಿ ಜ್ಞಾನೇಶ್ವರೀಯಲ್ಲಿ ಬಳಕೆಯಾದುದನ್ನು ಕಾಣಬಹುದಾಗಿದೆ.

*ಪರಿ ದಾನೀಜ್ ಜೇಯಾ ಹೋಡ ಸುರತರೂಸಿಜ್ (೧೩.೨೧೦)*

ಆದರೆ ದಾನದಲ್ಲಿ ಯಾರು ಕಲ್ಪವೃಕ್ಷಕ್ಕೆ ಸರಿಸಮಾನ-ರಾಗಿದ್ದಾರೋ-

(ಯಾರ ಸಮಾನತೆ ಕಲ್ಪವೃಕ್ಷದೊಡನೆಯೋ)

*ಕಾಜ ಕರೀ ಹೋಡಾ ಮಾನಸೇಸೀ (೧೩.೪೩೯)*

ಕಾರ್ಯವು ಮನಸ್ಸಿನೊಡನೆ ಸ್ಪರ್ಧಿಸುತ್ತದೆ.

*ವಿಜು ಹಿ ನುಪಕಾರೇ ಹೋಡೇ (೧೫.೨೨೩)*

ಮಿಂಚು ಕೂಡ ಹೋಲಿಕೆಯಲ್ಲಿ ಉಪಯುಕ್ತವಾದುದಲ್ಲ.

*ಪಳತೀ ವೀತರಾಗ ಹೋಡಾಜ್ (೧೫.೨೪೪)*

ವೀತರಾಗಿಗಳು ಸ್ಪರ್ಧೆಯಲ್ಲಿ ಓಡುತ್ತಾರೆ.

*ಜೇಥ ಹಟಿಯೇ ಸಾಂಡಿತ ಹೋಡಾ (೬.೫೬)*

ಎಲ್ಲಿ ಹಟಯೋಗಿಗಳು ಸ್ಪರ್ಧೆ ಬಿಟ್ಟುಬಿಡುತ್ತಾರೋ-

*ತೇಯಾಜ್‌ಚಿಯೇ ದೇಶಿಜಾಜ್ ಝಾಡಿಜ್ ಕಲ್ಪತರೂತೇಜ್ ಹೋಡಿಜ್ (೧೮.೧೬೨೧)*

ಅವನ (ಅರ್ಜುನನ) ನಾಡಿನ ಗಿಡಗಳು ಕಲ್ಪವೃಕ್ಷವನ್ನು ಹೋಲುತ್ತವೆ.

ಹೀಗೆ ಸಮಾನತೆ, ಸಾಮ್ಯ, ಸ್ಪರ್ಧೆ ಅರ್ಥಗಳನ್ನು ಹೊಂದಿದ ಹೋಡ ಶಬ್ದವು ಈ, ಜೇ, ತೇ, ಸರ್ವನಾಮಗಳೊಡನೆ ಸೇರಿ 'ಅದಕ್ಕೆ ಸಮ' 'ಅದರೊಡನೆ ಸಾಮ್ಯವುಳ್ಳ' 'ಅಷ್ಟು' 'ಇಷ್ಟು' 'ಎಷ್ಟು' ಎಂದು ಅರ್ಥ ಪಡೆಯಿತು.

*ಹೇ ಜೇವಢೀ ಮಾಝೀ ವ್ಯಾಪ್ತಿ ತೇವ್ಹಡೀ ಚಿ ತೇಯಾಂಚೀ ಚೀ ಪ್ರತೀತಿ (೯.೨೫೭)*

ನನ್ನ ವ್ಯಾಪ್ತಿ ಎಷ್ಟೋ ಅಷ್ಟೇ ಅವರ ಅನುಭವವು

*ತೋ ಏವಡೇಯಾ ಯೇಯಾ ಲಾಭಾ ಗೋಸಾಂಚೀಂಚ್ ಹೋಏ (೧೭.೪೪೧)*

ಅವನು ಇಷ್ಟೊಂದು ಲಾಭದ ಒಡೆಯನಾಗುತ್ತಾನೆ.

*ತುಮ್ಹಾಂಚ್ ಮಾನೇಂಚ್ ಯೇವಢಾ ಹೋಈನ ಮಿಾಂಚ್ (೧೬.೪೭೯)*

ನಿಮಗೆ ಮಾನ್ಯನಾಗುವಷ್ಟು ನಾನು ಆಗುವೆ.

**ಹೋಡಾ- ಹೊಲೆಯ, ಆಳು**

ಹೊಲೆಯುಣ್ಟೆ ಅಂಗವಿದ್ದೆಡೆಯಲ್ಲಿ ಕುಲವುಣ್ಟೆ ಜಂಗಮ ವಿದ್ದೆಡೆಯಲ್ಲಿ? (ಬಸವೇಶ್ವರರ ವಚನ ೭೯೯) ಎಂದು ಮಹಾನುಭಾವಿಗಳು ಹೇಳಿದರೂ ಅವರ ನಂತರ ಸುಮಾರು ನೂರು ವರ್ಷಗಳ ಬಳಿಕ ಹುಟ್ಟಿದ ಜ್ಞಾನೇಶ್ವರರಿಗೆ ಇದು ಒಪ್ಪಿಗೆಯಾಗಲಿಲ್ಲ. ಜ್ಞಾನೇಶ್ವರೀಯಲ್ಲಿ ಸಾಕಷ್ಟು ಸಂದರ್ಭಗಳಲ್ಲಿ ಚಾತುರ್ವರ್ಣ್ಯದ ಸಮರ್ಥನೆ ಇದೆ. ಒಂದು ದೃಷ್ಟಾಂತದಲ್ಲಿ ಹಳಗನ್ನಡದ ಹೊಲೆಯ ಶಬ್ದ ಹೋಡಾ ಆಗಿ ಬಳಕೆಯಾದುದನ್ನು ನಾವು ಕಾಣತ್ತೇವೆ.

*ಸಮರ್ಥ ಆಪುಲಾ ಖೋಡಾ ಸೀಸೇಂಚ್ ವಾಹಾವೀ ಜೈಸಾ ಹೋಡಾ*
*ತೈಸಾ ಭುಂಜೌನಿ ಗಾಢಾ ಪರಿಗ್ರಹೋ (೧೮.೧೦೫೭)*

ಸಮರ್ಥನಾದವನು (ಶ್ರೀಮಂತ, ಅರಸು) ತನ್ನ ಕೊರಡನ್ನು (ತಾನು ಹೊರದೆಯೆ) ಹೊಲೆಯನ ತಲೆಯಮೇಲೆ ಹೊರಸಿದಂತೆ ಪರಿಗ್ರಹವು ತಾನೆಲ್ಲವನ್ನು ಉಂಡು ಬಲಶಾಲಿಯಾಗುತ್ತದೆ.

**ಹೋಯ, ಹೋಯೇ, ಹೋಏ ಅಪ್ಪುದು, ಹೌದು**

ಹಳಗನ್ನಡದ ಆಗು ಧಾತುವಿನ ವರ್ತಮಾನಕಾಲವಾಚಕ ಕೃದಂತ ಅಪ್ಪುದು. ಅಪ್ಪುದು ಎಂದರೆ ಆಗುವುದು ಇದು ಸರಳ ಅರ್ಥ. ಉದಾ. ಅದರಿಂ ಪರಮಾಗಮ ಕೋಚಿದನಪ್ಪುದು (ಕವಿರಾಜಮಾರ್ಗ ೧.೯) ಅಪ್ಪುದು=ಅಹುದು>ಹೌದು ಹೀಗೆ ಈ ಶಬ್ದದ ಬೆಳೆವಣಿಗೆಯಾಗಿ ಅರ್ಥದಲ್ಲೂ 'ಆಗುವುದು' ದಿಂದ ಬೆಳೆದು 'ಸತ್ಯ' ವಾಯಿತು. ಮರಾಠಿಯಲ್ಲಿ ಹೋ ಎಂದರೆ ಆಗು. ಹೋಯೇ ಎಂದರೆ ಆಗುವುದು.

ಇಂತಹದೇ ಒಂದು ಸಮಾಂತರ ಪ್ರಯೋಗವನ್ನು ಮರಾಠಿಯಲ್ಲೂ ನೋಡುತ್ತೇವೆ. ಉದಾಹರಣೆಗಳು.

*ತೇಥ ಜೇಂಚ್ ಹೋಯೇ ತೇಯಾ ನಾಂಚ್ವ ಸುಖ (೧೩.೧೩೧)*

ಅಲ್ಲಿ ಏನಾಗುವದೋ ಅದರ ಹೆಸರು ಸುಖ

*ತೈಸೇ ವೃದ್ಧಾಪ್ಯ ಹೋಯೇ ಆಲೇ ಪಣೇಂಚ್ ವಾಯಾಂಚ್ ಜಾಯೇ (೧೩.೫೮೩)*

ಆಗ ಮುಪ್ಪು ಆಗುವುದು (ಹುಟ್ಟಿ) ಬಂದದ್ದು ವ್ಯರ್ಥ ಹೋಗುವುದು

*ಮ್ಹಣೌನಿ ಹಾ ವ್ಯಾಸಸಹೋದರು ಗುರುತ್ವೇಂಜ್ ಹೋಇ (೧೭.೪೨೭)*

ಅಂತೆಯೇ ದೊಡ್ಡಸ್ತಿಕೆಯಲ್ಲಿ ಈತನು (ಅರ್ಜುನನು) ವ್ಯಾಸನ ಸಹೋದರನು ಹೌದು.

*ಪಾಠಿಜ್ ದಿನಉದೋ ಮೋಟಕಾ ಝಾಲಾ ಮಗ ಹೋಯೇ ಮ್ಹಣೇ (೧೦.೧೪೪)*

ಬಳಿಕ ಸೂರ್ಯೋದಯವು ಸ್ಪಷ್ಟವಾದಾಗ ಹೌದು ಎನ್ನುತ್ತಾನೆ.

## ಕನ್ನಡ ಶಬ್ದ ಪ್ರಯೋಗಗಳು (ಪರಿಶಿಷ್ಟ)

ಕೌರವರನ್ನು ಕೊಂದ ಬಳಿಕ ನಮ್ಮಲ್ಲಿಯ ಪ್ರೀತಿ ಉಳಿಯಲಾರದು. (*ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ - ಗೀತಾ ೧.೩೬*) ಎಂದು ಅರ್ಜುನನು ಶ್ರೀಕೃಷ್ಣನಿಗೆ ಹೇಳಿದುದನ್ನು ಜ್ಞಾನೇಶ್ವರರು ದೃಷ್ಟಾಂತಗಳೊಡನೆ ವಿವರಿಸುವ ಸಂದರ್ಭವಿದು. ಉದ್ಯಾನದಲ್ಲಿ ಪ್ರಬಲ ಬೆಂಕಿ ಆವರಿಸಿದಾಗ ಕೋಗಿಲೆ ಅಲ್ಲಿ ಉಳಿಯಬಹುದೇ? ಕೆಸರು ತುಂಬಿದ ಸರೋವರವನ್ನು ನೋಡಿ ಚಕೋರ ಪಕ್ಷಿ ಅದನ್ನು ತ್ಯಜಿಸಿ ಹೋಗುವುದಿಲ್ಲವೇ? ಅದರಂತೆ ನನ್ನ ಪುಣ್ಯದ ಆರ್ದ್ರತೆ ಮುಗಿದ ಬಳಿಕ ಭಗವಂತಾ, ನೀನು ನನಗೆ ನಿನ್ನ ಮಮತೆಯನ್ನು ಹೊದ್ದಿಸಲಾರೆ ಎಂದು ಅರ್ಜುನ ಹೇಳುತ್ತಾನೆ.

*ತಿಯಾಪರೀಜ್ ತೂಜ್ ದೇವಾ ಮಗ ಝಾಂಕಉಜ್ ನೈಯೇಸಿ ಮಾವಾ (೧.೨೩೨)*

ಆದರಂತೆ ದೇವಾ, ಬಳಿಕ, ಮಾವಾ ನೀನು (ನನಗೆ) ಹೊದ್ದಿಸಲಾರೆ.

ದಾಂಡೇಕರರು ಮಾವಾ ಶಬ್ದವನ್ನು ಮಾಯಾದಿಂದ ಸಾಧಿಸಿ ಸಂದರ್ಭ ರಹಿತವಾದ ಅರ್ಥ ಕೊಟ್ಟಿದ್ದಾರೆ. (ಜ್ಞಾನೇಶ್ವರ ಕಾಲೀನ ಮರಾಠಿಯಲ್ಲಿ ಮಾಯೆಗೆ ಮಮತೆ ಎನ್ನುವ ಅರ್ಥವೂ ಇರಲಿಲ್ಲ) ಆದುದರಿಂದ ಇಲ್ಲಿ ಹಳಗನ್ನಡದ ಪೂಜ್ಯ ಅರ್ಥದಲ್ಲಿಯ ಮಾವ ಶಬ್ದವಿರಬಹುದಾಗಿದೆ.

* * *

ಈಶ್ವರನಿಷ್ಠರಲ್ಲದವರಿಗೆ ಟಸಿಲುಟಸಿಲಾದ ಅಂತವಿಲ್ಲದ ಬುದ್ಧಿಗಳಿರುತ್ತವೆ ಎಂಬ ಗೀತೋಕ್ತಿಗೆ-(*ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ೨.೪೧*) ಟೀಕು ಹೇಳುವಾಗ *ಜೇಥ ನಿರಂತರ ರಮತಿ ಅವಿವೇಕಿಯೇ (೨.೨೪೩)* ಅವಿವೇಕಿಯೇ ಎಲ್ಲಿ ನಿರಂತರವಾಗಿ ಸುಖ ಅನುಭವಿಸುತ್ತಾನೆ ಎಂದು ಜ್ಞಾನೇಶ್ವರರು ಸುಲಭವಾಗಿ ಸ್ಪಷ್ಟೀಕರಿಸುತ್ತಾರೆ. ಒತ್ತು ಕೊಟ್ಟು ಹೇಳುವಾಗಿನ - ಏ ಪ್ರತ್ಯಯ ಹತ್ತಿ (ಉದಾ : *ಸುಯೋಧನನ ಬಾಟ್ಟುದಂ ನಂಬಿದಿರೇ - ಗದಾಯುದ್ಧ*) ಅವಿವೇಕಿ ಶಬ್ದ ಅವಿವೇಕಿಯೇ ಆಗಿದೆ. ದಾಂಡೇಕರರು ಹೀಗೆಯೇ ಅರ್ಥಮಾಡಿದ್ದರೂ -ಏ ಪ್ರತ್ಯಯದ ಬಗ್ಗೆ ಯಾವ ಸಂಶೋಧಕರೂ ಏನೂ ಹೇಳಿಲ್ಲ.

* * *

ಸಂಸ್ಕೃತದ ಆಶಾ ಶಬ್ದ ಕನ್ನಡದಲ್ಲಿ ಆಸೆಯಾಗಿ ಬಂದಿದೆ (ಮಾಲೆ, ಬಾಲೆ, ಲೀಲೆ ಭಾಷೆಯಂತೆ) ಆದಂತೆ (ಶಬ್ದಮಣಿದರ್ಪಣ ಸೂತ್ರ ೯೨). ಮರಾಠಿಯಲ್ಲಿ ಮಾತ್ರ ಅದು ಆಶಾ ಎಂದೇ ಅಥವಾ ಆಸ ಎಂದಾಗಿ ಬಂದಿದೆ. (ಶಿಶುಪಾಲವಧ ೧೫೦) ಇಲ್ಲಿ ಕನ್ನಡದ ಪ್ರತಿರೂಪ ನೋಡಬೇಕು.

*ದೇಖೈ ಇಂದ್ರಿಯೀಂಜ್ ಕಾಯು ಅಸೇ ತೋ ಲಾವೀ ಸುಖ ದುರಾಸೆ (೩.೨೨೮)*

ನೋಡ್ಯೆ, ಇಂದ್ರಿಯಗಳಲ್ಲಿ ಕಾಮವಿದೆ. ಅದು ಸುಖದ ದುರಾಸೆ ಪುಟ್ಟಿಸುತ್ತದೆ.

*     *     *

*ಮನುವೇ, ನಿನ್ನಯೆ ಮಾರ್ಗ೦ ಜನಕ್ಕಂ ಸೂತ್ರಮ್ ಆಯ್ತು (ಶಬ್ದಮಣಿದರ್ಪಣ ಸೂತ್ರ ೧೩೫)* ಎಂಬುದಾಗಿ ಕೇಶಿರಾಜನು ಸಂಭೋದನದ -ಏ ಪ್ರತ್ಯಯದ ಉದಾಹರಣೆ ಕೊಡುತ್ತಾನೆ. ಮರಾಠಿಯಲ್ಲಿ ಸಂಬೋಧನೆಗೆ ಪ್ರತ್ಯೇಕ ಪ್ರತ್ಯಯವಿಲ್ಲ. ಹಳಗನ್ನಡದ -ಏ ಪ್ರತ್ಯಯ ಜ್ಞಾನೇಶ್ವರೀಯಲ್ಲಿ ಇಂತು ಹೋಗಿದೆ.

*ಹೇಜ್ ಬೋಲಾವೇಜ್ ಹೃಷಿಕೇಶೇಜ್ ಪಾರ್ಥು ಮ್ಹಣೇ (೩.೨೩೩)*

ಹೃಷಿಕೇಶನೇ, ಇದನ್ನು ಹೇಳಬೇಕು. ಪಾರ್ಥನೆಂದನು.

*     *     *

ಮುಟ್ಟು ಪತನೇ ಹಾಗೂ ಮುಳುಗು ನಿಮಗ್ನೇ ಹೀಗೆ ಹಳಗನ್ನಡದಲ್ಲಿಯ ಎರಡು ಬೇರೆ ಬೇರೆ ಧಾತುಗಳನ್ನು ಕೇಶಿರಾಜನು ತನ್ನ ಧಾತು ಪ್ರಕರಣದಲ್ಲಿ ವಿವರಿಸಿದ್ದಾನೆ. ಶಬ್ದಗಳ ಪ್ರಯೋಗಗಳಲ್ಲಿ ಮಾತ್ರ ಈ ವೈಶಿಷ್ಟ್ಯ ಕಂಡು ಬರುವುದಿಲ್ಲವೆನ್ನಬೇಕು.

*ಕೂಸಂ ಮುಳುಗಲೀಯದೆ (ಪಂಪಭಾರತ ೧.೯೫ ವ)*

*ಆಪತ್ಪಯೋದಧಿಯೊಳಗತ್ಯಾಪತ್ತಿಸ್ದುಳ್ಳಿ ಮುಟ್ಟುಸಮೆವೆಮಗೆ (ಪಂಪಭಾರತ ೭.೬೧)*

*ಮೂಡುವ ಮುಟ್ಟಾಡುವ ತಡುಮೂಡುವ ಬಗೆಯಿಲ್ಲದಲ್ಲಿ ಬಗೆ ಪೆಱತುಣ್ಪೆ (ಆದಿಪುರಾಣ ೬.೪೦)*

*ಮೆಲ್ಲಮೆಲ್ಲನೆ ತರಣಿ ಮುಳುಗಿದಂ ಪಡುಗಡಲೊಳ್ (ಜೈಮಿನಿಭಾರತ ೨೬.೫)*

*ವಾರುಣಿಯನ್ ಒಲಿದು ಮುಟ್ಟಿದ ಕಾರಣದಿಂ ಮುಳುಗುವನ್ತೆ (ಲೀಲಾವತೀ ಪ್ರಬಂಧ ೩.೬)*

ಹೀಗೆ ಅಸ್ತಂಗತನಾಗು ಎನ್ನುವ ಅರ್ಥದಲ್ಲಿ ಮುಟ್ಟು ಧಾತುವನ್ನು ಪ್ರಯೋಗಿಸಬೇಕಾಗಿದ್ದರೂ ಶೈಥಿಲ್ಯದಿಂದ ಮುಳುಗು ಧಾತುವನ್ನೇ ಬಳಸಿದ್ದನ್ನು ನಾವು ಕಾಣುತ್ತೇವೆ. ಈ ಶಿಥಿಲ ಪ್ರಯೋಗ ಜ್ಞಾನೇಶ್ವರೀಯಲ್ಲೂ ಕಂಡುಬರುತ್ತದೆ.

*ಜೈಸೇಜ್ ಜಳಾಧಾರೇಜ್ ನ ಬುಡೇ ಭಾನುಬಿಂಬ (೪.೯೯)*

ನೀರಿನ ಆಧಾರದಿಂದ (ನೀರಿನಲ್ಲಿ) ಸೂರ್ಯಬಿಂಬ ಮುಳುಗುವುದಿಲ್ಲ, ಹಾಗೆ-

* * *

ಕವಾಟ ಅರ್ಥದ ಹಳಗನ್ನಡ ಶಬ್ದ ಕದ. ಇಂದಿಗೂ ರೂಢಿಯಲ್ಲಿದೆ. ಬಾಗಿಲು ಎಂದರೆ ಚೌಕಟ್ಟು ಅಷ್ಟೇ. ಸುಮಾರು ನೂರು ವರ್ಷಗಳ ಹಿಂದೆ ಪ್ರಕಟಿಸಿದ ಮುಂಬಯಿ ಸರಕಾರದ ಐದನೆಯ ತರಗತಿಯ ಪಾಠ್ಯಪುಸ್ತಕದಲ್ಲಿ ಬಾಕಲಗಳನ್ನೂ ಕದಗಳನ್ನೂ ಮಾಡಿಸಿದರು ಎಂದು ಸಂದರ್ಭ ಬರುತ್ತದೆ.

*ಸಿಸ್ಧುರಾಜನಂ ಮಱಗಿಸೆ ಬಾಗಿಲೊಳ್ ಮುಸುಱೆ ನಿಸ್ದ ಘಟಾವಳಿಯಂ ತೆರಳ್ಚಿ (ಪಂಪಭಾರತ ೧೧.೯೩)*

*ಸಾಕೇತ ನಗರಮಂ ಬಳಸಿದ ಕನಕ ಪ್ರಾಕಾರದ ಬಾಗಿಲ್ವಾಡಂಗಳೊಳಂ (ಆದಿಪುರಾಣ ೧೬.೩೭ವ)*

*ಬೊಗ್ಗನೆ ಒಂದೆ ದಿನದೊಳು ತೋರನು ಆತ್ಮನು ಬಗ್ಗಿವಾಗಳೇ ಬಾಗಿಲಹುದೇ (ಭರತೇಶವೈಭವ ಕವಾ ಸಂ. ೭೬)*

ಹೀಗೆ ಹಳಗನ್ನಡದಲ್ಲಿ ಪ್ರಯೋಗಗಳೇನೋ ದೊರೆಯುತ್ತವೆ. ಆದರೆ ಅರ್ಥ ಸ್ಪಷ್ಟವೆನಿಸುವುದಿಲ್ಲ. ಆದರೆ ಜ್ಞಾನೇಶ್ವರರೇ ನಮ್ಮ ಸಮಸ್ಯೆ ಬಿಡಿಸಿದ್ದಾರೆ! ನಿಖರವೆನಿಸುವ ಅವರ ಬಳಕೆಗಳನ್ನು ಅವಲೋಕಿಸಬೇಕು.

*ನೇತ್ರದ್ವಾರಿಚೇಜ್ ಕವಾಡೇಜ್ ಲಾಗೋಜ್ ವಾಂಚಿ (೬.೨೦೨)*

ಕಣ್ಣ ಕದಗಳು (ರೆಪ್ಪೆಗಳು) ಹತ್ತಲು ನೊಡುತ್ತವೆ.

ಇಂದಿಗೂ ಮರಾಠಿಯಲ್ಲಿ ಬಾಗಿಲು, ಕದ ಹೀಗೆ ಅರ್ಥಭೇದವಿಲ್ಲ. ದ್ವಾರದಿಂದ ಸಿದ್ಧವಾದ ದಾರ ಶಬ್ದಕ್ಕೆ ಮುಚ್ಚು ಅರ್ಥದಲ್ಲಿ ಲಾವ (ಹಚ್ಚು) ಎಂಬ ಶಬ್ದವೊಂದೇ ರೂಢಿಯಲ್ಲಿದೆ. ಆದರೆ ಉತ್ತರ ಕರ್ನಾಟಕದಲ್ಲಿ ಮಾತ್ರ ಕದ ಇಕ್ಕು, ಕದ ಹಚ್ಚು ಕದ ಹಾಕು ಎಂದು ಪ್ರಯೋಗವಾಗುತ್ತದೆ. ಮರಾಠಿ ಆಡುಮಾತಿನಿಂದ ಪ್ರಭಾವಿತರಾದ ಬ್ರಾಹ್ಮಣರಲ್ಲಿ ಮಾತ್ರ ಕದ ಶಬ್ದದ ಬಳಕೆ ಅಪರೂಪ. ಅವರು ಬಾಗಿಲು ಹಾಕು, ಬಾಗಿಲು ಮುಚ್ಚು ಎಂದೇ ಹೇಳುತ್ತಾರೆ.

*ಇಂದ್ರಿಯಾಜ್ ದೇಉನಿ ಕವಾಡ ಹೃದಯೀಜ್ ಭೋಗೀಜ್ (೯.೧೩೪)*

ಇಂದ್ರಿಯಗಳಿಗೆ ಕದ ಇಕ್ಕಿ ಹೃದಯದಲ್ಲಿ ಭೋಗಿಸು.

*ಜೈಸೇಜ್ ಸಾಚಾ ರೂಪಾ ಆಡ ಘಾಲೂನಿ ವಿಸರಾಚೇಜ್ ಕವಾಡ (೧೮.೫೩೭)*

*ಸತ್ಯರೂಪಕ್ಕೆ ಅಡ್ಡಲಾಗಿ ಮರೆವಿನ ಕದವನ್ನು ಹಾಕಿದ ಹಾಗೆ-*

ಜ್ಞಾನೇಶ್ವರೀ ಸಮಕಾಲೀನ ಲೀಳಾಚರಿತ್ರ ಏಕಾಕದಲ್ಲಿ (ಕ್ರಿ.ಶ. ೧೨೮೦) ಹೀಗೆ ಕಂಡು ಬರುತ್ತದೆ.

*ಕವಾಡ ದಾಟುನಿ ಘಾತಲೇಜ್*

ಒತ್ತಿ ಕದವನ್ನು ಹಾಕಿದರು.

ಜ್ಞಾನೇಶ್ವರರು ಬಾಗಿಲು ಅರ್ಥದಲ್ಲಿ ಒಂದೆರಡು ಕಡೆ ದ್ವಾರ ಶಬ್ದ, ಹೊಸ್ತಿಲು ಅರ್ಥದಲ್ಲಿ ದಾರವಂಠಾ ಎಂಬುದಾಗಿ ಶಬ್ದ ಬಳಸಿದ್ದರೂ ಕನ್ನಡದ 'ಬಾಗಿಲು' ಶಬ್ದವನ್ನು ಉಳಿದೆಡೆ ಮುಕ್ತವಾಗಿ ಉಪಯೋಗಿಸಿದ್ದಾರೆ. ಕೆಲವು ಉದಾಹರಣೆಗಳು:

*ಠಾಇ ಬಾಳಾ ಬಾಗುಲು ದೇಶೇ ದೇವ್ಹಡಾ ವಾಹೇ (೧೫.೨೧೨)*

ಮಗುವನ್ನು ಬಾಗಿಲ ಹೊರಗೆ ದೆವ್ವ ಒಯ್ಯುವದೇ? ಕನ್ನಡದೆವ್ವ ಮರಾಠಿಗೂ ಹೋಗಿದೆ!

*ಬಾಳಕತ್ವ ನಿಗೌನಿ ಜಾಯಿ ತೈಜ್ ಬಾಗುಲಾ ನಾಹಿಜ್ ತ್ರಾಯಿ (೧೮.೪೦೪)*

ಬಾಲ್ಯ ಹೊರಟು ಹೋದ ಬಳಿಕ ಬಾಗಿಲು (ಅವನನ್ನು) ಕಾಯುವುದಿಲ್ಲ.

ಇಲ್ಲಿ ಒಂದು ಸ್ಪಷ್ಟೀಕರಣ ಆವಶ್ಯಕ. ಮಕ್ಕಳಿಗೆ 'ಬಾಗಿಲ' ಹೊರಗೆ 'ಬಾವಾ' ಇರುವನೆಂದು (ಗುಮ್ಮ) ಹೆದರಿಗೆ ಹಾಕುವುದು ಅಂದು ಸರ್ವೇ ಸಾಮಾನ್ಯ-ವಿದ್ದಿರಬೇಕು. ಗುಮ್ಮನೆಂದು ಹೆದರಿಂದ ಮಗು ಬಾಗಿಲಹೊರಗೆ ಹೋದೀತೇ? ಬಾಲ್ಯಕಳೆದ ಬಳಿಕ ಗುಮ್ಮನ ಹೆದರಿಕೆಯೆಲ್ಲಿಯದು? ಕಾಲ್ಪನಿಕ ಹೆದರಿಕೆ ಎನ್ನುವ ಅರ್ಥದಲ್ಲಿ ಬಾಗಿಲು+ಬಾವಾ ಈ ಶಬ್ದಪ್ರಯೋಗ ಬಾಗಲಬೋವಾ ಆಗಿ ಇಂದಿಗೂ ಮರಾಠಿಯಲ್ಲಿ ರೂಢಿಯಲ್ಲಿದೆ.

*ವಾಯಾಜ್‌ಬಾಗುಲು ಇಯೇಜ್ ದುರ್ಜನೇಜ್ ಇಂದ್ರಿಯೇಜ್ ಕರಿತಿ (೬.೩೬೧)*

ಈ ದುಷ್ಟ ಇಂದ್ರಿಯಗಳು ವ್ಯರ್ಥವಾಗಿ ಬಾಗಿಲು (ಗುಮ್ಮ-ನೆಂದು ಹೆದರಿಕೆ) ಮಾಡುತ್ತವೆ.

ರಾಜವಾಡೆ, ಸೋನೋಪಂತ ದಾಂಡೇಕರ ಮುಂತಾದ ವಿದ್ವಾಂಸರು ಹೀಗೆ ಅರ್ಥೈಸಿದ್ದರೂ ನನಗೆ ಇದು ಸರಿ ಎನಿಸಿಲ್ಲ. ಸಂಸ್ಕೃತದ ವ್ಯಾಕುಲ ಶಬ್ದವು ಕನ್ನಡದಲ್ಲಿ (ಮಾತ್ರ!) ಬಾಗುಳ ಆಗಿ ತದ್ಭವವಾಗಿದೆ. (ಶಬ್ದಮಣಿದರ್ಪಣದ ಪ್ರಯೋಗವನ್ನು ನೋಡಬೇಕು) ಇಲ್ಲಿ ಬಾಗುಲ ಶಬ್ದಕ್ಕೆ ವ್ಯಾಕುಲದ ಅರ್ಥ ಜೋಡಿಸಿದರೆ ಸಂದರ್ಭ ಸುರಸವಾಗುತ್ತದೆ. ಈ ದುಷ್ಟ ಇಂದ್ರಿಯಗಳು ವ್ಯರ್ಥವಾಗಿ ವ್ಯಾಕುಲಗೊಳಿಸುತ್ತವೆ ಇದು ಹೆಚ್ಚು ಯೋಗ್ಯ, ಸಮಂಜಸ. ಇಂತಹದೇ ಇನ್ನೊಂದು ಸಂದರ್ಭ ಹೀಗಿದೆ.

*ತೈಸಾ ಮಾಝೇನಿ ಪ್ರಸಾದೇಜ್ ಜೀವಕಣು ಜೇಯಾಚಾ ಮರ್ದ್ದೇ ತೋ ಸಂಸಾರಾಚೇನಿ ಬಂಧೇ ಬಾಗುಲೇ ಕೇವಿ (೧೮.೧೨೬೬)*

ಅದರಂತೆ ನನ್ನ ಕೃಪೆಯಿಂದ ಯಾರ ಅಲ್ಪಜೀವದಶೆ ನಾಶ-ವಾಗುವುದೋ ಅವನು ಸಂಸಾರ ಬಂಧದಿಂದ ವ್ಯಾಕುಲನಾಗುವ ಕಾರಣವೇನು?

ಇಲ್ಲೂ ದಾಂಡೇಕರ ಮುಂತಾದವರು ಬಾಗುಲಕ್ಕೆ ಗುಮ್ಮ ಎಂದು ಅರ್ಥ ಹಚ್ಚಿದ್ದಾರೆ. ರಾಜವಾಡೆಯವರ ಪ್ರತಿಯಲ್ಲಿ ಬಾಗುಲ ಶಬ್ದವಿಲ್ಲ. ಆದಕ್ಕೆ ಬದಲಾಗಿ ಬಾಂಧಲಾ ಎಂದು ಪಾಠಭೇದವಿದೆ. (ಅರ್ಥ ಅವನು ಸಂಸಾರಬಂಧದಿಂದ ಬದ್ಧನಾಗುವ ಕಾರಣವೇನು?) ಇದು ವ್ಯಾಕುಲ ಅರ್ಥಕ್ಕೆ ಹೆಚ್ಚು ಸನಿಹದ್ದು.

* * *

ಸಂಸ್ಕೃತ ಧುರ್ಯ ಶಬ್ದದಿಂದ ಹಳಗನ್ನಡದಲ್ಲಿ ದೊರೆ ಶಬ್ದ ಬಂದಿದೆ. (ಮರಾಠಿಯಲ್ಲಿ ಇಲ್ಲ) *ಗಾಂಗೇಯಂ ದೊರೆಯ ಪಿರಿಯು ಮಗನುಂ ಕ್ರಮ ಕ್ರಮಾರ್ಹನುಮಿರ್ದನ್ತೆ (ಪಂಪಭಾರತ ೧.೭೦ ವ)* ಜ್ಞಾನೇಶ್ವರಿಯಲ್ಲಿ ಈ ಶಬ್ದದ ಬಳಕೆ ಹೀಗೆ:

*ತರಿ ಧನುರ್ಧರಾ ಧೌರೆಯಾ ನಿಕೇಜ್ ಅವಧಾನ ದೇಯಿಜ್ ಧನಂಜಯಾ (೯.೯೬)*

ಆದ್ದರಿಂದ ಧನುರ್ಧರನಾದ ದೊರೆಯೇ, ಧನಂಜಯನೇ, ಒಂದಿಷ್ಟು ಲಕ್ಷ್ಯ ಕೊಡು.

*     *     *

ಎಲ್ಲವೂ ಸಂಸ್ಕೃತ ಶಬ್ದಗಳೇ ಇದ್ದರೂ ನ ವಿಕರಣದೊಂದಿಗೆ ಷಷ್ಠೀಯ ಆ ಪ್ರತ್ಯಯ ಹತ್ತಿದ ಈ ಶಬ್ದ ಸಮುಚ್ಚಯವನ್ನು ನೋಡಬೇಕು.

*ನಮೋ ಜಗದಖಿಲಪಾಲನಾ (೬.೩)* ದಾಂಡೇಕರ ಪ್ರತಿಯಲ್ಲಿಯ ಈ ವಾಕ್ಯ ರಾಜವಾಡೆಯವರ ಪ್ರತಿಯಲ್ಲಿ ನಮೋ ಜಗದಖಿಲ ಪಾಳಣಾ ಎಂದಿದೆ. ಪಾಳಣ ಎಂದರೆ ತೊಟ್ಟಿಲು. ಈ ಅನ್ವಯ ಇಲ್ಲಿ ಹೊಂದುವದೇ ಇಲ್ಲ.

*     *     *

ನ ವಿಕರಣದೊಂದಿಗೆ ಪ್ರಥಮಾ ವಿಭಕ್ತಿಯ ಉ ಪ್ರತ್ಯಯ ಹತ್ತಿ ಸಿದ್ಧವಾದ ವಿಶ್ವೇಶನು-ವಿಶ್ವೇಶಾನು ಶಬ್ದದ ಪ್ರಯೋಗ ಇಂತಿದೆ.

*ಧೆನೂಮಧ್ಯೇ ಕಾಮಧೇನು ತೇ ಮಿ ಹ್ಮಣೇ ವಿಶ್ವೇಶಾನು (೧೦.೨೨೧)*

ಆಕಳಲ್ಲಿ ಕಾಮಧೇನು, ಅದು ನಾನು ಎಂದನು ವಿಶ್ವೇಶನು.

*     *     *

ವ ವಿಕರಣದೊಡನೆ ಷಷ್ಠೀ ವಿಭಕ್ತಿಯ ಆ ಪ್ರತ್ಯಯತಾಗಿ ದ್ವಿತೀಯಾ ಭಾವವನ್ನು ಸಾಧಿಸಿದ ಸಕಲವ (ಸಕಲವನ್ನು) ಶಬ್ದದ ಪ್ರಯೋಗ ಹೀಗೆ :

*ಸಾಮಾನ್ಯ ಆಣಿ ವಿಶೇಷಾ ಸಕಲವ ಕೀಜೈಲ ದೇಖಾಜ್ (೧೩.೩೨೨)*

(ಅಹಿಂಸೆಯ ಬಗ್ಗೆ) ಸಾಮಾನ್ಯ ಹಾಗೂ ವಿಶೇಷ (ವಿಶ್ಲೇಷಣೆ) ಸಕಲವನ್ನೂ ಮಾಡಬಹುದು. ನೋಡಿರಿ.

*     *     *

'ಉಪಕರಣ' ಶಬ್ದ ಸಂಸ್ಕೃತ, 'ಸಾಧನ' ಅರ್ಥದಲ್ಲಿಯದು. ಆದರೆ ಉತ್ತರ ಕರ್ನಾಟಕದ ಬ್ರಾಹ್ಮಣರ ಮನೆಗಳಲ್ಲಿ ಇದಕ್ಕೊಂದು ವಿಶಿಷ್ಟ ಅರ್ಥವಿದೆ. ದೇವರ ಪೂಜೆಗೆ ಬಳಸಲಾಗುವ ಹಿತ್ತಾಳೆ ತಾಮ್ರದ ಪಾತ್ರೆಗಳು, ತೀರ್ಥ ತುಂಬುವ ಗಿಂಡಿಗಳು, ತೀರ್ಥದ ಸವುಟು, ಧೂಪಾರತಿ ಹಲಗೆಯಾರತಿ ಸಲಕರಣೆಗಳೆಲ್ಲ ಸೇರಿ ಆದ ಪೂಜಾ ಪಾತ್ರ ಸಮೂಹ ಈ 'ಉಪಕರಣ'. (ಕಿಟೆಲ್‌ರು ಈ ಅರ್ಥ ಕೊಟ್ಟಿಲ್ಲ) ಮಹಾರಾಷ್ಟ್ರದಲ್ಲಿ ಈ ಶಬ್ದ ಪ್ರಯೋಗ ಇನ್ನೆಲ್ಲೂ ಕಂಡು ಬಂದಿಲ್ಲ. ಬರುವುದಿಲ್ಲ. ಜ್ಞಾನೇಶ್ವರೀಯಲ್ಲಿ ಮಾತ್ರ ಇದರ ಪ್ರಯೋಗ ಹೀಗಿದೆ.

*ದೇವ್ಹಾರಾಚಿಜ್ ಆಮುಲೀಜ್ ಉಪಕರಣೇಜ್ ಜೇತುಲೀಜ್ (೧೩.೪೦೬)*

ದೇವರ ಮನೆಯಲ್ಲಿಯ ತಮ್ಮ ಉಪಕರಣಗಳು ಎಷ್ಟಿವೆಯೋ-

* * *

ಅತಿಥಿಗೆ, ಪಂಡಿತರಿಗೆ ಕೊಡುವ ಮಾನದ್ರವ್ಯ ಎಂಬರ್ಥದಲ್ಲಿ ಸಂಭಾವನೆ ಶಬ್ದ ಕನ್ನಡದಲ್ಲಿ ಬಳಸಲಾಗುತ್ತದೆ. ಇದೇ ಅರ್ಥ ಇದೇ ರೂಪದಲ್ಲಿಯ ಜ್ಞಾನೇಶ್ವರೀಯಲ್ಲಿ ಬಳಕೆ ನೋಡಬೇಕು.

*ತರಿ ಸಂಭಾವನೇ ಜೇಯೇ ಜೋ ಮಾನಾಚಿ ವಾಟ ಪಾಹೇ*
*ಸತ್ಕಾರೇಜ್ ಹೋಯೇ ತೋಷು ಜೇಯಾ (೧೩.೬೫೫)*

ಸನ್ಮಾನಕ್ಕಾಗಿ ಹಾತೊರೆಯುವ, ಸಂಭಾವನೆ ಸತ್ಕಾರಗಳಿಂದ ಸಂತೋಷ ಹೊಂದುವ

* * *

ಸವಳು ನೀರು, ಸವಳು ನೆಲ, ಸವಳು ಕಬ್ಬು ಹೀಗೆ ಬಳಸಲಾಗುವ ಸವಳು ಶಬ್ದಕ್ಕೆ ನಿರುಪಯುಕ್ತವೆಂಬ ಆಲಂಕಾರಿಕ ಅರ್ಥವೂ ಇದೆ. ಇದು ಜ್ಞಾನೇಶ್ವರೀಯಲ್ಲಿ ಹೇಗೆ ಒಡಮೂಡಿದೆ. ನೋಡಿರಿ.

*ದಾಢೀ ಸಾಉಳ ಧರೀ ಮಾನ ಹಾಲಉನಿ ವಾರೀ*
*ತರ್ಹೀಜ್ ಜೋ ಕರೀ ಪ್ರಾಯೇಚಾ ಆವೇಶು (೧೩.೭೫೬)*

ಗಡ್ಡ ಸವಳು ಹಿಡಿಯುತ್ತದೆ. ಗೋಣು ಇಲ್ಲ ಇಲ್ಲವೆಂದು ಅಲ್ಲಾಡುತ್ತದೆ. (ಅಲ್+ಆಡು). ಆದರೂ ಹರೆಯದ ಆವೇಶವನ್ನು ತೋರಿಸುವನು.

ತಾರುಣ್ಯ, ಹರೆಯ ಅರ್ಥದಲ್ಲಿಯ ಕನ್ನಡಕ್ಕೆ ವಿಶಿಷ್ಟವಾದ ಪ್ರಾಯ ಶಬ್ದದ ಬಳಕೆಯನ್ನು ಇಲ್ಲಿ ನೋಡಬಹುದಾಗಿದೆ.

* * *

'ಕನ್ದ' ಶಬ್ದ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಬೇರೆ ಬೇರೆ ಅರ್ಥ ಕೊಡುತ್ತದೆ. ಕೂಸು, ಮಗು ಎಂಬರ್ಥದಲ್ಲಿ ಕನ್ನಡದಲ್ಲಿ ಬಳಸಲಾದರೆ *ಕಂದರಿವರನು ಕಾಣೆನೇಹಾ ಎಂದು ಢಗೆಯವಡಿಸಲಾಕ್ಷಣ-(ಕುಮಾರವ್ಯಾಸ ಭಾರತ)* ವೃತ್ತದ ಹೆಸರು ಗಡ್ಡೆ, ಹುಬ್ಬುಗಳ ಮಧ್ಯಭಾಗ ಇತ್ಯಾದಿ ಅರ್ಥಗಳಲ್ಲಿ ಸಂಸ್ಕೃತದಲ್ಲಿ ಬಳಸಲಾಗಿದೆ. ಎರಡೂ ಭಾಷೆಗಳಲ್ಲಿಯ ಕಂದ ಶಬ್ದ ಜ್ಞಾನೇಶ್ವರೀಯಲ್ಲಿ ಬಳಸಲಾಗಿದೆ.

*ಐಸೇಜ್ ನಿಜಜನಾನಂದೇಜ್ ತೇಣೇಜ್ ಜಗದಾದಿಕಂದೇಜ್*
*ಬೋಲಿಲೇಜ್ ಮುಕುಂದೇಜ್ ಸಂಜಯೋ ಹ್ಮಣೇ (೧೨.೨೩೬)*

ಜಗತ್ತಿನ ಆದಿಕಂದನಾದ, ತನ್ನ ಜನರಿಗೆ (ಅಂದರೆ ಭಕ್ತರಿಗೆ) ಆನಂದ ಕೊಡುವ ಮುಕುಂದನು ಹೀಗೆ ಹೇಳಿದನು, ಎಂದು ಸಂಜಯನೆಂದನು.

ಕನ್ನಡದ ಕಂದ ಗೋತ್ರರದ ಮರಾಠಿ ವಿದ್ವಾಂಸರು 'ಮೂಲ' ವೆಂದು ಅರ್ಥ ಪಚ್ಚಲೆತ್ನಿಸಿದ್ದಾರೆ. (ಜಗದಾದಿಕಂದ=ಜಗತ್ತಿನ ಆದಿ ಮೂಲ ಬೇರು, ಗಡ್ಡೆ) ಇದರ ವ್ಯರ್ಥತೆಯನ್ನು ಇದೇ ಸಮಸ್ತ ಶಬ್ದದ ಇನ್ನೊಂದು ಬಳಕೆಯಲ್ಲಿ ನೋಡಬಹುದು.

*ತರಿ ಅನಾದಿ ಪರಬ್ರಹ್ಮ ಜೇ ಜಗದಾದಿಕಂದಾಚೇಂ ಧಾಮ (೧೭.೩.೨೬)*

ಜಗತ್ತಿನ ಆದಿಕಂದನ ಮನೆಯಾದ ಈ ಅನಾದಿ ಪರಬ್ರಹ್ಮವು

ಗಡ್ಡೆ, ಮೂಲಗಳಿಗೆ ಎಂದಾದರೂ ಮನೆ ಇರುತ್ತದೆಯೇ?

ಸಂಸ್ಕೃತ ಕಂದ ಶಬ್ದದ ಬಳಕೆಯನ್ನು ಅರ್ಥವಿಸುವಾಗಲೂ ದಾಂಡೇಕರರು ಎಡವಿದ್ದಾರೆ.

*ಕಂದೌನಿ ಕಾಜ್ ಹೃದಯವೇರ್ಥೀಜ್ ಪ್ರಾಣಾಯಾಮಾಚೀ ಉಜರೀ*
*ಕರಿತಾಜ್ ತೇ ಚಿ ಶರೀರೀಜ್ ಪ್ರಾಣು ಹ್ಮಣಿಪೇ (೧೮.೩೩೪)*

ಷಟ್ಚಕ್ರಗಳಲ್ಲಿ ಒಂದಾದ ಕಂದದ ಸಂದರ್ಭ ಚನ್ನಬಸವೇಶ್ವರರ ವಚನಗಳಲ್ಲಿ ಹೀಗೆ ಬರುತ್ತದೆ. *ಆಧಾರ, ಲಿಂಗ, ನಾಭಿ, ಮಧ್ಯ, ನಾಳ, ಕನ್ದದಬಯಲೊಳಗಿರ್ಪ ಸೂಕ್ಷ್ಮಾಗ್ನಿಯನು (ವಚನ ೧೦೨೯)* ದಾಂಡೇಕರರು ಮಾತ್ರ ಕಂದನೆಂದರೆ ನಾಭಿ ಎಂದು ಭಾವಿಸಿದ್ದಾರೆ. ನಾಭಿಕಮಲದಿಂದ ಹೃದಯದವರೆಗೆ ಪ್ರಾಣಾಯಾಮದ ಚಲನೆ, ಸ್ಪಷ್ಟತೆ. ಆದ್ದರಿಂದ ಅದಕ್ಕೇ ಶರೀರದಲ್ಲಿ ಪ್ರಾಣವೆನ್ನುತ್ತಾರೆ, ಇದು ಅವರು ಕೊಟ್ಟ ಅರ್ಥ.

*　　　*　　　*

೧೬.೩೯೫, ೧೮-೧೯೦, ೧೮-೨೫೯, ೧೮-೩೭೭ ಹೀಗೆ ಸುಮಾರು ಇಪ್ಪತ್ತು ಕಡೆಗಳಲ್ಲಿ ಶ್ರೀಕೃಷ್ಣನು ಅರ್ಜುನನನ್ನು ವೀರೇಶನೆಂದು ಸಂಬೋಧಿಸಿದ ಸಂದರ್ಭಗಳು ಜ್ಞಾನೇಶ್ವರೀಯಲ್ಲಿ ಬರುತ್ತವೆ. ವೀರರಲ್ಲಿ ಈಶನು ಹೀಗೆ ಸಂಸ್ಕೃತದ ಈ ಸಮಸ್ತ ಶಬ್ದವನ್ನು ಅರ್ಥೈಸಬಹುದಾದರೂ ಸಮಕಾಲೀನ ಗ್ರಂಥಗಳಲ್ಲಾಗಲೀ ತದನಂತರದ ಗ್ರಂಥಗಳಲ್ಲಾಗಲೀ ಬಂದಿರದ ಈ ಶಬ್ದಕ್ಕೆ ಐತಿಹಾಸಿಕ ಸಂದರ್ಭವಿರಬಹುದೆಂದು ಊಹಿಸಲು ಪ್ರಬಲ ಕಾರಣಗಳಿವೆ. ಜ್ಞಾನೇಶ್ವರರ ಪೂರ್ವದಲ್ಲಿ ಸುಮಾರು ನೂರು ವರ್ಷಕಾಲ ಕರ್ನಾಟಕದಲ್ಲಾದ ವೀರಶೈವ ಧರ್ಮದ ಪುನರುತ್ಥಾನ ಈಗಿನ ಮಹಾರಾಷ್ಟ್ರವನ್ನೂ ವ್ಯಾಪಿಸಿದ್ದಿತು. ಇದರ ಕುರುಹುಗಳು ೧೩ನೆಯ ಶತಮಾನದ ಲೀಳಾಚರಿತ್ರದಲ್ಲಿ ಹೆಜ್ಜೆಹೆಜ್ಜೆಗೆ ದೊರೆಯುತ್ತವೆ. ವೀರಭದ್ರನ ನಾಮವಿಶೇಷವಾದ ಈ ಶಬ್ದವು ಜ್ಞಾನೇಶ್ವರೀಯಲ್ಲಿ ಇಣುಕಲು ಬೇರೆ ಕಾರಣಗಳಿಲ್ಲ.

*　　　*　　　*

ವೀರಶೈವ ಧರ್ಮದಲ್ಲಿ ಸ್ವ-ರೂಪಕ್ಕೆ ಕುರುಹಾದ 'ಲಿಂಗ'ವು ಜ್ಞಾನೇಶ್ವರೀಯಲ್ಲಿ ಅದೆಷ್ಟು ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತದೆ!

*ಲಿಂಗಭೇದ (೨.೩೧) - ಪೂಜ್ಯರ ಅಪಮಾನ*
*ಲಿಂಗದೇಹ (೧೬.೪) - ಸೂಕ್ಷ್ಮದೇಹ (ಸ್ಥೂಲಕ್ಕೆ ವಿರುದ್ಧವಾದದ್ದು)*
*ದಾನಲಿಂಗ (೧೭.೨೬೩) - ದಾನದ ರೂಪ*

*ಲಿಂಗ (೧೧.೧೦೩) - ಅಮರ, ಚಿರಂಜೀವ*
*ಲಿಂಗ (೧೮.೪೫೪) - ಲಕ್ಷಣ*
*ಶೂನ್ಯಲಿಂಗ (೬.೨೬೩) - ಶೂನ್ಯದ ಸ್ವ-ರೂಪ*
*ಪರಮಾತ್ಮಲಿಂಗ (೬.೩೦೫) ಪರಮಾತ್ಮ ಸ್ವರೂಪ*
*ಆರಾಧ್ಯಲಿಂಗ - ಪರಮಾತ್ಮನನ್ನು ಉದ್ದೇಶಿಸಿ ಸಂಬೋಧನೆ*
*ಗುರುಲಿಂಗ (೧೩.೩೮೬) - ಗುರುರೂಪ*
*ಗುರುತೇಜ್ ಲಿಂಗಾ (೧೩.೩೮೯) ಲಿಂಗರೂಪವಾದ ಗುರುವು*

# ಸಂದರ್ಭ ಗ್ರಂಥಗಳು ಮತ್ತು ಲೇಖನ

## ಕೋಶಗಳು

Kittels' Kannada-English Dictionary 4 Volumes 1975 Edn

Molesworths' Marathi English Dictionary 1975

Sanskrit-English Dictionary - V.S. Apte - 1890

ಕನ್ನಡ ನಿಘಂಟು ಸಾಹಿತ್ಯಪರಿಷತ್ತು

Illustrated Ardha Magadhi Dictionary - Ratanchandraji Maharaj

ಮರಾಠೀ ವ್ಯುತ್ಪತ್ತಿ ಕೋಶ ಕೃ.ಪಾಂ. ಕುಲಕರ್ಣಿ ೧೯೪೬

## ವ್ಯಾಕರಣ ಗ್ರಂಥಗಳು

Comparative Grammer of the Dravidian Languages Caldwel - 1913

Linguistic Survey of India-George Grierson

ಶಬ್ದಮಣಿದರ್ಪಣ - ಕಿಟೆಲ್ 1872

ಶಬ್ದಮಣಿದರ್ಪಣ - ಡಿ. ಎಲ್. ನರಸಿಂಹಾಚಾರ್ ೧೯೭೫

ಯಾದವಕಾಲೀನ ಮರಾಠೀ ಭಾಷಾ ಶಂ. ಗೋ. ತುಳಪುಳೆ ೧೯೭೩

ಮರಾಠೀ ಭಾಷಾ ಉದ್ಗಮ ವ ವಿಕಾಸ ಕೃ. ಪಾಂ. ಕುಲಕರ್ಣಿ ೧೯೩೫

ಮರಾಠೀ ಭಾಷೇಚಾ ವಿಕಾಸ (ಜುಲ್‌ಬ್ಲೋಕ್ ಅವರ La Formation de la Langue Marathe 1914) ಅನುವಾದಕ ವಾ.ಗೋ. ಪರಾಂಜಪೇ ೧೯೪೧.

ಶಾಸ್ತ್ರೀಯ ಮರಾಠೀ ವ್ಯಾಕರಣ - ಮೋ. ಕೇ. ದಾಮಲೆ ೧೯೨೫

ಜ್ಞಾನೇಶ್ವರೀತೀಲ ಮರಾಠೀ ಭಾಷೇಚೇ ವ್ಯಾಕರಣ- ವಿ. ಕಾ. ರಾಜವಾಡೇ ೧೯೦೯

A Historical Grammer of Apabhramsa-G.V. Tagare 1948

A Grammar of Old Marathi -Alfred Master 1964

ಭಾರತೀಯ ಆರ್ಯಭಾಷಾಓಂಕಾ ಇತಿಹಾಸ - ಜಗದೀಶ ಪ್ರಸಾದ ಕೌಶಿಕ

ಪ್ರಾಚೀನ ಕನ್ನಡ ವ್ಯಾಕರಣಗಳು ತೀ. ನಂ. ಶ್ರೀಕಂಠಯ್ಯ ೧೯೭೫

ಕನ್ನಡ ಭಾಷೆಯ ಚರಿತ್ರೆ ಪ್ರ. ಗೋ. ಕುಲಕರಣಿ ೧೯೮೪

ಕನ್ನಡ ಭಾಷಾ ಶಾಸ್ತ್ರ - ರಾ. ಯ. ಧಾರವಾಡಕರ ೧೯೫೦

ಕನ್ನಡ ಕೈಪಿಡಿ - ಮೈಸೂರು ವಿಶ್ವವಿದ್ಯಾಲಯ ೧೯೩೬

A Grammer of the Kannada Language - Kittel 1908

ಪೀಠಿಕೆಗಳು - ಲೇಖನಗಳು ಡಿ. ಎಲ್. ನರಸಿಂಹಾಚಾರ್ಯ ೧೯೭೫

ಹೇಮಚಂದ್ರಾಚಾರ್ಯಕೃತ ಅಪಭ್ರಂಶ ವ್ಯಾಕರಣ - ಎನ್. ಸುರೇಶಕುಮಾರ ೧೯೮೮

## ಇತಿಹಾಸ


ಶ್ರವಣ ಬೆಳಗೊಳ ಬಿ. ವ್ಹಿ. ಶಿರೂರ ೧೯೭೬

The Sevunas of Devagiri- A.V. Narasimha Murlhy 1971

ಕನ್ನಡ ನುಡಿಯ ಹುಟ್ಟು ಶಂ. ಬಾ. ಜೋಶಿ ೧೯೪೫

ಮರ್ಹಾಟೀ ಸಂಸ್ಕೃತಿ ಶಂ. ಬಾ. ಜೋಶಿ ೧೯೫೨


## ಸಾಹಿತ್ಯ


ಬಸವಣ್ಣನವರ ವಚನಗಳು : ಸಂ. ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಣೆ

ಅಲ್ಲಮನ ವಚನ ಚಂದ್ರಿಕೆ ಎಲ್ ಬಸವರಾಜು ೧೯೬೦

ಪಂಪಭಾರತಂ - ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಣೆ - ೧೯೭೬

ಪಂಪಭಾರತ ದೀಪಿಕೆ - ಡಿ. ಎಲ್. ನರಸಿಂಹಾಚಾರ್ಯ ೧೯೭೧

ಅಜಿತ ಪುರಾಣ - ಸಂ. ಮಂ. ಆ ರಾಮಾನುಜಯ್ಯಂಗಾರ ೧೯೧೦

ಶಾಂತಿನಾಥ ಪುರಾಣ ಸಿ. ಎ. ವೆಂಕಟರಾವ್- ಎಚ್. ಶೇಷಯ್ಯಂಗಾರ ೧೯೧೨

ಮಾತೃಶ್ರೀ ರುಕ್ಮಿಣೀ ಸ್ವಯಂವರ-ಮಹದಂಬೆ - ಸಂ. ದೇಶಪಾಂಡೆ ೧೯೫೬

ರುಕ್ಮಿಣೀ ಸ್ವಯಂವರ - ನರೇಂದ್ರ - ಸಂ. ಕೋಲತೇ ೧೯೬೬

ಲೀಳಾಚರಿತ್ರ ಏಕಾಕ - ಮ್ಹಾಇಂಭಟ್ಟ ಸಂ. ತುಳಪುಳೆ ೧೯೬೯

ಲೀಳಾಚರಿತ್ರ ಪೂರ್ವಾರ್ಧ ಮ್ಹಾಇಂಭಟ್ಟ - ಸಂ. ತುಳಪುಳೆ ೧೯೬೬

ಲೀಳಾಚರಿತ್ರ ಉತ್ತರಾರ್ಧ ಮ್ಹಾಇಂಭಟ್ಟ - ಸಂ. ತುಳಪುಳೆ ೧೯೬೭

ವಚ್ಛಹರಣ - ದಾಮೋದರ ಪಂಡಿತ - ಸಂ. ಕೋಲತೇ ೧೯೬೫

ಶಿಶುಪಾಲವಧ - ಭಾಸ್ಕರಭಟ್ಟ ಬೋರೀಕರ - ಸಂ. ಕೋಲತೇ ೧೯೫೮

ಜ್ಞಾನೇಶ್ವರೀ - ಜ್ಞಾನದೇವ - ಪ್ರ. ಮಹಾರಾಷ್ಟ್ರ ಶಾಸನ ೧೯೬೩

ಸಾರ್ಥ ಜ್ಞಾನೇಶ್ವರೀ - ಜ್ಞಾನದೇವ - ಸಂ. ಶಂ. ವಾ. ದಾಂಡೇಕರ ೧೯೮೬

ಕರ್ಣಾಟಕ ಕಾದಂಬರಿ ಸಂ. ಬಿ. ಮಲ್ಲಪ್ಪ ೧೮೯೨

ಕವಿರಾಜಮಾರ್ಗ -ಸಂ. ಎ. ವೆಂಕಟರಾವ್ ಎಚ್. ಎಸ್. ಶೇಷಯ್ಯಂಗಾರ್ ೧೯೩೦

ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ - ಎಂ. ಎಂ. ಕಲಬುರ್ಗಿ ೧೯೭೩

ಗದಾಯುದ್ಧ - ಸಂ. ಎಂ. ಎ. ರಾಮಾನುಜಯ್ಯಂಗಾರ್ ೧೯೨೫

ಪಂಪ ರಾಮಾಯಣ ಸಂ. ಬಿ. ಎಲ್. ರೈಸ್ ೧೮೯೨

ಣಾಯಕುಮಾರ ಚರಿಉ - ಸಂ. ಹಿರಾಲಲ ಜೈನ ೧೯೩೩

ಜಸಹರಚರಿಉ - ಸಂ. ಪಿ. ಎಲ್. ವೈದ್ಯ ೧೯೩೨

ವಡ್ಡಾರಾಧನೆ - ಸಂ. ಡಿ. ಎಲ್. ನರಸಿಂಹಾಚಾರ್ ೧೯೫೫


## ಲೇಖನಗಳು


Kanarese Influence on Old Marathi - R.V. Jahagirdar - Annals of Bhandarkar oriental Research Institute XI-IV - 1930

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಚಂದ್ರಶೇಖರ ಕಂಬಾರ
ಕುಲಪತಿಗಳು